# ದಾವಣಗೆರೆ ಜಿಲ್ಲೆಯ ಪಾಳೆಯಗಾರರು: ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

**ಭೋಜ್ಯಾನಾಯ್ಕ ಎಲ್. ಎಚ್.**

ಮಾರ್ಗದರ್ಶಕರು

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**

ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ದಾವಣಗೆರೆ ಜಿಲ್ಲೆಯ ಪಾಳೆಯಗಾರರು: ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ಭೋಜ್ಯನಾಯ್ಕ ಎಲ್. ಎಚ್.**

ಮಾರ್ಗದರ್ಶಕರು

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**

ಪ್ರಾಧ್ಯಾಪಕರು



**ಸಮಾಜ ವಿಜ್ಞಾನಗಳ ನಿಕಾಯ**

**ಚರಿತ್ರೆ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೭

# ಪ್ರಮಾಣ ಪತ್ರ

**ದಾವಣಗೆರೆ ಜಿಲ್ಲೆಯ ಪಾಳೆಯಗಾರರು: ಚಾರಿತ್ರಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಭೋಜ್ಯನಾಯ್ಕ ಎಲ್.ಎಚ್.)
ಪಿಎಚ್.ಡಿ. ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : 1-8-2017
ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಭೋಜ್ಯನಾಯ್ಕ ಎಲ್.ಎಚ್**. ಇವರು ಪಿಎಚ್.ಡಿ. ಪದವಿಗಾಗ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ದಾವಣಗೆರೆ ಜಿಲ್ಲೆಯ ಪಾಳೆಯಗಾರರು: ಚಾರಿತ್ರಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿ ಹಾಗೂ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 1-8-17
ಸ್ಥಳ : ವಿದ್ಯಾರಣ್ಯ

(ಡಾ. ವಿರೂಪಾಕ್ಷಿ ಪೂಜಾರಹಳ್ಳಿ)
ಮಾರ್ಗದರ್ಶಕರು ಹಾಗೂ
ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಪರಿವಿಡಿ

## ದಾವಣಗೆರೆ ಜಿಲ್ಲೆಯ ಪಾಳೆಯಗಾರರು: ಚಾರಿತ್ರಿಕ ಅಧ್ಯಯನ

# ಅಧ್ಯಾಯ ಒಂದು

## ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವಿಧಾನ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ಸ್ವರೂಪ

೧.೫. ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ, ಸ್ವರೂಪ ಮತ್ತು ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

### ಪ್ರಸ್ತಾವನೆ

ಭಾರತದ ಇತಿಹಾಸವೆಂದರೆ ರಾಜಮನೆತನಗಳ ಚರಿತ್ರೆ ಎಂಬ ಅಭಿಪ್ರಾಯವಿತ್ತು. ಪ್ರಾಚೀನ ಭಾರತದ ಇತಿಹಾಸದಲ್ಲಿ ಮೌರ್ಯ, ಗುಪ್ತ, ವರ್ಧನರು ಆಳ್ವಿಕೆ ನಡೆಸಿದ್ದಾರೆ. ಅದರಂತೆ ಕರ್ನಾಟಕದ ಇತಿಹಾಸದಲ್ಲಿ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ಮತ್ತು ವಿಜಯನಗರದಂತಹ ಸಾಮ್ರಾಜ್ಯಗಳು ಆಳ್ವಿಕೆ ನಡೆಸಿವೆ. ಈ ರಾಜಮನೆತನಗಳ ಚರಿತ್ರೆಯನ್ನು ವೈಭವೀಕರಿಸಿ ರಚಿಸಿರುವುದು ಕಂಡುಬಂದಿದೆ. ದಕ್ಷಿಣ ಭಾರತದ ಚರಿತ್ರೆಯೆಂದರೆ ವಿಜಯನಗರ ಅರಸರ ಚರಿತ್ರೆಯೆಂದೇ ನಂಬಿಕೊಂಡು ಬಂದಿದ್ದೇವೆ. ಇತಿಹಾಸವೆಂಬುದು ಆಯಾ ಪ್ರದೇಶದ ಪರಿಸರ ಮತ್ತು ಮನೋಧರ್ಮಗಳಿಗೆ ಅನುಗುಣವಾಗಿ ಆಯಾ ಕಾಲಕ್ಕೆ ಅನುಸಾರವಾಗಿಯೂ ಇರುತ್ತದೆ. ಇತಿಹಾಸದ ಒಂದೊಂದು ಸಣ್ಣ ಅಂಶವೂ ಒಂದು ಮಹತ್ತರ ಸಂಗತಿಯ ಮೇಲೆ ಬೆಳಕು ಬೀರುತ್ತದೆ. ಇದರ ಸಹಾಯದಿಂದ ಒಂದು ಊರಿನ, ಒಂದು ನಾಡಿನ ಇತಿಹಾಸವನ್ನು ಪುನಾರಚಿಸಲು ಸಾಧ್ಯವಾಗುತ್ತದೆ.

ಕರ್ನಾಟಕ ಚರಿತ್ರೆಯಲ್ಲಿ ಹದಿನಾಲ್ಕನೇ ಶತಮಾನದಿಂದ ಹದಿನಾರನೇ ಶತಮಾನದವರೆಗೆ ವೈಭವದ ಕಾಲವಾಗಿತ್ತು ಎನ್ನುವ ಅನೇಕ ವಿವರಗಳಿವೆ. ಹದಿನಾಲ್ಕನೇ ಶತಮಾನದಲ್ಲಿ ವಿಜಯನಗರ ಸ್ಥಾಪನೆ, ಹದಿನೈದನೇ ಶತಮಾನದಲ್ಲಿ ಅದರ ಬೆಳವಣಿಗೆ ಮತ್ತು ಹದಿನಾರನೇ ಶತಮಾನದಲ್ಲಿ ಅದರ ಅವನತಿ, ಈ ಮೂರು ಹಂತಗಳು ಪ್ರಮುಖ ಚಾರಿತ್ರಿಕ ಮೈಲುಗಲ್ಲುಗಳಾಗಿವೆ. ವಿಜಯನಗರ ಸಾಮ್ರಾಜ್ಯದ ಚರಿತ್ರೆಯನ್ನು ಅವಲೋಕಿಸಿದಾಗ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದಿರುವುದು ಕಂಡುಬರುತ್ತದೆ. ಒಂದು ಬೃಹತ್ ಸಾಮ್ರಾಜ್ಯವನ್ನು ಸ್ಥಾಪಿಸಿ ದಕ್ಷಿಣ ಭಾರತದ ಇತಿಹಾಸದಲ್ಲಿ ವೈಭವದ ಕಾಲಕ್ಕೆ ವಿಜಯನಗರದ ಅರಸರು ಸೃಷ್ಟಿಕರ್ತರಾದರು. ಇವರು ಸ್ಥಾಪಿಸಿದ ಬೃಹತ್ ಸಾಮ್ರಾಜ್ಯದ ರಾಜಕೀಯ ವ್ಯವಸ್ಥೆಯು ಪಾಳೆಯಗಾರರನ್ನು

ಸೃಷ್ಟಿಸಿತು. ಈ ಸಾಮ್ರಾಜ್ಯದ ರಾಜಕೀಯ ವ್ಯವಸ್ಥೆಗೆ ಪ್ರಮುಖವಾಗಿ ಮೂರು ಪ್ರಧಾನ ಲಕ್ಷಣಗಳಾದ ಊಳಿಗಮಾನ್ಯ ಪದ್ಧತಿ, ಸಂಯುಕ್ತತೆಯ ಪದ್ಧತಿ ಮತ್ತು ವಿಕೇಂದ್ರೀಕರಣ ಪದ್ಧತಿಗಳು ಪ್ರಮುಖ ಪಾತ್ರ ವಹಿಸಿದ್ದವು.

ಊಳಿಗಮಾನ್ಯ ಪದ್ಧತಿಯು ಮುಂದೆ ಪಾಳೆಯಗಾರರೆಂದು ಕರೆಯಲ್ಪಟ್ಟು ರಾಜಕೀಯ ಅಧಿಕಾರವರ್ಗವನ್ನು ಹುಟ್ಟುಹಾಕಿತು. ಅದುದರಿಂದ ಇವರ ಆಳ್ವಿಕೆಯ ಸಂದರ್ಭದಲ್ಲಿ ಸಣ್ಣಪುಟ್ಟ ಪ್ರಾಂತ್ಯಗಳನ್ನು ಬೇಡ ಸಮುದಾಯಕ್ಕೆ ಸೇರಿದ ಅರಸರು ಅವುಗಳನ್ನು ಆಳುವುದರ ಜೊತೆಗೆ ವಿಜಯನಗರ ಸಾಮ್ರಾಜ್ಯಕ್ಕೆ ಅಧಾರಸ್ತಂಭದಂತಿದ್ದರು. ವಿಜಯನಗರ ಅರಸರು ನೀಡಿದ ಪ್ರೋತ್ಸಾಹದಿಂದ ದಕ್ಷಿಣ ಭಾರತದಲ್ಲಿ ಅನೇಕ ಪಾಳೆಯಪಟ್ಟುಗಳು ಹುಟ್ಟಿಕೊಂಡವು. ಇವರನ್ನು ಒಟ್ಟಾರೆಯಾಗಿ ನಾಯಕ, ನಾಯಕತನ ಅಮರಂ ಮತ್ತು ಅಮರನಾಯಕರೆಂದು ಕರೆಯಲಾಗುತ್ತಿತ್ತು. ಇಂತಹ ಊಳಿಗಮಾನ್ಯ ಪದ್ಧತಿಯನ್ನು 'ನಾಯಂಕರ' ಪದ್ಧತಿ ಎಂದು ಕರೆಯಲಾಗುತ್ತಿತ್ತು. ಸಹಾಯ, ರಕ್ಷಣೆಯಿಂದಾಗಿ ವಿಜಯನಗರ ಸಾಮ್ರಾಜ್ಯ ಬಲಿಷ್ಠವಾಗಿತ್ತು. ಅಂತಹ ನಾಯಕರು ವಿಜಯನಗರ ಅರಸರಿಗೆ ಅಧೀನರಾಗಿದ್ದುಕೊಂಡು ಅವರ ಸೈನಿಕಾಚರಣೆಗಳಲ್ಲಿ ವಿಶೇಷ ಸೇವೆ ಸಲ್ಲಿಸುತ್ತಾ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡರು. ಸಾಮ್ರಾಜ್ಯ ರಕ್ಷಣೆಯಲ್ಲಿ ಇವರ ಪಾತ್ರ ಬಹುಮುಖ್ಯವಾಗಿತ್ತು. ಕ್ರಿ.ಶ. ೧೫೬೫ರಲ್ಲಿ ತಾಳಿಕೋಟೆ ಯುದ್ಧದ ನಂತರ ವಿಜಯನಗರ ಸಾಮ್ರಾಜ್ಯ ದುರ್ಬಲತೆಯ ಹಾದಿ ಹಿಡಿದಾಗ ಇವರು ಸ್ವತಂತ್ರರಾದರು. ವಿಜಯನಗರ ಸಾಮ್ರಾಜ್ಯದ ಅಧಾರಸ್ತಂಭಗಳಂತಿದ್ದ ಕೆಳದಿ, ಜಿಂಜಿ, ಮಧುರೈ ಮತ್ತು ತಂಜಾವೂರಿನ ನಾಯಕರು ಸ್ವತಂತ್ರರಾದರು. ಅದರಂತೆ ಕರ್ನಾಟಕದಲ್ಲೂ ಅನೇಕ ಪಾಳೆಯಪಟ್ಟುಗಳು ಸ್ವತಂತ್ರರಾಗಿ ಸುಮಾರು ಮೂರುವರೆ ಶತಮಾನಗಳವರೆಗೆ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ.

ವಿಜಯನಗರೋತ್ತರ ಕಾಲದಲ್ಲಿ ವಿಶಾಲ ಸಾಮ್ರಾಜ್ಯಗಳ ಅಸ್ತಿತ್ವ ಕಳೆಗುಂದುತ್ತಾ ಜನಪದರಿಗೆ ಹತ್ತಿರವಿರುವ ಸ್ಥಳೀಯ ಅರಸರೆಂದೇ ಕರೆಯಲ್ಪಡುವ ಪಾಳೆಯಗಾರರು ಪ್ರಭಾವಿ ರಾಜಕೀಯ ಶಕ್ತಿಗಳಾಗಿ ಮೂಡಿಬಂದರು. ಈ ಪಾಳೆಯಗಾರರು ಹಾಗೂ ಸಾಮಂತ ಅರಸುಮನೆತನಗಳು ಸ್ವ-ಇಚ್ಛೆಯಿಂದ ರಾಜ್ಯಭಾರ ಮಾಡುವಂತಾಯಿತು. ಇಂತಹ ಅನೇಕ ಪಾಳೆಯಗಾರರು ವಿಜಯನಗರೋತ್ತರ ಕಾಲದಲ್ಲಿ ಆಳ್ವಿಕೆ ಮಾಡಿದ್ದಾರೆ. ಇವರು ಮೂಲತಃ ವಿಜಯನಗರ ಅರಸರಿಂದ ರಾಜಕೀಯ ಅಸ್ತಿತ್ವವನ್ನು ಪಡೆದುಕೊಂಡವರಾಗಿದ್ದಾರೆ. ಈ ಕಾರಣಕ್ಕಾಗಿಯೇ ಹೆಸರಾಂತ ಇತಿಹಾಸಕಾರ ಬರ್ಟನ್ ಸ್ಟೈನ್ ವಿಜಯನಗರ ಸಾಮ್ರಾಜ್ಯದ ಸ್ವರೂಪವನ್ನು ಕುರಿತಂತೆ "ಸೆಗ್‌ಮೆಂಟರಿ ಸ್ಟೇಟ್" ಸಿದ್ಧಾಂತವನ್ನು ಕುರಿತು ವ್ಯಾಖ್ಯಾನ ಮಾಡಿದ್ದಾರೆ. ಅವರ ಪ್ರಕಾರ ಸಾಮ್ರಾಜ್ಯವು ಒಂದು ಖಂಡಾಂತರ ಸಾಮ್ರಾಜ್ಯವಾಗಿದೆ. ಈ ಸಾಮ್ರಾಜ್ಯವು ಅನೇಕ ತುಂಡುರಾಜ್ಯಗಳಿಂದ ಕೂಡಿದ್ದು, ಅವುಗಳಿಂದ ಆವೃತವಾಗಿವೆ. ರಾಜನ ರಾಜಕೀಯ ಅಧಿಕಾರವು ತಿರುಳು ಭಾಗದ ಮೇಲೆ ಇದ್ದಿತೇ ಹೊರತು ಬೇರೆ ಭಾಗಗಳ ಮೇಲೆ ಇರಲಿಲ್ಲ. ಆದರೆ ಬೇರೆ ಭಾಗಗಳ ಜೊತೆ ರಾಜನ ಸಂಬಂಧವು ಸೈನಿಕ ವ್ಯವಸ್ಥೆ, ಕಂದಾಯ ಮತ್ತು ಧಾರ್ಮಿಕಾಚರಣೆಗೆ ಸೀಮಿತವಾಗಿತ್ತು.

ಅರಸರಿಗೆ ಸಾಮಾನ್ಯರೊಂದಿಗೆ ನೇರ ಸಂಪರ್ಕವಿರಲಿಲ್ಲ. ಆದರೆ ಈ ಸಣ್ಣ ರಾಜಕೀಯ ಘಟಕಗಳಾದ ಸಾಮಂತರು, ಮಹಾಮಾಂಡಲಿಕರು, ನಾಯಕರು, ದೇಸಾಯಿಗಳು, ಸಂಸ್ಥಾನಿಕರು, ಪಾಳೆಯಗಾರರು ಒಡೆಯರು ಜನರ ಬದುಕಿಗೆ ಹತ್ತಿರವಾಗಿ ಅವರ ಕಷ್ಟ ಸುಖಗಳನ್ನು ಹಂಚಿಕೊಂಡಿದ್ದಾರೆ. ವಿಜಯನಗರ ಸಾಮ್ರಾಜ್ಯದ ಅರಸೊತ್ತಿಗೆಯ ಜೊತೆಯಲ್ಲಿ ಅದಕ್ಕೆ ಅಧೀನರಾಗಿ ಹಾಗೂ ಸಹಕಾರಿಯಾಗಿ ಅಮರನಾಯಕತನವು ಸಾಗಿಬಂದಿರುವುದು ಸ್ಪಷ್ಟವಾಗಿದೆ. ಇಂತಹ ಅನೇಕ ಅಮರನಾಯಕರು ದೊಡ್ಡ ಹಾಗೂ ಚಿಕ್ಕಪುಟ್ಟ ಪ್ರಾಂತ್ಯಗಳನ್ನು ಆಳ್ವಿಕೆ ಮಾಡಿದ್ದಾರೆ. ಇವರಲ್ಲಿ ವಿಶಾಲ ವ್ಯಾಪ್ತಿ ಮತ್ತು ಸಣ್ಣ ವ್ಯಾಪ್ತಿಯ ಪ್ರಾಂತ್ಯವನ್ನು ಹೊಂದಿದವರಿದ್ದಾರೆ. ಹೀಗೆ ದೊಡ್ಡ ಮತ್ತು ಸಣ್ಣ ವ್ಯಾಪ್ತಿಯ ಪ್ರಾಂತ್ಯವನ್ನು ನೂರಾರು ಪಾಳೆಯಪಟ್ಟಗಳು ಆಳ್ವಿಕೆ ನಡೆಸಿವೆ. ಇವರಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಸಂತೇಬೆನ್ನೂರು, ಹರಪನಹಳ್ಳಿ, ಬಸವಾಪಟ್ಟಣ, ಉಚ್ಚಂಗಿದುರ್ಗ, ಬಿಳಿಚೋಡು, ಕಣಕುಪ್ಪೆ ಮುಂತಾದ ಪ್ರದೇಶಗಳಲ್ಲಿ ಅನೇಕ ಪಾಳೆಯಗಾರರು ಪ್ರಮುಖರಾಗಿದ್ದಾರೆ.

ಈ ಪಾಳೆಯಗಾರರು ಪ್ರಭಾವಶಾಲಿಗಳಾಗಿದ್ದು ರಾಜನ ಸ್ಥಾನಮಾನಗಳನ್ನು ಗಳಿಸಿದ್ದರು. ಹೀಗೆ ಪ್ರಾದೇಶಿಕವಾಗಿ ಅಸ್ತಿತ್ವಕ್ಕೆ ಬಂದಂತಹ ಪಾಳೆಯಪಟ್ಟು ವ್ಯವಸ್ಥೆಯಲ್ಲಿ ಗುರುತಿಸಲ್ಪಟ್ಟವರೆ ಬೇಡರು. ಈ ನಾಯಕರು ಪಾಳೆಯಗಾರರಾಗಿ ವಿಜಯನಗರ ಅರಸರಿಗೆ ವಿಧೇಯರಾಗಿ ಸೈನಿಕ, ಆಡಳಿತಾತ್ಮಕ ಕ್ಷೇತ್ರಗಳಲ್ಲಿ ತಮ್ಮ ಪ್ರಭಾವವನ್ನು ಮೂಡಿಸಿದ್ದಾರೆ. ವಿಜಯನಗರೋತ್ತರ ಕಾಲದ ಅಂದಿನ ರಾಜಕೀಯ ತುಮುಲಗಳಲ್ಲಿ ತಮ್ಮನ್ನು ವಿಶಿಷ್ಟವಾಗಿ ಗುರುತಿಸಿಕೊಂಡ ಈ ಪಾಳೆಯಗಾರರು ಐತಿಹಾಸಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಪ್ರಮುಖ ಶಕ್ತಿಯಾಗಿದ್ದರು. ಇಂತಹ ರಾಜಮನೆತನದ ಉಗಮ, ಬೆಳವಣಿಗೆ, ಆಡಳಿತ, ಕಲೆ-ವಾಸ್ತುಶಿಲ್ಪ ಮುಂತಾದ ಅಂಶಗಳ ಕುರಿತಂತೆ ಅಧ್ಯಯನ ಮಾಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ. ಈ ಕುರಿತಂತೆ ದೊಡ್ಡ ದೊಡ್ಡ ಸಾಮ್ರಾಜ್ಯಗಳಂತೆ ಚಿಕ್ಕ ಚಿಕ್ಕ ರಾಜಕೀಯ ಘಟಕಗಳ ವಿವರವಾದ ಮತ್ತು ಆಳವಾದ ಐತಿಹಾಸಿಕ ಸಂಶೋಧನೆಗಳು ನಡೆಯಬೇಕಾದ ಅನಿವಾರ್ಯತೆ ಇದೆ.

### ೧.೧. ಅಧ್ಯಯನದ ಉದ್ದೇಶ

ವಿಜಯನಗರ ಅರಸರಿಗೆ ಋಣಿಯಾಗಿ, ರಕ್ಷಣೆಗಾಗಿ, ಏಳ್ಗೆಗಾಗಿ ಪಾಳೆಯಗಾರರು ದುಡಿದರು. ವಿಜಯನಗರ ಸಾಮ್ರಾಜ್ಯದ ಪತನದ ನಂತರ ಆ ಸಾಮ್ರಾಜ್ಯದ ಹಿರಿಮೆ ಗರಿಮೆಗಳನ್ನು ಕಾಪಾಡಿಕೊಂಡು ಅವರ ಸಂಸ್ಕೃತಿಯನ್ನು ರಕ್ಷಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇಂತಹ ಪಾಳೆಯಗಾರರು ಕರ್ನಾಟಕದ ಅನೇಕ ಕಡೆ ಆಳ್ವಿಕೆ ಮಾಡಿದ್ದು, ದಾವಣಗೆರೆ ಜಿಲ್ಲೆಯಲ್ಲಿ ಕಂಡುಬಂದಿರುವುದು ಗಮನಾರ್ಹ. ಇವರ ಬಗ್ಗೆ ಸಮಗ್ರವಾಗಿ ಅಧ್ಯಯನ ಇದುವರೆಗೂ ನಡೆದಿಲ್ಲ. ಇವರ ಚರಿತ್ರೆಯನ್ನು ಸಮಗ್ರವಾಗಿ ಅಧ್ಯಯನ ಮಾಡುವುದರ ಜೊತೆಗೆ ಮರೆಯಾದ ಚಾರಿತ್ರಿಕ ಅಧ್ಯಾಯವೊಂದನ್ನು ಸೇರ್ಪಡೆ ಮಾಡುವುದು ಈ ಅಧ್ಯಯನದ ಉದ್ದೇಶವಾಗಿದೆ.

ಕ್ರಿ.ಶ. ೧೬ನೇ ಶತಮಾನದ ಉತ್ತರಾರ್ಧದಲ್ಲಿ ಬೇಡ ಬುಡಕಟ್ಟು ಹಿನ್ನೆಲೆಯ ಜನಾಂಗ ರಾಜಪ್ರಭುತ್ವಗಳನ್ನು ನಿರ್ಮಿಸಿಕೊಂಡು ಆ ಮೂಲಕ ಸಾಂಸ್ಕೃತಿಕವಾಗಿ ಹಾಗೂ ಇತರೆ ಕ್ಷೇತ್ರಗಳಲ್ಲಿ ಮಾಡಿಕೊಂಡ ಮಾರ್ಪಾಡುಗಳನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ.

ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ, ಸ್ವರೂಪ, ಲಕ್ಷಣಗಳನ್ನು ಪ್ರಸ್ತುತ ತಲೆಮಾರಿಗೆ ತಿಳಿಸುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಪಾಳೆಯಗಾರರು ನಿರ್ಮಿಸಿದ ಅನೇಕ ಸ್ಮಾರಕ, ದೇವಾಲಯ, ಕೋಟೆ ಕೊತ್ತಲ, ಕೆರೆ ಕಾಲುವೆ, ಅರಮನೆ ಶಾಸನಗಳು, ಶಿಲ್ಪ-ಪುಷ್ಕರಿಣಿಗಳಿವೆ. ಪುರಾತತ್ವ ಆಕರಗಳೊಂದಿಗೆ ಮೌಖಿಕ ಚರಿತ್ರೆಯ ಆಕರಗಳನ್ನು(ಇಲ್ಲಿ ಅಳವಡಿಸಿಕೊಳ್ಳುವುದರ ಜೊತೆಗೆ ಐತಿಹ್ಯ, ಪುರಾಣ, ದಂತಕತೆ ಜಾನಪದ ಕತೆ, ಲಾವಣಿಗಳನ್ನು) ಅಧ್ಯಯನಕ್ಕೆ ಒಳಪಡಿಸಲಾಗುವುದು. ಇವುಗಳನ್ನು ಕ್ಷೇತ್ರಕಾರ್ಯದ ಮೂಲಕ ಪಾಳೆಯಗಾರರ ಚರಿತ್ರೆಯ ವಿವಿಧ ಘಟ್ಟಗಳನ್ನು ಸಮಗ್ರವಾಗಿ ಅಧ್ಯಯನ ಮಾಡುವ ಉದ್ದೇಶವಾಗಿದೆ.

ಹರಪನಹಳ್ಳಿ, ಸಂತೆಬೆನ್ನೂರು, ಬಸವಾಪಟ್ಟಣ, ಕಣಕುಪ್ಪೆ, ಉಚ್ಚಂಗಿದುರ್ಗ, ಬಿಳಿಚೋಡು ಪಾಳೆಯಗಾರರು ಮೂಲತಃ ಬೇಡ ಬುಡಕಟ್ಟು ಜನಾಂಗದವರಾಗಿದ್ದರು. ಇವರು ಸಮಾಜದ ಮೇಲೆ ಹಾಗೂ ದಾವಣಗೆರೆ ಪ್ರದೇಶದ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ಇವರು ಅಧ್ಯಯನ ಮಾಡಲಾಗುವುದು. ಜನಾಂಗಿಕ ಚೌಕಟ್ಟಿನಿಂದ ರಾಜತ್ವಕ್ಕೆ ಒಂದಾಗಿ ವಿಭಿನ್ನ ಸಂಸ್ಕೃತಿಗಳನ್ನು ಅಳವಡಿಸಿಕೊಂಡರು. ಇದನ್ನು ಸಮನ್ವಯಗೊಳಿಸಿಕೊಳ್ಳುವ ಒತ್ತಡಗಳು ಹೇಗೆ ವಿಭಿನ್ನ ಮತಪಂಥಗಳಿಗೆ ಆಶ್ರಯ ನೀಡಲು ಕಾರಣವಾದವು, ವೈಯಕ್ತಿಕ ಹಾಗೂ ಸಾರ್ವಜನಿಕ ನಂಬಿಕೆಗಳು ಹೇಗೆ ಜೊತೆಜೊತೆಯಾಗಿ ರಾಜಕೀಯ, ಸಾಮಾಜಿಕ ರಂಗದಲ್ಲಿ ಪ್ರಭಾವಗಳನ್ನು ಉಂಟುಮಾಡಿವೆ ಎಂಬುದನ್ನು ಅಧ್ಯಯನ ಮಾಡುವ ಉದ್ದೇಶವಿದೆ.

ಸ್ಥಳೀಯ ಅಥವಾ ಪ್ರಾದೇಶಿಕ ಚರಿತ್ರೆ ಬೆಳೆಯದಿದ್ದರೆ ರಾಜ್ಯ, ರಾಷ್ಟ್ರದ ಇತಿಹಾಸ ಪೂರ್ಣವಾಗಲಾರದು. ಹಾಗಾಗಿ ಸ್ಥಳೀಯ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಮಜಲುಗಳನ್ನು ಸಮಗ್ರವಾಗಿ ಒಂದು ಕಡೆ ತಂದಾಗ ನಮ್ಮ ಇತಿಹಾಸ ಸ್ಪಷ್ಟಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಸ್ಥಳೀಯ ಪಾಳೆಯಗಾರರ ಇತಿಹಾಸ ರಚನಾಕಾರ್ಯದಲ್ಲಿ ಮುಂದಾಗಿದೆ ಹಾಗೂ ಅಧ್ಯಯನದ ಪ್ರಮುಖ ಉದ್ದೇಶವೂ ಇದಾಗಿದೆ.

ಪಾಳೆಯಗಾರರು ರಾಜಕೀಯ ಹಾಗೂ ಸೈನಿಕ ಶಕ್ತಿಯಾಗಿ ತಮ್ಮ ಸ್ವಂತ ಬಲದಿಂದ ಬೆಳೆದು ವಿಜಯನಗರದ ಅರಸರ ಮಾನ್ಯತೆ ಪಡೆದು ತಮ್ಮದೇ ಆದ ರಾಜ್ಯ ಮತ್ತು ಸಂಸ್ಕೃತಿಯನ್ನು ಆರಂಭದಿಂದಲೂ ಅಳವಡಿಸಿಕೊಳ್ಳುತ್ತ ಎರಡು ಶತಮಾನಗಳ ಕಾಲ ಆಡಳಿತ ನಡೆಸಿದರು ಎಂಬುದನ್ನು ಚರ್ಚೆ ಮಾಡುವ ಉದ್ದೇಶವನ್ನೊಳಗೊಂಡಿದೆ.

ದಾವಣಗೆರೆ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ಪಾಳೆಯಪಟ್ಟುಗಳ ನಡುವಿನ ರಾಜಕೀಯ ಹಾಗೂ ವೈವಾಹಿಕ ಸಂಬಂಧವನ್ನು ಅವರ ಆಳ್ವಿಕೆಯೊಂದಿಗೆ ಗುರುತಿಸುವುದು. ಇವರ

ಸಾಮ್ಯತೆ, ವ್ಯತ್ಯಾಸ, ಸೂಕ್ಷ್ಮತೆಯ ಜೊತೆಗೆ ಪಾಳೆಯಗಾರರ ಕಾಲದ ಆಡಳಿತ, ಆರ್ಥಿಕ ಸಾಮಾಜಿಕ ಮತ್ತು ಶೈಕ್ಷಣಿಕ ಮೊದಲಾದ ಸಂಗತಿಗಳನ್ನು ಕುರಿತು ಚರ್ಚಿಸುವ ಉದ್ದೇಶವನ್ನು ಹೊಂದಿದೆ.

ಈ ಪಾಳೆಯಗಾರರು ಸ್ಥಳೀಯರಾಗಿದ್ದು ನೆರೆಹೊರೆಯ ರಾಜಕೀಯ ಶಕ್ತಿಗಳಿಂದ ಜರ್ಜರಿತವಾಗಿದ್ದರೂ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸಿಕೊಂಡು ಬಂದ ಸಂದರ್ಭವನ್ನು ಗಮನಿಸುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ.

ದಾವಣಗೆರೆ ಜಿಲ್ಲೆಯ ಪಾಳೆಯಗಾರರು ತಮ್ಮ ಅಧಿಕಾರದ ಅಸ್ತಿತ್ವ ಮತ್ತು ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೊರಾಟಗಳನ್ನು ಇಲ್ಲಿ ಗುರುತಿಸಲಾಗಿದೆ. ಜೊತೆಗೆ ಅವರ ಸಾಹಸಗಾಥೆಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ರಾಜತ್ವ ಕೈತಪ್ಪಿದಾಗ ಅವರ ಸ್ಥಾನಮಾನಗಳಲ್ಲಾದ ಬದಲಾವಣೆಯನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. ಆಧುನಿಕ ಸಂದರ್ಭದಲ್ಲಿ ಪಾಳೆಯಗಾರರ ವಾಸ್ತವ ಸಂಗತಿಯನ್ನು ಈ ಮಹಾಪ್ರಬಂಧದಲ್ಲಿ ವಿವರಿಸುವ ಪ್ರಮುಖ ಉದ್ದೇಶವನ್ನು ಹೊಂದಿದೆ.

ಸೈನಿಕ ಪರಂಪರೆಯಲ್ಲಿ ಬೆಳೆದ ಬೇಡರು ಅನ್ಯವೃತ್ತಿಗಳ ಕಡೆಗೆ ಗಮನ ಹರಿಸಿದ್ದು ಇತ್ತೀಚಿನ ಕಾಲಾವಧಿಯಲ್ಲಿ. ಈ ಕಾಲದ ಬದಲಾವಣೆಯಲ್ಲಿ ಪಾಳೆಯಗಾರರು ಯಾವ ರೀತಿಯಲ್ಲಿ ಕೆಳಹಂತದ ಬದುಕಿನ ಕಡೆಗೆ ತಳ್ಳಲ್ಪಟ್ಟರು? ಅದಕ್ಕೆ ಕಾರಣಗಳೇನು? ಪ್ರಸ್ತುತ ದಿನಗಳಲ್ಲಿ ಅವರ ಬದುಕು ಹೇಗಿದೆ? ಎಂಬ ಅಂಶಗಳ ಕುರಿತು ಪರಿಶೀಲಿಸುವ ಉದ್ದೇಶವಿದೆ.

ದಾವಣಗೆರೆ ಜಿಲ್ಲೆಯ ಪಾಳೆಯಗಾರರು ಸ್ಥಳೀಯರೊಂದಿಗೆ ಅಲ್ಲದೆ, ಹೈದರಾಲಿ ಆಳ್ವಿಕೆಯವರೆಗೆ ಯಾವ ಸ್ಥಿತಿಯಲ್ಲಿದ್ದರು? ನಂತರ ಟಿಪ್ಪುಸುಲ್ತಾನ್, ಮರಾಠ, ಬ್ರಿಟಿಷರೊಂದಿಗಿನ ಸಂಬಂಧವನ್ನು ಇಲ್ಲಿ ವಿಶೇಷವಾಗಿ ಗಮನಿಸುವ ಉದ್ದೇಶ ಹೊಂದಿದೆ. ಹಾಗೆಯೇ ಮೈಸೂರು ಒಡೆಯರು, ಮರಾಠರು, ಹೈದರಾಬಾದ್ ನಿಜಾಮ ಮತ್ತು ಬ್ರಿಟಿಷರ ಕಾಲದಲ್ಲಿ ಈ ಪಾಳೆಯಗಾರರ ಕುರಿತ ಸ್ಥಿತಿಗತಿಗಳನ್ನು ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟಗಳನ್ನು ಈ ಮಹಾ ಪ್ರಬಂಧದ ಉದ್ದೇಶವಿದೆ. ಒಟ್ಟಾರೆ ಪ್ರಸ್ತುತ ಅಧ್ಯಯನದ ಉದ್ದೇಶವು ಮೇಲೆ ತಿಳಿಸಿದ ಪಾಳೆಯಗಾರರ ರಾಜಪ್ರಭುತ್ವದ ನಿರ್ಮಾಣದಲ್ಲಿ ಅನುಸರಿಸುತ್ತಾ ಹೊರ ಸಾಂಸ್ಕೃತಿಕ ಪರಂಪರೆಗಳನ್ನು ಬದಲಾವಣೆಗಳನ್ನು ಭಿನ್ನತೆಯನ್ನು ಗುರುತಿಸಿ ಚಾರಿತ್ರಿಕವಾಗಿ ಸಮಗ್ರವಾಗಿ ಅಧ್ಯಯನ ಮಾಡುವ ಉದ್ದೇಶವನ್ನೊಳಗೊಂಡಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಚಾರಿತ್ರಿಕ ಸಂಶೋಧನ ವಿಧಿ-ವಿಧಾನಗಳನ್ನು ಹೊಂದಿದೆ. ಇಲ್ಲಿ ಐತಿಹಾಸಿಕ ಮತ್ತು ಸರ್ವೇಕ್ಷಣ ಪದ್ಧತಿಯನ್ನು ಅನುಸರಿಸಲಾಗಿದೆ.

ವಿಜಯನಗರ ಸಾಮ್ರಾಜ್ಯದ ನಂತರ ಅನೇಕ ಪಾಳೆಯಗಾರರ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಮರ್ಪಕ ಅಧಾರಗಳ ಕೊರತೆಯಿದೆ. ಈ ಕಾರಣಕ್ಕಾಗಿಯೆ ಇಲ್ಲಿಯವರೆಗೆ ಸ್ಥಳೀಯ ಅರಸರ

ಚರಿತ್ರೆಯನ್ನು ಕ್ರಮವಾಗಿ ನಿರೂಪಿಸಲಾಗಿಲ್ಲ. ಆದುದರಿಂದ ಅವರ ಕುರಿತಾಗಿ ಆಧಾರಗಳು, ಮಾಹಿತಿಗಳು, ಕಾಗದಪತ್ರಗಳು, ವಂಶಾವಳಿಗಳು, ದಾಖಲಾತಿಗಳು ಮತ್ತಿತರ ಆಕರಗಳ ಮೂಲಕ ಮೌಖಿಕ ಚರಿತ್ರೆಯ ಆಕರಗಳನ್ನು ಸಂಗ್ರಹಿಸಿಕೊಂಡು ಸ್ಥೂಲವಾಗಿ ಚರ್ಚಿಸಲಾಗಿದೆ.

ದಾವಣಗೆರೆ ಜಿಲ್ಲೆಯ ಪಾಳೆಯಗಾರರರಿಗೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಪ್ರಕಟಿತ ಹಾಗೂ ಅಪ್ರಕಟಿತ ಕಾಗದಪತ್ರಗಳನ್ನು, ವರದಿಗಳನ್ನು, ಸಂಶೋಧನಾ ಕೃತಿಗಳನ್ನು-ಪ್ರಬಂಧಗಳನ್ನು, ಶಾಸನ ಸಂಪುಟಗಳನ್ನು, ಇನ್ನಿತರ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳ ಮಾಹಿತಿಯನ್ನು ಗಮನಿಸಿ ಅವುಗಳಿಂದ ಪಾಳೆಯಗಾರರಿಗೆ ಸಂಬಂಧಿಸಿದ ವಿವರಗಳನ್ನು ಸಂಗ್ರಹಿಸಿಕೊಂಡು ಸೋದಾಹರಣವಾಗಿ ವಿವರಿಸಲಾಗಿದೆ.

ಕ್ಷೇತ್ರಕಾರ್ಯದ ಮೂಲಕ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಪೂರಕ ಮಾಹಿತಿಯನ್ನು ಸಂಗ್ರಹಿಸಿಲಾಗಿದೆ. ಪ್ರಶ್ನಾವಳಿಗಳ ಮೂಲಕ ಪಾಳೆಯಗಾರರ ಮನೆತನಗಳ ಸಂದರ್ಶನ ನಡೆಸಲಾಗಿದೆ. ಪಾಳೆಯಗಾರರ ಕುರಿತು ವಿಶೇಷ ಅಧ್ಯಯನ ಕೈಗೊಂಡ ಲೇಖಕರ, ಸ್ಥಳೀಯ ವಿದ್ವಾಂಸರ, ಪರಿಣತರನ್ನು ಭೇಟಿ ಮಾಡಿ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಪ್ರಸ್ತುತ ಪಾಳೆಯಗಾರರ ಕುರಿತ ಈ ಅಧ್ಯಯನವು ವ್ಯಾಪಕವಾದ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಆ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯ, ಕೋಟೆ, ಅರಮನೆ, ಶಾಸನ, ಕಲೆ ಮತ್ತು ವಾಸ್ತುಶಿಲ್ಪ ಮೊದಲಾದ ಪ್ರಾಚ್ಯವಶೇಷಗಳನ್ನು ಗಮನಿಸಲಾಗಿದೆ. ಈ ಅಧ್ಯಯನದಲ್ಲಿ ಬಹುಶಿಸ್ತೀಯ ಅಧ್ಯಯನದ ನೆಲೆಯಲ್ಲಿ ಇಲ್ಲಿಯ ವಿಷಯವನ್ನು ಸ್ಥೂಲವಾಗಿ ವಿಶ್ಲೇಷಿಸಲಾಗಿದೆ.

ವಿಶೇಷವಾಗಿ ಈ ಅಧ್ಯಯನದಲ್ಲಿ ಕ್ಷೇತ್ರಕಾರ್ಯದ ಮಾಹಿತಿಯನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಸ್ಥಳೀಯ ವಿದ್ವಾಂಸರ, ಇತಿಹಾಸಕಾರರ, ಮಠಾಧೀಶರ, ಪಾಳೆಯಗಾರರ ವಂಶಸ್ಥರ, ಬೇಡರ ಹಟ್ಟಿಗಳ ಹಿರಿಯರ ಮಾರ್ಗದರ್ಶನದಿಂದ ಮಾಹಿತಿ ಪಡೆದುಕೊಂಡಿದ್ದೇ ಬೆಂಗಳೂರಿನ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬಳ್ಳಾರಿಯ ಪತ್ರಾಗಾರ ಇಲಾಖೆ, ಮಿಥಿಕ್ ಸೊಸೈಟಿ, ಐ.ಸಿ.ಎಚ್.ಆರ್., ಬೆಂಗಳೂರು, ಮೈಸೂರು, ಧಾರವಾಡ, ಮಂಗಳೂರು, ಶಿವಮೊಗ್ಗ ಕುವೆಂಪು ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಿಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಿ ಅವುಗಳನ್ನು ವಿಶ್ಲೇಷಿಸಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇದರ ಜೊತೆಗೆ ಜಾನಪದ ಸಾಹಿತ್ಯ, ಪುರಾಣಗಳು, ವಂಶಾವಳಿಗಳು, ಐತಿಹ್ಯಗಳು ಈ ವ್ಯಾಪ್ತಿಗೊಳಪಡಿಸಲಾಗಿದೆ. ಕಾಲಾನುಕ್ರಮ ಹಾಗೂ ವಿಷಯಾನುಕ್ರಮವಾಗಿ ಅಭ್ಯಾಸಮಾಡಿ ಪ್ರತಿಯೊಂದು ವಿಷಯವನ್ನು ವಿವರಿಸಲಾಗಿದೆ. ಬೇರೆ ಬೇರೆ ಪೂರಕ ಶಾಸ್ತ್ರಗಳ ಮತ್ತು ಸಂಸ್ಕೃತಿಗಳ ಪರಿಕಲ್ಪನೆಗಳನ್ನು ಚರ್ಚಿಸಲಾಗಿದೆ. ಇವುಗಳನ್ನು ವಿಶ್ಲೇಷಣೆ ಮಾಡುವಾಗ ಯಾವುದೇ ಪೂರ್ವಗ್ರಹವಿಲ್ಲದೆ ಭಾಷೆ ಪ್ರದೇಶ ಮತ್ತು ಇತರೆ ವಿಷಯಗಳ ಆಧುನಿಕ ಹಾಗೂ ವೈಜ್ಞಾನಿಕ ಸಂಶೋಧನ ವಿಧಿ-ವಿಧಾನವನ್ನು ಅನುಸರಿಸಲಾಗಿದೆ.

## ೧.೩. ವ್ಯಾಪ್ತಿ

ಸಾಮಾನ್ಯ ಅರ್ಥದಲ್ಲಿ ವ್ಯಾಪ್ತಿ ಎಂದರೆ ಎಲ್ಲೆ, ಮೇರು, ಹರವು, ಗಡಿ ವೈಶಾಲ್ಯತೆ ಅಥವಾ ಸೀಮಾರೇಖೆ ಎಂದಾಗುತ್ತದೆ. ಯಾವುದೇ ಒಂದು ವಿಷಯದ ವ್ಯಾಪ್ತಿ ಎಂದರೆ ಆ ಕ್ಷೇತ್ರದ ವೈಶಾಲ್ಯ ಐತಿಹಾಸಿಕ ಸಾಂಸ್ಕೃತಿಕ ಸಂಶೋಧನೆಗೆ ಕಾಲಮಾನದ ಚೌಕಟ್ಟು ಮತ್ತು ಭೌಗೋಳಿಕ ಪ್ರದೇಶದ ವ್ಯಾಪ್ತಿ ಬಹಳ ಮುಖ್ಯ. ಒಂದು ನಿರ್ದಿಷ್ಟ ಹಾಗೂ ಉದ್ದೇಶ ಪೂರ್ವಕವಾದ ಸಂಶೋಧನೆ ಯಶಸ್ಸು ಕಾಣಬೇಕೆಂದರೆ ಈ ಮೇಲಿನ ಅಂಶಗಳು ಅತಿ ಮುಖ್ಯವೆನಿಸಿವೆ. ಈ ಚೌಕಟ್ಟನಲ್ಲಿ ಸಾಗಿದಾಗ ಮಾತ್ರ ಕ್ರಮಬದ್ಧತೆಯಿಂದ ಸ್ಪಷ್ಟವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

ವಿಜಯನಗರೋತ್ತರ ಅಂದರೆ ಕ್ರಿ.ಶ. ೧೫೬೫ರಿಂದ ವಸಾಹತುಶಾಹಿ ಆರಂಭದ(೧೮೦೦) ವರೆಗೆ, ನಂತರ ಸ್ವಾತಂತ್ರ್ಯ ಭಾರತದವರೆಗಿನ ಕಾಲಘಟ್ಟಲ್ಲಾದ ಚಾರಿತ್ರಿಕ ಸ್ಥಿತ್ಯಂತರಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ದಾವಣಗೆರೆ ಜಿಲ್ಲೆಯ ಪಾಳೆಯಗಾರರ ರಾಜಕೀಯ, ಆಡಳಿತ, ಯುದ್ಧವ್ಯವಸ್ಥೆ, ಧಾರ್ಮಿಕ, ಆರ್ಥಿಕ, ಶಿಕ್ಷಣ, ಸಾಹಿತ್ಯ, ಹೈದರಾಲಿ, ಟಿಪ್ಪುವಿನೊಡನೆ ಸಂಘರ್ಷಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಳೆಯಗಾರರು, ಪ್ರಸ್ತುತ ಪಾಳೆಯಗಾರರ ಮನೆತನದ ಸ್ಥಿತಿಗತಿ ಇತ್ಯಾದಿ ಅಂಶಗಳು ಮೂರು ಶತಮಾನದ ಚರಿತ್ರೆಯ ವ್ಯಾಪ್ತಿಯನ್ನು ಅಧ್ಯಯನ ಒಳಗೊಂಡಿದೆ.

ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಚಾರಿತ್ರಿಕ ಅಧ್ಯಯನವನ್ನು ಕೇಂದ್ರೀಕರಿಸಿದ್ದರೂ ಇಲ್ಲಿ ಕರ್ನಾಟಕದ ಇತರೆ ಪಾಳೆಯಗಾರರನ್ನು ಭೌಗೋಳಿಕವಾಗಿ ಪಾಳೆಯಗಾರರು ನೆಲೆಗೊಂಡಿದ್ದ ಹರಪನಹಳ್ಳಿ, ಸಂತೆಬೆನ್ನೂರು, ಮತ್ತಿ, ನಿರ್ಥಡಿ, ಕಣಕುಪ್ಪೆ, ಉಚ್ಚಂಗಿದುರ್ಗ, ಅಣಜಿ, ಬಸವಾಪಟ್ಟಣ ಪಾಳೆಯಗಾರರ ಕೊಡುಗೆಗಳಾದ ಸ್ಮಾರಕಗಳು, ದೇವಾಲಯಗಳು, ಕೋಟೆಕೊತ್ತಲುಗಳು, ಕಲೆ, ವಾಸ್ತುಶಿಲ್ಪ ಹಾಗೂ ಆಡಳಿತ, ಆರ್ಥಿಕ ಸಾಮಾಜಿಕ, ಸಾಹಿತ್ಯ, ಪಾಳೆಯಗಾರರ ಸ್ವಾತಂತ್ರ್ಯ ಹೋರಾಟ, ಪಾಳೆಯಗಾರರ ಮನೆತನದ ಆಧುನಿಕ ಜನಜೀವನದ ವಿವಿಧ ಆಯಾಮಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

## ೧.೪. ಅಧ್ಯಯನದ ಸ್ವರೂಪ

'ದಾವಣಗೆರೆ ಜಿಲ್ಲೆಯ ಪಾಳೆಯಗಾರರು: ಚಾರಿತ್ರಿಕ ಅಧ್ಯಯನ' ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಸೀಮಿತವಾದಂತೆ ಅಧ್ಯಯನದ ವ್ಯಾಪ್ತಿಯನ್ನು ಮತ್ತು ಉದ್ದೇಶವನ್ನು ಮೇಲೆ ತಿಳಿಸಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ವಿಭಿನ್ನ ನೆಲೆಗಟ್ಟಿನಿಂದ ಅಧ್ಯಯನಗಳು ಬೇರೆ ಬೇರೆ ಆಯಾಮಗಳಲ್ಲಿ ನಡೆದಿದ್ದು, ಅವುಗಳನ್ನು ಸಮಯೋಚಿತವಾಗಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚೆಗಳ ಮತ್ತು ವಿಶ್ಲೇಷಣೆಗಳ ಪೂರಕ ದಾಖಲೆಗಳಾಗಿ ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ಪಾಳೆಯಗಾರರ ಕಾಲಾವಧಿಯ ದಾಖಲಾತಿ ಮತ್ತು ವಿವರಣೆಗಳನ್ನೊಳಗೊಂಡಂತೆ ವಿಶೇಷಣಾತ್ಮಕವಾಗಿರುತ್ತದೆ. ಮುಖ್ಯವಾಗಿ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರ ಕಾಲದ ಶಾಸನಗಳು, ಇತಿಹಾಸ, ಕಲೆ, ವಾಸ್ತುಶಿಲ್ಪ ಮತ್ತು ಸಂಸ್ಕೃತಿಯನ್ನು ಕುರಿತಾದ ಸಂಶೋಧನಾತ್ಮಕವಾದ ಅಧ್ಯಯನವಾಗಿರುತ್ತದೆ. ಪ್ರಸ್ತುತ ಅಧ್ಯಯನದ ವಿಷಯವನ್ನು ಅಧ್ಯಯನದ ಅನೂಕೂಲಕ್ಕಾಗಿ ಏಳು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಪ್ರತಿಯೊಂದು ಅಧ್ಯಾಯವು ಉಪಶೀರ್ಷಿಕೆಯನ್ನೊಳಗೊಂಡಿದೆ.

ಮೊದಲನೇ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ ವಿಧಾನ ಹಾಗೂ ಈವರೆಗಿನ ನಡೆದಿರುವ ಅಧ್ಯಯನದ ಚರ್ಚೆಯನ್ನು ಒಳಗೊಂಡಿದೆ. ಈ ಅಧ್ಯಯನಕ್ಕೆ ಸಹಾಯಕವಾದ ಆಕರಗಳು ಸೇರಿದಂತೆ ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಬಗ್ಗೆ ಈ ಹಿಂದೆ ನಡೆದಿರುವ ಅಧ್ಯಯನಗಳು ಹಾಗೂ ಪ್ರಸ್ತುತ ಅಧ್ಯಯನದ ವಿಧಾನಗಳನ್ನು ಕುರಿತು ಚರ್ಚಿಸಲಾಗಿದೆ. ಈ ವಿವರಗಳು ಪ್ರಸ್ತುತ ಅಧ್ಯಯನದ ಮಹಾಪ್ರಬಂಧಕ್ಕೆ ಅಗತ್ಯವಾದ ತಾತ್ವಿಕ ಹಿನ್ನೆಲೆಯನ್ನು ರೂಪಿಸುತ್ತವೆಂದು ಹೇಳಬಹುದು.

ಎರಡನೇ ಅಧ್ಯಾಯವು ದಾವಣಗೆರೆ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಒಳಗೊಂಡಿದೆ. ಅಧ್ಯಾಯದಲ್ಲಿ ಉಪಶೀರ್ಷಿಕೆಗಳಾಗಿ ಪ್ರಾಚೀನಕಾಲ, ವಿಜಯನಗರಪೂರ್ವ ಕಾಲ, ವಿಜಯನಗರ ಕಾಲ, ವಿಜಯನಗರೋತ್ತರ ಕಾಲ ಎಂದು ವಿಭಾಗಿಸಲಾಗಿದೆ. ಪ್ರಾಗೈತಿಹಾಸಿಕ ಕಾಲದಿಂದ ಆಧುನಿಕ ಕಾಲದವರೆಗೂ ತನ್ನದೇ ಆದ ಚಾರಿತ್ರಿಕ ಘಟ್ಟಗಳನ್ನು ಗುರುತಿಸಿಕೊಂಡಿರುವ ದಾವಣಗೆರೆ, ಕರ್ನಾಟಕ ಮಧ್ಯಭಾಗದಲ್ಲಿರುವ ಪ್ರಮುಖ ರಾಜಕೀಯ ಮತ್ತು ಸಾಂಸ್ಕೃತಿಕ ನೆಲೆಯಾಗಿದೆ. ೧೫-೮-೧೯೯೭ರಲ್ಲಿ ದಾವಣಗೆರೆ, ಹರಿಹರ, ಚನ್ನಗಿರಿ, ಜಗಲೂರು, ಹೊನ್ನಾಳಿ, ಹರಪನಹಳ್ಳಿ ತಾಲ್ಲೂಕುಗಳನ್ನೊಳಗೊಂಡಂತೆ ಹೊಸ ಜಿಲ್ಲೆಯನ್ನಾಗಿ ರಚಿಸಲಾಯಿತು. ಈ ಸಂದರ್ಭದಲ್ಲಿ ದಾವಣಗೆರೆ ಜಿಲ್ಲೆಯು ಕೇವಲ ಆಡಳಿತಾತ್ಮಕವಾಗಿ ಬೇರೆಯಾಗದೆ ಭೌಗೋಳಿಕ ನೆಲೆ ಮತ್ತು ಚರಿತ್ರೆಯ ಮೇರೆಗಳಲ್ಲಿಯೂ ಬದಲಾವಣೆ ಆಯಿತು. ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಚಾರಿತ್ರಿಕವಾಗಿ ಶಿಲಾಯುಗದಿಂದ ಪ್ರಸ್ತುತ ಕಾಲಘಟ್ಟವರೆಗಿನ ಚರಿತ್ರೆಯನ್ನು ಹಾಗೂ ಬದಲಾವಣೆಯ ವ್ಯವಸ್ಥೆಯಲ್ಲಿ ಭೌಗೋಳಿಕ ನೆಲೆಯನ್ನು ~~ಈ ಅಧ್ಯಾಯನದಲ್ಲಿ~~ ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರ ರಾಜಕೀಯ ಚರಿತ್ರೆಯನ್ನು ಚರ್ಚಿಸಲಾಗಿದೆ. ದಾವಣಗೆರೆ ಜಿಲ್ಲೆಯಲ್ಲಿ ಪ್ರಮುಖವಾಗಿ ಹರಪನಹಳ್ಳಿ ಸಂತೆಬೆನ್ನೂರು, ಬಸವಾಪಟ್ಟಣ, ಕಣಕುಪ್ಪೆ ಪಾಳೆಯಗಾರರು ಅಲ್ಲದೆ ಕಿರು ಪಾಳೆಯಪಟ್ಟುಗಳಾದ ಜಿಳಿಜೋಡುವಂಶ, ಕಣಕುಪ್ಪೆ ಪಾಳೆಯಗಾರರು, ಉಚ್ಚಂಗಿದುರ್ಗ ಮುಂತಾದ ಸಣ್ಣಪುಟ್ಟ ಪಾಳೆಯಗಾರರು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಇವರ ಚಾರಿತ್ರಿಕ ಘಟನೆಗಳನ್ನು ಹಾಗೂ ಅವರ ಸ್ಥಿತ್ಯಂತರಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಪಾಳೆಯಗಾರರ ಕಾಲದ ಸಮಾಜೋ ಆರ್ಥಿಕ ಸ್ಥಿತಿಗಳ ಬಗ್ಗೆ ಚರ್ಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಪಾಳೆಯಗಾರರು ತಮ್ಮ ಆಳ್ವಿಕೆಯ ಕಾಲಾವಧಿಯಲ್ಲಿ ನೀಡಿದಂತಹ ಆಡಳಿತ, ಸಾಮಾಜಿಕ, ಆರ್ಥಿಕ, ಕೃಷಿ, ನೀರಾವರಿ ವ್ಯವಸ್ಥೆ, ವ್ಯಾಪಾರ, ಕೈಗಾರಿಕೆ ತೆರಿಗೆಪದ್ಧತಿ, ನಾಣ್ಯಗಳು, ಶಿಕ್ಷಣ, ಸಾಹಿತ್ಯ, ಧಾರ್ಮಿಕ ಮುಂತಾದ ವಿಚಾರಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಹರಪನಹಳ್ಳಿ, ಸಂತೇಬೆನ್ನೂರು, ಬಸವಾಪಟ್ಟಣ, ಬಿಳಿಚೋಡು, ಕಣಕುಪ್ಪೆ, ಉಚ್ಚಂಗಿದುರ್ಗ ಮುಂತಾದ ಪಾಳೆಯಗಾರರು ನಿರ್ಮಿಸಿದ ಕೋಟೆ ಕೊತ್ತಲಗಳು, ದೇವಾಲಯಗಳು, ಮಠಗಳು, ಅರಮನೆಗಳು, ಕೆರೆ-ಕಾಲುವೆ, ಬಾವಿಗಳು, ಪುಷ್ಕರಿಣಿಗಳು ಮುಂತಾದ ಅನೇಕ ಅಂಶಗಳು ಕಲೆ ಮತ್ತು ವಾಸ್ತುಶಿಲ್ಪ ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಳೆಯಗಾರರು ಹಾಗೂ ಪಾಳೆಯಗಾರರ ಮನೆತನದ ಪ್ರಸ್ತುತ ಸ್ಥಿತಿಗತಿಗಳ ಬಗ್ಗೆ ಚರ್ಚಿಸಲಾಗಿದೆ. ಈ ಸಂದರ್ಭದಲ್ಲಿ ಪಾಳೆಯಗಾರರ ಬ್ರಿಟಿಷರೊಂದಿಗೆ ನಡೆಸಿದ ಸಂಘರ್ಷಗಳು ಹೋರಾಟಗಳನ್ನು ಹಾಗೂ ಪ್ರಸ್ತುತ ಈ ಪಾಳೆಯಗಾರರ ಮನೆತನದ ಸ್ಥಿತಿಗತಿ ಅಂದರೆ ಪ್ರಭಾವ ಮತ್ತು ಪರಿಣಾಮಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಏಳನೇ ಅಧ್ಯಾಯವು ಸಮಾರೋಪವಾಗಿದ್ದು, ಅಧ್ಯಯನದ ಫಲಿತಗಳನ್ನು ಹಾಗೂ ಅನುಬಂಧವನ್ನು ಕೊಡಲಾಗಿದೆ. ಅನುಬಂಧದಲ್ಲಿ ಗ್ರಂಥಋಣ, ವಂಶಾವಳಿ, ನಕ್ಷೆಗಳು, ವಕ್ತೃಗಳ ವಿವರಗಳು, ಛಾಯಾಚಿತ್ರಗಳು ಮುಂತಾದ ಅಂಶಗಳನ್ನು ನೀಡಲಾಗಿದೆ.

**೧.೫. ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಚರಿತ್ರೆ ಅಧ್ಯಯನವು ಇಂದು ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಕೋನದತ್ತ ಸಾಗಿದೆ. ಇಂದು ಸ್ಥಳೀಯ ಚರಿತ್ರೆಯನ್ನು ಕುರಿತು ಅಧ್ಯಯನಗಳು ನಡೆಯುತ್ತಿವೆ. ಅದರಂತೆ ತಮ್ಮ ಅಮೋಘವಾದ ಚರಿತ್ರೆಯನ್ನು ಮೈತುಂಬಿಕೊಂಡಿರುವ ದಾವಣಗೆರೆ ಜಿಲ್ಲೆಯ ಪಾಳೆಯಗಾರರು ನಿರ್ಮಿಸಿದ ಸ್ಮಾರಕಗಳು ಪಾಳೆಯಗಾರರ ಚರಿತ್ರೆಯನ್ನು ಸಾರುತ್ತಿದೆ. ಇಂತಹ ಪಾಳೆಯಗಾರ ಕುರಿತಂತೆ ವಿವಿಧ ಕಾಲಘಟ್ಟದ ನೆಲೆಯಲ್ಲಿ ಅಧ್ಯಯನ ಮಾಡಿ ಕಡೆಗಣಿಸಲ್ಪಟ್ಟಿರುವ ಚರಿತ್ರೆಯನ್ನು ಹೊರತಂದಿರುವುದು ಸ್ವಾಗತಾರ್ಹವಾಗಿದೆ.

ದಾವಣಗೆರೆ ಜಿಲ್ಲೆಯು ಪ್ರಾಗೈತಿಹಾಸ ಕಾಲದಿಂದ ಸ್ವಾತಂತ್ರ್ಯ ಹೋರಾಟದವರೆಗೂ ವಿಶಿಷ್ಟ ಸ್ಥಾನ ಪಡೆದುಕೊಂಡಿದೆ. ದಾವಣಗೆರೆ ಪ್ರದೇಶವು ನೇರವಾಗಿ ಯಾವುದೇ ಪಾಳೆಯಗಾರರನ್ನು ಹೊಂದಿರದೆ, ಕೋಟೆ-ಕೊತ್ತಲ, ಬುರುಜು-ಬತೇರಿಗಳು ಇಲ್ಲಿ ಏನೂ ಇರದಿದ್ದರೂ ಚಿತ್ರದುರ್ಗದ

ಐತಿಹಾಸಿಕ ನೆಲೆಗಟ್ಟಿನ ಮೇಲೆ ತನ್ನ ಅಸ್ತಿತ್ವವನ್ನು ಕಂಡುಕೊಂಡಿತ್ತು. ಆದರೆ ನೂತನ ಜಿಲ್ಲೆಯಾಗಿ ರಚನೆಗೊಂಡಾಗ ಈ ಪ್ರದೇಶಗಳ ಪ್ರಾದೇಶಿಕ ಹಿನ್ನೆಲೆಯ ಚರಿತ್ರೆಯನ್ನು ಅವಲೋಕಿಸಲಾಗಿದೆ. ಹರಪನಹಳ್ಳಿ, ಚನ್ನಗಿರಿ, ಹೊನ್ನಾಳಿ, ಜಗಲೂರು, ಹರಿಹರ ತಾಲ್ಲೂಕುಗಳು ವಿಸ್ತಾರವಾದ ಚರಿತ್ರೆಯನ್ನು ಹೊಂದಿರುವುದು ತಿಳಿದುಬರುತ್ತದೆ. ಈ ಪ್ರದೇಶಗಳ ಬಗ್ಗೆ ಸಂಶೋಧನೆಗಳು ನಡೆದಿವೆ. ಅಲ್ಲದೇ ಅನೇಕ ಕೃತಿಗಳು ಪ್ರಕಟಗೊಂಡಿವೆ. ಇವುಗಳಲ್ಲಿ ಕೆಲವು ವೈಚಾರಿಕತೆ ಮತ್ತು ಚಾರಿತ್ರಿಕ ವಸ್ತುವಿನ ಬಗೆಗಿನ ಖಚಿತ ವಿಶ್ಲೇಷಣೆ ಇಲ್ಲದೆ ಸೊರಗಿದ್ದರೂ ವಿವಿಧ ಕಾಲಘಟ್ಟಗಳಲ್ಲಿ ಆದ ಒಟ್ಟಾರೆ ಬದಲಾವಣೆಗಳು ಮತ್ತು ಸ್ಥಿತ್ಯಂತರಗಳನ್ನು ಸ್ಥೂಲವಾಗಿಯಾದರೂ ತಿಳಿದುಕೊಳ್ಳಲು ಸಹಾಯಕವಾಗಿದೆ.

ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಮೇಲೆ ಬೆಳಕು ಚೆಲ್ಲುವ ಮೂಲ ದಾಖಲೆಗಳೆಂದರೆ ಈ ಪಾಳೆಯಗಾರರ ಕಾಲದ ಶಾಸನಗಳು, ಶಿಲಾಶಾಸನಗಳು, ತಾಮ್ರಪಟ ಶಾಸನಗಳು ಇವು ಮೂಲ ಆಕರಗಳಾಗಿವೆ. ಇವರ ಕಾಲದಲ್ಲಿ ನಿರ್ಮಾಣವಾದ ಕೋಟೆ ಕೊತ್ತಲಗಳು, ದೇವಾಲಯಗಳು, ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ಸಂಗತಿಗಳನ್ನು ತಿಳಿಸುತ್ತವೆ. ಕೆರೆ ಕಾಲುವೆಗಳು ಕೃಷಿ ಹಾಗೂ ಆರ್ಥಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಪಾಳೆಯಗಾರರನ್ನು ಮತ್ತು ಇವರ ಮನೆತನಗಳನ್ನು ಕುರಿತಂತೆ ಪ್ರಕಟವಾದ ಕೈಫಿಯತ್ತುಗಳು, ಬಖೈರುಗಳು ಗಮನಾರ್ಹವಾಗಿವೆ. ಇವುಗಳಲ್ಲದೆ ಲಿಂಗಣ್ಣ ಕವಿ ರಚಿಸಿದ ಕೆಳದಿ ನೃಪ ವಿಜಯ ಕೃತಿಯಲ್ಲಿ ಸಂತೆಬೆನ್ನೂರು, ಬಸವಾಪಟ್ಟಣ ಪಾಳೆಯಗಾರರ ಕುರಿತಂತೆ ಉಲ್ಲೇಖಗೊಂಡಿರುವುದನ್ನು ಕಾಣಬಹುದು. ಹಾಗೆಯೇ ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್ ಮೈಸೂರು ಸ್ಟೇಟ್ ಗೆಜೆಟಿಯರ್ ಚಿಕ್ಕಮಗಳೂರು ಜಿಲ್ಲಾ ಗೆಜೆಟಿಯರ್ ಬಳ್ಳಾರಿ ಜಿಲ್ಲಾ ಗೆಜೆಟಿಯರ್‌ಗಳಲ್ಲಿ ಪಾಳೆಯಗಾರರ ಬಗ್ಗೆ ಉಲ್ಲೇಖಗೊಂಡಿರುವುದನ್ನು ನೋಡಬಹುದು.

ಬಿ.ಎಲ್.ರೈಸ್ ಸಂಪಾದನೆಯ ಮೈಸೂರು ಗೆಜೆಟಿಯರ್ ಸಂಪುಟ-೨, ಫ್ರಾನ್ಸಿಸ್ ಅವರ ಮದ್ರಾಸ್ ಡಿಸ್ಟ್ರಿಕ್ಟ್ ಗೆಜೆಟಿಯರ್, ಬಳ್ಳಾರಿ ಡಿಸ್ಟ್ರಿಕ್ ಗೆಜೆಟಿಯರ್ ಬಿ.ಎನ್.ಸತ್ಯನ್ ಅವರ ಚಿತ್ರದುರ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್, ಸೂರ್ಯನಾಥ ಕಾಮತ್ ಅವರ ಕರ್ನಾಟಕ ಸ್ಟೇಟ್ ಗ್ಯಾಜೆಟಿಯರ್, ಸಿ.ಹಯವದನ್‌ರಾವ್ ಅವರ ಮೈಸೂರು ಸ್ಟೇಟ್ ಗೆಜೆಟಿಯರ್, ಸಂಪುಟ ೧, ೨, ೩, ೪, ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್‌ಗಳು, ಮುಂತಾದ ಅನೇಕ ಗೆಜೆಟಿಯರ್‌ಗಳಲ್ಲಿ ಪಾಳೆಯಗಾರರನ್ನು ಕುರಿತು ಸಂಕ್ಷಿಪ್ತ ಉಲ್ಲೇಖಗಳಿವೆ.

ಗೆಸೆಟಿಯರ್ ಆಫ್ ಇಂಡಿಯಾ, ಶಿವಮೊಗ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್‌ನಲ್ಲಿ ಹೊನ್ನಾಳಿ, ಚನ್ನಗಿರಿ ತಾಲ್ಲೂಕುಗಳು ಚಾರಿತ್ರಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಅಂಶಗಳ ಕುರಿತು ಬೆಳಕು ಚೆಲ್ಲುತ್ತವೆ.

ಬಿ.ಷೇಕ್ ಆಲಿ ಅವರು ಸಂಪಾದಿಸಿರುವ ಕರ್ನಾಟಕ ಚರಿತ್ರೆ ಸಂಪುಟಗಳಲ್ಲಿ ದಾವಣಗೆರೆ ಜಿಲ್ಲೆಯ ಪ್ರಾಗೈತಿಹಾಸ ಕಾಲದಿಂದ ಸ್ವಾತಂತ್ರ್ಯ ಹೋರಾಟದವರೆಗಿನ ಅಂಶಗಳನ್ನು ವಿಶ್ಲೇಷಿಸಿದ್ದಾರೆ.

ಇವುಗಳಲ್ಲಿ ಪಾಳೆಯಗಾರರ ಆಡಳಿತ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ವಿವರಗಳನ್ನು ಒಳಗೊಂಡಿದೆ.

ಬಿ.ಎಲ್.ರೈಸ್ ಅವರು ಪಾಳೆಯಗಾರರ ವಂಶಸ್ಥರ ಬಳಿಯಿದ್ದ ದಾಖಲೆಗಳನ್ನು ಮತ್ತು ಶಾಸನಗಳನ್ನು ಅಧ್ಯಯನ ಮಾಡಿ ಶಾಸನ ಸಂಪುಟಗಳನ್ನು ಹೊರತಂದರು. ಬಿ.ಎಲ್.ರೈಸ್ ಅವರು ಎಫಿಗ್ರಾಫಿಯ ಕರ್ನಾಟಕಾ ಸಂಪುಟ-೭ ಮತ್ತು ೧೧ರಲ್ಲಿ ದಾವಣಗೆರೆ ಜಿಲ್ಲೆಗೆ ಸಂಬಂಧಿಸಿದ ಶಾಸನಗಳು ಹಾಗೂ ಪಾಳೆಯಗಾರರಿಗೆ ಸಂಬಂಧಿಸಿದ ಶಾಸನಗಳನ್ನು ಪ್ರಕಟಿಸಿದ್ದಾರೆ.

ಹಾಗೆಯೇ ಸಂತೆಬೆನ್ನೂರು ಕೈಫಿಯತ್ತು, ಉತ್ತಂಗಿ ವೆಂಟಕಿ ಸಲ್ಲುವ ಸಂತೆಬೆನ್ನೂರು ಸೀಮೆಯ ಕೈಫಿಯತ್ತು, ಬಳ್ಳಾರಿ ಪ್ರದೇಶದ ಕೈಫಿಯತ್ತು ಮುಂತಾದ ಕೈಫಿಯತ್ತುಗಳು ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಮೇಲೆ ಬೆಳಕು ಚೆಲ್ಲುತ್ತವೆ. ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಸಂಗ್ರಹಿಸಿ ೧೯೩೮ರಲ್ಲಿ ಪ್ರಕಟಿಸಿದ ಚಿತ್ರದುರ್ಗ ಬಖೈರು ಚಿತ್ರದುರ್ಗ ಪಾಳೆಯಗಾರರ ಕೊನೆಯ ಕಾಲವನ್ನು ವಿವರಿಸುತ್ತದೆ. ಇಲ್ಲಿ ಮರಾಠ ಪೇಶ್ವೆಗಳ ಸಂಬಂಧ ಹಾಗೂ ಹೈದರಾಲಿಯ ರಾಜಕೀಯ ಸಂಬಂಧಗಳನ್ನು ಕುರಿತಂತೆ ಬೆಳಕು ಚೆಲ್ಲುತ್ತದೆ. ಅಲ್ಲದೆ ಹರಪನಹಳ್ಳಿ ಪಾಳೆಯಗಾರರ ದಾಳಿಗಳು, ಮಾಯಕೊಂಡದ ಲಡಾಯಿ ಮುಂತಾದ ಅಂಶಗಳು ಈ ಬಖೈರಿನಲ್ಲಿ ಉಲ್ಲೇಖಗೊಂಡಿದ್ದು ಅಂದಿನ ರಾಜಕೀಯ ಸ್ಥಿತಿಗತಿಗಳನ್ನು ಚಿತ್ರಿಸಿದ್ದಾರೆ.

ಎಂ.ಎಸ್.ಪುಟ್ಟಣ್ಣನವರು "ಚಿತ್ರದುರ್ಗದ ಪಾಳೆಯಗಾರರು" ಎಂಬ ಕೃತಿಯನ್ನು ೧೯೨೪ರಲ್ಲಿ ಪ್ರಕಟಿಸಿದರು. ಈ ಕೃತಿಯಲ್ಲಿ ಚಿತ್ರದುರ್ಗದ ಪಾಳೆಯಗಾರರ ಕುರಿತಂತೆ ಎಲ್ಲಾ ಅರಸರ ರಾಜಕೀಯ ಜೀವನದ ಕುರಿತು ಪರಿಚಯ ಮಾಡಿಕೊಟ್ಟಿದ್ದಾರೆ. ಅದರಂತೆ ಪಿ.ಕೃಷ್ಣರಾವ್ ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಬುದ್ಧ ಕರ್ಣಾಟಕ ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟಿಸಿದ "ಚಿತ್ರದುರ್ಗದ ಬೆಟ್ಟ ಮತ್ತು ನಾಯಕ ಸಾಮ್ರಾಜ್ಯ" ಎಂಬ ಲೇಖನ ಉಲ್ಲೇಖಾರ್ಹವಾಗಿದೆ. ಎಂ.ವಿ.ಶ್ರೀನಿವಾಸ ಹಾಗೂ ಲಕ್ಷ್ಮಣ್ ತೆಲಗಾವಿ ಅವರು ಸಂಪಾದಿಸಿದ "ಚಂದ್ರವಳ್ಳಿ" ಕೃತಿಯಲ್ಲಿ ಹರಪನಹಳ್ಳಿ ಪಾಳೆಯಗಾರರ, ಬಿಳಿಚೋಡು ವಂಶದ ಕುರಿತಂತೆ ವಿವರಣೆಗಳನ್ನೊಳಗೊಂಡಿದೆ. ಈ ಕೃತಿಯು ಚಿತ್ರದುರ್ಗ ಜಿಲ್ಲೆಯ ಇತಿಹಾಸ, ಚಿತ್ರದುರ್ಗ ಪಾಳೆಯಗಾರರು, ಭೂ ಶೋಧನೆಗಳು, ಐತಿಹಾಸಿಕ ಸ್ಥಳಗಳು, ದೇವಾಲಯಗಳು, ಪ್ರಕಟಿತ ಶಾಸನಗಳು, ಸಂಶೋಧನೆಗಳು, ದಾವಣಗೆರೆ ಜಿಲ್ಲೆಗೆ ಸಂಬಂಧಿಸಿದಂತೆ ದಾವಣಗೆರೆ ಇತಿಹಾಸ, ಹರಿಹರದ ಇತಿಹಾಸ, ನಿರ್ಥಡಿ ರಂಗನಾಥ ದೇವಾಲಯ ಕುರಿತಂತೆ ಇಲ್ಲಿನ ಲೇಖನಗಳು ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ. ಕೆ.ವೆಂಕಣ್ಣಚಾರ್, ಪಾಂಡುರಂಗ ಜೋಯಿಸ್ ಮತ್ತು ಲಕ್ಷ್ಮಣ್ ತೆಲಗಾವಿ ಸಂಪಾದಿಸಿದ ಐತಿಹಾಸಿಕ ಚಿತ್ರದುರ್ಗ(೧೯೭೬), ಚಿತ್ರದುರ್ಗ ದರ್ಶಿನಿ (೧೯೮೦) ಎಂಬ ಎರಡು ಕೃತಿಗಳು ಐತಿಹಾಸಿಕ ದೃಷ್ಟಿಯಿಂದ ಪ್ರಮುಖವಾಗಿವೆ.

ಎ.ವಿ.ವೆಂಕಟರತ್ನಂ ಅವರು "ಎ ಲೋಕಲ್ ಸೆಲ್ಫ್ ಗೌರ್ನಮೆಂಟ್ ಇನ್ ವಿಜಯನಗರ ಎಂಪೈರ್" ಎಂಬ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯವು ಸಂಯುಕ್ತ ಊಳಿಗಮಾನ್ಯ ಮತ್ತು

ವಿಕೇಂದ್ರೀಕೃತ ಅಂಶಗಳನ್ನು ಒಳಗೊಂಡ ವ್ಯವಸ್ಥೆಯಾಗಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ. ನೊಬೊರೊ ಕರಾಶಿಮಾ ಅವರು "ಎ ಕನ್‌ಕಾರ್‌ಡೆನ್ಸ್ ಆಫ್ ನಾಯಕಾಸ್" ಎಂಬ ಕೃತಿಯಲ್ಲಿ ಪಾಳೆಯಗಾರರ ಮೂಲವನ್ನು ವಿವರಿಸಿದ್ದಾರೆ. ಸೂರ್ಯನಾಥ ಕಾಮತ್ ಅವರು "ಕರ್ನಾಟಕ ರಾಜ್ಯ ಗೆಸೆಟಿಯರ್ ಭಾಗ-೨"ರಲ್ಲಿ ದಾವಣಗೆರೆ ಜಿಲ್ಲೆಯ ಇತಿಹಾಸವನ್ನು ವಿವರಿಸಿದ್ದಾರೆ. ಟಿ.ಗಿರಿಜಾ ಅವರು "ದಾವಣಗೆರೆ ಇದು ನಮ್ಮ ಜಿಲ್ಲೆ" ಎಂಬ ಕೃತಿಯಲ್ಲಿ ದಾವಣಗೆರೆ ಜಿಲ್ಲೆಯ ಭೌಗೋಳಿಕ, ಸಾಮಾಜಿಕ ಆರ್ಥಿಕ ಹಾಗೂ ಚಾರಿತ್ರಿಕ ಅಂಶಗಳನ್ನು ತಿಳಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರು "ಬಳ್ಳಾರಿ ಜಿಲ್ಲೆಯ ಪಾಳೆಯಗಾರರು" ಎಂಬ ಕೃತಿಯಲ್ಲಿ ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಮತ್ತು ಸೈನಿಕ ವ್ಯವಸ್ಥೆಯನ್ನು ವಿವರಿಸಿದ್ದಾರೆ. ಇಕ್ಬಾಲ್ ಅಹಮದ್ ಅವರ "ಚನ್ನಗಿರಿ ದರ್ಶನ" ಕೃತಿಯು ಚನ್ನಗಿರಿ ತಾಲ್ಲೂಕಿನ ಕಿರು ಪರಿಚಯವನ್ನು ಮಾಡಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಹಾಗೂ ಸಂಶೋಧನೆಗೆ ಸಹಕಾರಿಯಾಗಿದೆ. ಈ ಕೃತಿಯು ತಾಲ್ಲೂಕಿನ ಹೋಬಳಿಗಳು, ಕೆರೆಗಳು, ದೇವಾಲಯಗಳ ಮಾಹಿತಿಯನ್ನು ಐತಿಹಾಸಿಕ ಆಧಾರಗಳ ಮೇಲೆ ದಾಖಲಿಸಲಾಗಿದೆ.

ಲಕ್ಷ್ಮಣ್ ತೆಲಗಾವಿ ಅವರು ಸಂಪಾದಿಸಿದ "ಹರತಿಸಿರಿ"(೧೯೮೭) ಎಂಬ ಕೃತಿಯಲ್ಲಿ ದಾವಣಗೆರೆ ಜಿಲ್ಲೆಯ ಇತಿಹಾಸ, ಸಂತೆಬೆನ್ನೂರು ಕುರಿತಾದ 'ಸಂತೆಬೆನ್ನೂರು: ಒಂದು ಚಾರಿತ್ರಿಕ ದಾಖಲೆ ಎಂಬ ಲೇಖನವನ್ನು ಚಿದಾನಂದಮೂರ್ತಿ ಅವರು ರಚಿಸಿದ್ದಾರೆ. ಈ ಲೇಖನವು ಪಾಳೆಯಗಾರರ ಆಡಳಿತ, ಸಂತೆಬೆನ್ನೂರಿನ ಹಿನ್ನೆಲೆ, ಕಟ್ಟಡ ನಿರ್ಮಾಣ, ದೇವಾಲಯಗಳ ನಿರ್ಮಾಣ ಮುಂತಾದ ಅಂಶಗಳನ್ನು ಪರಿಚಯಿಸುತ್ತದೆ. ಕುಂ.ಬಾ.ಸದಾಶಿವಪ್ಪ ಅವರ "ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ" ಕೃತಿಯು ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಸಾಂಸ್ಕೃತಿಕ ನೆಲೆಗಳಾದ ಉಚ್ಚಂಗಿದುರ್ಗ, ಕಂಚಿಕೇರಿ, ಚಿಗಟೇರಿ, ನೀಲಗುಂದ, ಬಾಗಳಿ, ಹರಪನಹಳ್ಳಿ, ಹಿರೇ ಮ್ಯಾಗಳಗೇರಿ, ದುಗ್ಗಾವತಿ, ಕುಂಚೂರು, ಕೂಲಹಳ್ಳಿ, ಅಣ್ಣಿಗೇರಿ, ಅರಸಿಕೇರೆ, ತೆಲಗಿ, ಗುಂಡಗತ್ತಿ, ರಾಗಿಮಾಸಲ್ವಾಡ, ತುಂಬಿಗೇರಿ ಇನ್ನು ಮುಂತಾದ ಸ್ಥಳಗಳ ಮಹತ್ವವನ್ನು ಪರಿಚಯಿಸುತ್ತದೆ. ಹಾಗೆಯೇ ಇವರ ಇನ್ನೊಂದು ಪ್ರಮುಖ ಕೃತಿಯಾದ ಹರಪನಹಳ್ಳಿ ಪಾಳೆಯಗಾರರ "ಇತಿಹಾಸದರ್ಶನ" ಎಂಬ ಕೃತಿಯಲ್ಲಿ ಹರಪನಹಳ್ಳಿ ಪಾಳೆಯಗಾರರ ಕುರಿತಂತೆ ಲೇಖನಗಳಿವೆ. ಈ ಪಾಳೆಯಗಾರರು ಸುಮಾರು ೨ ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ ಪಾಳೆಯಗಾರರ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ.

ಬಿ.ರಾಜಶೇಖರಪ್ಪ ಅವರ "ಇತಿಹಾಸ ಕಥನ" ಎಂಬ ಕೃತಿಯು ಶಾಸನಗಳ, ನಾಣ್ಯಗಳ, ಪಾಳೆಯಗಾರರ ಜನಾಂಗೀಯ ಸ್ಥಳನಾಮವಾಗಿ ಕ್ರೀಡೆ ಇನ್ನಿತರ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ದಾವಣಗೆರೆ ಜಿಲ್ಲೆಯ ಚರಿತ್ರೆಗೆ ಸಂಬಂಧಿಸಿದಂತೆ ದಾವಣಗೆರೆ ಸ್ಥಳನಾಮ ನಿಷ್ಪತ್ತಿ

ಒಂದು ಅಧ್ಯಯನ, ಜಗಲೂರು ತಾಲ್ಲೂಕಿನ ಶಾಸನಗಳು: ಒಂದು ಪರಿಚಯ ಮತ್ತು ಜಾನಪದ ಕಲಾವಿದೆಯಾದ ಹೆಳವನಕಟ್ಟೆ ಗಿರಿಯಮ್ಮನವರ ಕಾಲದ ಮೇಲೆ ಹೊಸಬೆಳಕು ಎಂಬ ಅಂಶಗಳಿಂದ ಕೂಡಿದ ಅಧ್ಯಯನ, ಪ್ರಸ್ತುತ ಜಿಲ್ಲೆಯ ಚರಿತ್ರೆ ರಚನೆಗೆ ಸಹಾಯಕವಾಗಿವೆ. ಎಂ.ಜಿ. ಈಶ್ವರಪ್ಪ ಸಂಪಾದನೆಯ "ಶತಮಾನದ ದಾವಣಗೆರೆ" ಕೃತಿಯು ದಾವಣಗೆರೆ ನಗರಕ್ಕೆ ಸೀಮಿತಗೊಂಡಿದೆ ಎಂದು ಹೇಳಬಹುದು. ನಗರದ ಹೆಸರಿನ ಉತ್ಪತ್ತಿ ಚಾರಿತ್ರಿಕ ಹಿನ್ನೆಲೆ ಚಳುವಳಿಗಳು, ಹತ್ತಿಗಿರಣಿಗಳು, ಹುಟ್ಟು ಬೆಳವಣಿಗೆ, ಅವನತಿ ಮುಂತಾದ ಅಂಶಗಳು ಈ ಕೃತಿಯಲ್ಲಿ ಉಲ್ಲೆಖಿಗೊಂಡಿವೆ.

ಟಿ.ಗಿರಿಜಾ ಅವರ "ದಾವಣಗೆರೆ ಇದು ನಮ್ಮ ಜಿಲ್ಲೆ" ಕೃತಿಯು ೭೪೦ ಪುಟಗಳ ಒಂದು ಬೃಹತ್ ಗ್ರಂಥವಾಗಿದೆ. ೧೯೯೭ರಲ್ಲಿ ದಾವಣಗೆರೆ ಪ್ರತ್ಯೇಕ ಜಿಲ್ಲೆಯ ಸ್ಥಾನಮಾನ ಪಡೆದ ನಂತರ ಜಿಲ್ಲೆಗೆ ಒಂದು ಭೌಗೋಳಿಕ ಚೌಕಟ್ಟು ಸಿಕ್ಕಂತಾಯಿತು. ಈ ಕೃತಿಯಲ್ಲಿ ಆರು ತಾಲ್ಲೂಕುಗಳ ಭೌಗೋಳಿಕ ಲಕ್ಷಣಗಳು, ಚರಿತ್ರೆ, ಜಿಲ್ಲೆಯಲ್ಲಿ ಬರುವ ಪ್ರತಿಯೊಂದು ಗ್ರಾಮಗಳ ಪರಿಚಯ ಮಾಡಿಕೊಡುತ್ತದೆ. ಸ್ಥಳದ ಮಹಿಮೆ, ಪುರಾಣ, ಐತಿಹ್ಯಗಳು, ದೇವಾಲಯಗಳು, ಮಠಮಾನ್ಯಗಳು, ಶಾಸನಗಳು, ಸ್ಮಾರಕಗಳು, ಸ್ವಾತಂತ್ರ ಹೋರಾಟಗಾರರ ಪರಿಚಯ ಮುಂತಾದ ಅಂಶಗಳನ್ನು ಸಮಗ್ರವಾಗಿ ಪರಿಚಯಿಸಿಕೊಡುತ್ತದೆ. ಈ ಕೃತಿಯು ಮೌಖಿಕ ಆಕರಗಳನ್ನು ಮತ್ತು ಪ್ರಾಥಮಿಕ ಆಕರಗಳನ್ನು ಬಳಸಿಕೊಂಡು ಜಿಲ್ಲೆಯ ಸಮಗ್ರ ಚರಿತ್ರೆಯನ್ನು ತಿಳಿಸಿಕೊಡುವ ಮಹತ್ವದ ಕೃತಿಯಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಕೃತಿಯು ಉತ್ತಮ ಆಕರವಾಗಿದೆ ಎಂದು ಹೇಳಬಹುದು.

ರಾಜಾರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್ ಸಂಪಾದನೆಯ "ಮಲೆ ಕರ್ನಾಟಕದ ಅರಸುಮನೆತನಗಳು" ಎಂಬ ಕೃತಿಯಲ್ಲಿ ಸಂತೆಬೆನ್ನೂರು ಪಾಳೆಯಗಾರರ ರಾಜಕೀಯ ಚರಿತ್ರೆಯನ್ನು ವಿಶ್ಲೆಷಿಸುವ ಲೇಖನವಿದೆ. ಬಳ್ಳಕೆರೆ ಹನುಮಂತಪ್ಪ ಅವರ "ಹರಿಹರ ತಾಲ್ಲೂಕು ದರ್ಶನ" ಕೃತಿಯು ಸರಳ, ನೇರ ಮತ್ತು ವಸ್ತುನಿಷ್ಠ ನಿರೂಪಣೆಯಿಂದ ಕೂಡಿದೆ. ನೂತನ ಶಿಲಾಯುಗದಿಂದ ೨೦೦೨ರ ಕಾಲದವರೆಗೆ ಸಾಂಸ್ಕೃತಿಕ ವಿವಿಧ ಹಂತಗಳನ್ನು ಈ ಕೃತಿಯು ಒಳಗೊಂಡಿದೆ. ಕೊಟ್ರೇಶ್ ಉತ್ತಂಗಿ ಅವರ "ಹೊನ್ನೆಲೆಗಳು" ಕೃತಿಯು ದಾವಣಗೆರೆ ಜಿಲ್ಲೆಯ ಹೊನ್ನಳ್ಳಿ ತಾಲ್ಲೂಕಿನ ಸಮಗ್ರ ಚರಿತ್ರೆಯನ್ನು ಒಳಗೊಂಡಿದೆ. ತಾಲೂಕಿನ ಹಲವೆಡೆ ಸಿಕ್ಕ ಶಾಸನಗಳನ್ನು ಪರಿಚಯಿಸುತ್ತ ಪುರಾತತ್ವ ನೆಲೆಗಳನ್ನು, ವೀರಗಲ್ಲು, ಮಾಸ್ತಿಕಲ್ಲು, ಮಠಮಾನ್ಯ, ಕೋಟೆ ಕೊತ್ತಲಗಳ ಮಾಹಿತಿ ಕೊಡುತ್ತದೆ. ಅಲ್ಲದೆ ತಾಲ್ಲೂಕಿನಲ್ಲಿ ಕಂಡುಬರುವ ವಿವಿಧ ಗ್ರಾಮಗಳ ಐತಿಹಾಸಿಕ, ಸಾಂಸ್ಕೃತಿಕ, ನೈಸರ್ಗಿಕ ಹಾಗೂ ಗಣ್ಯವ್ಯಕ್ತಿಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಹೆಚ್.ನೀಲಪ್ಪ ಅವರ ಸಂಪಾದನೆಯ "ವಿಜಯಶಿಲ್ಪ" ಕೃತಿಯು ಚನ್ನಗಿರಿ ತಾಲ್ಲೂಕಿನಲ್ಲಿ ಕಂಡುಬರುವ ಸಂತೆಬೆನ್ನೂರು ನಾಯಕರ ಚರಿತ್ರೆಯನ್ನು ನಿರೂಪಿಸುತ್ತದೆ. ಈ ಕೃತಿಯಲ್ಲಿ

ಸುಮತೀಂದ್ರ ನಾಡಿಗ ಅವರ ಸಂತೆಬೆನ್ನೂರು ನಾಯಕರು ಮತ್ತು ಚನ್ನಗಿರಿ ತಾಲೂಕಿನ ಶಾಸನಗಳು ಎಂಬ ಲೇಖನಗಳು ಚನ್ನಗಿರಿ ಚರಿತ್ರೆಯನ್ನು ಒಳಗೊಂಡಿದ್ದಲ್ಲದೆ ದಾವಣಗೆರೆ ಚರಿತ್ರೆ ರಚನೆಗೆ ಸಹಾಯಕವಾಗಿದೆ.

ವಿರೂಪಾಕ್ಷಿ ಪೂಜಾರಹಳ್ಳಿ ಅವರ "ಚಿನ್ನಹಗರಿ ಸಿರಿ" ಕೃತಿಯಲ್ಲಿ ನಾಯಕ ಬುಡಕಟ್ಟುಗಳ ಪ್ರಾದೇಶಿಕ, ಸ್ಥಳೀಯ, ಮೌಖಿಕ ಚರಿತ್ರೆಯನ್ನು ಕುರಿತು ಅಧ್ಯಯನ ಮಾಡಿ ಪ್ರಕಟಿಸಿದ ಶೋಧಗಳಿವೆ. ಹಾಗೆಯೇ ಬುಡಕಟ್ಟುಗಳಿಗೆ ಸಂಬಂಧಿಸಿದಂತೆ ಚರಿತ್ರೆ, ಸಂಸ್ಕೃತಿ, ಧಾರ್ಮಿಕ ಮತ್ತು ವೈಚಾರಿಕತೆ ಮುಂತಾದ ಅನೇಕ ಹೊಸ ಸಂಗತಿಗಳ ಕಡೆಗೆ ಬೆಳಕು ಚೆಲ್ಲಲು ಮಾಡಿರುವ ಪ್ರಯತ್ನ ಶ್ಲಾಘನೀಯವಾಗಿದೆ. ದಾವಣಗೆರೆ ಜಿಲ್ಲೆಗೆ ಸಂಬಂಧಿಸಿದಂತೆ ಅಣಜಿ ಗ್ರಾಮದ ಪ್ರಾಚೀನ ಚರಿತ್ರೆ ಕುರಿತಂತೆ ಮಾಡಿದ ಅಧ್ಯಯನ ಜಿಲ್ಲೆಯ ಚರಿತ್ರೆಯ ಮೇಲೆ ಬೆಳಕು ಬೀರುತ್ತದೆ.

ಕೃಷ್ಣಮೂರ್ತಿ ಹನೂರು ಅವರ "ಮ್ಯಾಸಬೇಡರ ಸಂಸ್ಕೃತಿ" ಕೃತಿಯು ದಾವಣಗೆರೆ ಜಿಲ್ಲೆಯ ವ್ಯಾಪ್ತಿಗೆ ಬರುವ ಜಗಲೂರು ತಾಲ್ಲೂಕಿನ ಮ್ಯಾಸಬೇಡರ ರೀತಿನೀತಿಗಳು, ಆಚಾರ, ಪದ್ಧತಿ, ಹಬ್ಬ ಹರಿದಿನಗಳು ಹಾಗೂ ಜಾತ್ರೆಗಳು ಮುಂತಾದ ಸಮಗ್ರ ವಿವರಗಳನ್ನು ಒಳಗೊಂಡಿದೆ. ಈ ಕೃತಿಯು ಜನಾಂಗಿಯ ಅಧ್ಯಯನ ಕೃತಿಗಳಲ್ಲಿಯೇ ಪ್ರಮುಖವಾಗಿದೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರ "ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು" ಕೃತಿಯು ನಾಯಕ ಸಮುದಾಯದ ಸಾಂಸ್ಕೃತಿಕ ವೀರರ ಕುರಿತ ವಿವರಗಳನ್ನೊಳಗೊಂಡಿದೆ. ದಾವಣಗೆರೆ ಜಿಲ್ಲೆಯನ್ನು ಅನುಲಕ್ಷಿಸಿದಂತೆ ಮ್ಯಾಸಬೇಡ, ಲಂಬಾಣಿ, ಕುಂಬಾರ, ಪಿಂಜಾರ ಸಮುದಾಯಗಳ ಅಧ್ಯಯನಗಳು ಕಂಡುಬರುತ್ತದೆ. ಜಗಲೂರು ಪಟ್ಟಣದಲ್ಲಿ ಆಳ್ವಿಕೆ ಮಾಡಿದ ಜಗಪತಿರಾಯ ಎಂಬ ದರ್ಪಿಷ್ಠ ಅರಸನ ಬಗ್ಗೆ ಹಾಗೂ ವಿಭೂತಿಪುರುಷ ಜಗಲೂರು ಪಾಪನಾಯಕನ ಬಗ್ಗೆ ತಿಳಿಸಲಾಗಿದೆ. ಇವರ ಇನ್ನೊಂದು ಕೃತಿಯಾದ "ವಾಲ್ಮೀಕಿ ಸಮುದಾಯದ ಪ್ರಾತಃಸ್ಮರಣೀಯರು" ಕೃತಿಯಲ್ಲಿ ಜಗಲೂರು ತಾಲ್ಲೂಕಿನ ಬಿಳಿಚೋಡು ಗ್ರಾಮದಲ್ಲಿ ವಾಲ್ಮೀಕಿ ಸಮುದಾಯದ ಸಂಸ್ಕೃತಿ ಜೀವನ ಕುರಿತಂತೆ ಲೇಖನವನ್ನೊಳಗೊಂಡಿದೆ.

ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಡಿ.ಮಂಜುನಾಥ ಅವರ "ಹರಿಹರೇಶ್ವರ ದೇವಾಲಯ," ಮಹಾಬಲೇಶ್ವರ ಕಾಟ್ರಹಳ್ಳಿ ಅವರ "ಬಾಗಳಿಯೇ ಬಾಗಳಿಗೆ," ಬಣಕಾರ ರಾಜಶೇಖರ ಅವರ "ಬಾಗಳಿಯ ದೇಗುಲಗಳು" ಮುಂತಾದ ಕೃತಿಗಳು ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ದೇವಾಲಯಗಳ ಕುರಿತು ಮಾಹಿತಿಯನ್ನು ಒಳಗೊಂಡಿದೆ. ಹಿರೇಬಿದ್ರಿ ಹೊಳಿಬಸಪ್ಪ ಅವರ ಎಂ.ಫಿಲ್. ಅಪ್ರಕಟಿತ ನಿಬಂಧವು ದಾವಣಗೆರೆ ಜಿಲ್ಲೆಯ ಸ್ವದೇಶಿ ಚಳುವಳಿ ಕೃತಿಯು ದಾವಣಗೆರೆ ಜಿಲ್ಲೆ ಸ್ವದೇಶಿ ಚಳುವಳಿಯಲ್ಲಿ ಭಾಗವಹಿಸಿದ ಪಾತ್ರವನ್ನು ವಿವರಿಸುತ್ತದೆ.

ಸುಮತೀಂದ್ರ ನಾಡಿಗ ಅವರ "ಸಂತೆಬೆನ್ನೂರು ನಾಯಕರು" ಎಂಬ ಕೃತಿಯಲ್ಲಿ ಸಂತೆಬೆನ್ನೂರಿನ ಪಾಳೆಯಗಾರರ ರಾಜಕೀಯ ಇತಿಹಾಸವನ್ನು ವಿಶ್ಲೇಷಿಸಿದ್ದಾರೆ. ಕುಂ.ಬಾ. ಸದಾಶಿವಪ್ಪ ಅವರ "ಹರಪನಹಳ್ಳಿ ಪಾಳೆಯಗಾರರು" ಎಂಬ ಕೃತಿಯಲ್ಲಿ ಹರಪನಹಳ್ಳಿ ಊರಿನ ಪದನಿಷ್ಪತ್ತಿ, ಉಗಮ, ಆಳ್ವಿಕೆ ಮಾಡಿದ ೧೬ ಅರಸರ ಬಗ್ಗೆ ಮಾಹಿತಿಯನ್ನು ಒದಗಿಸಿದ್ದಾರೆ. ವಾಸ್ತುಶಿಲ್ಪ, ಸಾಹಿತ್ಯ, ಶಾಸನ, ನಾಣ್ಯ, ಭೂ ಉತ್ಖನನದ, ಮೂಲಕ ದೊರಕಿದ ಅವಶೇಷ, ಸ್ಥಳೀಯ ಐತಿಹ್ಯಗಳು ಹಾಗೂ ಕ್ಷೇತ್ರಕಾರ್ಯದ ಮೂಲಕ ಈ ಕೃತಿಯನ್ನು ರಚಿಸಿದ್ದಾರೆ.

ಬಿ.ಎಲ್.ರೈಸ್ ಸಂಪಾದನೆಯ "ಎಫಿಗ್ರಾಫಿಯಾ ಕರ್ನಾಟಿಕಾ" ಸಂಪುಟಗಳಲ್ಲಿ ದಾವಣಗೆರೆ ಜಿಲ್ಲೆಗೆ ಹಾಗೂ ಪಾಳೆಯಗಾರರಿಗೆ ಸಂಬಂಧಿಸಿದ ಬಹುತೇಕ ಶಾಸನಗಳು ಪ್ರಕಟವಾಗಿವೆ. ಈ ಶಾಸನಗಳಿಂದ ಪಾಳೆಯಗಾರರ ಜನಜೀವನ ಧಾರ್ಮಿಕ, ಆರ್ಥಿಕ ಸಾಮಾಜಿಕ ಅಂಶಗಳ ಕುರಿತು ಕೂಲಂಕಷವಾಗಿ ವಿಶ್ಲೇಷಿಸಲಾಗಿದೆ. ಪಾಳೆಯಗಾರರ ಬಗ್ಗೆ ಚಾರಿತ್ರಿಕ ಅಧ್ಯಯನ ಮಾಡಿದವರಲ್ಲಿ ಲಕ್ಷ್ಮಣ್ ತೆಲಗಾವಿಯವರು ಪ್ರಮುಖರು. ಅವರ ಪ್ರಮುಖ ಕೃತಿಯಾದ "ಎಪ್ಪತ್ತೇಳು ಪಾಳೆಯಗಾರರು" ಎಂಬ ಕೃತಿಯಲ್ಲಿ ಹೈದರಾಲಿ ಮತ್ತು ಟಿಪ್ಪು ಅನೇಕ ಪಾಳೆಯಪಟ್ಟನ್ನು ವಶಪಡಿಸಿಕೊಂಡಿರುವುದನ್ನು ಉಲ್ಲೇಖಿಸುತ್ತಾರೆ. ಅದರಲ್ಲಿ ಪ್ರಮುಖವಾಗಿ ಹರಪನಹಳ್ಳಿಯೂ ಸೇರಿದೆ. ಈ ಕೃತಿಯು ಸಂಖ್ಯಾ ಆಶಯದ ನೆಲೆಯ ಮೇಲೆ ರಚನೆಗೊಂಡಿದ್ದು ದಕ್ಷಿಣ ಭಾರತದ ಪಾಳೆಯಗಾರರು, ಕರ್ನಾಟಕದ ಪಾಳೆಯಗಾರರ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

ಪಾಳೆಯಗಾರರ ಕುರಿತಂತೆ ಬರ್ಟನ್ ಸ್ಟೈನ್ ಅವರ "ಪಿಜೆಂಟ್ ಸ್ಟೇಟ್ ಅಂಡ್ ಸೊಸೈಟಿ ಇನ್ ಮೆಡಿವಲ್ ಸೌತ್ ಇಂಡಿಯಾ", ಹರ್ಮನ್ ಕುಲ್ಕಿ ಅವರ "ದಿ ಸ್ಟೇಟ್ ಇನ್ ಇಂಡಿಯಾ", ಡಿ.ಡಿ. ಕೊಸಾಂಬಿ ಅವರ "ಆ್ಯನ್ ಇಂಟ್ರಡಕ್ಷನ್ ಟು ದಿ ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ" ಈ ಮೇಲಿನ ಕೃತಿಗಳಲ್ಲಿ ಪಾಳೆಯಗಾರರ ಊಳಿಗಮಾನ್ಯ ಪದ್ಧತಿಯನ್ನು ವಿವರಿಸಿದ್ದಾರೆ. ಸಿ.ಆರ್.ಶ್ಯಾಮಲ ಅವರ "ಪೂರ್ವ ಕರ್ನಾಟಕದ ಪಾಳೆಯಗಾರರು" ಎಂಬ ಕೃತಿಯಲ್ಲಿ ಹರಪನಹಳ್ಳಿ ಅತ್ಯಂತ ಬಲಿಷ್ಠ ಎಂದು ತಿಳಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರ "ಕರ್ನಾಟಕದ ಕೈಫಿಯತ್ತುಗಳು" ಕೃತಿಯಲ್ಲಿ ದಾವಣಗೆರೆ ಜಿಲ್ಲೆಯ ಕೆಲವು ಕೋಟೆಗಳ ಮಾಹಿತಿ ತಿಳಿಸಿದ್ದಾರೆ. ಕುಂ.ಬಾ. ಸದಾಶಿವಪ್ಪ ಅವರ "ಹಲವು ಹನ್ನೊಂದು ಹರಪನಹಳ್ಳಿ" ಕೃತಿಯಲ್ಲಿ ಹರಪನಹಳ್ಳಿ ಪಾಳೆಯಗಾರರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಆರ್.ಗೋಪಾಲ್ ಸಂಪಾದನೆಯ "ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ಎಂಬ ಕೃತಿಯಲ್ಲಿ ದಾವಣಗೆರೆ ಜಿಲ್ಲೆಯ ವಿವಿಧ ಪ್ರದೇಶಗಳ ಇತಿಹಾಸವನ್ನು ವಿವರಿಸಿದ್ದಾರೆ. ಎಚ್.ತಿಪ್ಪೇಸ್ವಾಮಿ ಅವರು "ದಾವಣಗೆರೆ ಜಿಲ್ಲೆಯ ದೇವಾಲಯಗಳು" ಎಂಬ ವಿಷಯದ ಬಗ್ಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ

ಕಂಡುಬರುವ ಪ್ರಮುಖ ದೇವಾಲಯಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಈ ಕೃತಿಯಿಂದ ದಾವಣಗೆರೆ ಜಿಲ್ಲೆಯ ಪಾಳೆಯಗಾರರ ದೇವಾಲಯಗಳ ಬಗ್ಗೆ ಮಾಹಿತಿಯನ್ನು ಪಡೆದುಕೊಳ್ಳಬಹುದು. ಸುಮತೀಂದ್ರ ನಾಡಿಗ ಅವರ "ದಾವಣಗೆರೆ ಜಿಲ್ಲೆಯ ಇತಿಹಾಸ ಕೆಲವು ಹೆಜ್ಜೆಗಳು" ಎಂಬ ಕೃತಿಯಲ್ಲಿ ಪಾಳೆಯಗಾರರ ಕೋಟೆಗಳ ಬಗ್ಗೆ ವಿಶ್ಲೇಷಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರ "ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನಕಾವ್ಯ" ಎಂಬ ಕೃತಿಯಲ್ಲಿ ಅವರ ಮೂಲ ಸಂತೆಬೆನ್ನೂರು ಮತ್ತು ಬಸವಾಪಟ್ಟಣ ಎಂದು ಗುರುತಿಸಿದ್ದಾರೆ.

ಎ.ಕೆ. ಶಾಸ್ತ್ರಿ ಸಂಪಾದಿತ "ಶೃಂಗೇರಿ ಮಠದ ಕಡತಗಳಲ್ಲಿ ಆಯ್ದು ಚಾರಿತ್ರಿಕ ದಾಖಲೆಗಳು" ಕೃತಿಯಲ್ಲಿ ಚಿತ್ರದುರ್ಗ ಪಾಳೆಯಗಾರ ಎರಡು, ಸಂತೆಬೆನ್ನೂರು ಪಾಳೆಯಗಾರರ ಎರಡು ಕಡತಗಳು ಪ್ರಕಟಗೊಂಡಿವೆ. ಸಂತೆಬೆನ್ನೂರು ಪಾಳೆಯಗಾರರ ೫೭ ಹಾಗೂ ಹರಪನಹಳ್ಳಿ ಪಾಳೆಯಗಾರರು ೩೦ ಶಾಸನಗಳು ಈ ಅಧ್ಯಯನದಲ್ಲಿ ದೊರೆತಿದೆ. ಈ ಶಾಸನಗಳಲ್ಲಿ ಗೊತ್ರ, ಸೂತ್ರ, ದಾನ-ದತ್ತಿಗಳು ಅಧಿಕಾರಿಗಳು, ತೆರಿಗೆಗಳು ಕೆರೆಗಳ ನಿರ್ಮಾಣ ಕುಶಲಕರ್ಮಿಗಳು, ನಾಣ್ಯಗಳು ಮಣ್ಣು, ಧಾನ್ಯ ಮುಂತಾದ ವಿವರಗಳು ಪ್ರಸ್ತುತ ಅಧ್ಯಯನಕ್ಕೆ ಪ್ರಮುಖ ಸಂಗತಿಯಾಗಿದೆ.

ಲಿಂಗಣ್ಣ ಕವಿ ವಿರಚಿತ "ಕೆಳದಿ ನೃಪವಿಜಯಂ"ದಲ್ಲಿ ಸಂತೆಬೆನ್ನೂರು, ಹರಪನಹಳ್ಳಿ ಪಾಳೆಯಗಾರರ ವಂಶಾವಳಿ, ರಾಜ್ಯಭಾರ ಕ್ರಮಗಳ ಉಲ್ಲೇಖವಿದೆ. ಮೈಸೂರು ಒಡೆಯರ ಅರಮನೆಯಲ್ಲಿದ್ದ ಕೃಷ್ಣಶರ್ಮ ಎಂಬ ಕವಿ ಸಂತೆಬೆನ್ನೂರು ಪಾಳೆಯಗಾರ ರಾಜ್ಯಕ್ಕೆ ಭೇಟಿ ನೀಡಿ "ಸರಜಾ ಹನುಮೇಂದ್ರ ಯಶೋವಿಲಾಸಂ" ಎಂಬ ಕೃತಿಯನ್ನು ರಚಿಸಿದ್ದಾರೆ.

ಫ್ರಾನ್ಸಿಸ್ ಬುಕಾನನ್ ಅವರ "ಎ ಜರ್ನಿ ಫ್ರಂ ದಿ ಮದ್ರಾಸ್ ಥ್ರೂ ದಿ ಕಂಟ್ರೀಸ್ ಅವ್ ಮೈಸೂರು ಕೆನರಾ ಅ್ಯಂಡ್ ಮಲಬಾರ್" ಕೃತಿಯಲ್ಲಿ ಚಿತ್ರದುರ್ಗ ಮತ್ತು ಸಂತೆಬೆನ್ನೂರು ಸಂಸ್ಥಾನಗಳಿಗೆ ಬೇಟಿ ನೀಡಿ ತಾನು ವೀಕ್ಷಿಸಿದ ಘಟನೆಗಳನ್ನು ವಿವರಿಸಿದ್ದಾರೆ.

ಎನ್.ಯೋಗಿಶ್ವರಪ್ಪ ಅವರ "ಹಾಗಲವಾಡಿ ನಾಯಕರು" ಕೃತಿಯಲ್ಲಿ ಪಾಳೆಯಗಾರರ ಪದಪ್ರಯೋಗಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರ "ಬ್ರಿಟಿಷರ ವಿರುದ್ಧ ಬೇಡನಾಯಕರ ಹೋರಾಟಗಳು" ಎಂಬ ಕೃತಿಯಲ್ಲಿ ಬೇಡ ನಾಯಕರ ಹೋರಾಟಗಳು, ವಸಾಹತುಶಾಹಿ ಪೂರ್ವದ ಸ್ಥಿತಿಗತಿ, ಸಾಮ್ರಾಜ್ಯಶಾಹಿ ವಿರುದ್ಧ ಸಾಮಾನ್ಯ ಬೇಡ ನಾಯಕರ ಹೋರಾಟಗಳು ಎಂಬ ಪ್ರಮುಖ ಅಧ್ಯಾಯದಲ್ಲಿ ಹೋರಾಟಗಾರರ ಸ್ವರೂಪ, ನೆಲೆ, ಮಹತ್ವ ಮುಂತಾದ ಅಂಶಗಳನ್ನು ವಿಶೇಷಣಾತ್ಮಕವಾಗಿ ವಿವರಿಸಿದ್ದಾರೆ. ಈ ಕೃತಿಯು ಪ್ರಸ್ತುತ ಅಧ್ಯಯನದ ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಳೆಯಗಾರರು ಅಧ್ಯಾಯವನ್ನು ಸಿದ್ಧಪಡಿಸಿಲು ಉತ್ತಮ ಆಕರವಾಗಿದೆ ಎಂದು ಹೇಳಬಹುದು. ದಾವಣಗೆರೆ ತಾಲ್ಲೂಕಿನ ಅಣಜಿ ಸಮೀಪ ದ್ಯಾಮವ್ವನಹಳ್ಳಿಯ ಪಂಡಿತ ರೇವಣಶಾಸ್ತ್ರಿಗಳು ವಾಲ್ಮೀಕರ ಪುರಾಣವು (೧೯೫೯) ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದ್ದಾರೆ. ಇದು ಐತಿಹಾಸಿಕ, ಸಾಂಸ್ಕೃತಿಕ ಮಹತ್ವವಾದ ಕೃತಿಯಾಗಿದೆ. ಮಂಜುನಾಥ ಬೇವಿನಕಟ್ಟೆ ಅವರ "ತಳಾದಿ" ಕೃತಿಯಲ್ಲಿ ಕರ್ನಾಟಕದಲ್ಲಿ

ವಾಲ್ಮೀಕಿ ಸಮುದಾಯದ ಸ್ಥಿತಿಗತಿಗಳು ಎಂಬ ಅಧ್ಯಾಯ ಪ್ರಸ್ತುತ ಅಧ್ಯಯನಕ್ಕೆ ಸೂಕ್ತವಾಗಿದೆ. ಈ ಅಧ್ಯಾಯದಲ್ಲಿ ಬೇಡ ನಾಯಕರ ಪ್ರಸ್ತುತ ಸ್ಥಿತಿಗತಿಗಳ ಬಗ್ಗೆ ಚರ್ಚಿಸಿದ್ದಾರೆ. ತಾರಿಹಳ್ಳಿ ಹನುಮಂತಪ್ಪ ಅವರ ಸಂಪಾದನೆಯ 'ನಾಯಕ ಮಹಾಸಂಸ್ಥಾನ ಸುರಪುರ' ಉತ್ತಮ ಆಕರಗ್ರಂಥವಾಗಿದೆ. ಒಟ್ಟು ೩೬ ಲೇಖನಗಳನ್ನು ಹೊಂದಿದ ಈ ಕೃತಿಯು ಸುರಪುರ ನಾಯಕರ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಆಡಳಿತ ಧಾರ್ಮಿಕ ಈ ಮೇಲಿನ ಅಂಶಗಳಿಂದ ಒಳಗೊಂಡಿದೆ. ಈ ಮೇಲಿನ ಅಂಶಗಳಿಂದ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರಿಗೆ ಸಂಬಂಧಿಸಿದಂತೆ ತೌಲನಿಕವಾಗಿ ಅಧ್ಯಯನ ಮಾಡಲು ಈ ಕೃತಿ ಸಹಕಾರಿಯಾಗುತ್ತದೆ.

ವಿರೂಪಾಕ್ಷಿ ಪೂಜಾರಹಳ್ಳಿ ಅವರ "ಕರ್ನಾಟಕದಲ್ಲಿ ತಳವಾರಿಕೆ" ಕೃತಿಯು ಒಟ್ಟು ೯ ಅಧ್ಯಾಯಗಳನ್ನು ಹೊಂದಿದೆ. ಪ್ರಾಚೀನ, ಮಧ್ಯಯುಗೀನ ಆಧುನಿಕ ಕಾಲದಲ್ಲಿ ತಳವಾರಿಕೆ ಎನ್ನುವ ವೃತ್ತಿಯ ಸ್ವರೂಪವನ್ನು ವ್ಯಾಪಕ ಆಕರ ಸಾಮಗ್ರಿಗಳ ಸಹಾಯದಿಂದ ಈ ಕೃತಿಯಲ್ಲಿ ಚರ್ಚಿಸಿದ್ದಾರೆ. ವಿಜಯನಗರ, ವಿಜಯನಗರೋತ್ತರ ಮತ್ತು ಬ್ರಿಟಿಷರ ಕಾಲದಲ್ಲಿ ತಳವಾರಿಕೆ ಎನ್ನುವ ವೃತ್ತಿಯು ಹೊಸದಾದ ಅರ್ಥ ವ್ಯಾಪ್ತಿಗಳನ್ನು ಪಡೆದಿರುವುದನ್ನು ದಾಖಲೆಗಳ ಮೂಲಕ ವಿವರಿಸಿದ್ದಾರೆ.

ಗಂಗಾನಾಯಕ್ ಕೆ.ಎನ್. ಸಂಪಾದನೆಯ "ಪಾಳೆಯಗಾರರ ಶಾಸನಗಳು" ಸಂಪುಟ-೧, ಕೃತಿಯು ಚಿತ್ರದುರ್ಗ, ಸಂತೆಬೆನ್ನೂರು, ಮಧುಗಿರಿ ಮಹಾನಾಡ ಪ್ರಭುಗಳ ಶಾಸನಗಳು ಹಾಗಲವಾಡಿ ನಾಯಕರ ಶಾಸನಗಳನ್ನು ಒಳಗೊಂಡಿದೆ. ಈ ಶಾಸನ ಸಂಪುಟವನ್ನು ಆಕರವಾಗಿ ಬಳಸಿಕೊಂಡು ಶಾಸನ, ಸಾಹಿತ್ಯ, ಚರಿತ್ರೆ, ಪಾಳೆಯಗಾರರ ರಾಜಕೀಯ ಚರಿತ್ರೆ, ಸಾಮಾಜಿಕ, ಆರ್ಥಿಕ, ಆಡಳಿತ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಅಂಶಗಳನ್ನು ಅಧ್ಯಯನ ಮಾಡಬಹುದಾಗಿದೆ.

ಬಿ.ಎಂ. ಸದಾಶಿವಪ್ಪ ಶ್ಯಾಗಲೆ ಅವರ "ದಾವಣಗೆರೆ ಜಿಲ್ಲೆಯ ಒಂದು ಪಕ್ಷಿನೋಟ" ಕೃತಿಯ ದಾವಣಗೆರೆ ಜಿಲ್ಲೆಯ ಸಮಗ್ರ ಇತಿಹಾಸ ತಿಳಿಯಲು ಪ್ರಮುಖ ಆಕರವಾಗಿದೆ. ಈ ಕೃತಿಯ ಒಟ್ಟು ೨೮ ಲೇಖನಗಳನ್ನು ಒಳಗೊಂಡಿದ್ದು, ಚರಿತ್ರೆ-ಸಾಹಿತ್ಯ, ಜಿಲ್ಲೆಯ ವೈಶಿಷ್ಟ್ಯತೆ, ವೃತ್ತಿ ರಂಗಭೂಮಿ, ಕೃಷಿ-ವಾಣಿಜ್ಯ, ಶಿಕ್ಷಣ ಮುಂತಾದ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ಎಂ.ಕೊಟ್ರೇಶ್ ಅವರ "ಹರಪನಹಳ್ಳಿ ತಾಲ್ಲೂಕಿನ ರಕ್ಷಣಾ ಸ್ಮಾರಕಗಳು" ಎಂಬ ಕೃತಿಯು ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು, ಕೋಟೆಗಳ ಬಗ್ಗೆ ಸಂಕ್ಷಿಪ್ತವಾದ ಮಾಹಿತಿಯನ್ನೊಳಗೊಂಡಿದೆ. ಕೋಟೆ, ಕೋಟೆಯ ಅರ್ಥ ಪ್ರಮುಖ ಕೋಟೆಗಳಾದ ಉಚ್ಚಂಗಿದುರ್ಗದ ಕೋಟೆ, ಕೋಟೆಯಲ್ಲಿರುವ ಸ್ಮಾರಕಗಳು, ಅರಮನೆಗಳು, ದೇವಾಲಯಗಳ ಬಗ್ಗೆ ಸಂಕ್ಷಿಪ್ತವಾಗಿ ಮಾಹಿತಿಯನ್ನು ನೀಡಿದ್ದಾರೆ. ಹರಪನಹಳ್ಳಿ ಪಾಳೆಯಗಾರರ ಚರಿತ್ರೆಯನ್ನು ಅಧ್ಯಯನ ಮಾಡಲು ಈ ಕೃತಿಯು ಮಹತ್ವಪೂರ್ಣವಾಗಿದೆ. ಹಾಗೆಯೇ

ಇನ್ನೊಂದು ಕೃತಿಯಾದ ಐತಿಹಾಸಿಕ ಧಾರ್ಮಿಕ "ಶ್ರೀಕ್ಷೇತ್ರ ಉಚ್ಚಂಗಿದುರ್ಗ" ಕೃತಿಯು ೨೬ ಲೇಖನಗಳನ್ನು ಒಳಗೊಂಡಿದ್ದು ಉಚ್ಚಂಗಿದುರ್ಗ ಪರಿಸರದ ಸಮಗ್ರ ಚರಿತ್ರೆಯನ್ನು ತಿಳಿಸಿಕೊಡುತ್ತದೆ. ಪ್ರಾಚೀನ ಕಾಲದಿಂದ ಪಾಳೆಯಗಾರರ ಕಾಲದವರೆಗೆ ರಾಜಕೀಯ, ಆಡಳಿತ, ಧಾರ್ಮಿಕ, ಆರ್ಥಿಕ, ಮುಂತಾದ ಅಂಶಗಳನ್ನು ಒಳಗೊಂಡಿದೆ. ಉಚ್ಚಂಗಿದುರ್ಗದ ಸ್ಥಳ ಪರಿಚಯ, ಪ್ರಾಚೀನತೆ, ಪುರಾಣಗಳು, ಉಚ್ಚಂಗಮ್ಮ ದೇವಿ ಚರಿತ್ರೆ, ಶಾಸನಗಳು, ಧಾರ್ಮಿಕ ಆಚರಣೆಗಳು, ದೇವಾಲಯಗಳು ಅರಮನೆಗಳು, ಬಾವಿಗಳು, ವೀರಗಲ್ಲು, ಮಾಸ್ತಿಗಲ್ಲು ಮುಂತಾದ ಅನೇಕ ಅಂಶಗಳ ಮಾಹಿತಿಯನ್ನು ಈ ಕೃತಿಯು ಒದಗಿಸಿಕೊಡುತ್ತದೆ. ಲಕ್ಷ್ಮಣ್ ತೆಲಗಾವಿ ಅವರ "ಚಿತ್ರದುರ್ಗ ನಾಯಕರ ಅರಸರ ರಾಜಕೀಯ ಚಿತ್ರಣ" ಎಂಬ ಕೃತಿಯು ಚಿತ್ರದುರ್ಗ ಪಾಳೆಯಗಾರರ ಮೇಲೆ ಬೆಳಕು ಚೆಲ್ಲುತ್ತದೆ. ಚಿತ್ರದುರ್ಗದಲ್ಲಿ ಆಳ್ವಿಕೆ ಮಾಡಿದ ೧೩ ಅರಸರ ರಾಜಕೀಯ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸಿದ್ದಾರೆ. ಇದರಿಂದ ಬಿಳಿಚೋಡಿನಲ್ಲಿ ಆಡಳಿತ ನಡೆಸಿದ ಪಾಳೆಯಗಾರರ ಚರಿತ್ರೆಯನ್ನು ರಚಿಸಲು ಸಹಾಯಕವಾಗಿದೆ. ಲಕ್ಷ್ಮಣ್ ತೆಲಗಾವಿ ಅವರ ಸಂಪಾದನೆಯ "ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ" ಎಂಬ ಕೃತಿಯು ೪೫ ಲೇಖನಗಳನ್ನು ಒಳಗೊಂಡಿದ್ದು ಕರ್ನಾಟಕದ ಬೇರೆ ಬೇರೆ ಪಾಳೆಯಗಾರರ ನ್ಯಾಯಾಡಳಿತದ ಬಗ್ಗೆ ಚರ್ಚಿಸಿದ್ದಾರೆ. ಕರ್ನಾಟಕದ ಹಲವಾರು ವಿದ್ವಾಂಸರು, ಸಂಶೋಧಕರು ಇಲ್ಲಿ ವಿವಿಧ ನೆಲೆಯಲ್ಲಿ ಲೇಖನಗಳನ್ನು ರಚಿಸಿದ್ದಾರೆ. ಈ ಕೃತಿಯು ಪಾಳೆಯಗಾರರ ಕಾಲದ ನ್ಯಾಯವ್ಯವಸ್ಥೆಯನ್ನು ತಿಳಿದುಕೊಳ್ಳಲು ಸಹಕಾರಿಯಾಗುತ್ತದೆ. ಎಸ್.ವೈ.ಸೋಮಶೇಖರ್ ಅವರ ಸಂಪಾದನೆಯ "ಜಗಲೂರು" ಎಂಬ ಕೃತಿಯು ಜಗಲೂರು ತಾಲ್ಲೂಕಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಒಳಗೊಂಡ ಕೃತಿಯಾಗಿದೆ. ಈ ಕೃತಿಯಲ್ಲಿ ಒಟ್ಟು ೧೩ ಲೇಖನಗಳನ್ನು ಒಳಗೊಂಡಿದ್ದು ಕಣಕುಪ್ಪೆ ಪಾಳೆಯಗಾರರು, ಜಗಳೂರು ನಾಯಕರು ಮತ್ತು ಬಿಳಿಚೋಡು ವಂಶಜರ ಶಾಸನ ಚರಿತ್ರೆಯನ್ನು ಅಧ್ಯಯನ ಮಾಡಲು ಅನುಕೂಲವಾಗಿದೆ.

ಚಳ್ಳಕೆರೆಯ ರಾಜನ ರಾಜಣ್ಣ ಅವರ "ನಾಯಕ ಜನಾಂಗದ ಇತಿಹಾಸ" ಎಂಬ ಕೃತಿಯು ಕರ್ನಾಟಕದಲ್ಲಿ ಬೇಡಜನಾಂಗದ ಅಭಿವೃದ್ಧಿ ನಾಯಕ ಜನಾಂಗದ ಪ್ರಾತಃಸ್ಮರಣೀಯರು, ವಾಲ್ಮೀಕಿ, ಶಬರಿ, ಏಕಲವ್ಯ, ಬೇಡರ ಕಣ್ಣಪ್ಪ, ಜಗಲೂರು ಪಾಪನಾಯಕರು ಮುಂತಾದ ಪ್ರಾತಃಸ್ಮರಣೀಯರ ಚರಿತ್ರೆಯನ್ನು ಒಳಗೊಂಡಿದೆ. ಟಿ.ಗಿರಿಜಾ ಅವರ "ದುರ್ಗದ ನಾಗತಿಯರು" ಎಂಬ ಕೃತಿಯು ಚಿತ್ರದುರ್ಗ ಪಾಳೆಯಗಾರರ ಶಾಹಿಯಲ್ಲಿ ನಾಗತಿಯರ ಪಾತ್ರ, ಅವರ ಕೊಡುಗೆಗಳನ್ನು ವಿವರಿಸಲಾಗಿದೆ. ಒಟ್ಟು ೨೩ ನಾಗತಿಯರ ಚರಿತ್ರೆಯನ್ನು ಈ ಕೃತಿ ಒಳಗೊಂಡಿದೆ. ಎಂ.ಕೆ.ದುರುಗಪ್ಪ ಅವರ "ವಿಜಯನಗರೋತ್ತರ ಕಾಲೀನ ಬೇಡ ಜನಾಂಗ" ಕೃತಿಯು ಆರು ಅಧ್ಯಾಯಗಳನ್ನು ಒಳಗೊಂಡಿದ್ದು ಬಳ್ಳಾರಿ ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಬೇಡ ಪಾಳೆಯಗಾರರ ಉಗಮ, ಬೆಳವಣಿಗೆ, ಅವನತಿ ಮತ್ತು ಅವರ ವಂಶಸ್ಥರ ಇತ್ತೀಚಿನ ಸ್ಥಿತಿಗತಿಗಳನ್ನು ಕೂಲಂಕಷವಾಗಿ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ವಿಜಯನಗರೋತ್ತರ ಕಾಲವೆಂದರೆ

ಚಾರಿತ್ರಿಕವಾಗಿ ಸಾಮ್ರಾಜ್ಯಗಳ ಛಿದ್ರೀಕರಣ ಕಾಲ, ಸಾಮ್ರಾಜ್ಯಶಾಹಿ ದೊರೆಗೆ ಮಾರಕವೆನಿಸಿದ ಕಾಲ, ಇಂತಹ ಸ್ಥಿತ್ಯಂತರ ಕಾಲದಲ್ಲಿದ ಬೇಡ ನಾಯಕ ಅರಸರ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಮುಂತಾದ ಸನ್ನಿವೇಶಗಳನ್ನು ಈ ಕೃತಿಯಲ್ಲಿ ಚಿತ್ರಿಸಿದ್ದಾರೆ. ಕ್ರಿ.ಶ. ೧೫೬೫ರಲ್ಲಿ ವಿಜಯನಗರದ ಸಾಮ್ರಾಜ್ಯ ದುರ್ಬಲಗೊಂಡರೂ ಅನಂತರ ವಿಜಯನಗರ ಸಂಸ್ಕೃತಿಯನ್ನು ಪುನರ್‌ಸ್ಥಾಪಿಸುವ ಅನೇಕ ಯತ್ನಗಳು ನಡೆದವು ಇಂತಹ ಪ್ರಯತ್ನ ಮಾಡಿದ ಸ್ಥಳೀಯ ನಾಯಕರಲ್ಲಿ ಬೇಡರೇ ಅಧಿಕ. ಬ್ರಿಟಿಷರು, ಮರಾಠರು, ನಿಜಾಮ, ಮೈಸೂರು ಅರಸರು, ಹೈದರಾಲಿ, ಟಿಪ್ಪು ಸುಲ್ತಾನ್ ಮುಂತಾದವರು ಇಂತಹ ಅನೇಕ ಸ್ಥಳೀಯ ನಾಯಕರನ್ನು ತಮ್ಮ ದಾಳಗಳನ್ನಾಗಿ ಬಳಸಿಕೊಂಡರು. ಇವರ ರಾಜಕೀಯ ಚದುರಂಗದಾಟಗಳಿಂದ ಬೇಡ ಅರಸರ ಸ್ಥಾನ ಮಾನಗಳಲ್ಲೂ ಏರಿಳಿತಗಳಾದವು. ಇಂತಹ ಮನೆತನಗಳಲ್ಲಿ ಇತ್ತೀಚಿನ ಕಾಲದವರೆಗೆ ನಡೆದ ಬದಲಾವಣೆಗಳನ್ನು ಈ ಕೃತಿಯು ಬೆಳಕು ಚೆಲ್ಲುತ್ತದೆ.

ಸಂತೆಬೆನ್ನೂರು ಸುಮತೀಂದ್ರನಾಡಿಗ ಅವರ "ತರೀಕೆರೆ ನಾಯಕರು" ಕೃತಿಯು ಇತಿಹಾಸ ಲೇಖನಗಳ ಸಂಕಲನವಾಗಿದೆ. ಕೃತಿಯಲ್ಲಿ ೧೫ ಲೇಖನಗಳನ್ನು ಒಳಗೊಂಡಿದ್ದು ಸಂತೆಬೆನ್ನೂರು ನಾಯಕರ ರಾಜಕೀಯ ಚರಿತ್ರೆ, ಶಾಸನಗಳು, ಕೂಡಲಿ ಮಠಗಳಿಗೆ ನೀಡಿದ ಕೊಡುಗೆಗಳು, ವಿಜಯನಗರ ಅರಸರೊಂದಿಗೆ ಸಂಬಂಧ, ತರೀಕೆರೆ ನಾಯಕರ ಚರಿತ್ರೆ, ತರೀಕೆರೆ ನಾಯಕರ ನ್ಯಾಯಾಡಳಿತ, ಮುಂತಾದ ಅಂಶಗಳು ಈ ಕೃತಿಯಲ್ಲಿ ಸಮ್ಮಿಲನಗೊಂಡಿವೆ. ವಿಜಯನಗರ ಪತನಾನಂತರ ಅವರ ಅಧೀನರಾಗಿದ್ದ ಅನೇಕ ಸಣ್ಣಪುಟ್ಟ ನಾಯಕರು ಸ್ವತಂತ್ರರಾಗಿ ರಾಜ್ಯಾಡಳಿತ ನಡೆಸಿದರು. ಸಂತೆಬೆನ್ನೂರು ನಾಯಕರು ತಮ್ಮ ಆಡಳಿತವನ್ನು ಸಂತೆಬೆನ್ನೂರಿನಿಂದ ಪ್ರಾರಂಭಿಸಿ ನಂತರ ಸಮೀಪದ ಬಸವಾಪಟ್ಟಣದ ಹೆಣ್ಣುಮಗಳನ್ನು ವಿವಾಹವಾಗಿ ಅಲ್ಲಿಂದಲೂ, ತದನಂತರ ಆದಿಲ್‌ಶಾಹಿಗಳ ಅಧೀನರಾಗಿ ಮುಂದೆ ಈಗಿನ ಶಿವಮೊಗ್ಗ ಜಿಲ್ಲೆ ತರೀಕೆರೆಗೆ ತನ್ನ ರಾಜಧಾನಿ ಬದಲಾಯಿಸಿ ಆಡಳಿತ ನಡೆಸಿದರು. ಇವರನ್ನು ಇತಿಹಾಸದಲ್ಲಿ ಸಂತೆಬೆನ್ನೂರು, ಬಸವಾಪಟ್ಟಣ, ತರಿಕೆರೆ ನಾಯಕರೆಂದೇ ಪ್ರತ್ಯೇಕವಾಗಿ ಗುರುತಿಸಲಾಗಿದ್ದರೂ ಈ ಎಲ್ಲಾ ನಾಯಕರು ಒಂದೇ ಕುಟುಂಬದವರಾಗಿದ್ದಾರೆ. ಈ ಕೃತಿಯು ಪ್ರಸ್ತುತ ಅಧ್ಯಯನಕ್ಕೆ ಪ್ರಮುಖ ಆಕರವಾಗಿದೆ ಎಂದು ಹೇಳಬಹುದು. ಇವರ ಇನ್ನೊಂದು ಕೃತಿಯಾದ "ದಾವಣಗೆರೆ ಜಿಲ್ಲೆ ಇತಿಹಾಸದ ಇನ್ನಷ್ಟು ಹೆಜ್ಜೆಗಳು" ಕೃತಿಯು ದಾವಣಗೆರೆ ಜಿಲ್ಲೆಯ ಪ್ರಾಚೀನ ಕಾಲದಿಂದ ಪಾಳೆಯಗಾರರ ಕಾಲದವರೆಗಿನ ಚರಿತ್ರೆಯನ್ನು ಒಳಗೊಂಡಿದೆ. ೧೮ ಲೇಖನಗಳನ್ನು ಒಳಗೊಂಡ ಈ ಕೃತಿ ಸಂಶೋಧಕರಿಗೆ, ಇತಿಹಾಸಕಾರರಿಗೆ ನೂತನ ಜಿಲ್ಲೆಯ ಬಗ್ಗೆ ಅಧ್ಯಯನ ಮಾಡಲು ಉತ್ತಮ ಕೃತಿಯಾಗಿದೆ.

'ಇತಿಹಾಸ ದರ್ಶನ' ಸಂಪುಟಗಳಲ್ಲಿ ಹಲವಾರು ಲೇಖಕರು ವಿದ್ವಾಂಸರು ವಿವಿಧ ನೆಲೆಗಳಲ್ಲಿ ಲೇಖನಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ದಾವಣಗೆರೆ ಜಿಲ್ಲೆಯ ಪಾಳೆಯಗಾರರಿಗೆ ಸಂಬಂಧಿಸಿದಂತೆ ಕುಂ.ಬಾ.ಸದಾಶಿವಪ್ಪ ಅವರ ಬಾಗಳಿ ಕಂಚಿನಪತ್ರ, ಹರಪನಹಳ್ಳಿ ಪಾಳೆಯಗಾರರು ಸ್ಥಾಪಿಸಿದ ಸಂಪ್ರದಾಯಗಳು, ಹರಪನಹಳ್ಳಿ ಪಾಳೆಯಗಾರರು ಸ್ಥಾಪಿಸಿದ ಕೆಲವು ದೇವಾಲಯಗಳ

ಬಗ್ಗೆ ಐತಿಹ್ಯಗಳು, ಹರಪನಹಳ್ಳಿ ಪಾಳೆಯಗಾರರಿಗೆ ಸಂಬಂಧಿಸಿದ ನಕ್ಷೆ ಮತ್ತು ಪತ್ರಗಳ ಪರಿಶೀಲನೆ, ಕೂಲಹಳ್ಳಿ ಮದ್ದಾನೇಶ್ವರ ಮಠ: ಒಂದು ಅಧ್ಯಯನ, ಶ್ರೀಮತಿ ಚಂದನ್ ಅವರ ಹರಿಹರ ಸಂಗಮೇಶ್ವರ ದೇವಾಲಯ, ಚಂದನಾ ವೈ.ನೀಲಪ್ಪ ಅವರ ಹರಿಹರ ಲಕ್ಷ್ಮಿದೇವಾಲಯ ಒಂದು ಅಧ್ಯಯನ, ಹರಿಹರ ಯತಿ ಸಮಾಧಿಗಳು, ಹರಿಹರ ಸುತ್ತಲಿನ ಇತಿಹಾಸ, ವಿರೂಪಾಕ್ಷಿ ಪೂಜಾರಹಳ್ಳಿ ಅವರ ಚಿನ್ನಹಗರಿ ನದಿ ಪರಿಸರದ ಪ್ರಾಚ್ಯಾವಶೇಷಗಳು, ಅಣಜಿ ಗ್ರಾಮದ ಪುರಾತತ್ವ ಮತ್ತು ಚರಿತ್ರೆ, ಎಸ್.ವೈ.ಸೋಮಶೇಖರ್ ಅವರ ಆಕನೂರು ಗ್ರಾಮದ ಬಳಿ ಆದಿ ಇತಿಹಾಸ ಕಾಲದ ಕುರುಹುಗಳು ಲಕ್ಷ್ಮಣ್ ತೆಲಗಾವಿ ಅವರ ಚಿತ್ರದುರ್ಗ ಮತ್ತು ಹರಪನಹಳ್ಳಿ ನಾಯಕ ಅರಸರ ಸಂಬಂಧ ಕೆಲವು ಸಮಸ್ಯೆಗಳು, ಎಸ್.ವಿ.ಲಕ್ಷ್ಮೀದೇವಿ ಅವರ ದಾವಣಗೆರೆ ಸ್ಥಳನಾಮದ ಬಗ್ಗೆ ಒಂದು ಸಮೀಕ್ಷೆ, ಎಂ.ಕೊಟ್ರೇಶ್ ಅವರ ಉಚ್ಚಂಗಿದುರ್ಗದಲ್ಲಿ ಮುತ್ತು ಕಟ್ಟಿಸುವ ಪದ್ಧತಿ, ಗಿರಿದುರ್ಗ ಉಚ್ಚಂಗಿ ಪ್ರದೇಶ: ಒಂದು ಪರಿಶೀಲನೆ, ಹರಿಹರ ಶ್ರೀನಿವಾಸ ಅವರ ಹರಪನಹಳ್ಳಿ ಭೀಮವ್ವನ ಹಾಡುಗಳು, ಸುಮತೀಂದ್ರ ನಾಡಿಗ್ ಅವರ ಸಂತೆಬೆನ್ನೂರು ನಾಯಕರ ಶಾಸನಗಳು ಸಂತೆಬೆನ್ನೂರು ನಾಯಕರು–ಶೃಂಗೇರಿ ಮಠದ ದಾಖಲೆಗಳು, ಸಂತೆಬೆನ್ನೂರು ನಾಯಕರ ಅಪ್ರಕಟಿತ ಶಾಸನಗಳು, ಸಂತೇಬೆನ್ನೂರು ಪಾಳೆಯಗಾರರು, ಉಪ್ಪನಾಯ್ಕನ ಹಳ್ಳಿಯ ಅಪೂರ್ವ ಮಾಸ್ತಿಶಿಲ್ಪಗಳು ಟಿ.ಗಿರಿಜಾ ಅವರ ಐತಿಹಾಸಿಕ ದಾವಣಗೆರೆ, ದಾವಣಗೆರೆ ಸ್ಥಳನಾಮದ ಬಗ್ಗೆ ಒಂದು ಸಮೀಕ್ಷೆ ಸೂರ್ಯನಾಥ ಕಾಮತ್ ಅವರ ಸ್ವಾತಂತ್ರ್ಯ ಹೋರಾಟದಲ್ಲಿ ದಾವಣಗೆರೆಯ ಪಾತ್ರ, ಕೆಳದಿ ವೆಂಕಟೇಶ ಜೋಯಿಸ್ ಅವರ ಚಿತ್ರದುರ್ಗ ಪಾಳೆಯಗಾರರ ಆರ್ಥಿಕ ಅವಲೋಕನ, ಡಿ.ಎನ್.ಯೋಗೀಶ್ವರಪ್ಪ ಅವರ ಗುಡೇಕೋಟೆ ಪಾಳೆಯಗಾರರು, Nayakaship and Nayaka communities, ಶಿರಾದ ನವಾಬರು, ಜಿ.ಕೆ.ಮಲ್ಲಿಕಾರ್ಜುನಪ್ಪ ಅವರ ಹರಪನಹಳ್ಳಿ ಪಾಳೆಯಗಾರರ ಕಾಲದ ಬಂಡ್ರಿ, ಹೆಚ್.ಇ.ಬಸವರಾಜಪ್ಪ ಅವರ ಚಿತ್ರದುರ್ಗ ನಾಯಕ ಅರಸರ ನಂತರದ ಗ್ರಾಮಾಡಳಿತ ವ್ಯವಸ್ಥೆ, ಕರ್ನಾಟಕದ ಏಕೀಕರಣದ ಚಳವಳಿಯಲ್ಲಿ ದಾವಣಗೆರೆಯ ಪಾತ್ರ, ಬಿ.ಸುರೇಶ್ ಅವರ ಬುರುಡೆಕಟ್ಟೆ ಗ್ರಾಮದ ಪ್ರಾಚ್ಯಾವಶೇಷಗಳು.

ಈ ಮೇಲಿನ ಎಲ್ಲಾ ಲೇಖನಗಳು ದಾವಣಗೆರೆ ಜಿಲ್ಲೆಯ ಚರಿತ್ರೆ ಮತ್ತು ಪಾಳೆಯಗಾರರ ಚರಿತ್ರೆಯನ್ನು ರಚಿಸಲು ಅತ್ಯುಪಯುಕ್ತವಾದ ಆಕರಗಳಾಗಿವೆ.

ಈ ಮೇಲಿನ ಕೃತಿಗಳು, ಲೇಖನಗಳಲ್ಲದೆ, ಎಂ.ಕೊಟ್ರೇಶ್ ಅವರ "ಬಳ್ಳಾರಿ ಜಿಲ್ಲೆಯ ಕೋಟೆಗಳು", ಡಿ.ವಿ.ಪರಮಶಿವಮೂರ್ತಿ ಅವರ "ಸಂಶೋಧನೆಯ ಸಿರಿ", ಡಿ.ಎನ್.ಯೋಗೀಶ್ವರಪ್ಪ ಅವರ "ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು", ಹುಲ್ಲೂರು ಶ್ರೀನಿವಾಸ ಜೋಯಿಸರ "ಐತಿಹಾಸಿಕ ಲೇಖನಗಳು", ಲಕ್ಷ್ಮಣ್ ತೆಲಗಾವಿ ಅವರ "ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ" ಸಿ.ಮಹದೇವ ಮತ್ತು ಇತರರು ಸಂಪಾದನೆಯ "ಹೊಸಪೇಟೆ ತಾಲ್ಲೂಕು ದರ್ಶನ", ಗುರುಮೂರ್ತಿ ಪೆಂಡಕೂರು ಅವರ "ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು",

ವೈ.ಹನುಮಂತ ರೆಡ್ಡಿಯವರ "ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ", ಎ.ಎಸ್.ನಂಜುಂಡಸ್ವಾಮಿ ಅವರ "ಪಾಳೆಯಗಾರರು ಮತ್ತು ಒಡೆಯರ ಇತಿಹಾಸ", ಬಸವರಾಜ ಕಂಚೂರು ಅವರ "ನಮ್ಮೂರ ಕೆರೆಗಳು", ಎಂ.ಧ್ರುವನಾರಾಯಣರವರ "ನಾರಾಯಣದೇವರ ಕೆರೆ", ಬಣಕಾರ ರಾಜಶೇಖರ ಅವರ "ಬಾಳ್ಳುಳಿಯ ಖಡ್ಗ ಮತ್ತು ರಾಜಾಸೋಮಶೇಖರನಾಯಕ", ಜಿ.ಎ.ಪಿವೇಕ ರೈ(ಸಂ), ರವರ "ಪ್ರವಾಸಿ ಕಂಡ ವಿಜಯನಗರ," ದೇವರಕೊಂಡಾರೆಡ್ಡಿ ಅವರ "ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ," ಚಿದಾನಂದ ಮೂರ್ತಿಯವರ "ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ", ಆರ್.ಶೇಷಶಾಸ್ತ್ರಿ ಅವರ "ಕರ್ನಾಟಕದ ವೀರಗಲ್ಲುಗಳು", ಎಸ್.ವೈ.ಸೋಮಶೇಖರ್ ಅವರ "ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿಗಳು", ಎಸ್.ತಿಪ್ಪೇಸ್ವಾಮಿಯವರ "ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ," ಎಂ.ಎಂ.ಕಲಬುರ್ಗಿ ಅವರ ಕರ್ನಾಟಕದ ಕೈಫಿಯತ್ತುಗಳು ಮುಂತಾದ ಕೃತಿಗಳು ಪ್ರಸ್ತುತ ಅಧ್ಯಯನಕ್ಕೆ ಸಹಾಯಕವಾಗಬಲ್ಲ ಆಕರಗಳಾಗಿವೆ.

# ಅಧ್ಯಾಯ ಎರಡು

## ದಾವಣಗೆರೆ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

೨.೧. ಭೌಗೋಳಿಕ ಹಿನ್ನೆಲೆ

೨.೨. ಚಾರಿತ್ರಿಕ ಹಿನ್ನೆಲೆ

೨.೨.೧. ಪ್ರಾಚೀನ ಕಾಲ

೨.೨.೨. ವಿಜಯನಗರಪೂರ್ವ ಕಾಲ

೨.೨.೩. ವಿಜಯನಗರ ಕಾಲ

೨.೨.೪. ವಿಜಯನಗರೋತ್ತರ ಕಾಲ

## ಅಧ್ಯಾಯ ಎರಡು

# ದಾವಣಗೆರೆ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಕರ್ನಾಟಕದಲ್ಲಿ ದಾವಣಗೆರೆ ಜಿಲ್ಲೆಯು ತನ್ನದೇ ಆದ ವೈಶಿಷ್ಟ್ಯತೆಯಿಂದ ಕೂಡಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಒಂದು ತಾಲ್ಲೂಕಾಗಿದ್ದ ಈ ಪ್ರದೇಶ ೧೯೯೭ ಆಗಸ್ಟ್ ೧೫ರ ನಂತರ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿತು. ದಾವಣಗೆರೆ, ಹರಿಹರ ಮತ್ತು ಜಗಲೂರು ತಾಲ್ಲೂಕುಗಳನ್ನು ಹಿಂದಿನ ಚಿತ್ರದುರ್ಗ ಜಿಲ್ಲೆಯಿಂದಲೂ ಚನ್ನಗಿರಿ ಮತ್ತು ಹೊನ್ನಾಳಿ ತಾಲ್ಲೂಕುಗಳನ್ನು ಶಿವಮೊಗ್ಗ ಜಿಲ್ಲೆಯಿಂದಲೂ ಹರಪನಹಳ್ಳಿ ತಾಲೂಕನ್ನು ಬಳ್ಳಾರಿ ಜಿಲ್ಲೆಯಿಂದಲೂ ಪಡೆದುಕೊಂಡು ಆರು ತಾಲ್ಲೂಕುಗಳಿರುವ ಹೊಸ ಜಿಲ್ಲೆಯಾಗಿ ರೂಪುಗೊಂಡಿತು. ಸುತ್ತಮುತ್ತ ಅನೇಕ ಐತಿಹಾಸಿಕ ಪ್ರದೇಶಗಳನ್ನು ಹೊಂದಿರುವ ಕರ್ನಾಟಕದ ಕೇಂದ್ರಬಿಂದುವಾಗಿರುವ ದಾವಣಗೆರೆ ಪ್ರಾದೇಶಿಕ ಇತಿಹಾಸ, ಐತಿಹ್ಯ, ಜನ ಪ್ರಚಲಿತ ವಿಚಾರಗಳಿಂದ ಸಂಶೋಧನೆಗೆ ಒಳಪಡಿಸುವಷ್ಟು ಮಹತ್ವದ ಸ್ಥಳವಾಗಿದೆ.

ಈ ಜಿಲ್ಲೆಯು ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ, ಶೈಕ್ಷಣಿಕ, ಸಂಘಟನೆಗಳಿಂದ ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಪ್ರಸ್ತುತ ಈ ಜಿಲ್ಲೆ ಶೈಕ್ಷಣಿಕವಾಗಿ ಇಡಿ ಕರ್ನಾಟಕದಲ್ಲಿಯೇ ಮುಂಚೂಣಿಯಲ್ಲಿದ್ದು, ಮಾಧ್ಯಮಗಳು ಇಂಗ್ಲೆಂಡಿನ ಆಕ್ಸಫರ್ಡ್ ನಗರ ಎಂದು ಬಿಂಬಿಸುತ್ತವೆ. ದಾವಣಗೆರೆಯನ್ನು ಸುತ್ತಮುತ್ತಲಿನ ಪ್ರಾದೇಶಿಕ ಇತಿಹಾಸದ ಚೌಕಟ್ಟಿನಲ್ಲಿ ನೋಡಿದಾಗ ಅದರ ಚಾರಿತ್ರಿಕ ಮಹತ್ವವನ್ನು ಅರಿಯಬಹುದು. ದಾವಣಗೆರೆ ಪದನಿಷ್ಪತ್ತಿ ಹೇಗೆ ಬಂತು ಎಂಬುದಕ್ಕೆ ಚಾರಿತ್ರಿಕ ಅಂಶಗಳು ಇರದಿದ್ದರೂ ಪ್ರಚಲಿತವಾಗಿರುವ ವಿದ್ವಾಂಸರ, ಸ್ಥಳೀಯ ಹೇಳಿಕೆಗಳನ್ನು ಗಮನಿಸಿದರೆ ಮೇಲಿನ ಅಭಿಪ್ರಾಯಕ್ಕೆ ಪುಷ್ಟಿ ಸಿಗುತ್ತದೆ.

'ದಾವಣಗೆರೆ' ಎಂಬ ಹೆಸರೇ ಒಂದು ವಿಶಿಷ್ಟ. ದಾವಣಗೆರೆ ಎನ್ನುವ ಸ್ಥಳನಾಮ ಅತ್ಯಂತ ಸೂಕ್ತ ಸಮರ್ಥನಿಯ, ಅರ್ಥಪೂರ್ಣ. ದಾವಣಗೆರೆ ಪದನಿಷ್ಪತಿಯ ಬಗ್ಗೆ ಪ್ರಚಲಿತವಿರುವ

ಪ್ರಮುಖ ಹೇಳಿಕೆಗಳು ಕೇಳಕಂಡಂತಿವೆ. ಈ ಪ್ರದೇಶದಲ್ಲಿ ಯಾವಾಗಲೂ ನೀರಿನಿಂದ ತುಂಬಿರುತ್ತಿದ್ದ ದೊಡ್ಡ ಕೆರೆಯೊಂದಿದ್ದು ಈ ಕೆರೆ ಅಂಗಳದಲ್ಲಿ ದೊಡ್ಡ ಹುಲ್ಲುಗಾವಲು ಇದ್ದಿತೆಂದು; ಆಗಿನ ಕಾಲದಲ್ಲಿ ಕುದುರೆ ಸವಾರರು ಹಾಗೂ ಎತ್ತಿನ ಗಾಡಿಗಳವರು, ಯೋಧರು, ವ್ಯಾಪಾರಿಗಳು, ದನಗಾಹಿಗಳು ಈ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿದ್ದರಂತೆ. ಎಲ್ಲರೂ ಈ ಕೆರೆಯಂಗಳದ ಹುಲ್ಲುಗಾವಲಿನಲ್ಲಿ ಕುದುರೆಗಳನ್ನು ದನಗಳನ್ನು ಎತ್ತುಗಳನ್ನು ದವಣೆಗಳಿಂದ (ದವಣೆ=ಹಗ್ಗ) ಬಿಗಿದು ಕಟ್ಟಿ ವಿಶ್ರಾಂತಿ ಪಡೆದು ಮುಂದೆ ಸಾಗುತ್ತಿದ್ದರು. ಅದಲ್ಲದೆ ದನಗಳನ್ನು, ಎತ್ತುಗಳನ್ನು ಒಂದೇ ಹಗ್ಗದಲ್ಲಿ ಕಟ್ಟುತ್ತಿದ್ದ ವಿಧಾನ ವಿಶಿಷ್ಟ ರೀತಿಯಾಗಿತ್ತು. ದವಣೆಕಟ್ಟು ಎಂದು ಹೇಳುತ್ತಿದ್ದುದು ಪ್ರಚಲಿತದಲ್ಲಿದೆ. ದವಣೆಕಟ್ಟು ಬಿಗಿದು ದನಗಳನ್ನು ಕಟ್ಟುವ ಸ್ಥಳದ ಪಕ್ಕದಲ್ಲೇ ಕೆರೆ ಇದ್ದುದರಿಂದ ದವಣಕೆರೆ ಎಂದು ಹೇಳುತ್ತಿದ್ದರಂತೆ.[೧] ಕಾಲಕ್ರಮೇಣ ದವಣಕೆರೆಯನ್ನು ಪರಿವರ್ತನೆಗೊಳಿಸಿ ದಾವಣಗೆರೆ ಎಂದು ಹೆಸರು ಪಡೆದುಕೊಂಡಿದೆ.

ಶ್ರೀ ಹಿ.ಚಿ. ಶಾಂತವೀರಯ್ಯನವರು ದಾವಣಗೆರೆಯನ್ನು ಹೀಗೆ ವಿವೇಚಿಸಿದ್ದಾರೆ

ಅ. ದಾವಣ+ಕೆರೆ(ರೆ)

ದಾವಣಿ = ದಾವಣಿ, ಹಗ್ಗ, ಕಣ್ಣಿ, ದಾವ = ಅಡವಿ, ಕಾಡು, ಕಾಡ್ಗಿಚ್ಚು

ದಾವಣ = ದಾವಣಿ, ಸಂಸ್ಕೃತ-ದಾಮನಿ + ಕಟ್ಟುವ ಹಗ್ಗ

ದವಣಿ = ಗುಂಪು, ಸಮೂಹ

ಬ. ಕೆರೆ = ಪ್ರವಾಹವನ್ನು ತಡೆದು ಏರಿ ಹಾಕಿ ನಿಲ್ಲಿಸಿದ ಪ್ರದೇಶ, ಜಲಾಶಯ

ದವನಕೆರೆ = ದೇವ = ಒಂದು ಹೆಸರು, ಈ ಹೆಸರಿನ ಸೂಚಕವಾಗಿ ಕಟ್ಟಿದ ಕರೆ ಅಥವಾ ದೇವನು ಕಟ್ಟಿಸಿದ ಕೆರೆ.

ಕ. ದಾವ=ನಗರಿ, ದಾವ = ಯಾವ.

ನಗರಿ = ನಗರಗಳಲ್ಲಿ ದೊಡ್ಡದು.

ಡ. ದಾವನ+ಕೇರಿ, ದಾವನ ಎಂಬುದು ಕೇರಿ ಅಥವಾ ಬೀದಿ

ಇ. ದೇವನ=ಕೇರಿ, ದೇವರು ನೆಲೆಸಿದ ಬೀದಿ, ರಸ್ತೆ.

ದಾವಣಗೆರೆ ಎಂಬುದರ ರೂಪಾಂತರ "ದೇವನಕೆರೆ" ಎಂಬುದರಿಂದ ಬಂದಿದೆ. ದೇವನಕೆರೆ-ದೇವನಗೆರೆ, ದೇವನಗೆರೆ-ದೇವಣಗೆರೆ, ದ್ಯಾವಣಗೆರೆ-ದ್ಯಾವಣಗೆರೆಯು ಕಾಲಾನುಕಾಲಕ್ಕೆ ದಾವಣಗೆರೆಯಾಗಿರಬಹುದು.[೨] ಎಂದು ವಿದ್ವಾಂಸರು ತಿಳಿಸಿರುವುದು ಒಪ್ಪಬಹುದಾಗಿದೆ.

ದಾವಣಗೆರೆ ನೂರಾರು ದೇವಾಲಯಗಳ ತವರೂರು. ಇಲ್ಲಿ ಹಲವು ದೇವಾಲಯಗಳು ಇದ್ದುದರಿಂದ ಮೊದಲು ದೇವನಕೆರೆ ಎಂದು ಕರೆದಿರಬಹುದು. ಕ್ರಮೇಣ ದಾವಣಗೆರೆಯಾಗಿದೆ.

ಉಚ್ಚಂಗಿದುರ್ಗದಿಂದ ಆಳ್ವಿಕೆ ಮಾಡುತ್ತಿದ್ದ ತ್ರಿಬುವನಮಲ್ಲ ಪಾಂಡ್ಯನು ತನ್ನ ಹೆಸರಿನಲ್ಲಿಯೇ ಶಿವಾರರ ಬಳಿ(ಇಂದಿನ ದಾವಣಗೆರೆಯ ಉಪನಗರ) ಕೆರೆಯೊಂದನ್ನು ಕಟ್ಟಿಸಿದ. ಇದನ್ನು ಶಾಸನವು "ಕದಂಬದೇಸ ಸಹ ಸ್ತಾಂತರ್ಗತ ಬೆಳ್ಳೂತ್ತರು ದ್ವಾದಶ ಮಧ್ಯೆ ಬೆಳ್ಳೂತ್ತರು ಸೀಮಾಂತರ್ಗತ ಚಾಳುಕ್ಯ ಸಮುದ್ರಂ ನಾಮ ತಟಾಕಂ"[೩] ಎಂದು ವರ್ಣಿಸಿದೆ. ತ್ರಿಭುವನ ಮಲ್ಲ ಪಾಂಡ್ಯನನ್ನೇ ತ್ರಿಭುವನ ಮಲ್ಲದೇವನು ತನ್ನ ಹೆಸರಿನಲ್ಲಿಯೇ ಕಟ್ಟಿಸಿದ ಕೆರೆ ಸಮೀಪದಲ್ಲಿ ಈ ಗ್ರಾಮವಿದ್ದಿರಬೇಕು. ಆ ಕೆರೆಯ ಬಳಿ ಈ ಗ್ರಾಮ ಇದ್ದುದರಿಂದ ದೇವನಕೆರೆ ಎಂದು ಮೊದಲಿಗೆ ಕರೆದಿರಬೇಕು.[೪] ನಂತರ ದೇವನಕೆರೆ ಅಪಭ್ರಂಶವಾಗಿ ದಾವಣಗೆರೆ ಆಗಿರಬೇಕು.

ಸಂಶೋಧಕರಾದ ಬಿ.ರಾಜಶೇಖರಪ್ಪನವರು ದಾವಣಗೆರೆ, ದಾವಣ+ಕೆರೆ ಎಂಬ ಎರಡು ಭಾಗಗಳಿಂದ ಕೂಡಿದೆ. ದಾವಣ ಎಂಬುದು ದಾವಣಿ ಅರ್ಥದ ಶಬ್ದವಾಗಿಲ್ಲ[೫] ಎಂದು ಅಭಿಪ್ರಾಯಪಡುತ್ತಾರೆ. ಇವರು ಮಂಡ್ಯ ಜಿಲ್ಲೆಯ ನಾಗಮಂಗಲದ ೧೨ನೇ ಶತಮಾನದ ದಾನಶಾಸನ ಒಂದರಲ್ಲಿ 'ದಾವಂಣ್ನಕೇರೆ' ಎಂದು ಉಲ್ಲೇಖವಿರುವ ಕಾರಣ ದಾವಣಗೆರೆ ದಾವಣ ಎನ್ನುವ ವ್ಯಕ್ತಿಯೊಬ್ಬನ ಹೆಸರಿನ ಊರು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಮೇಲ್ಕಂಡ ಶಾಸನದಲ್ಲಿ ವ್ಯಕ್ತಿಯ ಹೆಸರಿನ ಕೆರೆಯೊಂದಿದೆ. ಈ ಹಿನ್ನೆಲೆಯಲ್ಲಿ ದಾವಣಗೆರೆಯೂ ಸಹ ವ್ಯಕ್ತಿಯೊಬ್ಬನ ಹೆಸರಿನ ಊರಾಗಿರಬೇಕು ಎನ್ನುವ ಅಭಿಪ್ರಾಯವಿದೆ.

ಆದರೆ ಈ ದಾವಣ ಎನ್ನುವ ವ್ಯಕ್ತಿಗೂ, ದಾವಣಗೆರೆ ಸ್ಥಾಪನೆಗೂ ಸಂಬಂಧಿಸಿದ ಯಾವುದೇ ಸ್ಪಷ್ಟ ಉಲ್ಲೇಖಗಳು ಇದುವರೆಗೂ ಕಂಡುಬಂದಿಲ್ಲ. ಆದ್ದರಿಂದ ಜಾಲಿನಗರದ ಕೆರೆಯಿಂದಲೇ ದಾವಣಗೆರೆ ಎಂಬ ಹೆಸರು ಬಂದಿದೆ ಎಂಬ ತೀರ್ಮಾನಕ್ಕೆ ಬರಬಹುದು.

**೨.೧. ಭೌಗೋಳಿಕ ಹಿನ್ನೆಲೆ**

ಕರ್ನಾಟಕದ ೩೦ ಜಿಲ್ಲೆಗಳಲ್ಲಿ ದಾವಣಗೆರೆ ಒಂದು. ವಾಣಿಜ್ಯಕ್ಷೇತ್ರದಲ್ಲಿ ಕರ್ನಾಟಕದ ಮ್ಯಾಂಚೆಸ್ಟರ್ ಎಂದು ಖ್ಯಾತಿ ಪಡೆದುಕೊಂಡಿರುವ ದಾವಣಗೆರೆ ಚಾರಿತ್ರಿಕ, ರಾಜಕೀಯ, ಭೌಗೋಳಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ವೈಜ್ಞಾನಿಕ ಕ್ಷೇತ್ರಗಳಿಂದ ವಿಶಿಷ್ಟ ಸ್ವರೂಪವನ್ನು ಪಡೆದುಕೊಂಡಿದೆ. ಸುಮಾರು ೯೧೭ ಗ್ರಾಮಗಳನ್ನೊಳಗೊಂಡಂತೆ ಈ ಜಿಲ್ಲೆಯ ವ್ಯಾಪ್ತಿ ೫೯೭೫.೯೭ ಚ.ಕಿ.ಮೀ. ಇದೆ. ಈ ಜಿಲ್ಲೆಯು ಕರ್ನಾಟಕದ ಕೇಂದ್ರ ಬಿಂದುವಾದ ದಾವಣಗೆರೆ ಫಲವತ್ತಾದ ಭೂಮಿಯನ್ನು ಹೊಂದಿದ್ದು ವಾಣಿಜ್ಯಕೇಂದ್ರ, ಕೈಗಾರಿಕಾಕೇಂದ್ರ ಮತ್ತು ವಿದ್ಯಾಕೇಂದ್ರ ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿದೆ. ಕರ್ನಾಟಕದ ಯಾವುದೇ ಮೂಲೆಯಿಂದಲೂ ಸುಮಾರು ೩೦೦ ಕಿ.ಮೀ.ಗಳ ಅಂತರದಲ್ಲಿ ಈ ನಗರ ಕೇಂದ್ರ ಭಾಗದಲ್ಲಿದೆ. ಶ್ರೀ ಹುಂಡೇಕಾರ್ ಮತ್ತು ಗದ್ದಿಗೌಡರ್ ಸಮಿತಿಗಳ ಒಮ್ಮತದ ಶಿಫಾರಸ್ಸಿನಂತೆ ರಾಜ್ಯದಲ್ಲಿ ೭ ಹೊಸ ಜಿಲ್ಲೆಗಳನ್ನು ೧೯೯೭ ಆಗಸ್ಟ್ ೧೫ರಂದು ರಚಿಸಲು ಕರ್ನಾಟಕ ಸರ್ಕಾರ ಆದೇಶ ಹೊರಡಿಸಿತು. ಈ ಏಳು ಜಿಲ್ಲೆಗಳಲ್ಲಿ ದಾವಣಗೆರೆ ಜಿಲ್ಲೆಯೂ ಒಂದಾಗಿದ್ದು, ಇದರ ರಚನೆಗೆ ಹೋರಾಡಿದವರ ಚಳುವಳಿ ಮತ್ತು ಸಂಘರ್ಷಗಳು ಸ್ಮರಣೀಯವಾದವು.

ಪೂರ್ವ ಮತ್ತು ಪಶ್ಚಿಮ ಬೆಟ್ಟಶ್ರೇಣಿಗಳ ಮಧ್ಯದಲ್ಲಿರುವ ಈ ಜಿಲ್ಲೆ ಹೆಚ್ಚು ಎತ್ತರವಲ್ಲದ ಗುಡ್ಡಬೆಟ್ಟಗಳಿಂದ ಮತ್ತು ಸಮತಟ್ಟಾದ ಬಯಲುಪ್ರದೇಶದಿಂದ ಕೂಡಿದೆ. ಉತ್ತರಕ್ಕೆ ಮತ್ತು ಈಶಾನ್ಯಕ್ಕೆ ಇಳಿಜಾರಾಗಿರುವ ದಖ್ಖನ್ ಪ್ರಸ್ಥಭೂಮಿಯಲ್ಲಿರುವ ಈ ಜಿಲ್ಲೆ ಒಣಪ್ರದೇಶದ ವಲಯದೊಳಗೆ ಬರುತ್ತದೆ. ಇಲ್ಲಿನ ಬಯಲುಗಳ ನಡುವೆ ಸು.೩೦ ಕಿ.ಮೀ. ಅಂತರದಲ್ಲಿರುವ ಕಡಿಮೆ ಎತ್ತರದ ಸಮಾನಾಂತರವಾಗಿ ವಾಯವ್ಯ ಆಗ್ನೇಯಾಭಿಮುಖವಾಗಿ ಹಬ್ಬಿದ ಬೆಟ್ಟಸಾಲುಗಳಿವೆ. ಈ ಬೆಟ್ಟಸಾಲುಗಳ ನಡುವೆ ನದಿ ಕಾಲುವೆಗಳು ಕಂಡುಬರುತ್ತವೆ.

ಮೈಸೂರು ವಿಶ್ವವಿದ್ಯಾನಿಲಯದ ಭೂಗೋಳಶಾಸ್ತ್ರ ಅಧ್ಯಾಪಕರಾಗಿದ್ದ ಡಾ.ಘೋರೆಯವರು ೧೯೬೦-೬೧ರಲ್ಲಿ ನೀಡಿದ ಉಪನ್ಯಾಸದಲ್ಲಿ ಕರ್ನಾಟಕದ ಹೃದಯಭಾಗದಲ್ಲಿರುವ ದಾವಣಗೆರೆ ನೀರಿನ ಆಸರೆ, ಫಲವತ್ತಾದ ಜಮೀನು, ಕಾರ್ಮಿಕರ ಸಂಘಟನೆ ಸಮೃದ್ಧಿಗಳಿಂದ ನವ ಕರ್ನಾಟಕಕ್ಕೆ ಒಂದು ಆದರ್ಶ ರಾಜಧಾನಿಯಾಗಬಲ್ಲದು ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೬]

ಈ ಜಿಲ್ಲೆಯ ಪ್ರಮುಖ ನದಿ ತುಂಗಭದ್ರಾ ಇದಲ್ಲದೆ ಚಿಕ್ಕ ನದಿಗಳಾದ ಚಿನ್ನಹಗರಿ, ಚಿಕ್ಕಹಗರಿ, ಹರಿದ್ರಾ ನದಿಗಳು ಹರಿಯುತ್ತವೆ. ಪ್ರಮುಖ ಕೆರೆಗಳಲ್ಲಿ ಸೂಳೆಕೆರೆ(ಶಾಂತಿನಗರ), ಕೊಡಗನೂರಿನ ಕೆರೆ, ಅಣಜಿಕೆರೆ, ಜಗಲೂರು ಕೆರೆ, ಭರಮಸಾಗರ ಕೆರೆ, ಹರಪನಹಳ್ಳಿ ಕೆರೆ ಪ್ರಮುಖ ಸ್ಥಾನ ಪಡೆದುಕೊಂಡಿವೆ. ಇವು ರೈತರ ಜೀವನಾಡಿಯಾಗಿವೆ. ಈ ಪ್ರದೇಶ ಕೃಷ್ಣ ಜಲಾನಯನ ಪ್ರದೇಶಕ್ಕೆ ಒಳಪಟ್ಟಿದ್ದು, ಭದ್ರ ಜಲಾಶಯದಿಂದ ೨ ಕಾಲುವೆ ಪ್ರವಹಿಸಿ ನೀರಾವರಿಗೆ ಅನುಕೂಲವಾಗಿದೆ. ಹತ್ತಿ ಬೆಳೆಯು ನೀರಾವರಿ ಸೌಕರ್ಯ ಹೆಚ್ಚಾದಂತೆ ಕ್ಷೀಣಿಸಿದೆ. ಹತ್ತಿಗಿರಣಿ, ಕೈ ಮಗ್ಗಗಳ ಆಧಾರವಾಗಿದ್ದ ಹತ್ತಿ ಬೆಳೆಯು ಕ್ರಮೇಣ ದುರ್ಬಲವಾಗಿದ್ದು ಅವುಗಳ ಅವನತಿಗೆ ಕಾರಣವಾಗಿವೆ.

ಶ್ಯಾಗಲಿ ಹಳ್ಳ, ಹರಿದ್ರಾ ನದಿ ಸಂಗಮ ಸ್ಥಳವಾಗಿರುವ ದೇವರಬೆಳೆಕೆರೆಯಲ್ಲಿ ಒಂದು ಅಣೆಕಟ್ಟು ನಿರ್ಮಿಸಲಾಗಿದೆ. ಈ ಅಣೆಕಟ್ಟಿನಿಂದ ಸುಮಾರು ೬೦೦೦ ಎಕರೆ ಪ್ರದೇಶಕ್ಕೆ ನೀರು ಒದಗಿಸಲು ಸಹಾಯಕವಾಗಿದೆ. ಶಾಂತಿಸಾಗರ ದಕ್ಷಿಣ ಭಾರತದ ದೊಡ್ಡ ಜಲಾಶಯಗಳಲ್ಲಿ ಒಂದಾಗಿದೆ. ೧೧-೧೨ನೇ ಶತಮಾನದಲ್ಲಿ ಹಿರೇಹಳ್ಳ ಮತ್ತು ಸೊಪ್ಪಿನ ಹಳ್ಳಗಳಿಗೆ ಕಟ್ಟೆ ಕಟ್ಟಿ ಜಲಾಶಯ ನಿರ್ಮಿಸಲಾಗಿದೆ. ಇಲ್ಲಿಯ ಮುಖ್ಯ ಕಾಲುವೆಗೆ "ಹರಿದ್ರಾವತಿ" ಎಂದು, ಉತ್ತರದ ಕಾಲುವೆಗೆ "ಸಿದ್ಧನಾಲೆ" ಎಂದು, ದಕ್ಷಿಣದ ನಾಲೆಗೆ "ಬಸವನಾಲೆ" ಎಂದು, ಹೆಸರಿಸಲಾಗಿದೆ. ತುಂಗಭದ್ರಾ ನದಿಯು ಜಗಲೂರು ತಾಲ್ಲೂಕೊಂದನ್ನು ಹೊರತುಪಡಿಸಿ ಉಳಿದ ಹೊನ್ನಾಳಿ, ಚನ್ನಗಿರಿ, ದಾವಣಗೆರೆ, ಹರಿಹರ, ಹರಪನಹಳ್ಳಿ ತಾಲ್ಲೂಕುಗಳಲ್ಲಿ ಹರಿಯುತ್ತದೆ. ಜಿನಗಿಹಳ್ಳಕ್ಕೆ ಸಂಗೇನಹಳ್ಳಿಯ ಬಳಿ ದೊಡ್ಡ ಕೆರೆ ನಿರ್ಮಿಸಿ ಜಗಲೂರು ತಾಲೂಕಿನ ನೀರಾವರಿಗೆ ಅನುಕೂಲ ಕಲ್ಪಿಸಲಾಗಿದೆ. ಜಿಲ್ಲೆಯ ಬಾಗಳಿ, ಅಣಜಿ ಮುಂತಾದೆಡೆ ಅನೇಕ ಪ್ರಾಚೀನ ಕೆರೆಗಳಿವೆ.

ದಾವಣಗೆರೆ ವ್ಯವಸಾಯ ಪ್ರಧಾನವಾದ ಜಿಲ್ಲೆ. ಇಲ್ಲಿನ ಜನಸಂಖ್ಯೆಯು ಮೂರನೆಯ ಎರಡರಷ್ಟು (೩/೨) ಭಾಗ ಗ್ರಾಮೀಣ ಪ್ರದೇಶದಲ್ಲಿದೆ. ಚೆನ್ನಗಿರಿ ತಾಲೂಕಿನಲ್ಲಿ ಕಪ್ಪು ಮಣ್ಣು ಕಂಡುಬರುತ್ತದೆ. ಹಾಗೆಯೇ ಹೊನ್ನಾಳಿ ತಾಲ್ಲೂಕಿನ ಬಹುತೇಕ ಭಾಗ ಮರಳುಮಿಶ್ರಿತ ಕೆಂಪು ಮಣ್ಣು ಕಂಡುಬರುತ್ತದೆ. ಈ ಮಣ್ಣಿನಲ್ಲಿ ಸಾರಜನಕ, ರಂಜಕದ ಕೊರತೆಯಿದೆ. ಒಟ್ಟು ಜಿಲ್ಲೆಯಲ್ಲಿ ಕಪ್ಪು, ಕೆಂಪು, ಮಧ್ಯಮ ಕಪ್ಪುಮಣ್ಣು ಕಂಡುಬರುತ್ತದೆ.

ದಾವಣಗೆರೆ ಜಿಲ್ಲೆಯ ೭೪,೦೨೬ ಹೆಕ್ಟೇರ್ ಪ್ರದೇಶದಲ್ಲಿನ ನೀರಾವರಿಗೆ ಭದ್ರಾ ಜಲಾಶಯವೇ ಜೀವನಾಡಿ. ಅರೆಮಲೆನಾಡು, ಬಯಲುಪ್ರದೇಶಗಳಿಂದ ಕೂಡಿ ತುಂಗಭದ್ರೆ ಮೂಲದ ಜಲಸಂಪನ್ಮೂಲದ ಈ ಭಾಗದಲ್ಲಿ ಅಧಿಕ ಇಳುವರಿ ಬೆಳೆಗಳೆಂದರೆ ಭತ್ತ, ರಾಗಿ, ಗೋಧಿ, ಜೋಳ, ಮುಸುಕಿನ ಜೋಳ ಇತ್ಯಾದಿಗಳಿವೆ. ೧೯೬೦ರ ದಶಕದಲ್ಲಿ ಭದ್ರಾ ಜಲಾಶಯದ ನೀರು ಈ ಭಾಗದ ರೈತರನ್ನು ತಲುಪುವವರೆಗೂ ಹತ್ತಿ ಬೆಳೆಯು ಕೃಷಿಕರ ಮುಖ್ಯ ಬೆಳೆಯಾಗಿತ್ತು. ಅದು ಕ್ರಮೇಣ ತನ್ನ ಅಸ್ತಿತ್ವ ಕಳೆದುಕೊಂಡು ಕೆಲವೇ ರೈತರು ಮಾತ್ರ ಈ ಕೃಷಿಯನ್ನು ಮುನ್ನಡೆಸಿದ್ದಾರೆ. ಈ ಪ್ರದೇಶದಲ್ಲಿ ನೀರಾವರಿಯ ಸೌಕರ್ಯದ ನಂತರ ಭತ್ತ, ಕಬ್ಬು, ಪ್ರಮುಖ ಬೆಳೆಗಳಾಗಿ ಹೊರಹೊಮ್ಮಿದವು.

ಈ ಜಿಲ್ಲೆಯಲ್ಲಿ ಮಳೆ ಬೀಳುವ ಪ್ರಮಾಣ ಕಡಿಮೆ ಇರುವುದರಿಂದ ಇಲ್ಲಿ ಹುಟ್ಟಿ ಹರಿಯುವ ನದಿಗಳು ಇಲ್ಲ. ಜಲ ಸಂಪನ್ಮೂಲವೂ ಕಡಿಮೆ. ಜಿಲ್ಲೆಯ ಸರಾಸರಿ ಮಳೆ ೬೪೯.೧೦ ಮೀ.ಮೀ. ಆದರೆ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ತುಂಗಭದ್ರಾ ನದಿ ಹರಿಯುತ್ತದೆ. ಶಿವಮೊಗ್ಗ ಜಿಲ್ಲೆಯಿಂದ ಹೊನ್ನಾಳಿ ತಾಲ್ಲೂಕನ್ನು ಪ್ರವೇಶಿಸುವ ಈ ನದಿ ದಾವಣಗೆರೆ ಜಿಲ್ಲೆಗೆ ಜೀವನಾಡಿಯಾಗಿದೆ.

ಇಷ್ಟೆಲ್ಲಾ ಜಲಸಂಪತ್ತನ್ನು ಹೊಂದಿದ ಈ ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಜನರಿಗೆ ಅವಶ್ಯಕವಾಗಿದ್ದ ಜೀವಸೆಲೆಯನ್ನು ಒದಗಿಸುತ್ತಾ ಬಂದಿದೆ. ಪರಿಣಾಮವಾಗಿ ಇಲ್ಲಿನ ನದಿ, ಹಳ್ಳ, ಕೆರೆಗಳ ಸನಿಹದಲ್ಲಿ ಪ್ರಾಗೈತಿಹಾಸಿಕ ಕಾಲದ ಜನ ವಸತಿಯ ತಾಣಗಳು ಕಂಡು ಬಂದಿವೆ. ಪ್ರಕೃತಿಯ ಅಧೀನದಲ್ಲೇ ಬದುಕುತ್ತಿದ್ದ ಮಾನವನಿಗೆ ಶಿಲಾಯುಧಗಳನ್ನು ತಯಾರಿಸಲು ಉಪಯುಕ್ತವಾದ ಬಂಡೆಕಲ್ಲುಗಳು ಸಹ ನದಿಯ ಇಕ್ಕೆಲಗಳಲ್ಲಿ ಸ್ವಾಭಾವಿಕವಾಗಿ ದೊರೆಯುತ್ತಿದ್ದರಿಂದಾಗಿ ಪ್ರಾಗೈತಿಹಾಸಿಕ ಕಾಲದ ಮನುಷ್ಯ ಈ ಜಿಲ್ಲೆಯ ವಿವಿಧೆಡೆ ನೆಲೆಯೂರಿದ ಬಗೆಗೆ ನೆಲೆಗಳು ದೊರಕುತ್ತವೆ. ಹಾಗೆಯೇ ಈ ಭಾಗದಲ್ಲಿ ಅನೇಕ ರಾಜವಂಶಗಳು ಆಳ್ವಿಕೆ ನಡೆಸಿದ್ದು ಅವರ ಕೊಡುಗೆಗಳಾದ ದೇವಾಲಯಗಳು, ಕೋಟೆಗಳು ಮುಂತಾದ ಕುರುಹುಗಳು ನದಿಯ ಇಲ್ಲವೆ ಕೆರೆಯ ದಂಡೆಯ ಮೇಲೆ ಕಂಡುಬರುತ್ತವೆ.

ಹೊಸದುರ್ಗದಿಂದ ಪ್ರಾರಂಭವಾಗುವ ಬೆಟ್ಟಸಾಲು ಮಾಯಕೊಂಡದ ಮೂಲಕ ದಾವಣಗೆರೆ

ತಾಲ್ಲೂಕಿನ ಅಣಜಿ ಗ್ರಾಮದವರೆಗೆ ಹಬ್ಬಿದೆ. ದಾವಣಗೆರೆ ತಾಲ್ಲೂಕಿನ ಮಾಯಕೊಂಡದ ಬಳಿ ಬೆಟ್ಟಸಮೂಹಗಳಿವೆ. ಹೊನ್ನಾಳಿ ತಾಲ್ಲೂಕಿನ ದಕ್ಷಿಣದಿಂದ ಉತ್ತರಕ್ಕೆ ಬೋಳುಬೆಟ್ಟದ ದೊಡ್ಡ ಶ್ರೇಣಿ ಇದೆ. ಕಲ್ವ ರಂಗನಬೆಟ್ಟವು ೧,೦೩೧ಮೀ  ಎತ್ತರವಿದೆ. ಚನ್ನಗಿರಿ ತಾಲ್ಲೂಕಿನಲ್ಲಿ ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿ ಬೆಟ್ಟದ ಸಾಲುಗಳಿರುವುದು ಕಂಡುಬರುತ್ತದೆ. ಹರಪನಹಳ್ಳಿ ತಾಲ್ಲೂಕಿನ ದಕ್ಷಿಣ ಭಾಗದಲ್ಲಿ ಬೆಟ್ಟಗಳ ಸಮೂಹಗಳಿದ್ದು, ಇಲ್ಲಿನ ಬೆಟ್ಟಗುಡ್ಡಗಳು ಹೆಚ್ಚಾಗಿ ಕಲ್ಲುಬಂಡೆಗಳಿಂದ ಕೂಡಿದೆ. ಮಲ್ಲಪ್ಪನಗುಡ್ಡ ಶ್ರೇಣಿ ಮತ್ತು ಉತ್ತರಕ್ಕೆ ಕಲ್ಲುಹಳ್ಳ ಗುಡ್ಡ ಶ್ರೇಣಿ ಇವೆ. ತಿಮ್ಮಪ್ಪನಬೆಟ್ಟ, ಕಲ್ಲಳ್ಳಿಬೆಟ್ಟ, ನರಸಿಂಹ ದೇವರಬೆಟ್ಟ, ತೆಲಗಿಗುಡ್ಡದ ಸಮೂಹಗಳಿವೆ. ಹರಪನಹಳ್ಳಿ ಪಟ್ಟಣದ ದಕ್ಷಿಣಕ್ಕೆ ನರಸಿಂಹ ದೇವರಗುಡ್ಡ(೮೨೦ ಮೀ.) ಐತಿಹಾಸಿಕ ಉಚ್ಚಂಗಿದುರ್ಗ(೮೬೧ ಮೀ.) ಇವೆ. ಹರಿಹರ ತಾಲ್ಲೂಕಿನಲ್ಲಿ ಮಲೆ ಬೆನ್ನೂರು, ಕೋಮಾರನಹಳ್ಳಿ, ಐರಣಿ, ಬಾತಿಗುಡ್ಡದ ಸಾಲನ್ನು ನೋಡಬಹುದು. ಜಗಲೂರು ತಾಲ್ಲೂಕಿನ ವಾಯವ್ಯದಲ್ಲಿ ಬೆಟ್ಟದ ಸಾಲು ಹಬ್ಬಿದ್ದು ಅವುಗಳಲ್ಲಿ ಕಣಕುಪ್ಪೆ ಗುಡ್ಡದ ಸಾಲು, ಕೊಣಚಗಲ್ಲು, ರಂಗಪ್ಪನ ಬೆಟ್ಟ, ಕೊಡದಗುಡ್ಡ, ಹಾಲೆಕಲ್ ಗುಡ್ಡದ ಸಾಲುಗಳು ಪ್ರಮುಖವಾಗಿವೆ.

ಜಿಲ್ಲೆಯು ಬಹುತೇಕ ಬಯಲುಪ್ರದೇಶದಿಂದ ಕೂಡಿದ್ದರೂ ಸುಮಾರು ೮೯,೯೧೮ ಹೆಕ್ಟೇರ್ ಅರಣ್ಯವಿದೆ. ಚನ್ನಗಿರಿ ಮತ್ತು ಹೊನ್ನಾಳಿ ಭಾಗದ ಅರಣ್ಯಗಳಲ್ಲಿ ಹಲಸು, ಬೀಟೆ, ತೇಗ, ಹೊನ್ನೆ, ನಂದಿ, ಶ್ರೀಗಂಧ, ಸಂಪಿಗೆ ಮತ್ತು ದಿಂಡಿಗ, ಬಿದಿರು ಮರಗಳು ಅಲ್ಲಲ್ಲಿ ಬೆಳೆಯುತ್ತವೆ. ಉಳಿದ ತಾಲ್ಲೂಕಿನ ಅರಣ್ಯದಲ್ಲಿ ಹೆಚ್ಚಾಗಿ ಕುರುಚಲು ಗಿಡಗಂಟೆ ಮತ್ತು ಹುಲ್ಲು ಹೆಚ್ಚಾಗಿ ಬೆಳೆಯುತ್ತವೆ. ಜಿಲ್ಲೆಯಲ್ಲಿನ ಕಾಡುಗಳು ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾ ಪದಾರ್ಥಗಳನ್ನು ಪೂರೈಸುತ್ತದೆ. ಕಟ್ಟಡ ನಿರ್ಮಾಣಕ್ಕೆ ಬೇಕಾದ ಮರಮಟ್ಟುಗಳು ಉರುವಲು ಕಟ್ಟಿಗೆ ಬೊಂಬುಗಳೂ ಮತ್ತು ಬೆತ್ತಗಳು ಪ್ರಮುಖವಾದ ಅರಣ್ಯ ಉತ್ಪಾದನೆಗಳಾಗಿವೆ. ಹುಣಸೆಹಣ್ಣು, ಸೀಗೆಕಾಯಿ, ಹಾಲುವಾಣ, ಅಂಟುವಾಳದಕಾಯಿ, ಗೇರುಬೀಜಗಳು ಸಣ್ಣ ಪ್ರಮಾಣದ ಅರಣ್ಯ ಉತ್ಪಾದನೆ ವಸ್ತುಗಳಾಗಿವೆ. ಹೆಚ್ಚಾಗಿ ಕುರುಚಲು ಕಾಡುಗಳು ಕಂಡುಬರುತ್ತವೆ. ಯಥೇಚ್ಛವಾದ ಹುಲ್ಲುಗಾವಲು ಕಂಡುಬರುತ್ತದೆ.

ನೈಸರ್ಗಿಕವಾಗಿ ಇಷ್ಟೆಲ್ಲಾ ಬೆಟ್ಟಗುಡ್ಡಗಳನ್ನು ಹೊಂದಿದ ಈ ಜಿಲ್ಲೆಯ ಹಲವು ಕಡೆ ವಿಭಿನ್ನ ರೀತಿಯ ಶಿಲಾಸಂಪತ್ತನ್ನು, ಖನಿಜಸಂಪತ್ತನ್ನು ನೋಡಬಹುದು. ಧಾರವಾಡದ ಶಿಲಾವರ್ಗ ಮತ್ತು ಗ್ರಾನೈಟ್ ಗುಡ್ಡಗಳು ಇಲ್ಲಿ ಹಾಸುಹೊಕ್ಕಾಗಿವೆ. ಭೂಗರ್ಭ ಕ್ರಿಸ್ಟೈಲೆನ್ ಶಿಲಾವರ್ಗ ಮತ್ತು ಗ್ರಾನೈಟ್ ಬೆಣಚುಕಲ್ಲಿನಿಂದ ಕೂಡಿದೆ. ಕಣಶಿಲೆಗಳು ಮತ್ತು ಧಾರವಾಡದ ಶ್ರೇಣಿಕಲ್ಲುಗಳು ಹೆಚ್ಚಾಗಿವೆ. ಈ ಶಿಲಾಹಂದರ ಭಾರತದ ಅತ್ಯಂತ ಪ್ರಾಚೀನ ಶಿಲಾರಚನೆಗೆ ಸೇರಿದೆ.[೨] ಈ ಭಾಗವು ಅರ್ಕಿಯನ್ ಕಾಂಪ್ಲೆಕ್ಸ್‌ಗೆ ಸೇರಿದ್ದು ಇಲ್ಲಿನ ಶಿಲೆಯನ್ನು ಧಾರವಾಡ ಶಿಲಾವರ್ಗ ಮತ್ತು ಜುರಾಸಿಕ್ ಶಿಲಾವರ್ಗವೆಂದು ಎರಡು ಭಾಗ ಮಾಡಬಹುದು. ಈ ಮೇಲಿನ ಬೆಟ್ಟಗಳಲ್ಲಿ ಗ್ರಾನೈಟ್ ಹೇರಳವಾಗಿ ದೊರೆಯುತ್ತವೆ. ಇದು ಹೊನ್ನಾಳಿ ಗ್ರಾನೈಟ್ ಎಂದೇ ಹೆಸರುವಾಸಿಯಾಗಿದೆ.[೩]

ಹಾಗೆಯೇ ಅಲ್ಲಲ್ಲಿ ಕಾಂಗ್ಲಾ ಮೇರೆಡ್ ಬೆಣಚುಕಲ್ಲು, ಡೊಲಾರೈಟ್‌ಡೈಕ್(ಕಪ್ಪುಶಿಲೆ), ವಾಲ್ಕನಿಕ್ ರಾಕ್ಸ್(ಅಗ್ನಿಜಗ್ನಿಶಿಲೆ), ಸುಣ್ಣದ ಕಲ್ಲು, ಸೋಪ್‌ಸ್ಟೋನ್‌ಗಳು ದೊರೆಯುತ್ತವೆ. ದಾವಣಗೆರೆ ಜಿಲ್ಲೆ ಅಮೂಲ್ಯವಾದ ಖನಿಜಸಂಪತ್ತಿನಿಂದ ಕೂಡಿದೆ. ಕಾರ್ಡಿಯರೆ, ನೆಲಿನ ಮೈಟ್ ಅಥವಾ ಜಿಯೋನೈಟ್ ಖನಿಜಗಳಿವೆ. ಮಾಯಕೊಂಡದ ಬಳಿ ಕಲ್ನಾರು ದೊರೆಯುತ್ತವೆ. ಕೆಲವು ಪ್ರದೇಶಗಳಲ್ಲಿ ಹಿಂದೆ ಚಿನ್ನದ ಅದಿರನ್ನು ಆರಿಸಿ ತೆಗೆಯುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ದಾವಣಗೆರೆ ತಾಲ್ಲೂಕಿನ ಹರೆಕಲ್ಲು, ಜಗಲೂರು ತಾಲ್ಲೂಕಿನ ಹೊನ್ನೆಮರಡಿ ಚಿನ್ನದ ನಿಕ್ಷೇಪವನ್ನು ಹೊಂದಿದ ಪ್ರದೇಶಗಳಾಗಿವೆ. ಕೆಲವೆಡೆ ಕಬ್ಬಿಣದ ಅದಿರು ಕೂಡ ಕಂಡುಬರುತ್ತದೆ. ಹೊಸಕೆರೆ ದೇವರಬೆಳೆಕೆರೆಗಳಲ್ಲಿ ಸುಣ್ಣಕಲ್ಲು ಅಗಾಧ ಪ್ರಮಾಣದಲ್ಲಿವೆ. ಹಾಗೂ ಅಲ್ಲಲ್ಲಿ ಮ್ಯಾಂಗನೀಸ್ ಕೂಡ ದೊರೆಯುತ್ತದೆ. ದಾವಣಗೆರೆಯ ಸಮೀಪದಲ್ಲಿರುವ ಮಲೆಬೆನ್ನೂರಿನಲ್ಲಿ ಉತ್ತಮ ಗುಣಮಟ್ಟದ ಜೇಡಿಮಣ್ಣು ದೊರೆಯುತ್ತದೆ.

ನಿಸರ್ಗ ಮಾನವನಿಗೆ ಸದಾ ಅನುಕೂಲತೆಯನ್ನು ಒದಗಿಸುತ್ತ ಬಂದಿದೆ. ಇಲ್ಲಿನ ಭೌಗೋಳಿಕ ಪರಿಸರದಲ್ಲಿ ಸಿಗುವ ನೈಸರ್ಗಿಕ ಸಂಪನ್ಮೂಲಗಳು ಮಾನವನಿಗೆ ಒಂದಲ್ಲಾ ಒಂದು ರೀತಿಯಿಂದ ಸಹಕಾರಿಯಾಗಿವೆ. ಹಾಗಾಗಿ ಅಂದಿನಿಂದ ಇಂದಿನವರೆಗೂ ಮಾನವ ನಿಸರ್ಗವನ್ನು ಅವಲಂಬಿಸಿಯೇ ಜೀವನ ಸಾಗಿಸುತ್ತಿದ್ದಾನೆ.

ದಾವಣಗೆರೆ ಜಿಲ್ಲೆಯಲ್ಲಿ ಅರಣ್ಯಪ್ರದೇಶ ಕಡಿಮೆ ಇರುವುದರಿಂದ ಅಲ್ಲಿನ ಪಕ್ಷಿ, ಪ್ರಾಣಿಗಳ ವೈವಿಧ್ಯಮಯವೂ ಕಡಿಮೆ ಇದೆ. ಈ ಜಿಲ್ಲೆಯ ಕೆಲವು ಗುಡ್ಡಗಳಲ್ಲಿ ಚಿರತೆ, ತೋಳ, ಕರಡಿ ಕಾಡುಹಂದಿಗಳಿವೆ. ಕೆಲವು ಕಡೆ ಹುಲಿ ಕಂಡುಬರುವುದುಂಟು. ಚುಕ್ಕಿ ಜಿಂಕೆಗಳು, ಮುಂಗಸಿ, ಮೊಲ, ಮಂಗಗಳು, ಮಂಡಲಹಾವುಗಳು, ಕಾಡುಕೋಳಿ, ಮರುಕುಟಿಗ, ಪಾರಿವಾಳ, ಹದ್ದು, ಗೌಜಗ, ಕಾಜಾಣ, ನೀರುಕೋಳಿ, ಗಿಡುಗ ಮೊದಲಾದ ಪ್ರಾಣಿ–ಪಕ್ಷಿಗಳು ಕಂಡುಬರುತ್ತವೆ.

ಹೀಗೆ ವೈವಿಧ್ಯಮಯವಾದ ಭೌಗೋಳಿಕ ಪರಿಸರವನ್ನು ಹೊಂದಿರುವ ದಾವಣಗೆರೆ ಜಿಲ್ಲೆ ತನ್ನ ವಿಶಿಷ್ಟ ಪರಿಸರದಿಂದ ಹಲವಾರು ಕ್ಷೇತ್ರಗಳಲ್ಲಿ ಮಹತ್ವದ ಪಾತ್ರ ವಹಿಸುತ್ತಿದೆ. ೧೯೯೭ ಆಗಸ್ಟ್ ೧೫ರ ಮೊದಲು ಚಿತ್ರದುರ್ಗ, ಶಿವಮೊಗ್ಗ, ಬಳ್ಳಾರಿ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಭಾಗವಾಗಿದ್ದ ಈ ಪ್ರದೇಶ ೧೯೯೭ರಲ್ಲಿ ಹೊಸ ಜಿಲ್ಲೆಯಾಗಿ ರಚನೆಗೊಂಡು ತನ್ನದೇ ಆದ ಭೌಗೋಳಿಕ ಗಡಿಯನ್ನು ಗುರುತಿಸಿಕೊಂಡಿದೆ.

**೨.೨. ಚಾರಿತ್ರಿಕ ಹಿನ್ನೆಲೆ**

ಕರ್ನಾಟಕದ ಚರಿತ್ರೆಯಲ್ಲಿ ದಾವಣಗೆರೆ ಜಿಲ್ಲೆಯ ಇತಿಹಾಸ ವಿಶಿಷ್ಟತೆಯಿಂದ ಕೂಡಿದೆ. ರಾಜರ ಕಾಲಾವಧಿಯಲ್ಲಿ ಯಾವುದೇ ಸಾಮ್ರಾಜ್ಯದ ರಾಜಧಾನಿಯಾಗಿರದಿದ್ದರೂ, ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವು ರಾಜಮನೆತನಗಳು ಹಾಗೂ ಅವರ ಸಾಮಂತರು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ದಾವಣಗೆರೆ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೊರೆತ ಶಾಸನಗಳನ್ನು,

ಐತಿಹಾಸಿಕ ದಾಖಲೆಗಳನ್ನು ಪರಿಶೀಲಿಸಿದಾಗ ದಾವಣಗೆರೆ ಸಹ ಪರೋಕ್ಷವಾಗಿ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಹಾಗೆಯೇ ಜಿಲ್ಲೆಯು ಅನೇಕ ಪೌರಾಣಿಕ ಕಥನಗಳಿಂದ ಕೂಡಿದ ಸ್ಥಳಗಳನ್ನು ಹೊಂದಿದೆ. ಈ ಜಿಲ್ಲೆಯ ಚರಿತ್ರೆಯನ್ನು ಗಮನಿಸಿದಾಗ ಅವು ಭಿನ್ನ ನೆಲೆಗಳಲ್ಲಿ ಜನ್ಮ ತಾಳಿರುವುದು ಕಂಡುಬರುತ್ತದೆ. ಅಂದರೆ ಅವು ಧಾರ್ಮಿಕ, ಸಾಮಾಜಿಕ, ಆಡಳಿತ, ವಾಣಿಜ್ಯ, ಶಿಕ್ಷಣ ಮುಂತಾದ ಹಿನ್ನೆಲೆಯಲ್ಲಿ ಹುಟ್ಟಿಕೊಂಡು ಕ್ರಮೇಣ ಅವುಗಳಲ್ಲಿ ಹಲವು ತಮ್ಮ ಸ್ವರೂಪದಲ್ಲಿ ಬದಲಾವಣೆ ಮಾಡಿಕೊಂಡಿವೆ.

ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಚರಿತ್ರೆಯನ್ನು ಅಧ್ಯಯನಕ್ಕೊಳಪಡಿಸಿದಾಗ ಪ್ರಾಚೀನ ಕಾಲದಿಂದಲೂ ಆಳರಸರ ಸಂಬಂಧ ಹೊಂದಿರುವುದು ಕಂಡುಬರುತ್ತದೆ. ಈ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಚಾರಿತ್ರಿಕವಾಗಿ ಭವ್ಯ ಪರಂಪರೆಯನ್ನೊಳಗೊಂಡಿವೆ. ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆಯನ್ನು ಅಧ್ಯಯನ ಮಾಡಲು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೇ ಭಾಗವು ಪ್ರಾಚೀನ ಕಾಲದ ಚರಿತ್ರೆಯನ್ನು ಒಳಗೊಂಡಿದೆ. ಎರಡನೇ ಭಾಗವು ವಿಜಯನಗರಪೂರ್ವ ಕಾಲದ ಚರಿತ್ರೆಯನ್ನು ಒಳಗೊಂಡರೆ ಮೂರನೇ ಭಾಗವು ವಿಜಯನಗರ ಕಾಲದ ಚರಿತ್ರೆಯನ್ನು ಒಳಗೊಂಡಿದೆ. ಅಂತಿಮವಾಗಿ ನಾಲ್ಕನೇ ಭಾಗವು ವಿಜಯನಗರೋತ್ತರ ಕಾಲದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ಅರಸರ ಚರಿತ್ರೆಯನ್ನು ಒಳಗೊಂಡಿದೆ.

### ೨.೨.೧. ಪ್ರಾಚೀನ ಕಾಲ

ದಾವಣಗೆರೆ ಪ್ರದೇಶದಲ್ಲಿ ಇತಿಹಾಸಪೂರ್ವ ಯುಗದ ಮಾನವನ ಸ್ಥಳಗಳು ಹಾಗೂ ಬಳಸಿದ ಉಪಕರಣಗಳು ದೊರೆತಿವೆ. ಮನುಷ್ಯ ಬರವಣಿಗೆಯನ್ನು ಕಂಡುಕೊಳ್ಳುವ ಮೊದಲು ಹಾಗೂ ಅವನ ಜೀವನದ ರೀತಿ ನೀತಿಗಳು ಅಷ್ಟೇನೂ ಸುಧಾರಿಸದೇ ಇದ್ದ ಕಾಲಾವಧಿಯನ್ನು ಪ್ರಾಗೈತಿಹಾಸಿಕ ಕಾಲವೆಂದು ಕರೆಯಲಾಗುತ್ತದೆ. ಈ ಕಾಲದ ಕೆಲವು ಪ್ರಾಗೈತಿಹಾಸಿಕ ನೆಲೆಗಳು ದಾವಣಗೆರೆ ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡುಬಂದಿದ್ದು ಆ ಕಾಲದ ಮನುಷ್ಯ ಉಪಯೋಗಿಸಿ ಬಿಟ್ಟುಹೋದ ಕಲೆಯ ಅವಶೇಷಗಳು ದೊರೆತಿವೆ. ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವು ರಾಜಮನೆತನಗಳು, ಸಾಮಂತರು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಜೊತೆಗೆ ಇವರು ತಮ್ಮ ಕಾಲಾವಧಿಯಲ್ಲಿ ಅನೇಕ ಪ್ರಜಾಹಿತ ಕಾರ್ಯಗಳನ್ನು ಕೈಗೊಂಡು ತಮ್ಮ ವಿಶಿಷ್ಟ ಕೊಡುಗೆಗಳ ಮೂಲಕ ಚರಿತ್ರೆಯಲ್ಲಿ ತಮ್ಮದೇ ಆದ ಸ್ಥಾನಗಳನ್ನು ಗುರುತಿಸಿಕೊಂಡಿದ್ದಾರೆ.

ಪ್ರಾಗೈತಿಹಾಸ ಕಾಲದಲ್ಲಿ ಮಾನವನಿಗೆ ಒಂದು ವಿಶಿಷ್ಟ ಸ್ಥಾನವಿದೆ. ಮೂಲತಃ ಮಾನವ ಪ್ರಕೃತಿಯನ್ನು ಅವಲಂಬಿಸಿಕೊಂಡು ಜೀವಿಸಬೇಕಾದ ಪರಿಸ್ಥಿತಿಯಿತ್ತು. ಇಂದಿಗೆ ಸುಮಾರು ನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಮನುಷ್ಯ ಜೀವಿಸಿದ್ದ ಎನ್ನುವುದಕ್ಕೆ ಸಾಕ್ಷ್ಯಾಧಾರಗಳಿವೆ.[೨]

ಈ ಕಾಲವು ಬರವಣಿಗೆಯ ಪೂರ್ವಕಾಲ. ಇಲ್ಲಿ ಸಾಹಿತ್ಯಾಧಾರಗಳು ದೊರೆಯುವುದಿಲ್ಲ. ಪ್ರಾಗೈತಿಹಾಸ ಕಾಲದ ಬಹುಭಾಗವು ಧೀರ್ಘಕಾಲದ ಆದಿ ಶಿಲಾಯುಗವಾಗಿದೆ. ಆ ಕಾಲದಲ್ಲಿ ಜನರು ಆಹಾರ ಸಂಗ್ರಹಿಸಲು, ಬೇಟೆಯಾಡಲು ಕಲ್ಲಿನಿಂದ ಮಾಡಿದ ಉಪಕರಣಗಳನ್ನು ಬಳಸುತ್ತಿದ್ದರು. ಅಲೆಮಾರಿಯಾಗಿದ್ದ ಮಾನವನಿಗೆ ಗೆಡ್ಡೆಗೆಣಸು, ಕಂಟಿಗಳನ್ನು ಅಗೆದು, ಗಿಡಗಳನ್ನು ಕಡಿಯಲು, ಬೇಟೆಯಾಡಿದ ಪ್ರಾಣಿಗಳ ಮಾಂಸವನ್ನು ತುಂಡುಮಾಡಲು ಮಾನವ ಶಿಲೆಗಳನ್ನು ಉಪಯೋಗಿಸುತ್ತಿದ್ದ. ಶಿಲೆಗಳು ಅಂದು ಮಾನವನ ಜೀವನದ ಒಂದು ಭಾಗವಾಗಿ ಬಳಕೆಯಾಗುತ್ತಿದ್ದವು. ಶಿಲೆಯನ್ನು ಬಳಸುತ್ತಿದ್ದ ಕಾಲವನ್ನು ಶಿಲಾಯುಗ ಎಂದು ಕರೆಯುತ್ತಾರೆ.

೧. ಹಳೆಯ ಶಿಲಾಯುಗ

೨. ಸೂಕ್ಷ್ಮಶಿಲಾಯುಗ

೩. ನವಶಿಲಾಯುಗ

೪. ಬೃಹತ್ ಶಿಲಾಯುಗ

ಶಿಲಾಯುಗದ ಪ್ರತಿಯೊಂದು ಹಂತದಲ್ಲಿ ಜನರು ತಮ್ಮ ಉಪಕರಣಗಳನ್ನು ತಯಾರಿಸಿದರು. ಅಲ್ಲಿ ಬಳಸಿದ ತಂತ್ರಗಳ ಮತ್ತು ಅವುಗಳ ಮೂಲಕ ಸಿದ್ಧ ಮಾಡಿದ ಉಪಕರಣಗಳನ್ನು ಆಕೃತಿಗಳ ಅನುಸಾರವಾಗಿ ನಿರ್ಧರಿಸಲಾಗಿದೆ. ಅವರು ರೂಪಿಸಿಕೊಂಡ ತಂತ್ರ, ಅವರು ಉತ್ಪಾದಿಸಿದ ಉಪಕರಣಗಳ ಆಕೃತಿಗಳನ್ನು ಹಾಗೂ ಲಕ್ಷಣಗಳನ್ನು ನಿರ್ಧರಿಸುತ್ತಿದ್ದವು. ಮಾನವನ ಸಾಂಸ್ಕೃತಿಕ ಪ್ರಗತಿಪಥದಲ್ಲಿಯ ಸ್ಪಷ್ಟವಾದ ಕ್ರಮಬದ್ಧ ಹಂತಗಳನ್ನು ನಿರ್ದೇಶಿಸುತ್ತಾ ಮಾನವ ಸಂಸ್ಕೃತಿ ಬೆಳವಣಿಗೆಯಲ್ಲಿಯ ವಿವಿಧ ಘಟ್ಟಗಳನ್ನು ಸ್ಪಷ್ಟಗೊಳಿಸುತ್ತದೆ.[೧೦] ರಾಬರ್ಟ್ ಬ್ರೂಸ್‌ಫೂಟ್ ಎಂಬ ವಿದ್ವಾಂಸರು ಶಿಲಾಯುಗದ ಕುರಿತು ಮೊದಲು ಸರ್ವೇಕ್ಷಣಾ ಕಾರ್ಯ ಮಾಡಿದವರಾಗಿದ್ದಾರೆ. ದಾವಣಗೆರೆ ಜಿಲ್ಲೆಯ ಪ್ರಾಗೈತಿಹಾಸಿಕ ನೆಲೆಗಳ ಕುರಿತಂತೆ ಅ.ಸುಂದರ, ಕೆ.ಪೆದ್ದಯ್ಯ, ರಾಜಾರಾಮ ಹೆಗಡೆ, ಕೆ.ಬಿ.ಶಿವತಾರಕ್, ಲಕ್ಷ್ಮಣ್ ತೆಲಗಾವಿ ಇದಕ್ಕೆ ಪೂರಕವಾಗಿ ಸರ್ಕಾರಿ ಗೆಜೆಟಿಯರ್, ಕರ್ನಾಟಕ ಚರಿತ್ರೆ ಸಂಪುಟ ಭಾಗ-೧, ಕರ್ನಾಟಕ ಪರಂಪರೆ ಭಾಗ ಒಂದರ ಅಧ್ಯಾಯಗಳಲ್ಲಿ ಇತಿಹಾಸಪೂರ್ವ ಕಾಲದ ಮಾನವನ ನೆಲೆಗಳ ಕುರುಹುಗಳ ದಾಖಲೆಗಳಿವೆ. ಹಳೆ ಶಿಲಾಯುಗಕ್ಕೆ ಸಂಬಂಧಿಸಿದಂತೆ ಮಾವಿನಕೊವಿ, ಚಿಕ್ಕಮೈಸೂರು, ಲಿಂಗದಹಳ್ಳಿ, ಹಾರೋನಹಳ್ಳಿ, ನ್ಯಾಮತಿ, ತೆಕ್ಕನಹಳ್ಳಿ ಮುಂತಾದ ಪ್ರದೇಶಗಳಲ್ಲಿ ಕುರುಹುಗಳು ದೊರೆತಿದೆ.

೧೮೮೧ರಲ್ಲಿ ತುಂಗಭದ್ರಾ ನದಿ ಸಮೀಪದ ನ್ಯಾಮತಿ(ಹೊನ್ನಾಳಿ ತಾಲ್ಲೂಕು)ಯಲ್ಲಿ ಸಿಂಗಲಂ ಬೆಡ್ ಎಂಬುವರು ಆರಂಭದ ಆದಿ ಶಿಲಾಯುಗಕ್ಕೆ ಸೇರಿದ ಎರಡು ಶಿಲಾಯುಧಗಳನ್ನು ಸಂಶೋಧಿಸಿದರು.[೧೧] ಕ್ವಾರ್ಟ್ ಜೈಟ್‌ನಿಂದ ತಯಾರಿಸಲಾದ ಈ ಕೈಕೊಡಲಿಗಳಲ್ಲಿ ಮುಂಭಾಗ ಚೂಪಾಗಿಯು, ಹಿಂಭಾಗದಲ್ಲಿ ವೃತ್ತಾಕಾರವಾಗಿ ಬಾಯಿ ಹರಿತವಾಗಿಯೂ ಇತ್ತು. ಅದನ್ನು

ವಿಭಿನ್ನ ಕೆಲಸಗಳಿಗೆ ಒಳಕೆ ಮಾಡಿದ್ದರೆನ್ನಬಹುದು. ಇದೇ ನಿವೇಶನದ ಸಮೀಪದಲ್ಲಿ ಅಂದರೆ ತುಂಗಭದ್ರಾ ನದಿಯ ಎಡಭಾಗದ ದಂಡೆಯ ಹಳ್ಳೂರಿನಲ್ಲಿ ೧೯೬೫ರಲ್ಲಿ ನಡೆದ ಉತ್ಖನನದ ಪರಿಣಾಮದಿಂದಾಗಿ ಆ ನಿವೇಶನವು ಕ್ರಿಪೂ. ೧೮೦೦ಕ್ಕಿಂತ ಹಿಂದಿನದೆಂದು ಗುರುತಿಸಲಾಗಿದೆ. ಅಲ್ಲಿ ಕೃಷಿಯ ಪರಿಕರಗಳು ಹಾಗೂ ಸಾಕುಪ್ರಾಣಿಗಳ ಅವಶೇಷಗಳು ದೊರೆತಿವೆ.[೧೨] ಉಚ್ಚಂಗಿದುರ್ಗದಲ್ಲಿ ಎರಡು ಪ್ರಾಕ್ಚಾರಿತ್ರಿಕ ನೆಲೆಗಳು ಕಂಡುಬಂದಿವೆ. ಬೆಟ್ಟದ ಮೇಲೆ ಮತ್ತು ಕೆಳಭಾಗದಲ್ಲಿ ಪೂರ್ವಕ್ಕೆ ಬನಶಂಕರಿ ದೇವಾಲಯದ ಆವರಣದಲ್ಲಿವೆ. ಇವುಗಳನ್ನು ಮೊರಿಯರ ಮನೆಯೆಂದು ಕರೆಯುತ್ತಾರೆ. ಆದರೆ ಇವು ಬೃಹತ್ ಶಿಲಾಯುಗ ಕಾಲದ ಸಮಾಧಿಗಳಾಗಿವೆ. ಬೆಟ್ಟದ ಮೇಲಿರುವ ನೆಲೆಯಿಂದ ದೊರೆತ ಅವಶೇಷಗಳ ಬೂದುಬಣ್ಣದ ಮತ್ತಿತರ ಅವಶೇಷಗಳು ಪದರ ಪದರಾಗಿ ದೊರೆತಿವೆ. ಬನಶಂಕರಿ ದೇವಾಲಯದ ಮುಂದಿನ ಪ್ರದೇಶವು ಪ್ರಾಚೀನ ನೆಲೆಯಾಗಿತ್ತೆಂಬುದು ಅಲ್ಲಿನ ಬೂದಿ ಮತ್ತು ಮಡಿಕೆ ಅವಶೇಷಗಳಿಂದ ತಿಳಿದುಬರುತ್ತದೆ.[೧೩] ಈ ಮೇಲಿನ ಎರಡು ಅವಶೇಷಗಳು ನವಶಿಲಾಯುಗಕ್ಕೆ ಮತ್ತು ಬೃಹತ್ ಶಿಲಾಯುಗಕ್ಕೆ ಸೇರಿದವುಗಳೆಂದು ಹೇಳಬಹುದು. ಜಗಲೂರು ತಾಲ್ಲೂಕಿನ ಪ್ರಾಚೀನತೆಯನ್ನು ಕ್ರಿಪೂ. ೩೦೦೦ ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ಯಬಹುದು ಇಲ್ಲಿ ಬೃಹತ್ ಶಿಲಾಯುಗಕ್ಕೂ ಪೂರ್ವದ ನವಶಿಲಾಯುಗದ ಅನೇಕ ನೆಲೆಗಳು ಬೆಳಕಿಗೆ ಬಂದಿವೆ. ಈ ಸಂಶೋಧನೆಯನ್ನು ಕೈಗೊಂಡವರಲ್ಲಿ ವಿರೂಪಾಕ್ಷಿ ಪೂಜಾರಹಳ್ಳಿ, ಎಸ್.ವೈ.ಸೋಮಶೇಖರ್, ಎಚ್.ತಿಪ್ಪೇಸ್ವಾಮಿ ಪ್ರಮುಖರಾಗಿದ್ದಾರೆ. ಕೊಣಚಗಲ್ ರಂಗನಾಥಸ್ವಾಮಿ ಬೆಟ್ಟದ ಬಳಿ ನವಶಿಲಾಯುಗ ಕಾಲದ ಕೈಕೊಡಲಿಗಳು ಮತ್ತು ಬೂದುಬಣ್ಣದ ಮಡಕೆ ಚೂರುಗಳು ದೊರೆತಿವೆ. ಜಗಲೂರು ತಾಲ್ಲೂಕಿನಲ್ಲಿ ಹಲವಾರು ಪ್ರದೇಶಗಳಲ್ಲಿ ನವಶಿಲಾಯುಗದ ನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ಪ್ರಮುಖವಾಗಿ ಸಂಗೇನಹಳ್ಳಿ, ಅರಶಿನಗುಂಡಿ, ಕೊಣಚುಗಲ್ಲು ರಂಗಪ್ಪನಗುಡ್ಡ, ಚಿಕ್ಕ ಮಲ್ಲನಹಳ್ಳಿ ಪ್ರಮುಖವಾಗಿ ಕಂಡುಬರುತ್ತವೆ. ಇವುಗಳಲ್ಲಿ ಮೊದಲಿನ ಮೂರು ನೆಲೆಗಳು ಕಂಡುಬಂದಿರುವುದು ಜನಗಿಹಳ್ಳದ ದಂಡೆಯ ಮೇಲೆ ಎಂಬುದು ಗಮನಾರ್ಹ ಅಂಶ. ಜನಗಿಹಳ್ಳವನ್ನು ಚಿನ್ನಹಗರಿಯೆಂದೂ ಪ್ರಾಚೀನ ಶಾಸನಗಳಲ್ಲಿ ಹಸಿಯ ತೊರೆಯೆಂದು ಕರೆಯಲಾಗಿದೆ.[೧೪] ಹಾಗೆಯೇ ನಂದಿಹಳ್ಳ, ಅರಸೂರು, ಹುವುದರ, ಎಮ್ಮನ ಗಟ್ಟಿದೇವಿ ಕೆರೆಗಳಲ್ಲಿ ನವಶಿಲಾಯುಗದ ನಯವಾದ ಕೊಡಲಿಗಳನ್ನು ಪತ್ತೆಹಚ್ಚಲಾಗಿದೆ.[೧೫] ಸಂಗೇನಹಳ್ಳಿಯಲ್ಲಿ ನವಶಿಲಾಯುಗ ಕಾಲದ ಕಲ್ಲಿನ ನಯವಾದ ಕೊಡಲಿ, ಬೂದುಕಪ್ಪು, ಕೆಂಪು ಹಾಗೂ ಬಿಳಿವರ್ಣ ಲೇಪಿತ ಮಡಕೆ ಕುಡಿಕೆಗಳು, ಕವಣೆಕಲ್ಲು, ಗುಂಡುಕಲ್ಲು, ಅರೆಯುವ ಕಲ್ಲು ಒಂದೆ ಅಳತೆಯ ಚಪ್ಪಟೆಯ ಕಲ್ಲು, ಬೂದಿಕಿಟ್ಟ, ಕಬ್ಬಿಣದ ಕಿಟ್ಟ ಕುಟ್ಟಿ, ಮೂಡಿಸಿದ ರೇಖಾಚಿತ್ರಗಳು ಮುಖ್ಯವಾಗಿವೆ. ಇವುಗಳಲ್ಲದೆ ಚಾರಿತ್ರಿಕ ಕಾಲದ ವೀರಗಲ್ಲು ದೇಗುಲದ ಅವಶೇಷಗಳನ್ನು ಇಲ್ಲಿ ಕಾಣಬಹುದು. ಇದರಿಂದ ಈ ನೆಲೆಯು ನವಶಿಲಾಯುಗದ ಕಾಲದಿಂದ ಆಧುನಿಕ ಯುಗದವರೆಗೆ ಮಾನವನ ವಸತಿ ತಾಣವಾಗಿದ್ದುದು ಸ್ಪಷ್ಟವಾಗುತ್ತದೆ.[೧೬] ಈ ತಾಲ್ಲೂಕಿನಲ್ಲಿ ನವಶಿಲಾಯುಗ ಇನ್ನೊಂದು ನೆಲೆಯೆಂದರೆ ಚಿಕ್ಕಮಲ್ಲನಹೊಳೆ ಬಳಿಯಿದೆ.

ಇದನ್ನು ವಿರೂಪಾಕ್ಷ ಪೂಜಾರಹಳ್ಳಿ ಅವರು ಬೆಳಕಿಗೆ ತಂದಿದ್ದಾರೆ. ಇಲ್ಲಿ ಬೂದಿದಿಬ್ಬ ಕಂಡುಬಂದಿದ್ದು, ಈ ನೆಲೆಯಲ್ಲಿ ನಯಗೊಳಿಸಿದ ಕೊಡಲಿ, ದನದ ಮೂಳೆ, ಬೂದು ಬಣ್ಣದ ಮಡಕೆಗಳು ಕಂಡುಬಂದಿವೆ. ಸ್ಥಳೀಯರು ಈ ನೆಲೆಯನ್ನು ಮುತ್ತೆಗಾರರ ಬೊಟ್ಟು, ದೇವರತ್ತಿನ ಬೊಟ್ಟು, ದೇವರ ಎತ್ತುಗಳು ಐಕ್ಯಗೊಂಡ ಸ್ಥಳ ಎನ್ನುತ್ತಾರೆ.[೧೭] ಮತ್ತೊಂದು ಬೃಹತ್ ಶಿಲಾಯುಗದ ನೆಲೆ ಗುಹೇಶ್ವರಗುಡ್ಡದ ತಪ್ಪಲಿನಲ್ಲಿದೆ. ಇಲ್ಲಿ ಸುಮಾರು ೨೧ ಬೃಹತ್ ಶಿಲಾಯುಗದ ಸಮಾಧಿಗಳಿವೆ. ಒಟ್ಟಿನಲ್ಲಿ ಇಲ್ಲಿ ಕಂಡುಬಂದ ನೆಲೆಗಳ ಮೂಲಕ ಕ್ರಿಪೂ. ೩೦೦೦ ವರ್ಷಗಳಷ್ಟು ಹಿಂದೆ ಈ ಪರಿಸರದಲ್ಲಿ ನವಶಿಲಾಯುಗದ ಮಾನವ ಬದುಕಿ ಬಾಳಿದ್ದುದು ಸ್ಪಷ್ಟವಾಗಿದೆ.

ಹರಿಹರ ತಾಲ್ಲೂಕಿನ ಕೊಮಾರನಹಳ್ಳಿಯಲ್ಲಿ ನಡೆಸಿದ ಉತ್ಖನನದಿಂದಾಗಿ ರಾಗಿ, ನವಣೆಗಳನ್ನು ಬೆಳೆದ ಬಗ್ಗೆ ಆಧಾರಗಳು ದೊರೆತಿವೆ.[೧೮] ನವಶಿಲಾಯುಗದ ವೇಳೆಗೆ ರಾಗಿ ಮತ್ತು ನವಣೆಗಳನ್ನು ಮನುಷ್ಯ ವ್ಯವಸಾಯ ಮಾಡಿ ಬೆಳೆಯುತ್ತಿದ್ದ. ಜೊತೆಗೆ ಅವುಗಳನ್ನು ಆಹಾರಧಾನ್ಯಗಳಿಗಾಗಿ ಪ್ರತಿನಿತ್ಯ ಬಳಸುತ್ತಿದ್ದನೆಂದು ಸ್ಪಷ್ಟವಾಗುತ್ತದೆ.

ಹೊನ್ನಾಳಿ ತಾಲ್ಲೂಕಿನ ಹೊಳಲೂರು ಬಳಿ ಶಿಲಾ ತಾಮ್ರಯುಗ, ಬೃಹತ್ ಶಿಲಾಯುಗಕ್ಕೆ ಸೇರಿದವುಗಳೆಂದು ಹೇಳಬಹುದಾದ ಗೀರುಚಿತ್ರಗಳು ಕಂಡುಬಂದಿವೆ.[೧೯] ಇವುಗಳಲ್ಲದೆ ಸೂಕ್ಷ್ಮಶಿಲಾಯುಗಕ್ಕೆ ಸಂಬಂಧಿಸಿದಂತೆ ಆಧಾರಗಳು ದಾವಣಗೆರೆ ಜಿಲ್ಲೆಯ ಹಲವಾರು ಪ್ರದೇಶಗಳಲ್ಲಿ ಕಂಡುಬರುತ್ತವೆ. ಇಲ್ಲಿ ಕಂಡುಬರುವ ಪ್ರಮುಖ ನೆಲೆಗಳೆಂದರೆ ಕೊಂಡಜ್ಜಿ, ಮಾಡಲಿಗೇರಿ, ಕೋನಾಯಕನಹಳ್ಳಿ, ಚಿಕ್ಕ ಬಸೂರು, ಬೆನಕನಹಳ್ಳಿ, ಹಳೆ ಆಲನಹಳ್ಳಿ, ಹಳೆಚಟ್ನಹಳ್ಳಿ, ಹೊನ್ನಾಳಿ ಪ್ರದೇಶಗಳಲ್ಲಿ ಪ್ರಮುಖ ನೆಲೆಗಳು ಸಿಗುತ್ತವೆ.

ದಾವಣಗೆರೆ ಜಿಲ್ಲೆಯಲ್ಲಿ ನೂತನ ಶಿಲಾಯುಗಕ್ಕೆ ಸಂಬಂಧಿಸಿದಂತೆ ಹಲವು ನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಮಾಡಲಿಗೇರಿ, ಹರಿಹರ, ತರಳಬಾಳು, ಅಯ್ಯಾನೂರು, ಜಗಲೂರು, ನ್ಯಾಮತಿ, ಬೆನಕನಹಳ್ಳಿ, ಸಾಸಿವೆಹಳ್ಳಿ, ಹರಪನಹಳ್ಳಿ, ಹಳೆಲಿಂಗಾಪುರ, ಹಾರೋನಹಳ್ಳಿ, ಹೊನ್ನಾಳಿ, ತೆಲಗಿ, ಬಾಗಳಿ, ನೀಲಗುಂದ ಮುಂತಾದ ಪ್ರದೇಶಗಳಲ್ಲಿ ಕಂಡುಬರುತ್ತವೆ.

ಕರ್ನಾಟಕದ ಶಿಲಾಯುಗದ ಜನರು ಪ್ರೊಟೊ ಅಸ್ಟ್ರಾಯಿಡ್ ಮತ್ತು ಮೆಡಿಟರೇನಿಯನ್ ಎಂಬ ಜನಾಂಗೀಯ ವರ್ಗಕ್ಕೆ ಸೇರಿದವರು. ಆದ್ದರಿಂದ ಕರ್ನಾಟಕದ ದಾವಣಗೆರೆಯ ಪ್ರದೇಶ ಶಿಲಾಯುಗದ ಜನರು ಕೂಡ ಈ ವರ್ಗಕ್ಕೆ ಸೇರಿದವರಾಗಿದ್ದವರೆಂದು ಅಭಿಪ್ರಾಯ ಪಡಬಹುದು.

ಆದಿಮಾನವನ ಕಾಲದಲ್ಲಿ ಪ್ರಸಿದ್ಧಿ ಪಡೆದ ದಾವಣಗೆರೆ ಪ್ರದೇಶವು ಪುರಾಣ ಕಾಲದಲ್ಲಿಯೂ ಪ್ರಸಿದ್ಧಿಯನ್ನು ಪಡೆದಿತ್ತು. ಪುರಾಣದ ಪ್ರಕಾರ ಗುಹಾಸುರನೆಂಬ ರಾಕ್ಷಸನು ಇಲ್ಲಿ ನೆಲೆಸಿದ್ದರಿಂದ ಗುಹಾಕ್ಷೇತ್ರವೆಂದು ಹೆಸರಾಗಿತ್ತು. ಮುಂದೆ ಗುಹಾಸುರನು ಪ್ರಜಾಪೀಡಕನಾದಾಗ ದೇವತೆಗಳ

ಪ್ರಾರ್ಥನೆಯಂತೆ ಹರಿ ಮತ್ತು ಹರನು ಒಂದಾಗಿ ಅವನನ್ನು ಸಂಹಾರ ಮಾಡಿದರು. ಅಂದಿನಿಂದ ಈ ಕ್ಷೇತ್ರಕ್ಕೆ ಹರಿಹರ ಎಂದೇ ಹೆಸರು ಪಡೆದುಕೊಂಡಿತ್ತು.[೨೦]

ಹೀಗೆ ದಾವಣಗೆರೆ ಪ್ರದೇಶ ಪುರಾಣ ಕಾಲದಲ್ಲೂ ಮಹತ್ವ ಪಡೆದಿರುವುದು ಕಂಡುಬರುತ್ತದೆ. ಈ ಜಿಲ್ಲೆಯಲ್ಲಿ ದೊರೆತ ಮಡಕೆ ಚೂರುಗಳು ಆಯುಧಗಳು, ಮತ್ತಿತರ ಅವಶೇಷಗಳ ಸಹಾಯದಿಂದ ದಾವಣಗೆರೆ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ಸಂಸ್ಕೃತಿಯ ಜನರ ಅವಾಸ ಸ್ಥಾನವಾಗಿತ್ತು ಎಂಬುದರಲ್ಲಿ ಸಂಶಯವಿಲ್ಲ. ಪ್ರಾಗೈತಿಹಾಸಿಕ ಕಾಲದ ಮಾನವನ ಜೀವನಕ್ಕೆ ಸಹಕಾರಿಯಾದ ಇಲ್ಲಿನ ಭೌಗೋಳಿಕ ಅಂಶಗಳು ಮುಂದೆ ಹಲವಾರು ರಾಜರು, ಚಕ್ರವರ್ತಿಗಳು, ಪಾಳೆಯಗಾರರು, ಸಂಸ್ಥಾನಿಕರು ರಾಜ್ಯ ವಿಸ್ತರಿಸಿ ರಾಜರಿಗೂ ಸಹಕಾರಿಯಾದ ಅಂಶಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಐತಿಹಾಸಿಕ ಯುಗದಲ್ಲಿ ಇಲ್ಲಿನ ರಾಜರು ಸಾಮಂತರು, ಪಾಳೆಯಗಾರರು ಅಧಿಕಾರ ನಿರ್ವಹಿಸಿದರು. ಅಂದಿನ ಸವಾಲುಗಳನ್ನು ಎದುರಿಸಲು ತೆಗೆದುಕೊಂಡ ನಿರ್ಧಾರ, ಕೊಡುಗೆ, ಸುಧಾರಣೆ ಇತ್ಯಾದಿ ಅಂಶಗಳು ಅಧ್ಯಯನ ಮಾಡಲು ಸಹಕಾರಿಯಾಗಿದೆ.

**೨.೨.೨. ವಿಜಯನಗರ ಪೂರ್ವಕಾಲ**

ಪ್ರಾಗೈತಿಹಾಸಿಕ ಹಾಗೂ ಪುರಾಣ ಕಾಲದ ಪ್ರಸಿದ್ಧಿಯನ್ನು ಪಡೆದ ದಾವಣೆಗೆರೆ ಜಿಲ್ಲೆಗೆ ಅನೇಕ ರಾಜರು, ಸಾಮಂತರು, ಪಾಳೆಯಗಾರರು ಆಳ್ವಿಕೆ ಮಾಡಿರುವುದಕ್ಕೆ ಆ ಕಾಲದಲ್ಲಿ ಆದ ಸುಧಾರಣೆ, ಕೊಡುಗೆ, ಕಲೆ, ವಾಸ್ತುಶಿಲ್ಪ, ದೇವಾಲಯ, ಶಾಸನಗಳ ಮೂಲಕ ದಾವಣಗೆರೆ ಜಿಲ್ಲೆಯ ಚರಿತ್ರೆ ದೊರೆಯುತ್ತದೆ. ದಾವಣಗೆರೆ ಜಿಲ್ಲೆಯು ರಾಜರ ಕಾಲಾವಧಿಯಲ್ಲಿ ಯಾವುದೇ ರಾಜಧಾನಿಯಾಗಿರದಿದ್ದರೂ ಇಲ್ಲಿಯ ಸುತ್ತಮುತ್ತಲಿನ ಪ್ರಾದೇಶಿಕ ಇತಿಹಾಸದ ಚೌಕಟ್ಟಿನಲ್ಲಿಟ್ಟು ವಿಮರ್ಶಿಸಿದಾಗ ದಾವಣಗೆರೆಗೆ ಸೇರಿದ ಚಾರಿತ್ರಿಕ ಅಂಶಗಳನ್ನು ಗಮನಿಸಬಹುದು. ದಾವಣಗೆರೆ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೊರೆತ ಶಾಸನಗಳನ್ನು ಐತಿಹಾಸಿಕ ದಾಖಲೆಗಳನ್ನು ಗಮನಿಸಿದರೆ ದಾವಣಗೆರೆ ಸಹ ಪರೋಕ್ಷವಾಗಿ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದಿತ್ತೆಂದು ತಿಳಿದುಬರುತ್ತದೆ. ಇಲ್ಲಿನ ಇತಿಹಾಸವನ್ನು ಮೌರ್ಯ, ಶಾತವಾಹನ, ಕದಂಬ, ಗಂಗರು, ಪಲ್ಲವರು, ಉಚ್ಚಂಗಿ ಪಾಂಡ್ಯರು, ಚಾಲುಕ್ಯರು, ಹೊಯ್ಸಳ, ರಾಷ್ಟ್ರಕೂಟರು, ಕುಮ್ಮಟದುರ್ಗದ ನಾಯಕರು, ವಿಜಯನಗರ ಅರಸರು, ಪಾಳೆಯಗಾರರು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಕರ್ನಾಟಕವನ್ನು ಆಳಿದ ಎಲ್ಲಾ ಪ್ರಮುಖ ರಾಜವಂಶಗಳು ಈ ಜಿಲ್ಲೆಯಲ್ಲಿ ಆಡಳಿತ ನಡೆಸಿದ ವೀರಗಳು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಈವರೆಗೆ ೭೫೦ಕ್ಕೂ ಹೆಚ್ಚು ಶಾಸನಗಳನ್ನು ಗುರುತಿಸಲಾಗಿದ್ದು ಅವು ಜಿಲ್ಲೆಯ ೨೪೦ಕ್ಕೂ ಹೆಚ್ಚು ಗ್ರಾಮಗಳಲ್ಲಿ ದೊರೆತಿವೆ.

ದಾವಣಗೆರೆ ಪ್ರದೇಶವನ್ನು ಮೊದಲು ಆಳ್ವಿಕೆ ನಡೆಸಿದ ರಾಜವಂಶವೆಂದರೆ ಮೌರ್ಯರು. ಇವರು ಕ್ರಿ.ಪೂ. ೩ನೆಯ ಶತಮಾನದಲ್ಲಿ ಆಳ್ವಿಕೆ ನಡೆಸಿದ್ದರು ಎಂಬುದಕ್ಕೆ ದಾಖಲೆಗಳಿವೆ.

ದಾವಣಗೆರೆ ೩೬ ಕಿ.ಮೀ. ದೂರದಲ್ಲಿರುವ ಅಸಗೋಡು ಅಶೋಕನ ಒಂದು ಪಟ್ಟಣವಾಗಿದ್ದಿತ್ತೆಂದು, ಶಾಮನೂರು, ಲೋಕಿಕೆರೆ, ಬೇತೂರು ತೀರ್ಥಂಕರರ ವಿಗ್ರಹಗಳು ಮುಂತಾದವುಗಳನ್ನು ಅವಲೋಕಿಸಿದರೆ ದಾವಣಗೆರೆ ಮೌರ್ಯರ ಆಡಳಿತಕ್ಕೆ ಒಳಪಟ್ಟಿದ್ದಿತೆಂದು ತಿಳಿದುಬರುತ್ತದೆ. ದಾವಣಗೆರೆ ಪ್ರದೇಶದ ಸುತ್ತಮುತ್ತಲ ಜಿಲ್ಲೆಗಳಲ್ಲಿ ದೊರೆತಿರುವ ಶಾಸನಗಳನ್ನು ಆಧರಿಸಿ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿಯಬಹುದು. ಮೌರ್ಯರ ಮತ್ತು ಶಾತವಾಹನ ಯುಗ ಕೃತಿಯಲ್ಲಿ ಪ್ರೊ. ಲಕ್ಷ್ಮಣ್ ತೆಲಗಾವಿಯವರು ಕರ್ನಾಟಕದಲ್ಲಿ ಅಶೋಕನ ಶಾಸನಗಳ ಒಟ್ಟು ಸಂಖ್ಯೆ ೧೪ ಮತ್ತು ೧೭ ಎಂದು ಅಭಿಪ್ರಾಯ ಮಂಡಿಸುತ್ತಾರೆ. ಕರ್ನಾಟಕ, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳ ಕೆಲವು ಪ್ರದೇಶಗಳು ಮೌರ್ಯರ ನೇರ ಆಳ್ವಿಕೆಗೆ ಒಳಪಟ್ಟಿದ್ದವು ಎಂದು ತಿಳಿಸಿರುವರು.[೨೧] ಹೆಚ್.ವಿ.ಶ್ರೀನಿವಾಸ, ಆರ್.ರಾಮಕೃಷ್ಣನ್ ಅವರು ಸಮಗ್ರ ಕರ್ನಾಟಕ ಚರಿತ್ರೆಯಲ್ಲಿ ಕರ್ನಾಟಕದಲ್ಲಿ ದೊರೆತ ಅಶೋಕನ ಶಾಸನಗಳ ಒಟ್ಟು ಸಂಖ್ಯೆ ೧೬ ಎಂದು ತಿಳಿಸುತ್ತಾ ಶಾಸನಗಳು ದೊರೆತಿರುವುದು ಖಚಿತಪಡಿಸಿರುವರು.[೨೨] ಈ ವಿವರಗಳಿಂದ ದಾವಣಗೆರೆ ಪ್ರದೇಶ ಮೌರ್ಯರ ಆಳ್ವಿಕೆಗೆ ಒಳಪಟ್ಟಿತು ಎಂಬುದನ್ನು ಎಂ.ವಿ.ಶ್ರೀನಿವಾಸ, ಲಕ್ಷ್ಮಣ್ ತೆಲಗಾವಿಯವರು ಸಂಪಾದಿತ ಚಂದ್ರವಳ್ಳಿ ಕೃತಿಯಲ್ಲೂ ಎಂ.ವಿ.ಶ್ರೀನಿವಾಸ್ ಜಗಲೂರು ತಾಲ್ಲೂಕಿನ ಅಸಗೊಡು ಅಶೋಕ ಪಟ್ಟಣವಾಗಿತ್ತೆಂದು ಖಚಿತಪಡಿಸಿರುವರು.[೨೩] ಈ ಮೇಲಿನ ಎಲ್ಲಾ ಆಧಾರಗಳಿಂದ ದಾವಣಗೆರೆ ಪ್ರದೇಶದಲ್ಲಿ ಮೌರ್ಯರು ಆಡಳಿತ ನಡೆಸಿರುವುದನ್ನು ಖಚಿತಪಡಿಸಬಹುದು.

ಮೌರ್ಯರ ನಂತರ ಸಮಕಾಲೀನರಾಗಿ ಆಳ್ವಿಕೆ ನಡೆಸಿದವರು ಶಾತವಾಹನರು. ಶಾತವಾಹನರು ದಕ್ಷಿಣ ಭಾರತದಲ್ಲಿ ಸುಮಾರು ೪೫೦ ವರ್ಷಗಳು ಆಡಳಿತ ನಡೆಸಿರುವುದು ಕಂಡುಬರುತ್ತದೆ. ಇವರು ಮಹಾರಾಷ್ಟ್ರದ ಪೈಠಾಣ್ ಅಥವಾ ಪ್ರತಿಷ್ಠಾನಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಇಡಿ ದಕ್ಷಿಣ ಭಾರತವನ್ನು ಆಳ್ವಿಕೆ ಮಾಡಿದ್ದಾರೆ. ಶಾತವಾಹನರ ಪ್ರಮುಖ ಅರಸರೆಂದರೆ ಹಾಲ, ಗೌತಮಿಪುತ್ರ ಶಾತಕರ್ಣಿ, ಕುಂತಲ ಶಾತಕರ್ಣಿ ಪ್ರಮುಖರಾಗಿದ್ದಾರೆ. ಶಾತವಾಹನರು ದಕ್ಷಿಣ ಭಾರತದ ಒಡೆಯರಾದಾಗ ತಾವು ಕುಂತಳಸ್ವಾಮಿ ಎಂದು ಹೇಳಿಕೊಂಡಿದ್ದರಿಂದ ಭೀಮ ಮತ್ತು ವೇದಾವತಿ ನದಿಗಳ ಮಧ್ಯದ ಪ್ರದೇಶವೇ ಕುಂತಳ ಪ್ರದೇಶವಾಗಿತ್ತು. ದಾವಣಗೆರೆ ಮತ್ತು ಸುತ್ತಮುತ್ತಲಿನ ಪ್ರದೇಶವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿದ್ದಿತು. ಚಂದ್ರವಳ್ಳಿ, ಬ್ರಹ್ಮಗಿರಿ ಮೊದಲಾದಡೆಗಳಲ್ಲಿ ದೊರೆತಿರುವ ಆ ಕಾಲದ ನಾಣ್ಯಗಳು ಮತ್ತು ಇತರ ಅವಶೇಷಗಳು ಶಾತವಾಹನರು ಇಲ್ಲಿ ಆಳುತ್ತಿದ್ದರೆಂದು ದೃಢಪಡಿಸುತ್ತವೆ.

ದಾವಣಗೆರೆ ಶಾತವಾಹನರ ಆಡಳಿತದ ಒಂದು ಪ್ರದೇಶವಾಗಿತ್ತು. ಶಾಸನಗಳಲ್ಲಿ ಶಾತವಾಹನರನ್ನು ಕುಂತಳಸ್ವಾಮಿಗಳೆಂದು ಕರೆಯಲಾಗಿದೆ. ಇದಕ್ಕೆ ಪೂರಕವಾಗಿ ಅಣಜಿ ಗ್ರಾಮ[೨೪] ಜಗಲೂರು ತಾಲ್ಲೂಕಿನ ಆಕನೂರು ಗ್ರಾಮದಲ್ಲಿ ಸಿಕ್ಕ ಅವಶೇಷಗಳು ಮಾಹಿತಿ ದೊರಕುತ್ತದೆ.[೨೫] ಈ ಮೇಲಿನ ಆಧಾರಗಳಿಂದ ದಾವಣಗೆರೆ ಪ್ರದೇಶದಲ್ಲಿ ಶಾತವಾಹನ ಆಳ್ವಿಕೆ

ಇತ್ತೆಂಬುದು ಸ್ಪಷ್ಟವಾಗುತ್ತದೆ. ಆದರೆ ದಾವಣಗೆರೆ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆ ಇತ್ತು ಎಂಬುದರ ಬಗ್ಗೆ ನಿಖರವಾದ ಶಾಸನಗಳು ದೊರೆತಿಲ್ಲ. ಆದರೆ ಬಳ್ಳಾರಿ ಜಿಲ್ಲೆಯ ಪುಲಮಾಯಿ ಶಾಸನದಿಂದ ಶಾತವಾಹನರ ಕೊನೆಯ ಅರಸರು ತಮ್ಮ ಆಳ್ವಿಕೆಯನ್ನು ಇಲ್ಲಿಯವರೆಗೆ ವಿಸ್ತರಿಸಿದ್ದರೆಂದು ತಿಳಿಯುತ್ತದೆ.

ಚಿತ್ರದುರ್ಗ ತಾಲೂಕಿನ ಚಿಪ್ಪನಕೆರೆ ನೆಲೆಯಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಸೀಸದ ನಾಣ್ಯಗಳು, ಕಾರ್ತೀನಿಯನ್ ಅಗೇಟ್‌ದಿಂದ ತಯಾರಿಸಲಾದ ಮಣಿಗಳು ಮತ್ತು ಕೆಲವು ಬಿಳಿ ಬಣ್ಣದ ಮಡಕೆಗಳು ದೊರೆತಿವೆ. ಇದರಿಂದಾಗಿ ಚಿಪ್ಪನಕೆರೆ ಮತ್ತು ಅದರ ಸುತ್ತಲಿನ ಪ್ರದೇಶ ಶಾತವಾಹನರ ಕಾಲಕ್ಕೆ ಸೇರಿರಬಹುದೆಂದು ಊಹಿಸಿದ್ದಾರೆ.[೨೬] ಒಟ್ಟಿನಲ್ಲಿ ದಾವಣಗೆರೆ ಪ್ರದೇಶವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿದ್ದು, ಕ್ರಿ.ಶ.ಸು. ೨೦೦ರ ತರುವಾಯ ಚಂದ್ರವಳ್ಳಿಯನ್ನು ಅವರು ವಾಸಸ್ಥಾನ ಮಾಡಿಕೊಂಡಿರಬಹುದೆಂದು ಹೇಳಬಹುದು. ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತ ಪ್ರಮಾಣವನ್ನು ಗಮನಿಸಿದರೆ ಚಂದ್ರವಳ್ಳಿ ಅವರ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ತಿಳಿದುಬರುತ್ತದೆ.[೨೭] ಒಟ್ಟಾರೆ ಚಿತ್ರದುರ್ಗ ಪ್ರದೇಶ ಹಾಗೂ ದಾವಣಗೆರೆ ಪ್ರದೇಶದಲ್ಲಿ ದೊರೆತ ಪ್ರಾಕ್ತನ ಅವಶೇಷಗಳನ್ನು ಅಧಾರವಾಗಿಟ್ಟುಕೊಂಡು ನೋಡಿದರೆ ಹಿಂದೆ ದಾವಣಗೆರೆ ಪ್ರದೇಶದಲ್ಲಿ ಶಾತವಾಹನರ ಆಳ್ವಿಕೆ ವಿಸ್ತರಿಸಲ್ಪಟ್ಟಿತ್ತು ಎಂದು ಹೇಳಬಹುದು.

ಕರ್ನಾಟಕದ ಮೊದಲ ರಾಜವಂಶವೆಂದು ಖ್ಯಾತಿ ಪಡೆದ ಕದಂಬರು ಕ್ರಿ.ಶ. ೪ನೆಯ ಶತಮಾನದಿಂದ ೬ನೆಯ ಶತಮಾನದವರೆಗೆ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿ ಚರಿತ್ರೆಯಲ್ಲಿ ತಮ್ಮದೆ ಆದ ಸ್ಥಾನಮಾನವನ್ನು ಪಡೆದುಕೊಂಡಿದ್ದಾರೆ. ಇವರ ಆಳ್ವಿಕೆ ದಾವಣಗೆರೆ ಜಿಲ್ಲೆಯವರೆಗೆ ವಿಸ್ತರಿಸಿತ್ತು ಎಂಬುದಕ್ಕೆ ಇವರಿಗೆ ಸಂಬಂಧಿಸಿದ ಕೆಲವು ಶಾಸನಗಳು ದೊರೆತಿವೆ. ಹಾಗೆ ಇವುಗಳಿಗೆ ಪೂರಕವೆಂಬಂತೆ ಕದಂಬರಿಗೆ ಸಂಬಂಧಿಸಿದ ಕೆಲವು ಸ್ಮಾರಕಗಳು ಕಂಡುಬರುತ್ತವೆ. ಹಾಗಾಗಿ ದೊರೆತಿರುವ ಆಕರಗಳನ್ನು ಆಧರಿಸಿ ಇವರ ಚರಿತ್ರೆಯನ್ನು ವಿಶ್ಲೇಷಣೆ ಮಾಡುವುದು ಅಗತ್ಯವಿದೆ.

ದಾವಣಗೆರೆ ಹತ್ತಿರದ ಅಣಜಿ ಗ್ರಾಮದಲ್ಲಿ ದೊರೆತ ಶಿವಸ್ಕಂದವರ್ಮನಿಗೆ ಸಂಬಂಧಿಸಿದ ಶಾಸನ ಹಾಗೂ ಕಾಶೀಪುರದಲ್ಲಿ ರವಿವರ್ಮನಿಗೆ ಸಂಬಂಧಿಸಿದ ಶಾಸನಗಳು[೨೮] ಕದಂಬರ ಆಳ್ವಿಕೆ ದಾವಣಗೆರೆ ಪ್ರದೇಶಕ್ಕೆ ವಿಸ್ತರಿಸಿತ್ತು ಎಂದು ಹೇಳಬಹುದು. ಈ ವಿಷಯಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್, ಎನ್‌ಸೈಕ್ಲೋಪಿಡಿಕ್ ಡಿಸ್ಟ್ರಿಕ್ಟ್ ಗೆಜೆಟಿಯರ್ ಆಫ್ ಇಂಡಿಯಾದಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು.

ದಾವಣಗೆರೆ ಪ್ರದೇಶದಲ್ಲಿ ದೊರೆತ ಶಾಸನಗಳು ಹೆಚ್ಚು ಕದಂಬರ ಆಳ್ವಿಕೆಗೆ ಸಂಬಂಧಿಸಿವೆ. ಈ ಹಿನ್ನೆಲೆಯಲ್ಲಿ ಈ ಜಿಲ್ಲೆ ವಿಶಿಷ್ಟ ಸ್ಥಾನ ಪಡೆದುಕೊಂಡಿತ್ತೆಂದು ಹೇಳಬಹುದು. ಅಣಜಿಯಲ್ಲಿ ದೊರೆತ ಶಾಸನವು ಕದಂಬರ ಇತರೆ ಶಾಸನಗಳ ಬಗ್ಗೆ ಉಲ್ಲೇಖವಾಗಿವೆ.

ಈ ಶಾಸನವು ಐತಿಹಾಸಿಕವಾಗಿ ವಿಶಿಷ್ಟವಾದುದಾಗಿದೆ. ನೊಣಕ್ಕಸ ಪಲ್ಲವನಿಗೂ ಕದಂಬ ಕೃಷ್ಣವರ್ಮನಿಗೂ ಯುದ್ಧ ನಡೆದು ಆ ಯುದ್ಧದಲ್ಲಿ ಕೃಷ್ಣವರ್ಮನ ಸೈನ್ಯವು ಸಂಪೂರ್ಣವಾಗಿ ಸೋತು ಹೋದುದು ಈ ಶಾಸನದಿಂದ ವೇದ್ಯವಾಗುತ್ತದೆ. ಹಾಗೆ ಸೋಲುಂಟಾದಾಗ ಶಿವಸ್ಕಂದವರ್ಮನು ಭಗ್ನಹೃದಯನಾಗಿ ದರ್ಭಶಯನನಾಗಿ ಭೋಗ ವಿರಕ್ತ ಮಾನಸನಾಗಿ ಸ್ವರ್ಗ ಪ್ರಾಪ್ತನಾದ ವಿಷಯವನ್ನು ಶಾಸನವು ತಿಳಿಸುತ್ತದೆ.[೨೯] ಈ ಸೋಲಿನಿಂದ ಶಿವಸ್ಕಂಧವರ್ಮ ಮರಣ ಹೊಂದಿದನು. ಈ ಶಾಸನದ ಭಾಷೆ ಸಂಸ್ಕೃತದಲ್ಲಿದ್ದು ಸರಳವಾದ ಶೈಲಿಯನ್ನು ಹೊಂದಿದೆ. ಈ ಶಾಸನದ ಕೊನೆಯಲ್ಲಿ ಬರುವ ಮನುಷ್ಯನ ಯಶಸ್ಸು ಎಲ್ಲಿಯವರೆಗೆ ಲೋಕದಲ್ಲಿ ಪ್ರಚಲಿತದಲ್ಲಿರುವುದೊ ಅಲ್ಲಿಯವರೆಗೆ ಅವನು ಸ್ವರ್ಗ ಸುಖವನ್ನು ಅನುಭವಿಸುತ್ತಾನೆ ಎಂಬ ವಾಕ್ಯವಿದೆ. ರಾಜಕೀಯ ಚರಿತ್ರೆ ಜೊತೆಗೆ ಸಾಮಾಜಿಕ ಧಾರ್ಮಿಕ ನಡವಳಿಕೆಗಳು ಹೇಗಿದ್ದವು ಎಂಬುದಕ್ಕೆ ಈ ಶಾಸನ ಕೈಗನ್ನಡಿ ಎನ್ನಬಹುದು. ಅಣಜಿಯಲ್ಲಿನ ಕೋಟೆ ಮತ್ತು ಇತರೆ ಅವಶೇಷಗಳು ಇವರ ಕಾಲಕ್ಕೆ ಸೇರಿವೆ.[೩೦] ಚಂದ್ರವಳ್ಳಿ ಕೃತಿಯಲ್ಲಿ ಪ್ರಸ್ತಾಪಿಸಿರುವ ಹಾಗೆ ದಾವಣಗೆರೆ ತಾಲ್ಲೂಕು ಕಾಶಿಪುರದಲ್ಲಿ ಮೂರು ಹಲಗೆಯುಳ್ಳ, ಸಿಂಹಲಾಂಛನವುಳ್ಳ ರವಿಮಹಾರಾಜನ ತಾಮ್ರಶಾಸನ ದೊರೆತಿರುವುದನ್ನು ತಿಳಿಸಿದೆ. ಇದು ಐತಿಹಾಸಿಕವಾಗಿ ಕದಂಬರಿಗೆ ಸಂಬಂಧಿಸಿದ ಪ್ರಮುಖ ಸಂಗತಿಯಾಗಿದೆ. ಈಗಿನ ದಾವಣಗೆರೆ ಜಿಲ್ಲೆಗೆ ಸೇರಿದ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿದುರ್ಗವು ಕದಂಬರ ರಾಜ್ಯದ ಪೂರ್ವ ರಾಜಧಾನಿಯಾಗಿತ್ತು ಎಂದು ಕರ್ನಾಟಕ(ಚಿತ್ರದುರ್ಗ) ಗೆಜೆಟಿಯರ್‌ನಲ್ಲಿ ಉಲ್ಲೇಖಿಸಲಾಗಿದೆ.

ಉಚ್ಚಂಗಿದುರ್ಗ ಹರಪನಹಳ್ಳಿಯಿಂದ ದಕ್ಷಿಣಕ್ಕೆ ೨೮ ಕಿ.ಮೀ. ದೂರದಲ್ಲಿದೆ. ಇದು ಒಂದು ಅಭೇದ್ಯ ಪರ್ವತ ಕೋಟೆಯಾಗಿದ್ದು, ಇದೇ ಕದಂಬರ ರಾಜಧಾನಿಯಾಗಿರಬೇಕೆಂದು ಅಣಜಿಯ ಆಶ್ರಿತರಾದ ಕದಂಬರು ಅಣಜಿಯ ನಿವಾಸವಾದ ಹರಪನಹಳ್ಳಿ ತಾಲ್ಲೂಕು ಉಚ್ಚಂಗಿದುರ್ಗದವರು ಎಂದೂ ಗಿರಿನಾಥ ಎಂಬ ಬಿರುದು ಅವರಿಗೆ ಸಲ್ಲತಕ್ಕದೆಂದೂ ಕುಂ.ಬಾ.ಸದಾಶಿವಪ್ಪ ಅವರು ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಈ ಸಂಗತಿಯಿಂದ ಉಚ್ಚಂಗಿದುರ್ಗವು(ಉಚ್ಚಶೃಂಗ) ಕದಂಬರ ಉಪರಾಜಧಾನಿಯಾಗಿರಬೇಕು. ರಾಜಧಾನಿಯಾಗಿರಲು ಆದರೆ ಇದು ಸಾಧ್ಯವಿಲ್ಲ ಎಂದು ಚಂದ್ರವಳ್ಳಿ, ಹೊಸಪೇಟೆ ತಾಲ್ಲೂಕು ದರ್ಶನ, ದಾವಣಗೆರೆ ಜಿಲ್ಲೆಯ ದೇವಾಲಯಗಳು ಎಂಬ ಪಿಎಚ್.ಡಿ. ಮಹಾಪ್ರಬಂಧ, ತರಳಬಾಳು ಹುಣ್ಣಿಮೆ ಸ್ಮರಣ ಸಂಚಿಕೆ, ವಿರೂಪಾಕ್ಷಿ ಪೂಜಾರಹಳ್ಳಿ ಅವರ ಚಿನ್ನಹಗರಿಸಿರಿ, ಕೃತಿಯಲ್ಲಿ ಉಲ್ಲೇಖಿಸಿದ ವಿವರಗಳಂತೆ ದಾವಣಗೆರೆ ಪ್ರದೇಶ ಕದಂಬರ ನೇರ ಆಳ್ವಿಕೆ ಒಳಪಟ್ಟಿತ್ತು.

ಹರಪನಹಳ್ಳಿಯ ತೌಡೂರಿನಲ್ಲಿ ಕದಂಬರ ಶಾಸನ ಇರುವುದನ್ನು ದಿ ಎನ್ ಸೈಕ್ಲೋಪಿಡಿಯಾ ಡಿಸ್ಟ್ರಿಕ್ಟ್ ಗೆಜೆಟಿಯರ್ ಆಫ್ ಇಂಡಿಯಾದಲ್ಲಿ ಉಲ್ಲೇಖಿಸಲಾಗಿದೆ.[೩೧] ಒಟ್ಟಾರೆ ದಾವಣಗೆರೆ ಪ್ರದೇಶದಲ್ಲಿ ಕದಂಬರ ಆಡಳಿತ ನೇರವಾಗಿ ಆಳ್ವಿಕೆ ನಡೆಸಿರುವುದು

ಗಮನಾರ್ಹವಾಗಿದೆ. ನಂತರ ಬಾದಾಮಿ ಚಾಲುಕ್ಯರು ಕದಂಬರ ಆಳ್ವಿಕೆಯನ್ನು ಕೊನೆಗೊಳಿಸಿ ಕರ್ನಾಟಕದಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಂಡು ಆಳ್ವಿಕೆ ನಡೆಸಿದರು.

ಬಾದಾಮಿ ಚಾಲುಕ್ಯರು, ಕರ್ನಾಟಕದಲ್ಲಿ ಕ್ರಿ.ಶ. ೫೪೩ರಿಂದ ಕ್ರಿ.ಶ. ೭೫೩ರವರೆಗೆ ಆಡಳಿತ ನಡೆಸಿದ್ದಾರೆ. ಚಾಲುಕ್ಯರು ಕ್ರಿ.ಶ. ೧೦ನೇ ಶತಮಾನದಿಂದ ಕ್ರಿ.ಶ. ೧೨ನೇ ಶತಮಾನದವರೆಗೂ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಕದಂಬರ ಸಾಮಂತರಾಗಿದ್ದ ಇವರು ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸ್ವತಂತ್ರ ಅರಸರಾಗಿ ಆಳಿದರು. ದಾವಣಗೆರೆ ಪ್ರದೇಶ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಶಾಸನೋಕ್ತ ದಾಖಲೆಗಳಿವೆ.

ಬಾದಾಮಿ ಚಾಲುಕ್ಯರ ಕಾಲದಲ್ಲಿ ದಾವಣಗೆರೆ ಪ್ರದೇಶ ಅವರ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವುದರ ಬಗ್ಗೆ ಹರಿಹರದಲ್ಲಿ ಮತ್ತು ಚನ್ನಗಿರಿಯಲ್ಲಿ ದೊರೆತ ಶಾಸನ ಆಧಾರವಾಗಿದೆ ಎಂಬುದನ್ನು ಹೆಚ್.ತಿಪ್ಪೇಸ್ವಾಮಿಯವರು ಉಲ್ಲೇಖಿಸಿರುವರು.[೩೨] ವಿರೂಪಾಕ್ಷಿ ಪೂಜಾರಹಳ್ಳಿ ಅವರು ದಾವಣಗೆರೆ ತಾಲ್ಲೂಕಿನ ಅಣಜಿ ಗ್ರಾಮ ಕದಂಬರು, ಗಂಗರು ನಂತರ ಬಾದಾಮಿ ಚಾಲುಕ್ಯರಿಗೆ ಸೇರಿತ್ತು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು.[೩೩] ಇವರು ಈ ಪ್ರದೇಶವನ್ನು ಯುದ್ಧಭೂಮಿ, ರಣರಂಗ ಎಂದು ಕರೆದಿರುವ ಕಾರಣ ಇದು ಅನೇಕ ರಾಜಮನೆತನಗಳ ಯುದ್ಧ ನಡೆದ ಸ್ಥಳವಾಗಿದೆ.

ಒಂದನೇ ವಿಕ್ರಮಾದಿತ್ಯನ ನಂತರ ವಿನಯಾದಿತ್ಯ ಅಧಿಕಾರಕ್ಕೆ ಬಂದನು. ಇವನ ಕಾಲಕ್ಕೆ ಸೇರಿದ ಶಾಸನವೊಂದು ಹರಿಹರದಲ್ಲಿ ದೊರೆತಿದೆ.[೩೪] ಈ ಶಾಸನವು ಇವರ ವಂಶದ ಮೂಲವನ್ನು ಮುಂದಿನಂತೆ ವಿವರಿಸುತ್ತದೆ. ಚಾಲುಕ್ಯರು ಮಾನವ್ಯ ಗೊತ್ರದವರು, ಹಾರತಿ ಪುತ್ರರು ಏಳು ಲೋಕಗಳಿಗೂ ತಾಯಂದಿರಾದ ಸಪ್ತಮಾತೃಕೆಯರಿಂದ ಏಳಿಗೆಯನ್ನು ಪಡೆದವರು. ಕಾರ್ತಿಕೇಯನಿಂದ ಕಲ್ಯಾಣ ಪರಂಪರೆಯುಳ್ಳವರು, ಭಗವಂತನಾದ ನಾರಾಯಣನ ಅನುಗ್ರಹದಿಂದ ಪಡೆದ ವರಹಾ ಲಾಂಛನವನ್ನು ಶತ್ರುಗಳು ಕಂಡ ಕ್ಷಣವೇ ಸೋತ ಕಾರಣದಿಂದ ಸಮಸ್ತ ಭೂಮಂಡಲವನ್ನೇ ಗೆದ್ದವರು. ಇಂತಹ ಚಾಲುಕ್ಯ ಕುಲದಲ್ಲಿ ಒಂದನೇ ಪುಲಿಕೇಶಿ ನಂತರ ವಿಕ್ರಮಾದಿತ್ಯ, ಇವನ ನಂತರ ವಿನಯಾದಿತ್ಯ ಅಧಿಕಾರಕ್ಕೆ ಬಂದರು. ಈತನು ಅನೇಕ ಬಿರುದುಗಳಿಂದ ರಾಜ್ಯವಾಳುತ್ತಿರುವಾಗ ಶಕ ವರ್ಷ ೬೧೬ರಲ್ಲಿ(ಕ್ರಿ.ಶ. ೬೯೪) ಹರಿಹರದ ಸಮೀಪ ಕರಂಜ ಪತ್ರ ಗ್ರಾಮದಲ್ಲಿ ಸೈನ್ಯ ಬೀಡುಬಿಟ್ಟಿರಲು ಅಲ್ಲಿನ ಸಾಮಂತ ಅಳುಪ ದೊರೆಯ ವಿಜ್ಞಾಪನೆಯಂತೆ ಕಾರ್ತಿಕ ಮಾಸದ ಹುಣ್ಣಿಮೆಯಂದು ವಾತ್ಸಗೋತ್ರದ ಸೋಮಯಾಜಿ ಶ್ರೀವರ್ಮನ ಮೊಮ್ಮಗ ಮಾರಶರ್ಮನ ಪುತ್ರ ವೇದವೇದಾಂತ ಪಾರಂಗತನಾದ ಈ ಶಾನಶರ್ಮನಿಗೆ ಬನವಾಸಿ ಪ್ರಾಂತ್ಯದ ಎಡೆ ವೊರಿಲ್ ಭಾಗದ ಕಿರುಗಾಮಸಿ ಎಂಬ ಗ್ರಾಮವನ್ನು ಎಲ್ಲಾ ಭಾಧೆಗಳಿಂದ ಪರಿಹಾರ ಮಾಡಿ ಹರಿಹರ ದೇವಾಲಯಕ್ಕೆ ದಾನ ನೀಡಲಾಯಿತು. ಸಿರಿಗಾಳು, ಕವ್ವೆಸುರಿಗೊಳ. ಪುಲಿವುತು, ಪೆರ್ಬತ್ತು, ಅಲ್ಗೋರೆ, ನಿತ್ತಕೊಳ, ಅಲ್ಗೊಳ, ನೆರೆಲ್ಗೆರೆ, ಕುರುಪಕೆರೆ,

ಅರಕಟ್ಟ ಇವು ದಾನ ನೀಡಿದ ಗ್ರಾಮದ ಮೇರೆಗಳಾಗಿವೆ. ಇದೇ ಶಾಸನದಲ್ಲಿ ಚಾಲುಕ್ಯ ರಾಜರ ಪರಾಕ್ರಮವನ್ನು ಉಲ್ಲೇಖಿಸಲಾಗಿದೆ.

ವಿನಯಾದಿತ್ಯನ ನಂತರ ವಿಜಯಾದಿತ್ಯನು ಅಧಿಕಾರಕ್ಕೆ ಬಂದನು. ಇವನು ದಕ್ಷಿಣದ ಮೇಲೆ ವಿಜಯ ಸಾಧಿಸಿದ ನೆನಪಾಗಿ ಜೇ(ವೆ)ಂಗಿ ಮಂಡಲೇಶ್ವರನೆಂಬ ಬಿರುದನ್ನು ಧರಿಸಿದ್ದನೆಂಬುದು ಚನ್ನಗಿರಿ ಶಾಸನದಿಂದ ತಿಳಿದುಬರುತ್ತದೆ.[೩೫] ಇವನ ನಂತರ ೨ನೇ ವಿಕ್ರಮಾದಿತ್ಯ ಅಧಿಕಾರಕ್ಕೆ ಬಂದನು. ನಂತರ ೨ನೇ ಕೀರ್ತಿವರ್ಮ ಅಧಿಕಾರಕ್ಕೆ ಬಂದನು. ಇವನ ಆಳ್ವಿಕೆಯ ಸಂದರ್ಭದಲ್ಲಿ ಬಾದಾಮಿಯ ಚಾಲುಕ್ಯರ ಸಾಮ್ರಾಜ್ಯ ಅವನತಿಯ ಹಾದಿ ಹಿಡಿದಿತ್ತು. ಅನೇಕ ಸಾಮಂತರು ಸ್ವತಂತ್ರಗೊಂಡರು. ರಾಷ್ಟ್ರಕೂಟರ ದೊರೆ ದಂತಿದುರ್ಗ ಕೀರ್ತಿವರ್ಮನನ್ನು ಸೋಲಿಸಿ ತಮ್ಮ ಅಧಿಕಾರವನ್ನು ಸ್ಥಾಪಿಸಿದನು. ಈ ಮೇಲಿನ ಶಾಸನಗಳ ಆಧಾರದಿಂದ ಬಾದಾಮಿಯ ಚಾಲುಕ್ಯರ ಸಾಮ್ರಾಜ್ಯ ದಾವಣಗೆರೆ ಜಿಲ್ಲೆಯವರೆಗೆ ವಿಸ್ತರಿಸಿದ್ದಿತು ಎಂಬುದನ್ನು ತಿಳಿದುಕೊಳ್ಳಬಹುದು.

ಕರ್ನಾಟಕವನ್ನು ಆಳಿದ ರಾಜ ವಂಶಗಳಲ್ಲಿ ರಾಷ್ಟ್ರಕೂಟರು ಪ್ರಮುಖರು. ಅವರ ಆಳ್ವಿಕೆಗೆ ಸೇರಿದಷ್ಟು ಪ್ರಾಂತ್ಯವನ್ನು ಅವರ ಹಿಂದೆ ಅಥವಾ ಅವರ ನಂತರ ಕರ್ನಾಟಕದ ಮತ್ಯಾವ ರಾಜವಂಶವೂ ಆಳಲಿಲ್ಲ. ಮಳಖೇಡ(ಮಾನ್ಯಖೇಟ)ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೮ರಿಂದ ೧೦ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ್ದಾರೆ. ಈ ಸಾಮ್ರಾಜ್ಯದಲ್ಲಿ ಪ್ರಮುಖ ಅರಸರೆಂದರೆ ಧ್ರುವ, ಮೂರನೇ ಗೋವಿಂದ, ಅಮೋಘವರ್ಷ ನೃಪತುಂಗ, ಮತ್ತು ೩ನೇ ಇಂದ್ರ ಪ್ರಮುಖರು. ರಾಷ್ಟ್ರಕೂಟರ ಅರಸರಾದ ಗೋವಿಂದನು ನೊಳಂಬವಾಡಿ ೩೨೦೦೦ವನ್ನು ಜಯಿಸುವುದರೊಂದಿಗೆ ಚಿತ್ರದುರ್ಗ ಪ್ರದೇಶದಲ್ಲಿ ಆಡಳಿತವನ್ನು ಸ್ಥಾಪಿಸಿದರೆಂದು ಸೀತಾರಾಮ ಜಾಗೀರ್‌ದಾರರು ಚಂದ್ರವಳ್ಳಿ ಕೃತಿಯಲ್ಲಿ ಉಲ್ಲೇಖಿಸಿರುವರು.[೩೬] ದಾವಣಗೆರೆ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಶಾಸನಗಳು ಬಹುಸಂಖ್ಯೆಯಲ್ಲಿ ದೊರೆಯದಿದ್ದರೂ ಈ ಭಾಗದಲ್ಲಿ ಇವರ ಆಳ್ವಿಕೆ ಸುಮಾರು ಕ್ರಿ.ಶ. ೭೯೮ರಿಂದ ೯೮೨ರವರೆಗೆ ಇದ್ದಿತೆಂದು ಈ ಜಿಲ್ಲೆಯಲ್ಲಿ ದೊರೆತ ಕೆಲವು ಶಾಸನಗಳು ದೃಢಪಡಿಸುತ್ತವೆ. ಇದಕ್ಕೆ ಪೂರಕವಾಗಿ ೩ನೇ ಕೃಷ್ಣನ ಕಾಲದ ಶಾಸನವೊಂದು ಹರಪನಹಳ್ಳಿ ತಾಲ್ಲೂಕಿನ ಬಾಗಳಿ ಕಲ್ಲೇಶ್ವರ ದೇವಾಲಯದಲ್ಲಿ ದೊರೆತಿರುವುದನ್ನು, ಹೊನ್ನಾಳಿ ಶಾಸನ, ಹರಪನಹಳ್ಳಿ ಚಿರಸ್ತಹಳ್ಳಿ ಗ್ರಾಮದ ಶಾಸನ, ಖ್ಯಾಸಾಪುರ ಶಾಸನ, ಬೇವಿನಹಳ್ಳಿ ಶಾಸನವನ್ನು ಆಧರಿಸಿ ದಾವಣಗೆರೆ ಪ್ರದೇಶ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಹಾಗೆಯೇ ದಾವಣಗೆರೆ ತಾಲ್ಲೂಕಿನ ಕಾಡಜ್ಜಿಯಲ್ಲಿ ದೊರೆತ ಶಾಸನ ರಾಷ್ಟ್ರಕೂಟರ ಆಡಳಿತಕ್ಕೆ ಸೇರಿತ್ತು ಎಂದು[೩೭] ಇದೇ ಶಾಸನವನ್ನು ಟಿ.ಗಿರಿಜಾ ಅವರು ಸಹ 'ದಾವಣಗೆರೆ ಇದು ನಮ್ಮ ಜಿಲ್ಲೆ' ಕೃತಿಯಲ್ಲಿ ಉಲ್ಲೇಖ ಮಾಡಿರುವರು. ನಂತರ ಇವರು ಕರ್ಪೂರ ಎಂಬ ಸ್ಮರಣ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ಜಗಲೂರು ತಾಲ್ಲೂಕಿನ ಬಿಳಿಚೋಡು ಹೋಬಳಿಯ ಬಸವನಕೋಟೆಯಲ್ಲಿ ದೊರೆತ ಶಾಸನ ರಾಷ್ಟ್ರಕೂಟರ ಕಾಲಕ್ಕೆ ಸೇರಿದ್ದೆಂದು

ತಿಳಿದುಬರುತ್ತದೆ..[೩೮] ಈ ಮೇಲಿನ ಶಾಸನಗಳನ್ನು ಆಧರಿಸಿ ರಾಷ್ಟ್ರಕೂಟರು ದಾವಣಗೆರೆ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ರಾಷ್ಟ್ರಕೂಟರ ಹಲವು ಶಾಸನಗಳಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ದಾನದತ್ತಿಗಳನ್ನು ನೀಡಿರುವಂತಹ ದಾಖಲೆಗಳು ಕಂಡುಬರುತ್ತವೆ. ರಾಷ್ಟ್ರಕೂಟರ ನಂತರ ಕಲ್ಯಾಣ ಚಾಲುಕ್ಯರು ಹಾಗೂ ಅವರ ಮಾಂಡಲೀಕರಾದ ಬೆಳಗುತ್ತಿಯ ಸಿಂಧರು, ನೊಳಂಬರು, ಉಚ್ಚಂಗಿ ಪಾಂಡ್ಯರು ದಾವಣಗೆರೆ ಜಿಲ್ಲೆಯಲ್ಲಿ ಆಡಳಿತ ನಡೆಸಿದರು.

ಕಲ್ಯಾಣದ ಚಾಲುಕ್ಯರು ಕ್ರಿ.ಶ. ೯೭೩ರಿಂದ ಕ್ರಿ.ಶ. ೧೨೦೦ರ ವರೆಗೆ ಕರ್ನಾಟಕವನ್ನು ಆಳ್ವಿಕೆ ಮಾಡಿದ್ದಾರೆ.[೩೯] ಬೀದರ್ ಜಿಲ್ಲೆಯ ಬಸವಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದರು. ರಾಷ್ಟ್ರಕೂಟರ ದೊರೆ ೩ನೇ ಕರ್ಕನನ್ನು ಇಮ್ಮಡಿ ತೈಲಪ ಸೋಲಿಸುವುದರ ಮೂಲಕ ಚಾಲುಕ್ಯ ವಂಶವನ್ನು ಸ್ಥಾಪಿಸಿದರು. ೩ನೇ ತೈಲಪನ ಶಾಸನವು ಹರಪನಹಳ್ಳಿ ತಾಲ್ಲೂಕಿನ ಬಾಗಳಿಯ ದೇವಾಲಯದಲ್ಲಿ ದೊರೆಯುತ್ತದೆ. ೫ನೇ ವಿಕ್ರಮಾದಿತ್ಯ ಅರಸನು ಕ್ರಿ.ಶ. ೧೦೦೮ರಿಂದ ೧೦೧೫ರವರೆಗೆ ನೊಳಂಬವಾಡಿ ೩೨೦೦೦ವನ್ನು ಕೋಗಳಿ ೫೦೦, ಬಲಕುಂದಿ ೩೦೦ ಕುರುಗೋಡು ಮುಖ್ಯಪಟ್ಟಣ ಮತ್ತು ಇತರ ಪ್ರದೇಶಗಳನ್ನು ಯಿರವ ನೊಳಂಬಾಧಿರಾಜನೆಂಬ ಸಾಮಂತ ಅರಸನಿಂದ ಆಳುತ್ತಿದ್ದನು ಎಂದು ಬಾಗಳಿಯ ೩ ಶಾಸನಗಳಿಂದ ತಿಳಿದುಬರುತ್ತದೆ. ಜಯಸಿಂಹನ ಮಗ ಮೊದಲನೇ ಸೋಮೇಶ್ವರ(ಕ್ರಿ.ಶ. ೧೦೪೨-೧೦೬೮) ತೈಲಪನ ತರುವಾಯ ಕಾಣಬರುವ ಶಕ್ತದೊರೆ. ಇವನನ್ನು ತ್ರೈಲೋಕ್ಯಮಲ್ಲ ಅಹಮಲ್ಲನೆಂಬುದಾಗಿ ಕರೆಯುತ್ತಾರೆ. ಈ ದೊರೆಯ ಶಾಸನಗಳು ಅಲ್ಲಲ್ಲಿ ಕಂಡುಬರುತ್ತದೆ. ಇವನ ಕಾಲದಲ್ಲಿ ಚೋಳ, ಚಾಲುಕ್ಯರ ನಡುವೆ ಸತತವಾಗಿ ಸಂಘರ್ಷಗಳಾದವು. ತ್ರೈಲೋಕ್ಯಮಲ್ಲನ ರಾಣಿ ಹೊಯ್ಸಳ ದೇವಿ ತುಂಗಭದ್ರಾ ತೀರದ ಹೊನ್ನಳ್ಳಿಯ ಗೌಡನಿಗೆ ತೀರ್ಥಕ್ಷೇತ್ರ ಏರ್ಪಡಿಸುವಂತೆ ಸೂಚಿಸಿ ದಾನ ನೀಡುತ್ತಾಳೆ.[೪೦] ತ್ರೈಲೋಕ್ಯಮಲ್ಲ ಸೋಮೇಶ್ವರನು ಚೋಳರ ಮೇಲೆ ಯುದ್ಧ ಮಾಡಿ ಜಯ ಗಳಿಸಿದನು. ಕ್ರಿ.ಶ. ೧೦೬೮ರ ಮತ್ತೊಂದು ಯುದ್ಧದಲ್ಲಿ ಪರಾಜಿತನಾಗುತ್ತಾನೆ. ಇದೇ ಸಂದರ್ಭದಲ್ಲಿ ಸ್ವಪ್ರೇರಣೆಯಿಂದ ಜಲಸಮಾಧಿ ಹೊಂದುತ್ತಾನೆ.[೪೧] ಅವರ ಸ್ಮರಣಾರ್ಥವಾಗಿ ಕುರುವತ್ತಿಯಲ್ಲಿ ಶಿವ ದೇವಾಲಯವೊಂದು ನಿರ್ಮಾಣವಾಗಿದ್ದು ಮಲ್ಲಿಕಾರ್ಜುನ ಮತ್ತು ಬಸವಣ್ಣ ಎಂಬ ಹೆಸರಿನಿಂದ ಈ ದೇವಾಲಯವನ್ನು ಕರೆಯಲಾಗುತ್ತದೆ. ೧ನೇ ಸೋಮೇಶ್ವರನು ಕ್ರಿ.ಶ. ೧೦೪೨ರಲ್ಲಿ ದಾವಣಗೆರೆ ಜಿಲ್ಲೆಯ ಹದಡಿ ಗ್ರಾಮದ ಶಾಸನದಲ್ಲಿ[೪೨] ಇವನು ಕದಂಬಳಿಗೆ ಆಳುತ್ತಿದ್ದನೆಂದು ವಿವರಿಸಲಾಗಿದೆ. ಹೊನ್ನಾಳಿ, ನ್ಯಾಮತಿ, ಕುರುಬನಗಡ್ಡೆ, ಜೋಗ, ಕುರುವ ಮುಂತಾದ ಗ್ರಾಮಗಳಲ್ಲಿ ದೊರೆತ ದಾನಶಾಸನ, ಧರ್ಮ ಶಾಸನಗಳ ಆಧಾರದಿಂದ ತ್ರೈಲೋಕ್ಯಮಲ್ಲ ಸೋಮೇಶ್ವರನು ಈ ಮೇಲಿನ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಅಲ್ಲಿನ ಹಲವಾರು ದೇವಾಲಯಗಳಿಗೆ ಜೀರ್ಣೋದ್ಧಾರ ಮಾಡಿಸಿ ಅವುಗಳಿಗೆ ದಾನಧರ್ಮ ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಇವನ ಈ ನಂತರ ವಂಶದಲ್ಲಿಯೇ ಪ್ರಸಿದ್ಧನಾದ ಆರನೇ ವಿಕ್ರಮಾದಿತ್ಯನು ಆಳ್ವಿಕೆಗೆ ಬಂದನು. ೫೦

ವರ್ಷಗಳ ಕಾಲ ಆಳ್ವಿಕೆ ನಡೆಸಿದ ಇವನು ಚೋಳರ ಮೇಲಿನ ಅನೇಕ ಯುದ್ಧಗಳಲ್ಲಿ ಉಚ್ಚಂಗಿ ಪಾಂಡ್ಯರು ಇವನಿಗೆ ಸಹಾಯ ಮಾಡಿರುವುದು ಕಂಡುಬರುತ್ತದೆ. ಇವನ ಆಳ್ವಿಕೆಯ ಕಾಲದಲ್ಲಿ ಹಲವಾರು ಶಾಸನಗಳು ಸಿಕ್ಕಿದ್ದು ಅವುಗಳಲ್ಲಿ ಬಹುತೇಕ ದಾನಶಾಸನಗಳಾಗಿವೆ.

ಪಾಂಡ್ಯರ ದೊರೆ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿಯ ಮಹಾಮಂಡಲೇಶ್ವರನಾಗಿದ್ದು, ದಾವಣಗೆರೆ ಹತ್ತಿರದಲ್ಲಿರುವ ಎಲೆಬೇತೂರು ಇವನ ಆಡಳಿತ ಕೇಂದ್ರ ಸ್ಥಾನವಾಗಿತ್ತೆಂದು ಶಿವಮೊಗ್ಗ ಜಿಲ್ಲೆಯ ಶಾಸನವೊಂದರಿಂದ ತಿಳಿದುಬರುತ್ತದೆ.[೪೩] ಕುತೂಹಲವೆಂದರೆ ಎಲೆಬೇತೂರಿನಲ್ಲಿ ಅವರ ಕಾಲದಲ್ಲಿ ನಿರ್ಮಾಣವಾದ ದೇವಾಲಯವಿದೆ. ಇದು ಚಾಲುಕ್ಯ ಪಾಂಡ್ಯ ವಾಸ್ತುಶಿಲ್ಪಕಲೆಗೆ ದಾಖಲೆಯನ್ನು ಕೊಡುತ್ತದೆ.

೬ನೇ ವಿಕ್ರಮಾದಿತ್ಯನ ನಂತರ ಇವನ ಮಗ ೩ನೇ ಸೋಮೇಶ್ವರ ಆಳ್ವಿಕೆ ನಡೆಸಿದನು. ಇವನ ಕಾಲದಲ್ಲಿ ಒಂದು ಶಾಸನ ದೊರೆತಿದ್ದು, ಈ ಶಾಸನ ವೀರಪಾಂಡ್ಯನ ಶೌರ್ಯವನ್ನು ವರ್ಣಿಸುತ್ತದೆ. ಇವರ ಕಾಲದಲ್ಲಿ ಪಾಂಡ್ಯರು ಇವರಿಗೆ ಮಾಂಡಲಿಕರಾಗಿ ಅಧಿಕಾರ ನಡೆಸುತ್ತಿದ್ದರು ಎಂಬಂತೆ ತೋರುತ್ತದೆ.

ಹರಪನಹಳ್ಳಿ ತಾಲ್ಲೂಕಿನ ಚಟ್ನಹಳ್ಳಿಯಲ್ಲಿ ಒಂದು ಶಾಸನ ದೊರೆತಿದ್ದು ಚಾಲುಕ್ಯ ಚಕ್ರವರ್ತಿಯ ಜಗದೇಕಮಲ್ಲ ಹಾಕಿಸಿದ ಶಾಸನವಾಗಿದೆ.[೪೪] ಜಗದೇಕಮಲ್ಲ ವೀರಪಾಂಡ್ಯನು ನೊಳಂಬವಾಡಿಯ ೩೨೦೦೦ವನ್ನು ಆಳುತ್ತಿದ್ದಾಗ, ಇವನ ದಂಡನಾಯಕ ಉಚ್ಚಂಗಿಯನ್ನು ಆಳುತ್ತಿದ್ದು ಮಾಕೆರೆಯಲ್ಲಿ ದೇವಾಲಯವನ್ನು ನಿರ್ಮಿಸಿ ಭೂದಾನವನ್ನು ನೀಡುತ್ತಾನೆ.

ಹರಪನಹಳ್ಳಿ ತಾಲ್ಲೂಕಿನ ಮಾಡಲಗೇರಿಯ ೩ನೇ ಜಗದೇಕಮಲ್ಲನ ಶಾಸನದಲ್ಲಿ[೪೫] ಆ ಗ್ರಾಮದ ರನ್ನಗೌಡ ತನ್ನ ಬಂಧುವರ್ಗದಿಂದ ಭೂಮಿಯನ್ನು ಪಡೆದುಕೊಂಡು ಈಶ್ವರ ದೇವರಿಗೆ ದಾನವನ್ನು ಬಿಟ್ಟ ಬಗ್ಗೆ ಹಾಗೂ ಗ್ರಾಮಸ್ಥರು ಎಲ್ಲೇರಿದೇವೇಶ್ವರ ದೇವರನ್ನು ಪ್ರತಿಷ್ಠಾಪನೆ ಮಾಡಿ ಭೂದತ್ತಿಯನ್ನು ಮಾಡುತ್ತಾರೆ. ಈ ಅವಧಿಯಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಉಚ್ಚಂಗಿ ಪಾಂಡ್ಯರು ಆಳ್ವಿಕೆ ನಡೆಸುತ್ತಾರೆ.

ಕಲ್ಯಾಣ ಚಾಲುಕ್ಯರು ಕರ್ನಾಟಕದುದ್ದಕ್ಕೂ ಆಳ್ವಿಕೆ ನಡೆಸಿ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಲ್ಲದೆ ಆ ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿರುವ ವಿವರಗಳು ಶಾಸನಗಳಿಂದ ತಿಳಿದುಬರುತ್ತದೆ. ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ವಿಶಿಷ್ಟ ವಿನ್ಯಾಸಕ್ಕೆ ಹೆಸರಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬರುವ ಬಾಗಳಿಯ ಕಲ್ಲೇಶ್ವರ ನೀಲಗುಂದ ಭೀಮೇಶ್ವರ, ನಂದಿ ತಾವರೆಯ ಅಮೃತ ಮಾಣಿಕೇಶ್ವರ ದೇವಾಲಯಗಳೂ ಇವರ ಕಾಲದಲ್ಲಿ ನಿರ್ಮಾಣವಾಗಿರುವುದು ಕಂಡುಬರುತ್ತವೆ. ಹೀಗೆ ಕಲ್ಯಾಣದ ಚಾಲುಕ್ಯರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ವಿವರಗಳು ಈ ಭಾಗದ ಅನೇಕ ಶಾಸನಗಳಲ್ಲಿ ಕಂಡುಬರುತ್ತವೆ. ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ನೊಳಂಬರು, ಪಲ್ಲವರು, ಪಾಂಡ್ಯರು ಈ ಭಾಗದಲ್ಲಿ ಆಳ್ವಿಕೆ ನಡೆಸುತ್ತಿದ್ದಾರೆನ್ನುವ ವಿವರಗಳು ದೊರೆಯುತ್ತವೆ.

ಉಚ್ಚಂಗಿ ಪಾಂಡ್ಯರು ಉಚ್ಚಂಗಿದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದರು. ವೀರಪಾಂಡ್ಯನು ರಾಜಧಾನಿಯನ್ನು ಸ್ಥಾಪಿಸಿದ ಮೇಲೆ ಅಲ್ಲಿ ನೊಯ್ಯೇಶ್ವರ ದೇವರನ್ನು ಪ್ರತಿಷ್ಠಾಪಿಸಿ ದಾನದತ್ತಿಗಳನ್ನು ನೀಡಿದ್ದಾನೆ. ಉಚ್ಚಂಗಿ ಪಾಂಡ್ಯರು ಸುಮಾರು ೧೩೭ ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ಚಾಲುಕ್ಯರಿಂದ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯುವುದಕ್ಕಾಗಿ ೬ನೇ ಸೋಮೇಶ್ವರನ ವಿರುದ್ಧ ದಂಗೆಯೆದ್ದನೆಂದು ಕೂಡ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ರಾಜಕೀಯ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಅತಿಮುಖ್ಯವಾದ ಪಾತ್ರವನ್ನು ವಹಿಸುವ ಇವರು ಅಂದಿನ ಸಾಮಾಜಿಕ ಹಾಗೂ ರಾಜಕೀಯ ಚಟುವಟಿಕೆಗಳಿಗೆ ತಮ್ಮದೇ ಆದ ರೀತಿಯಲ್ಲಿ ಕೊಡುಗೆಗಳನ್ನು ನೀಡಿದ್ದಾರೆ.

ಪಾಂಡ್ಯರ ಕಾಲದ ಸಾಮಾಜಿಕ ಮತ್ತು ಆರ್ಥಿಕ ನೀತಿಗಳು ಕಲ್ಯಾಣದ ಚಾಲುಕ್ಯರ ನೀತಿಗಳನ್ನು ಅನುಸರಿಸಿದ್ದರು. ಕೃಷಿ ಪ್ರಮುಖ ಆದಾಯವಾಗಿದ್ದು ಕೆರೆಗಳ ನಿರ್ಮಾಣ, ಕಾಲುವೆಗಳ ನಿರ್ಮಾಣದಿಂದ ಕೃಷಿ ಅಭಿವೃದ್ಧಿ ಹೊಂದಿ ರಾಜ್ಯದ ಆರ್ಥಿಕ ಪರಿಸ್ಥಿತಿ ಸಮೃದ್ಧವಾಗಿ ಬೆಳವಣಿಗೆ ಹೊಂದಿತ್ತು.

ತ್ರಿಭುವನಮಲ್ಲ ಅತ್ಯಂತ ಪರಾಕ್ರಮಿಯಾಗಿದ್ದನು. ಇವನ ಕಾಲದಲ್ಲಿ ನಡೆದ ಅನೇಕ ಐತಿಹಾಸಿಕ ಘಟನೆಗಳು ದಾವಣಗೆರೆ ಇತಿಹಾಸಕ್ಕೆ ಭದ್ರಬುನಾದಿಯಾಗಿದೆ. ಪಾಂಡ್ಯರಲ್ಲಿ ರಾಯಪಾಂಡ್ಯ, ವಿಜಯಪಾಂಡ್ಯ, ವೀರಪಾಂಡ್ಯ ಪ್ರಮುಖರಾಗಿದ್ದರು. ಉಚ್ಚಂಗಿದುರ್ಗದಿಂದ ತ್ರಿಭುವನಮಲ್ಲ ಆಳುತ್ತಿದ್ದನು. ಆ ಪ್ರದೇಶಕ್ಕೆ ಪಾಂಡ್ಯಮಂಡಲ ಎಂದು ಕರೆಯುತ್ತಿದ್ದರು.

ದಾವಣಗೆರೆ ಪ್ರದೇಶದಲ್ಲಿ ಬೆಳಗುತ್ತಿ ಸಿಂಧರು, ಹೊಯ್ಸಳರು ಮತ್ತು ಕಲ್ಯಾಣದ ಚಾಲುಕ್ಯರ ಮಾಂಡಲಿಕರಾಗಿ ಆಳ್ವಿಕೆ ಮಾಡಿದ್ದಾರೆ. ಹೊನ್ನಾಳಿ ತಾಲ್ಲೂಕು ಕೇಂದ್ರದಿಂದ ಸುಮಾರು ೧೨ ಕಿ.ಮೀ. ದೂರದಲ್ಲಿರುವ ಬೆಳಗುತ್ತಿ ಎಂಬ ಊರು ಸಿಂಧರ ನೆಲೆಯಾಗಿತ್ತು. ಇವರು ಸುಮಾರು ಕ್ರಿ.ಶ. ೯೦೦ರಿಂದ ೧೨೩೭ರವರೆಗೆ ಆಳ್ವಿಕೆ ಮಾಡಿದ್ದಾರೆ. ೧೦ನೇ ಶತಮಾನದಲ್ಲಿ ಬೆಳಕಿಗೆ ಬಂದ ಈ ರಾಜವಂಶ ತಮ್ಮನ್ನು ತಾವು ಕರಹಾಟ ಪುರವರಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಕರಹಾಡ ಎಂಬುದು ಮಹಾರಾಷ್ಟ್ರದಲ್ಲಿರುವ ಒಂದು ನಗರ. ಪ್ರಾಯಶಃ ಮೂಲತಃ ಕರಹಾಡಿದವರಾಗಿದ್ದ ಸಿಂಧರು ತದನಂತರದಲ್ಲಿ ದಾವಣಗೆರೆ ಪ್ರದೇಶಕ್ಕೆ ಬಂದಿರಬಹುದೆಂದು ಊಹಿಸಬಹುದಾಗಿದೆ.

ಈ ವಂಶದ ಮೂಲಪುರುಷ ಕೆರಸಿಗ ನನ್ನಿಯ ಸಿಂಧನು ಮೊದಲ ಅರಸ.[೪೬] ನನ್ನಿಗ ಅಥವಾ ನನ್ನಯ ಎಂಬುದು ನಂಬಿಗಸ್ಥ ಎಂಬ ಅಭಿಪ್ರಾಯವನ್ನು ವ್ಯಕ್ತಪಡಬಹುದು. ಇದರ ಮುಂದೆ ಸಿಂಧ ಎಂಬ ಪದ ಬಳಕೆಗೊಂಡಿದ್ದರಿಂದಲೇ ಅವನನ್ನು ಸಿಂಧವಂಶದಲ್ಲಿ ಸೇರಿಸಿರಬಹುದು ಎಂಬುದು ಬಾ.ರಾ.ಗೋಪಾಲ ಅವರ ಅಭಿಪ್ರಾಯ[೪೭] ಕ್ರಿ.ಶ. ೯೬೨ರ ವಾಸನ ಗ್ರಾಮದ ಶಾಸನದಲ್ಲಿ ಉಲ್ಲೇಖಗೊಂಡಿರುವ ಮಹಾಸಾಮಂತ ಮುಳುಗುಂದ ಸಿಂಧ

ಜಾತರಸನು ಬೆಳಗುತ್ತಿ ವಂಶಕ್ಕೆ ಸೇರಿದವನಲ್ಲ ಎಂದಿರುವುದು ಸಮಂಜಸವೆನಿಸಿದೆ.[೪೮] ಎಡವಟ್ಟೆನಾಡ ಬೆಳಗುತ್ತಿ ಸಿಂಧರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಇಲ್ಲಿಯ ಸಿಂಧರ ದೇವನೇ ಈ ವಂಶದ ಮೊದಲ ಐತಿಹಾಸಿಕ ವ್ಯಕ್ತಿ ಎಂದು ಹೇಳಬಹುದು. ಅವನು ಕ್ರಿ.ಶ. ೯೦೦ರಲ್ಲಿ ಆಳ್ವಿಕೆ ಮಾಡಿರಬೇಕು. ನನ್ನಿಯ ಸಿಂಧನೆಂಬುದು ಗೋಪಾಲ ಅವರು ಭಾವಿಸಿರುವಂತೆ ನಂಬಿಕೆಯುಳ್ಳ ವ್ಯಕ್ತಿ ಎಂಬುದನ್ನು ಸೂಚಿಸುತ್ತದೆ. ಅದು ವ್ಯಕ್ತಿಯೋಬ್ಬನ ಅಂಕಿತನಾಮವೂ ಆಗಿದೆ. ಆದ್ದರಿಂದ ನನ್ನಿಯ ಸಿಂಧನು ಬೆಳಗುತ್ತಿ ಸಿಂದವಂಶಕ್ಕೆ ಸೇರಿದ ಅರಸನೆಂಬುದು ಸ್ಪಷ್ಟವಾದ ವಿಚಾರವಾಗಿದೆ.

ಪಿರಿಯ ಚಟ್ಟರಸ ಮತ್ತು ಅವನ ಮಗ ಐಯತ್ತ್ಯಣ ಜೋಗರಸರು ದೇವರ ೩೦, ಮೈಸೂರು ೧೨, ಕುಂದೂರು ೧೨, ಕೋಳಗನೂರು ೭೦, ಅರಕೆರೆ ೧೨, ಬಾಡ ೫೬, ಮೊದಲಾದ ಪ್ರದೇಶಗಳನ್ನು ಆಳುತ್ತಿದ್ದರೆಂದು ಬಾ.ರಾ.ಗೋಪಾಲರು ಗುರುತಿಸಿದ್ದಾರೆ.[೪೯] ಇವರ ನಂತರ ಇವರ ಮಗ ಚಟ್ಟರಸ ಮತ್ತು ಅವನ ಮಗ ಮಾಚರಸರು ಆಳ್ವಿಕೆ ನಡೆಸಿದರು. ೨ನೇ ಈಶ್ವರದೇವನು ಈ ಮನೆತನದಲ್ಲಿ ಅತ್ಯಂತ ಪ್ರಸಿದ್ಧ ದೊರೆಯಾಗಿದ್ದನು.

ಎರಡನೇ ಚಟ್ಟರಸನು ೬ನೇ ವಿಕ್ರಮಾದಿತ್ಯನ ಸಾಮಂತನಾಗಿ ಆಳ್ವಿಕೆ ನಡೆಸಿದನು. ಸೇಡೂರಿನ ಶಾಸನದ ಪ್ರಕಾರ ಈತನು ಎಡವಟ್ಟೆ ೭೦, ಅರಕೆರೆ ೧೨ ಮುಂತಾದ ಭಾಗಗಳನ್ನು ಆಳುತ್ತಿದ್ದನು. ಇವನು ಕ್ರಿ.ಶ. ೧೧೧೩ರ ವೇಳೆಗೆ ಆಳುತ್ತಿದ್ದನೆಂದು ಈ ಶಾಸನಗಳಿಂದ ತಿಳಿದುಬರುತ್ತದೆ.[೫೦] ಈತನ ಕಾಲಾವಧಿಯಲ್ಲಿ ಕ್ರಿ.ಶ. ೧೧೧೭ರಲ್ಲಿ ಅವನ ಮೊಮ್ಮಗ ಮಾಚರಸನು ನಾಡ ಆಡಳಿತದಲ್ಲಿ ತೊಡಗಿದ್ದನು. ಆದುದರಿಂದ ಚಟ್ಟರಸನ ನಂತರ ಅವನ ಮಗ ಈಶ್ವರದೇವನು ಉತ್ತರಾಧಿಕಾರಿಯಾಗದೇ ಮಾಚರಸನೇ ಪಟ್ಟಕ್ಕೆ ಬಂದಿರಬೇಕು. ಬಹುಶಃ ಈಶ್ವರದೇವನು ಅಕಾಲಮರಣಕ್ಕೆ ತುತ್ತಾಗಿರಬೇಕು.

ಎರಡನೇ ಈಶ್ವರದೇವನು ಎಡವಟ್ಟೆ-೭೦, ಬಳ್ಳವೆ-೭೦, ನರಿಯಳಗೆ-೪೦, ಸಾಂತಳಿಗ-೧೦೦೦, ಮಾತಿ-೭೦, ಮುದುವರೆ-೩೦ ಹಾಗೂ ಅಸಂಡಿ ನಾಡಿನಲ್ಲಿಯ ಮನುಜವೊಳಲು-೧೨, ಅರಬಲ-೭೦, ಹಟ್ಟನಾಡು-೧೨ ಮಂಡಲೀನಾಡಿನ ಹೊಳಲಕೆರೆಗಳನ್ನು, ಹಳ್ಳವೂರು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡತೊಡಗಿದನು.[೫೧] ಕ್ರಿ.ಶ. ೧೧೮೦ರಲ್ಲಿ ಈಶ್ವರದೇವನು ತನ್ನ ಮಕ್ಕಳಾದ ಪಾಂಡ್ಯದೇವ ಮತ್ತು ಮಲ್ಲಿದೇವರ ಸಹಾಯದಿಂದ ಆಡಳಿತ ನೋಡಿಕೊಳ್ಳುತ್ತಿದ್ದುದನ್ನು ಬೆಳಗುತ್ತಿ ಶಾಸನ ಉಲ್ಲೇಖಿಸಿದೆ.[೫೨] ಇವನ ನಂತರ ೨ನೇ ಮಲ್ಲಿದೇವ ಅಧಿಕಾರಕ್ಕೆ ಬಂದನು. ಚಾಲುಕ್ಯರ ನಾಲ್ಕನೆಯ ಸೋಮೇಶ್ವರನ ಮರಣದ ನಂತರ ಮಲ್ಲಿದೇವನು ಸ್ವತಂತ್ರನೆಂದು ಘೋಷಿಸಿಕೊಂಡನು. ಈತನ ನಂತರ ಇವನ ಮಗ ೩ನೇ ಈಶ್ವರದೇವ ಅಧಿಕಾರಕ್ಕೆ ಬಂದನು. ಈಶ್ವರದೇವನು ಸೇವುಣರ ದೊರೆ ೨ನೇ ಸಿಂಘಣನ ಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದನು. ಈಶ್ವರದೇವನ ಮರಣದ ನಂತರ ಆತನ ಮಗ ಕೇಶವನು ಅಧಿಕಾರಕ್ಕೆ ಬಂದನು.

ಹೀಗೆ ಇವರು ೧೦ನೇ ಶತಮಾನದಿಂದ ೧೩ನೇ ಶತಮಾನದವರೆಗೆ ದಾವಣಗೆರೆ ಪ್ರದೇಶದಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಇವರು ರಾಜಕೀಯ, ಸಾಮಾಜಿಕ ಕಲೆ ಮತ್ತು ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಈ ವಂಶದವರು ಪ್ರಬಲ ಶಕ್ತಿಗಳಾದ ಹೊಯ್ಸಳ, ಚಾಲುಕ್ಯ, ಕಳಚೂರಿ ಹಾನಗಲ್ಲ, ಕದಂಬ ಮನೆತನಗಳೊಂದಿಗೆ ಹೋರಾಡುತ್ತಾ ತಮ್ಮ ಸಾಮ್ರಾಜ್ಯವನ್ನು ಇಂದಿನ ಬಳ್ಳಾರಿ, ದಾವಣಗೆರೆ, ಶಿವಮೊಗ್ಗ, ಧಾರವಾಡ, ಚಿತ್ರದುರ್ಗ ಮುಂತಾದ ಪ್ರದೇಶಗಳಲ್ಲಿ ಆಡಳಿತವನ್ನು ವಿಸ್ತರಿಸಿದ್ದರು.

ನೊಳಂಬರು ಆಳ್ವಿಕೆ ಮಾಡುತ್ತಿದ್ದ ಪ್ರದೇಶವನ್ನು ನೊಳಂಬವಾಡಿ ೩೨೦೦ ಎಂದು ಕರೆಯುತ್ತಿದ್ದರು. ಇವರು ಗಂಗ, ಚೋಳ, ಚಾಲುಕ್ಯ, ಹೊಯ್ಸಳ ದೊರೆಗಳ ಸಾಮಂತರಾಗಿ ಆಳ್ವಿಕೆ ಮಾಡುತ್ತಿದ್ದರು.

ನೊಳಂಬರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಿಲಾಶಾಸನವು ಅಣಜಿಯ(ದಾವಣಗೆರೆ ೧೬೧) ಗುಡ್ಡಪ್ಪನ ಹೊಲದಲ್ಲಿ ದೊರೆತಿದೆ[೫೩] ಇದರ ಕಾಲ ಕ್ರಿ.ಶ. ೪೫೦ ಆಗಿದ್ದು ಇದರಲ್ಲಿ ಪಲ್ಲವ ನವಕ್ಕಸರಾಜನು ಕೃಷ್ಣವರ್ಮ ರಾಜನ ಸೈನ್ಯವನ್ನು ಪರಾಭವಗೊಳಿಸಿದನೆಂದು ಉಲ್ಲೇಖಿತವಾಗಿದೆ. ಜಗಲೂರು ತಾಲ್ಲೂಕಿನ ಮುಸ್ಟೂರಿನ ಕಲ್ಲೇಶ್ವರ ದೇವಾಲಯದ ಕ್ರಿ.ಶ. ೯೨೦ರ ಶಾಸನವು[೫೪] ನೊಳಂಬ ರಾಜ ಅಯ್ಯಪ್ಪದೇವ ನೊಳಂಬವಾಡಿ ಮತ್ತಿತರ ನಾಡುಗಳನ್ನು ಆಳುತ್ತಿದ್ದನೆಂದಿದೆ. ೩ನೇ ಶಾಸನವು ಜವಯ್ಯನ ಮಗ ನಾಥವರ್ಮನು ಮುಸ್ಟೂರಿನ ಕಲ್ಲೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನೆಂಬ ಉಲ್ಲೇಖ ಸಿಗುತ್ತದೆ.

ನಿಟ್ಟೂರು ಕಲ್ಲೇಶ್ವರ ದೇವಾಲಯದ ಕ್ರಿ.ಶ. ೧೦೩೫ರ ಶಾಸನ[೫೫] ಪಲ್ಲವ ಕುಲಾಭರಣ ಉದಯಾದಿತ್ಯ ದೇವ ನೊಳಂಬ ಪಲ್ಲವ ಪೆರ್ಮಾಡಿದೇವ ಚಾಲುಕ್ಯ ಜಯಸಿಂಹ ದೇವನ ಸಾಮಂತನಾಗಿ ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ.

ಹದಡಿ ಈಶ್ವರನ ದೇವಾಲಯದ ಕ್ರಿ.ಶ. ೧೦೩೩ರ ಶಾಸನ ಮತ್ತು ಅವರೆಗೆರೆಯ ಕ್ರಿ.ಶ. ೧೦೪೨ರ ಶಾಸನ[೫೬] ಜಗದೇಕಮಲ್ಲ ಇಮ್ಮಡಿ ನೊಳಂಬ ಪಲ್ಲವ ಪೆರ್ಮಾಡಿಯು ಹಲವು ಪ್ರಾಂತ್ಯಗಳನ್ನು ಅಪಾರ ಸಂಪತ್ತಿನೊಂದಿಗೆ ವಿವೇಕದಿಂದ ಶಾಂತಚಿತ್ತನಾಗಿ ಸಶಕ್ತ ಸೈನ್ಯದ ನೆರವಿನಿಂದ ಚಾಲುಕ್ಯ ಜಗದೇಕಮಲ್ಲ ದೇವನ ಮಹಾಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದ ಎಂದು ಉಲ್ಲೇಖವಿದೆ. ಇವನು ಚೋಳರ ಮೇಲೆ ನಡೆದ ಯುದ್ಧದಲ್ಲಿ ವಿಜಯ ಸಾಧಿಸಿ ಬಮ್ಮಕೂರನ್ನು ಪಡೆದುಕೊಂಡ ಬಗ್ಗೆ ಚನ್ನಗಿರಿ ತಾಲೂಕಿನ ಶಾಸನಗಳಿಂದ ತಿಳಿದುಬರುತ್ತದೆ.[೫೭] ಕ್ರಿ.ಶ. ೧೦೪೨ರ ಹದಡಿ ಈಶ್ವರ ದೇವಾಲಯದ ಮತ್ತು ಕ್ರಿ.ಶ. ೧೦೪೫ರ ವಡ್ಡನಹಳ್ಳಿಯ ಶಾಸನಗಳು[೫೮] ತ್ರೈಲೋಕ್ಯಮಲ್ಲ ನನ್ನ ನೊಳಂಬ ಪಲ್ಲವನು ಹಲವು ಪ್ರಾಂತ್ಯಗಳನ್ನು ವೈಭವದಿಂದ ಆಳ್ವಿಕೆ ಮಾಡುತ್ತಿದ್ದನು ಎಂದು ಉಲ್ಲೇಖಿಸುತ್ತದೆ. ಮೊದಲನೇ ಶಾಸನವು ಪ್ರಧಾನಿ ಪಲ್ಲವ ಕುಲಾಭರಣ ಬ್ರಹ್ಮಾಧಿರಾಜನಿಂದ ರಚಿತವಾದುದೆಂದು ಅದೇ ಶಾಸನದಿಂದ ತಿಳಿದುಬರುತ್ತದೆ.

ಎರಡನೇ ಶಾಸನದಲ್ಲಿ ನೊಳಂಬ ತ್ರೈಲೋಕ್ಯಮಲ್ಲನ ಸಾಮಂತನಾಗಿ ಬೆಳುವನೂರಿನಲ್ಲಿ ಆಳುತ್ತಿದ್ದ ನಾಗಯ್ಯ ನಾಯಕ ಶೌರ್ಯ, ಸಾಹಸಗಳ ಗಣಿಯಾಗಿದ್ದನು. ಉದಾರವಾಗಿ ದಾನ ಮಾಡುತ್ತಿದ್ದನೆಂದು ಉಲ್ಲೇಖಿತವಾಗಿದೆ.

ಕ್ರಿ.ಶ. ೧೦೫೪ರ ಅಸಗೋಡು ಶಂಭುಲಿಂಗೇಶ್ವರ ಶಾಸನ, ಕ್ರಿ.ಶ. ೧೧೬೦ರ ಶಾಸನದ ಕೇದಾರೇಶ್ವರ ದೇವಾಲಯದ ಶಾಸನಗಳು ನೊಳಂಬರ ಆಳ್ವಿಕೆಯು ದಾವಣಗೆರೆ ಪ್ರದೇಶದಲ್ಲಿ ಇತ್ತು ಎಂದು ಉಲ್ಲೇಖಿಸುತ್ತವೆ. ಚನ್ನಗಿರಿ ಮತ್ತು ಹೊನ್ನಾಳಿ ಭಾಗದಲ್ಲಿ ಕ್ರಿ.ಶ. ೧೦೪೮ರಿಂದ ೧೦೫೪ರವರೆಗಿನ ಆಳ್ವಿಕೆಯನ್ನು ನೊಳಂಬರು ನಡೆಸಿದರೆಂಬುದನ್ನು ಇಲ್ಲಿನ ಶಾಸನಗಳು ಉಲ್ಲೇಖಿಸುತ್ತವೆ. ಹೀಗೆ ಸಾಮಂತ ಅರಸರಾಗಿ ದಾವಣಗೆರೆ ಪ್ರದೇಶದಲ್ಲಿ ಆಳ್ವಿಕೆ ಮಾಡಿ ವಿಶಿಷ್ಟ ಕೊಡುಗೆಗಳನ್ನು ನೀಡಿ, ಸಾಮಂತಿಕೆಯ ಅವಧಿಯೊಳಗೆ ತಮ್ಮ ಪ್ರಭುಗಳ ಬಿರುದನ್ನು ಧರಿಸಿಕೊಂಡು ಆಡಳಿತ ನಡೆಸಿರುವುದು ಕಂಡುಬರುತ್ತದೆ.

ಕ್ರಿ.ಶ. ಸುಮಾರು ೮೩೫ರಿಂದ ೧೩೧೩ರವರೆಗೆ ಕರ್ನಾಟಕವನ್ನಾಳಿದ ಪ್ರಮುಖ ಸಾಮಂತ ಅರಸುಮನೆತನಗಳಲ್ಲಿ ಸೇವುಣರು ಕೂಡ ಪ್ರಮುಖರಾಗಿದ್ದಾರೆ. ದೇವಗಿರಿಯ ಸೇವುಣರನ್ನು ಕುರಿತು ಅನೇಕ ಶಾಸನಗಳು ಮತ್ತು ಅವರು ಕಟ್ಟಿಸಿದ ದೇವಾಲಯಗಳು ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ದೊರೆತಿದೆ. ಸೇವುಣ ರಾಜ್ಯವು ಚಿತ್ರದುರ್ಗ, ಹಾಸನ, ಶಿವಮೊಗ್ಗ, ಧಾರವಾಡ, ಬಿಜಾಪುರ, ರಾಯಚೂರು, ಬೀದರ್ ಮತ್ತು ಬಳ್ಳಾರಿ ಜಿಲ್ಲೆಯ ಪ್ರದೇಶಗಳನ್ನೊಳಗೊಂಡಿತ್ತು. ಹರಿಹರ, ಜಗಲೂರು, ಹರಪನಹಳ್ಳಿ, ಚನ್ನಗಿರಿ, ಹೊನ್ನಾಳಿ ತಾಲ್ಲೂಕುಗಳಲ್ಲಿ ಇವರ ಶಾಸನಗಳು ದೊರೆತಿರುವುದರಿಂದ ದಾವಣಗೆರೆ ಜಿಲ್ಲೆಯು ಸೇವುಣರ ಅಧೀನಕ್ಕೊಳಪಟ್ಟಿದ್ದವೆಂಬುದು ಸ್ಪಷ್ಟವಾಗುತ್ತದೆ.

ಹೆಚ್.ವಿ. ಶ್ರೀನಿವಾಸಮೂರ್ತಿ ಮತ್ತು ಆರ್. ರಾಮಕೃಷ್ಣನ್ ತಿಳಿಸಿರುವಂತೆ ಸೇವುಣರ ಅರಸರಾದ ಸೇವುಣ ಚಂದ್ರ ಮಲ್ಲುಗಿ, ಅಮರಗಂಗೆಯ ಕರ್ಣ, ೫ನೇ ಬಿಲ್ಲಮ, ಜೈತುಗಿ, ಸಿಂಘಣ, ಕೃಷ್ಣಮಹಾದೇವ, ರಾಮಚಂದ್ರ ಪ್ರಮುಖರಾಗಿದ್ದಾರೆ. ಎಚ್.ಎಂ.ನಾಗರಾಜ್ ಅವರು ತಿಳಿಸುವಂತೆ ಸೇವುಣರಿಗೆ ಸಂಬಂಧಿಸಿದಂತೆ ದಾವಣಗೆರೆ ಪ್ರದೇಶದಲ್ಲಿ ಸು. ೧೮ಕ್ಕೂ ಹೆಚ್ಚು ಶಾಸನಗಳು ದೊರೆತಿದೆ ಎಂದು ಉಲ್ಲೇಖಿಸುತ್ತಾರೆ.

ಚನ್ನಗಿರಿ ತಾಲ್ಲೂಕಿನ ಕೋಗಲೂರಿನ ಶಾಸನವು ಸೇವುಣರ ವಂಶಾವಳಿಯನ್ನು ತಿಳಿಸುತ್ತದೆ. ಈ ವಂಶದ ಸಾಮಂತ ಚಾವುಂಡರಸನು ಕ್ರಿ.ಶ. ೧೨೬೮ರಲ್ಲಿ ನೊಳಂಬವಾಡಿ ಪ್ರಾಂತ್ಯದಲ್ಲಿನ ಬೇತೂರಿನಲ್ಲಿ ರಾಜ್ಯಪಾಲನಾಗಿದ್ದು ಇಬ್ಬರು ಮಂತ್ರಿಗಳಿಂದ ಆಳಲ್ಪಡುತ್ತಿದ್ದನೆಂದು ತಿಳಿದುಬರುತ್ತದೆ. ಈತನು ದಕ್ಷಿಣ ಭಾಸ್ಕರಪುರ ಅಥವಾ ದಕ್ಷಿಣಾದಿತ್ಯ ನಗರವೆಂದು ಖ್ಯಾತಿ ಪಡೆದ ಕೋಗಲೂರಿನ ಬಿಲ್ಲೇಶ್ವರ ದೇವರ ಅಗ್ರಹಾರಕ್ಕೆ ದತ್ತಿಬಿಟ್ಟನೆಂಬ ವಿಷಯ ಹಾಗೂ ಈ ಅಗ್ರಹಾರವು ಗುಡ್ಡಗಾಡು

ಜನರಿಂದ ಆನೆಗಳಿಂದ ತುಂಬಿತ್ತು ಎಂದು ಅದೇ ಶಾಸನದಿಂದ ತಿಳಿದುಬರುತ್ತದೆ.[೫೯] ಚಿದಾನಂದಮೂರ್ತಿಯವರು ಈ ಪ್ರದೇಶಗಳಲ್ಲಿ ದೊರೆತ ಸೇವುಣರ ಶಾಸನಗಳನ್ನು ಉಲ್ಲೇಖ ಮಾಡುತ್ತಾ, ಚನ್ನಗಿರಿ ಪ್ರದೇಶದಲ್ಲಿ ಬರುವ ಕೋಗಲೂರಿನ ಶಾಸನವು ಸಹ ಸೇವುಣರ ಆಳ್ವಿಕೆ ನಡೆಸಿದ್ದಾರೆ ಎಂಬುದನ್ನು ಖಚಿತಪಡಿಸಿದ್ದಾರೆ.

ಹಾಗೆ ಅವರಗೋಳದ ಶಾಸನ, ಬೇತೂರು ಗ್ರಾಮದ ಶಾಸನ ಸೇವುಣರ ಮಹದೇವನ ವಿವರ ನೀಡುತ್ತದೆ. ಭಾನವಳ್ಳಿ ಗ್ರಾಮದ ಶಾಸನ ಸಿಂಘಣನ ಬಗ್ಗೆ ವಿವರಿಸುತ್ತದೆ. ಜಗಲೂರು ತಾಲ್ಲೂಕಿನ ಕಲ್ಲೆದೇವರಪುರ ಶಾಸನವು ರಾಮಚಂದ್ರನ ಕುರಿತಾಗಿದೆ ಎಂದು ಸಂಶೋಧಕರಾದ ಬಿ.ರಾಜಶೇಖರಪ್ಪನವರು ಉಲ್ಲೇಖಿಸಿದ್ದಾರೆ.

ಹೊನ್ನಾಳಿ ತಾಲ್ಲೂಕಿನ ಬೆಳಗುತ್ತಿಯಲ್ಲಿ ಸೇವುಣರ ಕಾಲದ ಶಾಸನ ದೊರೆತಿದ್ದು ಈ ಶಾಸನ ಅಲ್ಲಿನ ಈಶ್ವರದೇವರಿಗೆ ಭೂಮಿಯನ್ನು ದತ್ತಿಬಿಟ್ಟ ಬಗ್ಗೆ ಉಲ್ಲೇಖ ಮಾಡುತ್ತದೆ. ಇದೇ ತಾಲ್ಲೂಕಿನ ಶಾಸನವೊಂದು ಇವರ ವಂಶದ ಮೂಲ ಹಾಗೂ ಆಳ್ವಿಕೆ ಮಾಡಿದ ಅರಸರನ್ನು ಕುರಿತು ತಿಳಿಸುತ್ತದೆ. ಇದೇ ಶಾಸನದಲ್ಲಿ ರಾಮಚಂದ್ರ ಅರಸನು ಚಾಲುಕ್ಯರ ಬಿರುದುಗಳೆಲ್ಲವನ್ನು ಧರಿಸಿದ್ಧನೆಂದು ವಿವರಿಸುತ್ತದೆ. ಅದೇ ಗ್ರಾಮದಲ್ಲಿ ಎರಡನೇ ಸಿಂಘಣನ ವೀರಗಲ್ಲು ಶಾಸನ, ಮಾದನಬಾವಿಯಲ್ಲಿ ಭೂದಾನ ಶಾಸನದ ಬಗ್ಗೆ ಡಾ.ಎಂ.ಕೊಟ್ರೇಶ್ ಯವರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿರುವರು.

ಸೇವುಣರ ವಂಶದ ಉಲ್ಲೇಖ ನೀಡುವಂತಹ ಶಾಸನಗಳು ಹರಿಹರ ಮತ್ತು ಭಾನುವಳ್ಳಿಗಳಲ್ಲಿ ದೊರೆತಿವೆ. ಇದರ ಪ್ರಕಾರ ಭಿಲ್ಲಮನೆ ಈ ವಂಶದ ಮೂಲ ಪುರುಷ ಸಿಂಘಣನು ಸೇವುಣರಲ್ಲಿ ಪ್ರಸಿದ್ಧ ದೊರೆ ಹಾಗೂ ಇವನ ಸಾಹಸಗಳನ್ನು ಈ ಶಾಸನದಲ್ಲಿ ಉಲ್ಲೇಖವಾಗಿದೆ.[೬೦] ಸಿಂಗಣನ ಮಠ ಕಂದರನು ಕ್ರಿ.ಶ. ೧೨೫೮ರಲ್ಲಿ ಚಿಕ್ಕ ಬಿದರೆ ಗ್ರಾಮದಲ್ಲಿ ಕನ್ನೇಶ್ವರ ದೇವಾಲಯವನ್ನು ಸಿಂಘಣನ ಸೇನಾನಿಯಾಗಿದ್ದ ಬಿಲ್ಲಾಳನ ಹಮ್ಮೇಯನಾಯಕನೆಂಬುವನು ಸ್ಥಾಪಿಸಿದನೆಂದು ಹಾಗೂ ಅನೇಕ ದಾನದತ್ತಿಗಳನ್ನು ನೀಡಿದ್ದನೆಂದು ಅಲ್ಲಿನ ಶಾಸನ ತಿಳಿಸುತ್ತದೆ.[೬೧] ಈ ಬಿದರೆ ಗ್ರಾಮ ಪ್ರಸ್ತುತ ಅವರಗೊಳ್ಳ ಗ್ರಾಮವಾಗಿ ನಿರ್ಮಾಣವಾಗಿದೆ. ಈ ಶಾಸನದಲ್ಲಿ ಸಿಂಘಣನಿಗೆ ಸಂಧಿಸಿದಂತೆ ಅನೇಕ ಬಿರುದುಗಳು ಉಲ್ಲೇಖವಾಗಿವೆ. ಇವನ ನಂತರ ಇವನ ಮಗ ರಾಮಚಂದ್ರ ಅಧಿಕಾರಕ್ಕೆ ಬರುತ್ತಾನೆ. ಈತನಿಗೆ ಸಂಬಂಧಿಸಿದಂತೆ ದಾವಣಗೆರೆ ತಾಲ್ಲೂಕಿನ ಹೆಮ್ಮನಬೇತೂರು ಗ್ರಾಮದ ಸಿದ್ಧೇಶ್ವರ ದೇವಾಲಯದ ಬಳಿ ಹಾಗೂ ಜಗಲೂರು ತಾಲ್ಲೂಕಿನ ಕಲ್ಲೆದೇವರಪುರ ಬಿಳು ಶಾಸನಗಳು ದೊರೆತಿವೆ.[೬೨] ಜಗಲೂರು ತಾಲ್ಲೂಕು ಕಲ್ಲೆದೇವರಪುರದ ಶಾಸನವು ಕ್ರಿ.ಶ. ೧೨೭೯ರದ್ದಾಗಿದ್ದು ಅರಸನನ್ನು ಸೈನ್ಯ ಸಮಯ ಸಂವರ್ಧನ, ಸಕಳ ಸಮಯ ಸಮುದ್ಧರಣ, ಕ್ಷಿತಿಪತಿ ಮತ್ತು ಮಾಂತಂಗ ಪೆಂಡಾರ ಲಕ್ಷ್ಮೀದೇವ ತ್ರಿಕುಳಕುಳಕಾಂತರ ಮೂಲನವು ಮರ್ದವ ದಂಡ ಮುಂತಾದ ಆಕರ್ಷಕ ಹೆಸರಿನಿಂದ ಉಲ್ಲೇಖಿಸಿರುವುದು

ಕಂಡುಬಂದಿದೆ. ಅಲ್ಲದೆ ಹರಿಹರದಲ್ಲಿ ಸೇವುಣರ ಶಾಸನ ದೊರಕಿದ್ದು ಅವುಗಳಲ್ಲಿ ಹರಿಹರ ದೇವರಿಗೆ ದಾನದತ್ತಿಗಳನ್ನು ನೀಡಿದ ವಿವರಗಳು ಲಭ್ಯವಾಗುತ್ತವೆ.

ಮೇಲಿನ ಶಾಸನಗಳಿಂದ ದಾವಣಗೆರೆ ಜಿಲ್ಲೆಯ ತುಂಬ ಸೇವುಣರ ಆಳ್ವಿಕೆ ವಿಸ್ತರಿಸಿತ್ತು. ಹೊಯ್ಸಳ ಆಳ್ವಿಕೆಯ ಕಾಲದ ಕುರುಹುಗಳಿಂದ ಅಂದಿನ ಸಮಾಜಕ್ಕೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕೊಡುಗೆಗಳನ್ನು ಕೊಟ್ಟಿದ್ದರು ಎಂದು ದೃಢಪಡಿಸಬಹುದು.

ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಹೊಯ್ಸಳರ ಪಾತ್ರ ಅದ್ವಿತೀಯವಾದುದು. ಇವರು ೧೩ನೇ ಶತಮಾನದ ಪ್ರಾರಂಭದಿಂದ ೧೪ನೇ ಶತಮಾನದ ಮಧ್ಯಭಾಗದವರೆಗೆ ಆಡಳಿತ ನಡೆಸಿದರು. ಈ ಸಂದರ್ಭದಲ್ಲಿ ಹೊಯ್ಸಳರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅತ್ಯಂತ ಹೆಚ್ಚು ಮಹತ್ವವನ್ನು ನೀಡಿರುವುದು ಕಂಡುಬರುತ್ತದೆ. ಚೋಳರು ಮತ್ತು ಹೊಯ್ಸಳ ನಡುವೆ ನಾಡಿನ ಪರಮಾಧಿಕಾರಕ್ಕಾಗಿ ಸೆಣಸಿದರು. ಕೊನೆಗೆ ೧೨ನೇ ಶತಮಾನದ ಆರಂಭದಲ್ಲಿ ಚೋಳರನ್ನು ಸೋಲಿಸಿದರು. ಕರ್ನಾಟಕದ ಅರಸುಮನೆತನಗಳಲ್ಲಿ ಒಂದಾದ ಇವರು ಆರಂಭದಲ್ಲಿ ಚಿಕ್ಕ ರಾಜಮನೆತನವನ್ನು ಪ್ರಾರಂಭಿಸಿ, ಪ್ರಾರಂಭದಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು. ವಿನಯಾದಿತ್ಯನಿಂದ ಹಿಡಿದು ೨ನೇ ವೀರಬಲ್ಲಾಳವರೆಗಿನ ಸುಮಾರು ಒಂದು ಶತಮಾನ ಕಾಲ ಸಾಮಂತರಾಗಿ ಆಳ್ವಿಕೆ ನಡೆಸಿದ ಇವರು ಆ ಸಂದರ್ಭದಲ್ಲಿ ರಚನೆಯಾದ ಶಾಸನಗಳೆಲ್ಲವೂ ಚಾಲುಕ್ಯರಿಗೆ ಅಧೀನರಾಗಿ ನಡೆದುಕೊಂಡು ಬಂದ ಅಂಶವೇ ಕಂಡುಬರುತ್ತದೆ.

ಹೊಯ್ಸಳರ ಮೂಲ ಪುರುಷ ಸಳ, ಮೂಡಿಗೆರೆ ತಾಲ್ಲೂಕಿನ ಅಂಗಡಿ ಗ್ರಾಮಗಳು ಅವರ ಮೂಲಸ್ಥಾನದ ಸಂಕೇತಗಳಾಗಿವೆ. ಹೊಯ್ಸಳ ವಂಶದ ಒಂದನೆಯ ಬಲ್ಲಾಳ ಮತ್ತು ಅವನ ಸಹೋದರ ವಿಷ್ಣುವರ್ಧನ ಉಚ್ಚಂಗಿ ಪಾಂಡ್ಯರ ಮೇಲೆ ಯುದ್ಧ ಮಾಡಿ ಕೊಳ್ಳೆ ಹೊಡೆದರು. ಅನಂತರ ವಿಷ್ಣುವರ್ಧನನು ದುಮ್ಮಿ ಗ್ರಾಮದ ಬಳಿ ನಡೆದ ಯುದ್ಧದಲ್ಲಿ ಪಾಂಡ್ಯರನ್ನು ಮತ್ತೊಮ್ಮೆ ಸೋಲಿಸಿ ನೊಳಂಬವಾಡಿ ಎಂಬ ಬಿರುದಿಗೆ ಪಾತ್ರನಾದನು.[೬೩] ಪ್ರಸ್ತುತ ದಾವಣಗೆರೆ ಜಿಲ್ಲೆಯಲ್ಲಿ ಹೊಯ್ಸಳ ಅರಸರ ಆಳ್ವಿಕೆಯನ್ನು ಗುರುತಿಸಲು ಇಲ್ಲಿನ ಶಾಸನಗಳು ಸಹಾಯಕವಾಗಿವೆ. ಹಾಗೆಯೇ ಇವರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ, ಕಾಲುವೆ, ದೇವಾಲಯಗಳು, ಅಗ್ರಹಾರಗಳು ಮುಂತಾದ ಆಧಾರಗಳು ಹೊಯ್ಸಳರ ಆಳ್ವಿಕೆಯ ಬಗ್ಗೆ ಸಾರುತ್ತವೆ. ಹೊಯ್ಸಳರ ವೀರಬಲ್ಲಾಳನ ರಾಣಿಯಾದ ಅಭಿನವ ಕೇತಲದೇವಿ ಕ್ರಿ.ಶ. ೧೨೧೮ರಲ್ಲಿ ಕುಂದುವಾಡದಲ್ಲಿ ಬುಧವಾರ ಸಂತೆ ನಡೆಸಿ ಬಂದ ಆದಾಯವನ್ನು ಸೋಮನಾಥದೇವರಿಗೆ ಆಯ ಬಿಟ್ಟಳೆಂದು ದಾವಣಗೆರೆಯ ೧೧೫ನೇ ಶಾಸನದಿಂದ ತಿಳಿಯುತ್ತದೆ. ಇದರಿಂದ ದಾವಣಗೆರೆ ಪ್ರದೇಶ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದ್ದನ್ನು ದೃಢೀಕರಿಸಬಹುದು. ಕ್ರಿ.ಶ. ೧೨೧೮ರ ಕುಂದವಾಡ ಗ್ರಾಮದ ಶಾಸನವು ಹೊಯ್ಸಳರ ಕಾಲದ ದಾವಣಗೆರೆ

ಪ್ರದೇಶದ ಆರ್ಥಿಕತೆಗೆ ಹಿಡಿದ ಕೈಗನ್ನಡಿಯಂತಿದೆ.[೮೬] ೧೨೩೫ರಲ್ಲಿ ಸೋಮೇಶ್ವರ ಅಧಿಕಾರಕ್ಕೆ ಬಂದನು. ಈತನು ದಾವಣಗೆರೆ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಎಂಬುದನ್ನು ಜಗಲೂರು ತಾಲ್ಲೂಕಿನ ಕಲ್ಲೇದೇವರಪುರ ದೇವಾಲಯದ ಸಮೀಪವಿರುವ ಶಾಸನ ತಿಳಿಸುತ್ತದೆ. ಇದು ಈ ಜಿಲ್ಲೆಯಲ್ಲಿ ದೊರೆತ ಮೊದಲ ಶಾಸನವಾಗಿದೆ. ಸೋಮೇಶ್ವರನು ಗಂಗವಾಡಿ ೯೬೦೦೦ ಮತ್ತು ನೊಳಂಬವಾಡಿ ೩೨೦೦೦ ನಾಡುಗಳನ್ನು ಆಳುತ್ತಿದ್ದು, ಸಾಮಾನ್ಯವಾಗಿ ಹೊಯ್ಸಳ ಅರಸರು ಧರಿಸಿದ ಬಿರುದುಗಳೆಲ್ಲವನ್ನೂ ಈ ಶಾಸನದಲ್ಲಿ ಕಾಣಬಹುದು.[೮೭] ಹೊಯ್ಸಳರ ಕಾಲದಲ್ಲಿ ಜಗಲೂರು ಪ್ರದೇಶದಲ್ಲಿ ನರಸಿಂಹ ನಾಯಕ ಮತ್ತು ಮಲ್ಲಯ್ಯ ನಾಯಕರು ಚಿಮ್ಮತ್ತನೂರ ಸೀಮೆಯನ್ನು ಆಳುತ್ತಿದ್ದರೆಂದು ಚಿಮ್ಮತ್ತನೂರು ಸ್ವಯಂಭು ಮಣಲೇಶ್ವರ ದೇವರಿಗೆ ದತ್ತಿ ಬಿಟ್ಟ ದಾನದ ವಿಚಾರ ತಿಳಿಯುವುದು. ಕ್ರಿ.ಶ. ೧೧೮೮ರಲ್ಲಿ ವೀರಬಲ್ಲಾಳ ಉಚ್ಚಂಗಿಯನ್ನು ಉಪರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಆ ಸಂದರ್ಭದಲ್ಲಿ ಜಗಲೂರು ತಾಲ್ಲೂಕಿನ ಪಶ್ಚಿಮ ಭಾಗ ಪೂರ್ಣವಾಗಿ ಆತನಿಗೆ ಸೇರಿದ್ದಿತ್ತು.[೮೮] ಈ ಮೇಲಿನ ಎಲ್ಲಾ ಶಾಸನಗಳು ಜಗಲೂರು ತಾಲ್ಲೂಕು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತ್ತು ಹಾಗೂ ಅಲ್ಲಿ ದಾನದತ್ತಿಗಳನ್ನು ಬಿಟ್ಟಿರುವುದನ್ನು ದೃಢಪಡಿಸುತ್ತವೆ.

೧೨೫೪ರಲ್ಲಿ ಮುಮ್ಮಡಿ ನರಸಿಂಹನು ಪಟ್ಟಾಭಿಷಿಕ್ತನಾದನು. ಇವನ ಆಳ್ವಿಕೆಯಲ್ಲಿ ದಾವಣಗೆರೆ, ಹೊಳಲ್ಕೆರೆ, ಹಿರಿಯೂರು ಮತ್ತು ಚಿತ್ರದುರ್ಗ ಪ್ರಾಂತ್ಯಗಳು ಸೇರಿಕೊಂಡಿದ್ದವು. ಈ ಪ್ರದೇಶಗಳಲ್ಲಿ ಮುಮ್ಮಡಿ ನರಸಿಂಹನಿಗೆ ಸಂಬಂಧಿಸಿದಂತೆ ಸುಮಾರು ಒಂಬತ್ತು ಶಾಸನಗಳು ದೊರಕಿವೆ. ದಾವಣಗೆರೆ ಪ್ರದೇಶದಲ್ಲಿ ಮುಮ್ಮಡಿ ನರಸಿಂಹನಿಗೆ ಸಂಬಂಧಿಸಿದಂತೆ ಹರಿಹರ ಪ್ರದೇಶದ ಹರಿಹರ ದೇವಾಲಯದ ಉತ್ತರ ಭಾಗದಲ್ಲಿ ದೊರೆತ ವೀರಗಲ್ಲು ಇವನ ಆಡಳಿತದ ಬಗ್ಗೆ ವಿವರಿಸುತ್ತದೆ. ಈ ವೀರಗಲ್ಲು ಐತಿಹಾಸಿಕ ದೃಷ್ಟಿಯಿಂದ ಮಹತ್ವದ್ದಾಗಿದೆ. ಹರಿಹರ ದೇವಾಲಯದ ಪೂರ್ವ ದಿಕ್ಕಿಗಿರುವ ಐದು ಅಂತಸ್ತಿನ ದ್ವಾರ ಮಂಟಪವನ್ನು ಕಟ್ಟಿಸಿ ಪ್ರಸನ್ನ ಸೋಮನಾಥಪುರ ಅಗ್ರಹಾರವನ್ನು ಸ್ಥಾಪಿಸಿದನು. ಮಂತ್ರಿ ಸೋಮಣ್ಣ ನಾಯಕನು ಮಂಟಪದ ಗೋಪುರದ ಮೇಲೆ ಪಂಚ ಕಳಸವನ್ನು ಇರಿಸಿ ಅಲ್ಲಿಂದ ಬರುತ್ತಿರುವಾಗ ಕಂಚಿಕೆರೆಯ ಬಳಿ ಬೇಡರು ಅವನನ್ನು ಮುತ್ತಿದರು. ಅವರಲ್ಲಿ ಕೆಲವರನ್ನು ಇವನು ಕೊಂದುಹಾಕಿದನು. ಆದರೂ ಕೊನೆಗೆ ಬೇಡರ ಪಡೆಯಿಂದ ಮರಣ ಹೊಂದಿದನು. ಆತನ ಸ್ಮಾರಕವಾಗಿ ಮೇಲಿನ ವೀರಗಲ್ಲನ್ನು ಸ್ಥಾಪಿಸಿದರು ಎಂಬ ಐತಿಹ್ಯವಿದೆ. ಹಾಗೆ ಮುಮ್ಮಡಿ ನರಸಿಂಹನ ಸೋದರ ಸಂಬಂಧಿ ಸೋಮೆಯ ದಣ್ಣನಾಯಕನು ಹರಿಹರ ದೇವಾಲಯದ ಮಹಾದ್ವಾರದ ಬಳಿ ಇರುವ ಶಾಸನವನ್ನು ಬರೆಸಿದನು. ಇವನಿಗೆ ಗಾಯಿಗೋಪಾಲ, ಗಂಡಪೆಂಡರ, ಮಂಡಲಿಕ ಇವೇ ಮೊದಲಾದ ಬಿರುದುಗಳಿದ್ದವು. ಇವನು ಪ್ರಸನ್ನ ಸೋಮನಾಥಪುರವೆಂಬ ಅಗ್ರಹಾರ ಸ್ಥಾಪಿಸಿ ಅಲ್ಲಿ ಶಿವ ಮತ್ತು ವಿಷ್ಣುದೇವಾಲಯಗಳನ್ನು ಕಟ್ಟಿಸಿದನೆಂದು ಈ ಮೇಲಿನ ಶಾಸನದಿಂದ ತಿಳಿದುಬರುತ್ತದೆ.[೮೯]

ಉಚ್ಚಂಗಿದುರ್ಗವು ಪ್ರಮುಖ ಗಿರಿದುರ್ಗವಾಗಿತ್ತು. ಈ ಗಿರಿದುರ್ಗವನ್ನು ವೀರಬಲ್ಲಾಳನು ವಶಪಡಿಸಿಕೊಂಡಿದ್ದನು. ಇದು ಪ್ರಮುಖ ಘಟನೆಯಾಗಿತ್ತು. ಈ ಕೋಟೆಯನ್ನು ಪುನಃ ಪಾಂಡ್ಯ ಅರಸನಿಗೆ ಕೊಟ್ಟು ತನ್ನ ಸಾಮಂತ ಅರಸನನ್ನಾಗಿ ನೇಮಿಸಿದನು ಎಂದು ವೀರ ಬಲ್ಲಾಳನು ಉಚ್ಚಂಗಿ ಗಿರಿದುರ್ಗವನ್ನು ತನ್ನ ರಾಜ್ಯದ ಪ್ರಾಂತ್ಯವೊಂದರ ಮುಖ್ಯ ಪಟ್ಟಣವಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದುದ್ದು ತಿಳಿದುಬರುತ್ತದೆ. ಇವನ ಕಾಲದ ಶಾಸನಗಳು ಬಾಗಳಿ ಮತ್ತಿತರ ಕಡೆ ದೊರೆತಿರುವುದರಿಂದ ಇವನ ಆಳ್ವಿಕೆ ಇಲ್ಲಿಯವರೆಗೆ ವಿಸ್ತರಿಸಿತ್ತೆಂದು ಹೇಳಬಹುದು. ಮುಂದೆ ವಿಷ್ಣುವರ್ಧನ ಚಾಲುಕ್ಯರ ಅಧೀನದಿಂದ ಸ್ವತಂತ್ರಗೊಂಡು ದಾವಣಗೆರೆ ಪ್ರದೇಶದಲ್ಲಿ ಆಳ್ವಿಕೆ ನಡೆಸಿದನು. ಉಚ್ಚಂಗಿ ಪಾಂಡ್ಯರನ್ನು ಬನವಾಸಿಯ ಕದಂಬರನ್ನು ಸೋಲಿಸಿ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ನಂತರ ಬಲ್ಲಾಳ ಅಧಿಕಾರಕ್ಕೆ ಬಂದು ಚೆಂಗಾಳ್ವರನ್ನು ಮತ್ತು ಉಚ್ಚಂಗಿ ಪಾಂಡ್ಯರನ್ನು ಸೋಲಿಸಿ ಉಚ್ಚಂಗಿದುರ್ಗವನ್ನು ವಶಪಡಿಸಿಕೊಂಡನು. ಇವರ ಮೇಲೆ ಪಡೆದ ವಿಜಯದ ನೆನಪಿಗಾಗಿ ಹಲವು ಬಿರುದುಗಳನ್ನು ಧರಿಸಿದನು ಎಂಬುದನ್ನು ಕೆಲವು ಶಾಸನಗಳು ಉಲ್ಲೇಖಿಸುತ್ತವೆ.

ಹೊಯ್ಸಳರು ಈ ಭಾಗದಲ್ಲಿ ವಿಶಿಷ್ಟವಾದ ಕೊಡುಗೆಗಳನ್ನು ನೀಡಿದ್ದಾರೆ. ದಾವಣಗೆರೆ ಜಿಲ್ಲೆಯ ಕೃಷಿ ವ್ಯಾಪಾರ, ಧಾರ್ಮಿಕ ಕ್ಷೇತ್ರಗಳಿಗೆ ಪ್ರೇರಕವಾಗುವಂತಹ ಚಟುವಟಿಕೆಗಳು ಅವರ ಕಾಲದ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಹೊಯ್ಸಳ ರಾಜರುಗಳ ಮಾಂಡಲೀಕರು ಮತ್ತು ಮಂತ್ರಿಗಳು ರಾಜನ ಪರವಾಗಿ ಶಾಸನಗಳನ್ನು ಹಾಕಿಸಿರುವುದು ಕಂಡುಬರುತ್ತದೆ. ಮುಮ್ಮಡಿ ಬಲ್ಲಾಳ ಆಡಳಿತ ನಡೆಸುವ ಸಂದರ್ಭದಲ್ಲಿ ಮುಸ್ಲಿಮರು ಹೊಯ್ಸಳರ ಮೇಲೆ ದಾಳಿ ನಡೆಸಿ ಹೊಯ್ಸಳ ಸಾಮ್ರಾಜ್ಯ ಅಸ್ತಂಗತವಾಗುವಂತೆ ಮಾಡಿದರು. ಮುಂದೆ ಇವರ ಕೊಡುಗೆಗಳನ್ನು, ಸಂಸ್ಕೃತಿಯನ್ನು ಜೀವಂತವಾಗಿರಿಸಿದ ಕೀರ್ತಿ ವಿಜಯನಗರದ ಅರಸರಿಗೆ ಸಲ್ಲುತ್ತದೆ.

ದಾವಣಗೆರೆ ಜಿಲ್ಲೆಯಲ್ಲಿ ಹೊಯ್ಸಳರಿಗೆ ಸಂಬಂಧಿಸಿದಂತೆ ಜಗಲೂರು ತಾಲ್ಲೂಕಿನ ಕಲ್ಲೇದೇವರಪುರ ದೇವಾಲಯಕ್ಕೆ ಸಮೀಪವಿರುವ ಶಾಸನ ಸೋಮೇಶ್ವರನು ಆಳ್ವಿಕೆ ನಡೆಸಿದ ಎಂದು ತಿಳಿಸುತ್ತದೆ. ಈ ವಿಚಾರವನ್ನು ಲಕ್ಷ್ಮಣ್ ತೆಲಗಾವಿ ಮತ್ತು ಬಿ.ರಾಜಶೇಖರಪ್ಪನವರು ಚಂದ್ರವಳ್ಳಿ ಕೃತಿಯಲ್ಲಿ ದಾಖಲಿಸಿದ್ದಾರೆ. ಇದೇ ವಿಚಾರವನ್ನು ೧೨೫೬ರಲ್ಲಿ ಸೋಮೇಶ್ವರನು ವಿಧಿವಶನಾಗುವ ಮೊದಲೇ ಚಿತ್ರದುರ್ಗ, ದಾವಣಗೆರೆ, ಹೊಳಲ್ಕೆರೆ, ಹಿರಿಯೂರು ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿಸಿರುವರು.

ದಾವಣಗೆರೆ ಪ್ರದೇಶ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತ್ತೆಂದು ಶಾಸನ, ಗೆಜೆಟಿಯರ್ ಆಧಾರದ ಮೂಲಕ ಹರಪನಹಳ್ಳಿಯ ಉಚ್ಚಂಗಿದುರ್ಗ ನೀಲಗುಂದ, ಬಾಗಳಿ, ಅಣಜಿಗೆರೆ ಪ್ರದೇಶಗಳಲ್ಲಿ ದೊರೆತಿರುವ ಶಾಸನಗಳಿಂದ ಈ ಭಾಗ ಹೊಯ್ಸಳರಿಗೆ ಸೇರಿತ್ತೆಂದು ದೃಢಪಡಿಸಬಹುದು.

ಕೊಟ್ರೇಶ್ ಉತ್ತಂಗಿಯವರ ಹೊನ್ನಾಳಿಯ ಬೇಲಿ ಮಲ್ಲೂರು, ಬೆಳಗುತ್ತಿ, ಕುರುವನಗಡ್ಡೆ, ಅರಕೆರೆ, ಕಣಿವೆ ಕುಲಗಟ್ಟ, ಮಾವನಕೋಟೆ, ಚಟ್ನಹಳ್ಳಿಗಳಲ್ಲಿ ದೊರೆತ ಶಾಸನಗಳನ್ನಾಧರಿಸಿ ಹೊನ್ನಳಿ ಪ್ರದೇಶ ಹೊಯ್ಸಳರ ಆಳ್ವಿಕೆಗೆ ಒಳಪಟ್ಟತ್ತು ಎಂದು ಉಲ್ಲೇಖಿಸಿದ್ದಾರೆ. ಮತ್ತು ಸುಮತೀಂದ್ರ ನಾಡಿಗರು ಚನ್ನಗಿರಿಯಲ್ಲಿ ದೊರೆತ ೧೨ ಶಾನಗಳನ್ನಾಧರಿಸಿ ಚನ್ನಗಿರಿ ತಾಲ್ಲೂಕು ಹೊಯ್ಸಳರ ಆಳ್ವಿಕೆಗೆ ಒಳಪಟ್ಟತ್ತು ಎಂದು ತಿಳಿಸಿದ್ದಾರೆ. ಹಾಗೆಯೇ ಎಚ್.ತಿಪ್ಪೇಸ್ವಾಮಿಯವರು ದಾವಣಗೆರೆ ಪ್ರದೇಶದಲ್ಲಿ ದೊರೆತ ಶಾಸನಗಳಿಂದ ಹೊಯ್ಸಳರು ದಾವಣಗೆರೆ ಪ್ರದೇಶವನ್ನು ಆಳಿರುವರು ಎಂದು ತಮ್ಮ ಅಧ್ಯಯನಗಳಿಂದ ತಿಳಿಸಿದ್ದಾರೆ. ಈ ಮೇಲಿನ ದಾಖಲೆಗಳಿಂದ ದಾವಣಗೆರೆಯಲ್ಲಿ ಹೊಯ್ಸಳ ಆಳ್ವಿಕೆ ಇತ್ತು ಎಂದು ತಿಳಿಯಬಹುದು.

### ೨.೨.೩. ವಿಜಯನಗರ ಕಾಲ



ದೆಹಲಿ ಸುಲ್ತಾನರ ದಾಳಿಗೆ ಕರ್ನಾಟಕದ ರಾಜಮನೆತನಗಳಾದ ಸೇವುಣರು, ಹೊಯ್ಸಳರು, ಕಾಕತೀಯರು ಹಾಗೂ ಪಾಂಡ್ಯರು ಅವನತಿಯಾದರು. ಈ ಮುಸಲ್ಮಾನರಿಂದ ಪಾರಂಪಾರಿಕ ಧಾರ್ಮಿಕ ಮೌಲ್ಯಗಳಿಗೆ ಆಘಾತವುಂಟಾಯಿತು. ಜನರಿಗೆ ಭದ್ರತೆಯಿಲ್ಲದೆ ಅರಾಜಕ ಸ್ಥಿತಿ ಕಾಣಿಸಿಕೊಂಡಿತು. ಇಂತಹ ಸ್ಥಿತಿಯಲ್ಲಿ ತುಂಗಭದ್ರಾ ನದಿ ದಂಡೆಯ ಮೇಲೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ಉತ್ತರ ಭಾರತದಲ್ಲಿ ದೆಹಲಿ ಸುಲ್ತಾನರು ಆಡಳಿತ ನಡೆಸುತ್ತಿದ್ದ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯ ಪ್ರಬಲರಾದರು.

ಹೊಯ್ಸಳ ರಾಜ್ಯದ ಪತನವಾದ ನಂತರ ವಿಜಯನಗರ ಸಾಮ್ರಾಜ್ಯವು ಹಂಪಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೧೩೩೬ರಲ್ಲಿ ಸ್ಥಾಪನೆಯಾಯಿತು. ೧೩೩೬ರಿಂದ ೧೫೬೫ರ ವರೆಗೆ ಸಂಗಮ, ಸಾಳ್ವ, ತುಳುವ, ಅರವೀಡು ಎಂಬ ನಾಲ್ಕು ವಂಶಗಳು ವಿಜಯನಗರ ಸಾಮ್ರಾಜ್ಯವನ್ನು ಆಳಿದವು. ಒಂದು ಕಡೆ ವಿದೇಶಿ ಪ್ರಭಾವವನ್ನು ತಡೆಗಟ್ಟುತ್ತ ಮತ್ತೊಂದು ಕಡೆ ಸ್ಥಳೀಯ ಸಂಸ್ಕೃತಿಯನ್ನು ಬಿಂಬಿಸುತ್ತಾ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಈ ವಂಶದ ಅರಸರಾದ ಒಂದನೇ ಹರಿಹರ, ಒಂದನೇ ಬುಕ್ಕ, ಎರಡನೇ ಹರಿಹರ, ಮೊದಲನೆ ದೇವರಾಯ, ಇಮ್ಮಡಿ ದೇವರಾಯ, ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವ, ಅಳಿಯ ರಾಮರಾಯ ಮುಂತಾದ ಪ್ರಮುಖ ಅರಸರು ಕರ್ನಾಟಕವನ್ನಲ್ಲದೆ ಇಡೀ ದಕ್ಷಿಣ ಭಾರತವನ್ನು ಆಳ್ವಿಕೆ ಮಾಡಿದ್ದಾರೆ. ಹಾಗೆಯೇ ೧೫೬೫ರಲ್ಲಿ ಬಹಮನಿಯರ ದಾಳಿಯಿಂದ ಮತ್ತು ಆಂತರಿಕ ಸಂಘರ್ಷಗಳಿಂದ ವಿಜಯನಗರ ಸಾಮ್ರಾಜ್ಯ ಅವನತಿ ಹೊಂದಿತು. ಕಳೆದ ಶತಮಾನದಿಂದಲೂ ಅನೇಕ ಇತಿಹಾಸಕಾರರು, ವಿದ್ವಾಂಸರು ಈ ಸಾಮ್ರಾಜ್ಯದ ಕುರಿತು ವಿವಿಧ ನೆಲೆಯಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಅಲ್ಲದೆ ವಿಜಯನಗರದ ಕಾಲದಲ್ಲಿಯೇ ವಿದೇಶಗಳಿಂದ ಬಂದಿದ್ದ ಪ್ರವಾಸಿಗರು ಇಲ್ಲಿನ ರಾಜವೈಭವವನ್ನು ಕಂಡು ತಮ್ಮ ಪ್ರವಾಸ ಗ್ರಂಥಗಳಲ್ಲಿ ದಾಖಲಿಸಿದ್ದಾರೆ.

ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಅರಸರು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ತಮ್ಮ ಆಳ್ವಿಕೆಯನ್ನು ನಡೆಸಿದ್ದಾರೆ. ಈ ಪ್ರದೇಶದಲ್ಲಿ ದೊರೆತ ಅವರ ಅನೇಕ ಶಾಸನಗಳ ಸಹಾಯದಿಂದ ವಿಜಯನಗರ ಅರಸರು ಈ ಪ್ರದೇಶದ ಮೇಲೆ ಹೊಂದಿದ್ದ ಆಡಳಿತಾತ್ಮಕ ಸಂಬಂಧಗಳನ್ನು ತಿಳಿಯಬಹದು. ಇತಿಹಾಸಕಾರರ ವಿವಿಧ ಪ್ರದೇಶಗಳ ಅಧ್ಯಯನಗಳಿಂದ, ಗೆಜೆಟಿಯರ್‌ಗಳಿಂದ ಮುಖ್ಯವಾಗಿ ಈ ಪ್ರದೇಶದಲ್ಲಿ ವಿಜಯನಗರ ಕಾಲದ ಶಾಸನ, ನಾಣ್ಯ, ದೇವಾಲಯಗಳು, ಕೈಫಿಯತ್ತುಗಳು ಅವರ ಆಡಳಿತದ ಪ್ರತೀಕವಾಗಿವೆ ಎನ್ನಬಹುದು.

ದಾವಣಗೆರೆ ಜಿಲ್ಲೆ ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತೆಂದು ತಿಳಿಯಲು ಆ ಕಾಲದ ದೇವಾಲಯಗಳು ನಾಣ್ಯಗಳ ಆಧಾರಗಳಿಂದ ತಿಳಿದುಬರುತ್ತದೆ.

ಗೆಜೆಟಿಯರ್‌ಗಳು, ಶಾಸನಗಳು, ದೇವಾಲಯಗಳನ್ನು ಆಧರಿಸಿ ರಚನೆಯಾದ ಅನೇಕ ಕೃತಿಗಳಲ್ಲಿ ದಾವಣಗೆರೆ ಪ್ರದೇಶದಲ್ಲಿ ವಿಜಯನಗರದ ಆಳ್ವಿಕೆ ಕುರಿತು ರಚನೆಯಾಗಿದೆ. ಕೆ.ಎಸ್. ಶಿವಣ್ಣ ಅವರು ಎರಡನೇ ಹರಿಹರನ ಕಾಲಕ್ಕೆ ಸೇರಿದ ದಾವಣಗೆರೆ ಶಾಸನ ಹಾಗೂ ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತ ಶಾಸನಗಳನ್ನು ಆಧರಿಸಿ ಈ ಪ್ರದೇಶ ವಿಜಯನಗರ ಆಳ್ವಿಕೆಗೆ ಸೇರಿತ್ತು ಎನ್ನುವ ವಿಚಾರವನ್ನು ಚಂದ್ರವಳ್ಳಿ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಕೊಟ್ರೇಶ್ ಉತ್ತಂಗಿಯವರು ತಮ್ಮ ಹೊನ್ನೆಲೆಗಳು ಕೃತಿಯಲ್ಲಿ ಹೊನ್ನಾಳಿ ತಾಲ್ಲೂಕಿನಲ್ಲಿ ಕಳಾಸಪುರ, ಕುರುಬದಗುಡ್ಡ, ಸೌಳಂಗ, ಸುರಹೊನ್ನೆ, ಸಿಂಗಟಗೆರೆಗಳಲ್ಲಿ ದೊರೆತ ಶಾಸನಗಳನ್ನು ಹಾಗೂ ನ್ಯಾಮತಿ, ಚಿಕ್ಕಗೊಶಿಗೇರೆ ಶಾಸನಗಳನ್ನು ಆಧರಿಸಿ ವಿಜಯನಗರ ಸಾಮ್ರಾಜ್ಯದ ಅರಸರು ದಾವಣಗೆರೆ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆ ಎಂದು ಉಲ್ಲೇಖಿಸಿದ್ದಾರೆ. ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಪ್ರದೇಶಗಳನ್ನು ಕುರಿತು ತಾಲ್ಲೂಕು ದರ್ಶನಗಳು ದಾವಣಗೆರೆ ಪ್ರದೇಶ ವಿಜಯನಗರ ಸಾಮ್ರಾಜ್ಯದ ಆಡಳಿತ ವ್ಯಾಪ್ತಿಗೊಳಪಟ್ಟಿತ್ತು ಎಂದು ತಿಳಿದುಬರುತ್ತದೆ. ಬಿ.ರಾಜಶೇಖರಪ್ಪನವರು ಜಗಳೂರು ತಾಲ್ಲೂಕಿನ ಗುತ್ತಿದುರ್ಗ, ಕೃಷ್ಣಪುರ, ನಿಟ್ಟೂರುಗಳಲ್ಲಿ ದೊರೆತ ಶಾಸನಗಳು ವಿಜಯನಗರ ಆಳ್ವಿಕೆ ಕಾಲದವು ಎಂದು ಇತಿಹಾಸದಲ್ಲಿ ದಾಖಲಿಸಿರುವರು. ಬಳ್ಳೇಕೆರೆ ಹನುಮಂತಪ್ಪ ಅವರು ರಚಿಸಿದ ಹರಿಹರ ತಾಲೂಕು ದರ್ಶನ ಎಂಬ ಕೃತಿಯಲ್ಲಿ ಮಲೆಬೆನ್ನೂರು, ಕೊಂಡಜ್ಜಿ ಗಂಗನರಸಿ ಮುಂತಾದ ಗ್ರಾಮಗಳಲ್ಲಿ ದೊರೆತ ಶಾಸನಗಳ ಆಧಾರದ ಮೇಲೆ ವಿಜಯನಗರ ಸಾಮ್ರಾಜ್ಯದ ಅರಸರು ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ.

ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದಂತೆ ಅನೇಕ ಶಾಸನಗಳು ದೊರೆತಿದ್ದು ಅವುಗಳು ಬಿ.ಎಲ್.ರೈಸ್ ಅವರ ಸಂಪಾದಿತ 'ಎಫಿಗ್ರಾಫಿಯಾ ಕರ್ನಾಟಿಕ ಹನ್ನೊಂದ'ರಲ್ಲಿ ವಿಜಯನಗರ ಅರಸರಿಗೆ ದಾವಣಗೆರೆ, ಹರಿಹರ, ಜಗಲೂರುಗಳಿಗೆ ಸಂಬಂಧಿಸಿದಂತೆ ಶಾಸನಗಳು ಪ್ರಕಟವಾಗಿವೆ. ಸಂಪುಟ ಏಳರಲ್ಲಿ ವಿಜಯನಗರ ಅರಸರ

ಹದಿನೆಂಟು(ಚನ್ನಗಿರಿ, ಹೊನ್ನಾಳಿ) ಶಾಸನಗಳು ಪ್ರಕಟವಾಗಿವೆ. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೧ರಲ್ಲಿ ಹರಪನಹಳ್ಳಿ ತಾಲ್ಲೂಕಿನಲ್ಲಿ ವಿಜಯನಗರ ಅರಸರ ಹನ್ನೆರಡು ಶಾಸನಗಳು ಪ್ರಕಟವಾಗಿವೆ. ಈ ಶಾಸನಗಳ ಆಧಾರದ ಮೇಲೆ ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಆಳ್ವಿಕೆ ಕಂಡುಬರುತ್ತದೆ.

೧೩೩೬ರಲ್ಲಿ ಸಂಗಮ ವಂಶದಿಂದ ಪ್ರಾರಂಭವಾದ ಇವರ ಆಳ್ವಿಕೆ ದಾವಣಗೆರೆ ಪ್ರದೇಶದಲ್ಲಿ ೧ನೇ ಬುಕ್ಕರಾಯ(೧೩೫೬-೧೩೭೭) ರಾಜ್ಯವಾಳುತ್ತಿದ್ದಾಗ ಬುಕ್ಕರಾಯನು ತನ್ನ ತಂದೆಯ ಹೆಸರಿನಲ್ಲಿ ಭುವನಸಮುದ್ರ ಕೆರೆ ಮತ್ತು ಅಲ್ಲಿಯೇ ಭುವನೇಶ್ವರ ದೇವರನ್ನು ನಿರ್ಮಿಸಿ ಆ ದೇವರಿಗೆ ಎತ್ತು ಮತ್ತು ಭೂಮಿಯನ್ನು ದಾನ ನೀಡಿದನು.[೬೮] ಬುಕ್ಕರಾಯನ ಮರಣದ ನಂತರ ಅವನ ಮಗ ಇಮ್ಮಡಿ ಹರಿಹರ ಆಳ್ವಿಕೆ ಮಾಡಿದನು. ಈತನು ೧೩೯೦ರಲ್ಲಿ ಹೊನ್ನಾಳಿಯ ಕುರುವಗದ್ದೆ ಶಾಸನದಲ್ಲಿ ಅನವೇರಿ ನಾಡೊಳಗಣ ಅಂಕುರಗುಂಟಿ ಗ್ರಾಮವನ್ನು ಕುರುವರ ರಾಮೇಶ್ವರ ದೇವರ ಪರವಾಗಿ ಬಿಟ್ಟರೆಂದು ತಿಳಿದುಬರುತ್ತದೆ.[೬೯]

೨ನೇ ಹರಿಹರ ರಾಯನು ವಿಷ್ಣು ಭಕ್ತನಾಗಿದ್ದು ನಗರದಲ್ಲಿನ ವಿಷ್ಣು ದೇವಾಲಯಕ್ಕೆ ದತ್ತಿಬಿಟ್ಟ ಬಗ್ಗೆ ಶಾಸನ ವಿವರಿಸುತ್ತದೆ. ದಾವಣಗೆರೆಯಲ್ಲಿ ದೊರೆತಿರುವ ಶಾಸನದ ಪ್ರಕಾರ ಎರಡನೇ ಹರಿಹರನು ಶಂಕರಪುರ ಎಂಬ ಗ್ರಾಮವನ್ನು ದಾನ ಕೊಟ್ಟನು. ಈ ಗ್ರಾಮವು ಹರಿಹರಸೀಮೆ, ಉಚ್ಚಂಗಿವಂತೆ, ಕೊಟ್ಟೂರು, ಚಾವಡಿಗೆ ಸೇರಿತ್ತೆಂದು ಈ ಶಾಸನದಲ್ಲಿ ಉಲ್ಲೇಖವಿದೆ.[೭೦] ಈ ಗ್ರಾಮವನ್ನು ಎರಡನೇ ಹರಿಹರನು ಬ್ರಾಹ್ಮಣರಿಗೆ ದಾನ ನೀಡಿದನು. ಈ ಗ್ರಾಮದಲ್ಲಿ ಬ್ರಾಹ್ಮಣರು ಸತತವಾಗಿ ವೇದ ಮತ್ತು ಶಾಸ್ತ್ರಗಳನ್ನು ಅಧ್ಯಯನ ಮಾಡಲು ಅನುಕೂಲ ಮಾಡಿದನು. ದಾವಣಗೆರೆ ಮತ್ತು ಹರಿಹರ ತಾಲ್ಲೂಕುಗಳು ವಿಜಯನಗರ ಸಾಮ್ರಾಜ್ಯದ ಕೊಟ್ಟೂರು ಚಾವಡಿಗೆ ಸೇರಿದ್ದವು.

ಜಗಲೂರು ತಾಲ್ಲೂಕಿನ ಬಿಳಿಚೋಡಿನಲ್ಲಿ ಇಮ್ಮಡಿ ಹರಿಹರನ ಅರ್ಧವರಹಗಳು ದೊರೆತಿವೆ. ಈ ನಾಣ್ಯಗಳಲ್ಲಿ ಶಿವ ಪಾರ್ವತಿಯರ ಚಿತ್ರ ಹಿಂಭಾಗದಲ್ಲಿ ಶ್ರೀ ಪ್ರತಾಪಹರಿಹರ ಎಂಬ ಮೂರು ಸಾಲಿನ ನಾಗರ ಲಿಪಿ ಇದೆ.[೭೧] ಇದೇ ರೀತಿಯ ತಾಮ್ರದ ಎಂಟು ನಾಣ್ಯಗಳು ಚನ್ನಗಿರಿ ತಾಲ್ಲೂಕಿನ ಕೆರೆಬಿಳಿಚಿಯಲ್ಲಿ ದೊರೆತಿದ್ದು ಅವುಗಳ ಮೇಲ್ಮುಖದಲ್ಲಿ ಉಮಾಮಹೇಶ್ವರ, ನಿಂತನಂದಿ, ಗರುಡ, ಹಾರುತ್ತಿರುವ ಗರುಡದ ಚಿತ್ರಗಳಿವೆ. ಹಿಮ್ಮುಖದಲ್ಲಿದ್ದ ಬರಹಗಳು ಕೆಲವು ನಾಣ್ಯಗಳಲ್ಲಿ ತ್ರುಟಿತವಾಗಿದ್ದು ಒಂದು ನಾಣ್ಯದ ಹಿಂಭಾಗದಲ್ಲಿ ಶ್ರೀಕೃಷ್ಣರಾಯ ಎಂಬ ನಾಗರಿ ಲಿಪಿಯ ಅಕ್ಷರಗಳಿವೆ.[೭೨] ಅಲ್ಲದೆ ಈ ಜಿಲ್ಲೆಯ ನಿರ್ಥಡಿ, ಮಾಯಕೊಂಡ, ಕೊಣಚುಗಲ್ಲು, ಕೊಡದಗುಡ್ಡ ಮೊದಲಾದ ಕಡೆ ವಿಜಯನಗರ ಸಾಮ್ರಾಜ್ಯ ಕಾಲದ ದೇವಾಲಯಗಳು ಕಂಡುಬಂದಿದೆ. ಇವುಗಳಿಂದ ವಿಜಯನಗರದ ಆಳ್ವಿಕೆಯು ಈಗಿನ ದಾವಣಗೆರೆ ಜಿಲ್ಲೆಯವರಿಗೂ ಅವರ ರಾಜ್ಯಭಾರ ವಿಸ್ತರಿಸಿತ್ತೆಂದು ಸ್ಪಷ್ಟವಾಗುತ್ತದೆ.

ಇಮ್ಮಡಿ ಹರಿಹರರಾಯನ ಮರಣದ ನಂತರ ೧ನೇ ದೇವರಾಯನು ರಾಜ್ಯಭಾರ ನಡೆಸಿ ಇವನು ಅನೇಕ ದೇವಾಲಯಗಳನ್ನು ನಿರ್ಮಿಸಿದನು. ೧೪೧೦ರಲ್ಲಿ ದೇವರಾಯನು ಹರಿದ್ರಾ ನದಿಗೆ ಕಟ್ಟೆ ಕಟ್ಟಿಸಲು ಹರಿಹರದೇವರು ಮತ್ತು ಬ್ರಾಹ್ಮಣರೊಂದಿಗೆ ಒಪ್ಪಂದ ಮಾಡಿಸಿದನು. ಕಟ್ಟೆ ಕಟ್ಟಿಸುವ ಜವಾಬ್ದಾರಿಯನ್ನು ಬುಳ್ಳಪ್ಪ ಅಮಾತ್ಯನಿಗೆ ವಹಿಸಿದನು. ಇದರಿಂದ ಬನ್ನಿಗೋಡು, ಬೆಳ್ಳೂಡಿ, ಹನಗವಾಡಿ, ಹರಿಹರ, ಗುತ್ತೂರು, ಮತ್ತು ಗಂಗನರಸಿ ಗ್ರಾಮಗಳಿಗೆ ನೀರು ಹರಿಸಿ ನೀರಾವರಿ ಮಾಡುವಂತೆ ಮಾಡಿದನು.[೬೩] ಇದೇ ಆವರಣದಲ್ಲಿ ಮತ್ತೊಂದು ಶಾಸನವು ಈ ಅಣೆಕಟ್ಟನ್ನು ಪುನರ್‌ನಿರ್ಮಿಸಿದ ವಿವರಗಳನ್ನು ನೀಡುತ್ತದೆ.[೬೪] ಇವರ ನಂತರ ೨ನೇ ದೇವರಾಯ ಆಳ್ವಿಕೆಗೆ ಬಂದನು. ಇವನನ್ನು ಪ್ರೌಢದೇವರಾಯನೆಂತಲೂ ಕರೆಯುತ್ತಾರೆ. ಇವನಿಗೆ ಸಂಬಂಧಿಸಿದಂತೆ ೧೪೨೮ರ ಶಾಸನವು ಹಿರಿಯೂರು ತಾಲ್ಲೂಕು ಸೋಮೇರಹಳ್ಳಿಯ ಸೋಮೇಶ್ವರ ದೇವಾಲಯದ ಬಳಿ ದೊರೆತಿದೆ. ಹಾಗೆಯೆ ದಾವಣಗೆರೆ ಜಿಲ್ಲೆಯಲ್ಲಿಯೂ ಇವರ ಬಗ್ಗೆ ಶಾಸನಗಳು ದೊರೆತಿವೆ.

ಇವರ ನಂತರ ಕೃಷ್ಣದೇವರಾಯ ಅಧಿಕಾರಕ್ಕೆ ಬಂದನು. ಇವರು ೧೫೦೯ರಿಂದ ೧೫೨೯ರವರೆಗೆ ವಿಜಯನಗರ ಸಾಮ್ರಾಜ್ಯವನ್ನು ಆಳ್ವಿಕೆ ನಡೆಸಿದನು. ವಿಜಯನಗರ ಅರಸರಲ್ಲೇ ಪ್ರಸಿದ್ಧನಾದ ಅರಸ. ಇವರಿಗೆ ಸಂಬಂಧಿಸಿದಂತೆ ಹೊಸದುರ್ಗ ತಾಲ್ಲೂಕಿನ ಮತ್ತೋಡಿನಲ್ಲಿ ದೊರೆತ ಕ್ರಿ.ಶ. ೧೫೧೧ ತಾಮ್ರಪತ್ರ ಶಾಸನವು ತುಳು ವಂಶದ ವಂಶಾವಳಿಗಳ ವಿವರಗಳನ್ನು ತಿಳಿಸುತ್ತದೆ.[೬೫] ಜಗಳೂರು ತಾಲ್ಲೂಕಿನ ನಿಬಗೂರಿನ ಕಲ್ಲಿನಾಥ ದೇವರ ಸನ್ನಿಧಿಯಲ್ಲಿ ದೊರೆತ ಶಾಸನವು ಬ್ರಾಹ್ಮಣರ ಭೋಜನ ಸತ್ರಕ್ಕೆ ದತ್ತಿ ಬಿಟ್ಟ ವಿವರಗಳು ನೀಡುತ್ತದೆ.[೬೬] ಕೃಷ್ಣದೇವರಾಯನ ಕಾಲದಲ್ಲಿ ಹಲವು ತೆರಿಗೆಗಳನ್ನು ರದ್ದು ಮಾಡಿರುವುದು ಶಾಸನಗಳಿಂದ ಕಂಡುಬರುತ್ತದೆ. ಕೃಷ್ಣದೇವರಾಯನ ಈ ಮೇಲಿನ ಶಾಸನಗಳಿಂದ ದಾವಣಗೆರೆ ಪ್ರದೇಶದಲ್ಲಿ ಅವರ ಆಳ್ವಿಕೆ ಇತ್ತು ಎಂಬುದನ್ನು ತಿಳಿದುಬರುತ್ತದೆ. ಇವನ ನಂತರ ಅಚ್ಯುತರಾಯ ರಾಜ್ಯಭಾರ ನಡೆಸಿದನು. ಇವನಿಗೆ ಸಂಬಂಧಿಸಿದಂತೆ ಹರಿಹರೇಶ್ವರ ದೇವಾಲಯದಲ್ಲಿ ಶಾಸನ ದೊರೆತಿದೆ. ಈ ಶಾಸನವು ಹಣಕಾಸು ಮಂತ್ರಿಯಾದ ತಿಮ್ಮರಸನ ಮಗ ನಾರಾಯಣದೇವನ ಹೆಸರನ್ನು ಉಲ್ಲೇಖಿಸುವ ಈ ಶಾಸನ ಹರಿಹರ ಸೀಮೆಯ ಬುಳ್ಳಪುರಕ್ಕೆ ಅಚ್ಯುತರಾಯಪುರ ಎಂದು ಪುನರ್‌ನಾಮಕರಣ ಮಾಡಿದ ವಿವರಗಳು ದೊರೆಯುತ್ತವೆ.[೬೭] ಇವನ ನಂತರ ವಿಜಯನಗರ ಸಾಮ್ರಾಜ್ಯದ ಕೊನೆಯ ಅರಸ ಸದಾಶಿವರಾಯನ ಶಾಸನಗಳೂ ಸಹ ಈ ಭಾಗದಲ್ಲಿ ದೊರೆತಿದೆ. ಈ ಮೇಲಿನ ಶಾಸನಗಳು ವಿಜಯನಗರ ಸಾಮ್ರಾಜ್ಯದ ಆಳ್ವಿಕೆ, ಅಧಿಕಾರ, ಕೊಡುಗೆಗಳನ್ನು ಉಲ್ಲೇಖಿಸುತ್ತವೆ. ಈ ಶಾಸನಗಳು ಅಂದಿನ ಆಡಳಿತ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುತ್ತವೆ. ಇವರು ಕಲೆ, ವಾಸ್ತುಶಿಲ್ಪಕ್ಕೆ ಮಹತ್ತರವಾದ ಕೊಡುಗೆ ನೀಡಿದ್ದರು. ಅನೇಕ ದೇವಾಲಯಗಳು, ಅಗ್ರಹಾರಗಳಿಗೆ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಅವುಗಳಲ್ಲದೆ ತಾಮ್ರಪತ್ರದಿಂದ

ವಿಜಯನಗರ ಅರಸ ವಂಶಾವಳಿ, ಬಿರುದಾವಳಿಗಳು ಹಾಗೂ ಅಣೆಕಟ್ಟು, ಕೆರೆ, ಕಾಲುವೆಗಳನ್ನು ನಿರ್ಮಿಸಿರುವುದು ತಿಳಿದುಬರುತ್ತದೆ.

ವಿಜಯನಗರ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳು ಇದ್ದವು. ಮಹಾನಾಡು ಮತ್ತು ಅಗ್ರಹಾರಗಳು ಎಂಬ ಸ್ಥಳೀಯ ಸಂಸ್ಥೆಗಳು ಈ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದ್ದವೆಂಬುದಕ್ಕೆ ಶಾಸನಗಳ ಆಧಾರವಿದೆ. ಅಗ್ರಹಾರದ ಜನರು ತಮ್ಮ ಸ್ಥಳೀಯ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುತ್ತಿದ್ದರು. ದಾವಣಗೆರೆ ಜಿಲ್ಲೆ ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಹಿಂದೂಧರ್ಮದ ರಕ್ಷಣೆ ವಿಜಯನಗರದ ಆಡಳಿತದ ಪ್ರಮುಖ ಧ್ಯೇಯಗಳಾಗಿದ್ದು ಅವು ಈ ಜಿಲ್ಲೆಯಲ್ಲಿ ಪ್ರವರ್ಧಮಾನಕ್ಕೆ ಬಂದಿತ್ತು. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯ ಅವನತಿ ಹೊಂದಿದಾಗ ಸಾಮಂತರಾಗಿದ್ದ ಪಾಳೆಯಗಾರರು ಸ್ವತಂತ್ರ ನಾಯಕರಾಗಿ ಹಿಂಧೂಧರ್ಮದ ಸಂಸ್ಕೃತಿಯನ್ನು ಪೋಷಿಸಿ ರಕ್ಷಿಸಿ ವಿಜಯನಗರ ಸಾಮ್ರಾಜ್ಯದ ಹಿತವನ್ನು ಕಾಪಾಡಿಕೊಳ್ಳಲು ಮುಂದಾದರು. ಶಾಸನ, ನಾಣ್ಯ ದೇವಾಲಯ, ಕೆರೆ, ಕೋಟೆಗಳ ಆಕರಗಳಿಂದ ವಿಜಯನಗರ ಅರಸರು ದಾವಣೆಗರೆ ಜಿಲ್ಲೆಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರೆಂದು ದೃಢಪಡಿಸುತ್ತವೆ.

**೨.೨.೪. ವಿಜಯನಗರೋತ್ತರ ಕಾಲ**

ವಿಜಯನಗರ ಸಾಮ್ರಾಜ್ಯ ಪತನವಾದಾಗ ಸಾಮಂತರಾಗಿದ್ದ ಪಾಳೆಯಗಾರರು, ಮಾಂಡಲಿಕರು ಸ್ವತಂತ್ರರಾಗಿ ಆಡಳಿತ ನಡೆಸಿದರು. ವಿಜಯನಗರ ಕಾಲದ ಸಂಸ್ಕೃತಿ, ಕಲೆ, ವಾಸ್ತುಶಿಲ್ಪದ ಶೈಲಿಯನ್ನು ಮುಂದುವರಿಸಿಕೊಂಡು ಸುಮಾರು ೩ ಶತಮಾನಗಳವರೆಗೆ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ೧೫ನೇ ಶತಮಾನದಲ್ಲಿ ಈ ಪಾಳೆಯಗಾರರು ಬೆಳಕಿಗೆ ಬಂದರು. ಅಂದಿನಿಂದ ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಅರಸರ ಆಳ್ವಿಕೆ ಪರೋಕ್ಷವಾಗಿ ಆರಂಭವಾಯಿತು. ಈ ಸಂದರ್ಭದಲ್ಲಿ ಚಿತ್ರದುರ್ಗ ಪಾಳೆಯಗಾರರು, ಹರತಿ, ರಾಯದುರ್ಗ, ಬಸವಾಪಟ್ಟಣ, ಹರಪನಹಳ್ಳಿ, ಸಂತೆಬೆನ್ನೂರು ಮುಂತಾದ ಹಲವು ಸಣ್ಣಪುಟ್ಟ ಪಾಳೆಯಗಾರರು ದಾವಣಗೆರೆ ಜಿಲ್ಲೆಯಲ್ಲಿ ರಾಜ್ಯಭಾರ ನಡೆಸಿರುವುದು ಕಂಡುಬರುತ್ತದೆ. ಈ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ಸಂಸ್ಕೃತಿಯನ್ನು ಪೋಷಿಸುತ್ತಾ ತಮ್ಮದೇ ಆದ ಪ್ರದೇಶದಲ್ಲಿ ಕಂದಾಯವನ್ನು ವಸೂಲಿ ಮಾಡಿ ಸ್ವತಂತ್ರ ನಾಯಕರಾಗಿ ಆಳ್ವಿಕೆ ನಡೆಸಿದ್ದಾರೆ. ವಿಜಯನಗರ ಅರಸರ ಆಳ್ವಿಕೆಯ ಸಂದರ್ಭದಲ್ಲಿ ಇವರು ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು. ಕ್ರಿ.ಶ. ೧೬ನೇ ಶತಮಾನದಿಂದ ಕ್ರಿ.ಶ. ೧೮ನೇ ಶತಮಾನದವರೆಗೆ ಚಿತ್ರದುರ್ಗ, ದಾವಣಗೆರೆ, ಚಿಕ್ಕಮಗಳೂರು, ಶಿವಮೊಗ್ಗ, ಹಾವೇರಿ, ಬಳ್ಳಾರಿ ಮುಂತಾದ ಜಿಲ್ಲೆಗಳ ವ್ಯಾಪ್ತಿಯಲ್ಲಿ ಅನೇಕ ಭೂಧಾನಗಳನ್ನು ತಮ್ಮ ಆಡಳಿತ ವ್ಯಾಪ್ತಿಗೆ ಸೇರಿಸಿಕೊಂಡು ಸಮರ್ಥರಾಗಿ ರಾಜ್ಯಾಡಳಿತ ನಡೆಸುತ್ತಿದ್ದುದಾಗಿ ಅವರ ಶಾಸನಗಳು, ಕೈಫಿಯತ್ತುಗಳು, ಲೇಖನಗಳಿಂದ ತಿಳಿದುಬರುತ್ತದೆ.

ಪಾಳೆಯಗಾರರಲ್ಲಿ ಪ್ರಮುಖರಾಗಿದ್ದ ಚಿತ್ರದುರ್ಗ ಪಾಳೆಯಗಾರರು ಸು. ೨೧೧ ವರ್ಷಗಳ ಕಾಲ ರಾಜ್ಯಭಾರ ನಡೆಸಿದರು. ಚಿತ್ರದುರ್ಗ ಪಾಳೆಯಗಾರರಲ್ಲಿ ಮತ್ತಿ ತಿಮ್ಮಣ್ಣನಾಯಕ ಓಬಣ್ಣನಾಯಕ, ಕಸ್ತೂರಿರಂಗಪ್ಪ ನಾಯಕ, ರಾಜಾವೀರಮದಕರಿನಾಯಕ ಮುಂತಾದವರು ಪ್ರಮುಖರಾಗಿದ್ದಾರೆ. ಇವರ ಆಳ್ವಿಕೆಯ ಸಂದರ್ಭದಲ್ಲಿ ಬಿದನೂರು, ಹರಪನಹಳ್ಳಿ, ಸಂತೆಬೆನ್ನೂರು, ಬಸವಾಪಟ್ಟಣ, ತರಿಕೇರಿ, ಪಾಳೆಯಗಾರರು ಇದ್ದರು ಅವರನ್ನು ಹೈದರಾಲಿ ಮತ್ತು ಟಿಪ್ಪು ಎಲ್ಲಾ ಪಾಳೆಯಗಾರರನ್ನು ಸೋಲಿಸಿ ಅವರ ಪ್ರದೇಶಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಆಳ್ವಿಕೆ ನಡೆಸಿದರು. ಹಲವು ವರ್ಷಗಳ ಕಾಲ ಪಾಳೆಯಗಾರರ ಪ್ರದೇಶಗಳನ್ನು ಹೈದರಾಲಿ ಮತ್ತು ಟಿಪ್ಪು ಆಳ್ವಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಮರಾಠರು ಆಗಿಂದಾಗ್ಗೆ ದಾಳಿ ಮಾಡುತ್ತಿದ್ದರಿಂದ ದಾವಣಗೆರೆಯನ್ನು ಮರಾಠರು ಕೂಡ ಆಳ್ವಿಕೆ ನಡೆಸಿದ್ದಾರೆ.

ಹೈದರಾಲಿ ಮತ್ತು ಟಿಪ್ಪು ಸಣ್ಣಪುಟ್ಟ ಪಾಳೆಯಗಾರರನ್ನು ಸೋಲಿಸಿ ತಮ್ಮ ಪ್ರದೇಶಗಳನ್ನು ವಶಪಡಿಸಿಕೊಂಡರು. ಆಡಳಿತ ವ್ಯವಸ್ಥೆಯ ಮೇಲೆ ಬದಲಾವಣೆ ಮಾಡಿದರು. ವಾಸ್ತುಶಿಲ್ಪದ ಮೇಲೆ ತಮ್ಮ ವೈಶಿಷ್ಟ್ಯದ ಮುದ್ರೆಯನ್ನು ಒತ್ತಿದರು. ಮುಂದೆ ಇವರ ಅವನತಿಯ ನಂತರ ದಾವಣಗೆರೆ ಜಿಲ್ಲೆಯನ್ನು ಮೈಸೂರಿನ ಒಡೆಯರ ಆಳ್ವಿಕೆಗೆ ಒಳಪಟ್ಟಿತು. ಮೈಸೂರಿನ ಒಡೆಯರು ಬ್ರಿಟಿಷರ ಅನುಮತಿಯನ್ನು ಪಡೆದು ದಾವಣಗೆರೆ ಪ್ರದೇಶವನ್ನು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ದಾವಣಗೆರೆ ಪ್ರದೇಶದಲ್ಲಿ ಒಡೆಯರು ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿರುವುದು ಕಂಡುಬರುತ್ತದೆ.

ಬ್ರಿಟಿಷ ಅಧಿಕಾರಿ ಸರ್ ಥಾಮಸ್ ಮನ್ರೋ ಬಳ್ಳಾರಿ ಪ್ರದೇಶದ ಮೊದಲ ಕಲೆಕ್ಟರ್ ಆಗಿ ನೇಮಕಗೊಂಡು ಆಡಳಿತ ನಡೆಸಿದನೆಂದು ಗೆಜೆಟಿಯರ್‌ಗಳಿಂದ ತಿಳಿದುಬರುತ್ತದೆ. ಹಾಗೆಯೇ ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಪ್ರದೇಶಗಳನ್ನು ಮೈಸೂರು ಒಡೆಯರ ಆಳ್ವಿಕೆಗೆ ಸೇರಿಸಲಾಯಿತು. ದಾವಣಗೆರೆ ಚರಿತ್ರೆ ರಚನೆಗೆ ಪ್ರವಾಸಿ ಫ್ರಾನ್ಸಿಸ್ ಬುಕಾನನ್ ವರದಿ ಸಹಾಯಕವಾಗುತ್ತದೆ.

ಹೀಗೆ ದಾವಣಗೆರೆ ಜಿಲ್ಲೆಯನ್ನು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಹಲವು ರಾಜವಂಶಗಳು, ಅರಸರು, ಪಾಳೆಯಗಾರರು, ಒಡೆಯರು, ಬ್ರಿಟಿಷರು ಆಳ್ವಿಕೆ ನಡೆಸಿದ್ದಾರೆ.

**ಕೊನೆಟಿಪ್ಪಣಿಗಳು**

೧. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ಪು. ೪೫೯

೨. ಗಿರಿಜಾ ಟಿ., ದಾವಣಗೆರೆ ದರ್ಶಿನಿ, ಪು. ೫

೩. ಎ. ಕ. ಸಂ-೧೧, ಶಾಸನ ಸಂಖ್ಯೆ-೪

೪. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪೂರ್ವೋಕ್ತ, ಪು. ೪೮೮

೫. ಗಿರಿಜಾ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ, ಪು. ೨೯

೬. ನಾಗರಾಜ ಎಂ.ಎಸ್., ಪ್ರೋಟೋ ಹಿಸ್ಟಾರಿಕ್ ಕಲ್ಚರ್ ಆಪ್ ತುಂಗಭದ್ರಾ ವ್ಯಾಲಿ ಪು.೧೪-೧೫

೭. ಕನ್ನಡ ವಿಷಯ ವಿಶ್ವಕೋಶ ಸಂ.೨ ಕರ್ನಾಟಕ, ಪು.ಸಂ.೨

೮. ಶಿವಮೊಗ್ಗ ಜಿಲ್ಲಾ ಗೆಜೆಟಿಯರ್ ಪು.೨೧

೯. ಪಪ್ಪು ಆರ್.ಎಸ್. ಪ್ರಾಚೀನ ಮಾನವ ಸಂಸ್ಕೃತಿಗಳು

೧೦. ಅದೇ ಪು.ಸಂ.

೧೧. ಶೇಷಾದ್ರಿ ಎಂ. ದಿ ಸ್ಟೋನ್ ಯೂಸಿಂಗ್ ಕಲ್ಚರ್ಸ್ ಆಫ್ ಪ್ರಿ ಹಿಸ್ಟಾರಿಕ್ ಆ್ಯಂಡ್ ಪ್ರೊಟೋ ಹಿಸ್ಟಾರಿಕ್, ಮೈಸೂರು ಪು. ೨೧

೧೨. ನಾಗರಾಜ ಎಂ.ಎಸ್. ಪ್ರೊಟೋ ಹಿಸ್ಟಾರಿಕ್ ಕಲ್ಚರ್ ಆಪ್ ದಿ ತುಂಗಭದ್ರಾ ವ್ಯಾಲಿ ಪು. ೧೪-೧೫

೧೩. ಕೊಟ್ರೇಶ್ ಎಂ., ಉಚ್ಚಂಗಿದುರ್ಗ(ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ) ಅಪ್ರಕಟಿತ ಎಂ.ಫಿಲ್. ಪ್ರಬಂಧ)

೧೪. ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ-೧೧, ನಿಬಗೂರು ಶಾಸನ

೧೫. ಸೋಮಶೇಖರ್ ಎಸ್.ವೈ., ಜಗಲೂರು, ಪು.ಸಂ. ೩

೧೬. ಅದೇ, ಪು.ಸಂ. ೩-೪

೧೭. ಅದೇ, ಪು.ಸಂ. ೪

೧೮. ಶೇಷಾದ್ರಿ ಎಂ., ಪೂರ್ವೋಕ್ತ, ಪು.ಸಂ. ೨೨

೧೯. ಜಯದೇವಪ್ಪ ಜೈನಕೇರಿ, "ಶಿವಮೊಗ್ಗ ಪರಿಸರದಲ್ಲಿಯ ಬೃಹತ್ ಶಿಲಾ ಸಂಸ್ಕೃತಿಯ ಗೀರುಬಂಡೆಗಳ ಚಿತ್ರಗಳು ಒಂದು ಹೊಸ ಶೋಧನೆ" ಇತಿಹಾಸ ದರ್ಶನ ಸಂ-೧೪, ಪು.ಸಂ. ೮

೨೦. ಸತ್ಯನ್ ಬಿ.ಎನ್., ಚಿತ್ರದುರ್ಗ ಗೆಜೆಟಿಯರ್, ಪು.ಸಂ. ೨೭

೨೧. ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ಪು.ಸಂ. ೧೩

೨೨. ಶ್ರೀನಿವಾಸ ಹೆಚ್.ವಿ., ರಾಮಕೃಷ್ಣ ಆರ್.(ಸಂ), ಸಮಗ್ರ ಕರ್ನಾಟಕ ಚರಿತ್ರೆ, ಪು. ೨೪

೨೩. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), ಚಂದ್ರವಳ್ಳಿ, ಪು. ೨

೨೪. ಗಿರಿಜಾ ಟಿ., ಮತ್ತು ಶೋಭ ಹೆಚ್.ಜಿ(ಸಂ), ಕರ್ಪೂರ ಸ್ಮರಣ ಸಂಚಿಕೆ, ರಾಜ್ಯಮಟ್ಟ ೩ನೇ ಮಹಿಳಾ ಸಮಾವೇಶ ದಾವಣಗೆರೆ ಪು.ಸಂ. ೩೬

೨೫. ಸೋಮಶೇಖರ ಎಸ್.ವೈ., ಆಕನೂರು ಗ್ರಾಮದ ಬಳಿ ಇತಿಹಾಸ ಕಾಲದ ಕುರುಹುಗಳು, ಇತಿಹಾಸ ದರ್ಶನ ಸಂ-೧೨, ಪು.ಸಂ. ೧೨-೧೩

೨೬. ಪಿಳ್ಳೆ ಕೆ.ಕೆ., ದಕ್ಷಿಣ ಭಾರತದ ಇತಿಹಾಸ, ಪು.ಸಂ. ೪೭

೨೭. ಶ್ರೀನಿವಾಸ ಎಂ, ಲಕ್ಷ್ಮಣ್ ತೆಲಗಾವಿ(ಸಂ), "ಚಂದ್ರವಳ್ಳಿ" ರಘುನಾಥ ಭಟ್ ಎಚ್.ಆರ್, (ಲೇ), ಚಿತ್ರದುರ್ಗ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆ, ಪು.ಸಂ. ೧೦

೨೮. ಸತ್ಯ ಬಿ.ಎನ್., ಪೂರ್ವೋಕ್ತ ಪು. ೩೨

೨೯. ಎಫಿಗ್ರಾಫಿಯಾ ಕರ್ನಾಟಿಕಾ ಸಂ-೬

೩೦ ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶನಿ ಪು.ಸಂ. ೭೫

೩೧. ಭಟ್ ಎಸ್.ಸಿ. ದಿ ಎನ್‌ಸೈಕ್ಲೋಪಿಡೀಯ ಆಪ್ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಆಫ್ ಇಂಡಿಯಾ, ವ್ಯಾಲ್ಯೂಮ್ ೧೧, ನ್ಯೂ ದೆಹಲಿ, ಪು.ಸಂ. ೩೭

೩೨. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು. ೨೦

೩೩. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿಸಿರಿ, ಪು.೫೧

೩೪. ಎಫಿಗ್ರಾಫಿಯಾ ಕರ್ನಾಟಿಕ ಸಂ. ೧೧. ಶಾಸನ ಸಂಖ್ಯೆ ೬೬

೩೫. ಅದೇ, ಸಂ-೭, ಭಾಗ-೧, ಶಾಸನ ಸಂಖ್ಯೆ-೧೮

೩೬. ಸೀತಾರಾಮ್ ಜಾಹಗೀರ್‌ದಾರ, ಚಂದ್ರವಳ್ಳಿ, ಪು.ಸಂ. ೨೩

೩೭. ತಿಪ್ಪೇಸ್ವಾಮಿ ಹೆಚ್., ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪಿಎಚ್.ಡಿ. ಮಹಾಪ್ರಬಂಧ, ಪು. ೨೮-೨೯

೩೮. ರಾಜಶೇಖರಪ್ಪ ಬಿ., ಇತಿಹಾಸ ಕಥನ ಪು. ೧೨೮

೩೯. ಗೋಪಾಲ ಬಿ.ಆರ್., ಚಾಲುಕ್ಯಾಸ್ ಆಫ್ ಕಲ್ಯಾಣ್ ಆ್ಯಂಡ್ ಕಲಚೂರಿಸ್, ಧಾರವಾಡ

೪೦. ಎಫಿಗ್ರಾಫಿಯಾ ಕರ್ನಾಟಿಕ ೭, ಹೊನ್ನಾಳಿ, ಸಂಪುಟ-೧, ಶಾಸನ ಸಂಖ್ಯೆ ೧೦೭-೧೧೯

೪೧. ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಸಂಖ್ಯೆ-೧೯, ಕುರುವತ್ತಿ ಇನ್ಸ್‌ಕ್ರಿಪ್ಷನ್ ಆಫ್ ವಿಕ್ರಮಾದಿತ್ಯ, ದಿ ೧೬ನೇ

೪೨. ಎ.ಕ ೧೧, ದಾವಣಗೆರೆ ಪು.ಸಂ. ೧೨೪

೪೩. ಸುರೇಶ್ ಜಿ., ೨೦೦೧, ಚಿತ್ರದುರ್ಗ ದಾವಣಗೆರೆ ಜಿಲ್ಲೆಯ ದೇವಾಲಯಗಳು ಅಪ್ರಕಟಿತ ಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ

೪೪. ದೇವರಕೊಂಡಾರೆಡ್ಡಿ,(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.ಸಂ. ೪೫೩

೪೫. ಎ.ಕ., ೧೧, ದಾವಣಗೆರೆ ಪು.ಸಂ. ೭೦

೪೬. ಎ.ಕ., ೧೧, ಹೊಳಲ್ಕೆರೆ, ಶಾಸನ ಸಂಖ್ಯೆ ಪು.ಸಂ. ೨೩.

೪೭. ಗೋಪಾಲ ಆರ್.ಬಿ., ಬೆಳಗುತ್ತಿ ಸಿಂದರು ಉಪನಯನ, ಪು.ಸಂ. ೭೩-೮೭

೪೮. ಅದೇ, ಪು.ಸಂ. ೮೭

೪೯. ಗೋಪಾಲ ಬಾ.ರಾ., ಮೈನರ್ ಡೈನಾಸ್ಟೀಸ್ ಇನ್ ಕರ್ನಾಟಕ, ಪು. ೯೭-೯೮

೫೦. ಎ.ಕ., ೧೧, ಹೊಳಲ್ಕೆರೆ, ಶಾಸನ ಸಂಖ್ಯೆ-೧೪

೫೧. ಗೋಪಾಲ ಬಾ.ರಾ., ಮೈನರ್ ಡೈನಾಸ್ಟೀಸ್ ಇನ್ ಕರ್ನಾಟಕ, ಪು. ೯೭-೯೮

೫೨. ಎ.ಕ., ಪೂರ್ವೋಕ್ತ, ಹೊಳಲ್ಕೆರೆ, ಶಾಸನ ಸಂಖ್ಯೆ ೪೫

೫೩. ಅದೇ, ಶಾಸನ ಸಂಖ್ಯೆ ೬೮

೫೪. ಅದೇ, ಜಗಲೂರು, ಶಾಸನ ಸಂಖ್ಯೆ ೨೯

೫೫. ಅದೇ, ದಾವಣಗೆರೆ ಶಾಸನ ಸಂಖ್ಯೆ ೭೧

೫೬. ಅದೇ, ದಾವಣಗೆರೆ, ಶಾಸನ ಸಂಖ್ಯೆ ೧೨೬ ಮತ್ತು ೧೯

೫೭. ಅದೇ, ಸಂ-೭, ಚನ್ನಗಿರಿ ಶಾಸನ ಸಂಖ್ಯೆ ೮-೯

೫೮. ಅದೇ, ಸಂ-೧೧, ಶಾಸನ ಸಂಖ್ಯೆ ೧೨೪-೧೩೦

೫೯. ಎ.ಕ., ಚನ್ನಗಿರಿ ಶಾಸನ ಸಂಖ್ಯೆ-೨೧

೬೦. ಎ.ಕ., ೧೧, ದಾವಣಗೆರೆ ಶಾಸನ ಸಂಖ್ಯೆ ೭೦

೬೧. ಅದೇ, ಸಂ, ೧೦೩

೬೨. ಅದೇ, ಸಂ, ೧೩

೬೩. ಷೇಕ್ ಅಲಿ ಬಿ., ದಿ ಹೊಯ್ಸಳ ಡೈನಾಸ್ಟಿಸ್, ಪು.ಸಂ. ೧೬

೬೪. ಎ.ಕ., ೧೧, ದಾವಣಗೆರೆ ಶಾಸನ ಸಂಖ್ಯೆ ೧೦೫

೬೫. ಅದೇ, ಜಗಳೂರು ಶಾಸನ ಸಂಪುಟ ೩೩

೬೬. ಸೋಮಶೇಖರ್ ಎಸ್.ವೈ.(ಸಂ), ಜಗಲೂರು, ಪು.ಸಂ. ೧೦

೬೭. ಎ.ಕ., ೧೧, ದಾವಣಗೆರೆ, ಶಾಸನ ಸಂಖ್ಯೆ ೩೬

೬೮. ರೈಸ್ ಬಿ.ಎಲ್., ೧೩೬೭, ಎಪಿಗ್ರಾಫಿಯಾ ಕರ್ನಾಟಕಾ, ಸಂಪುಟ-೧೧, ಸರಕಾರಿ ಮುದ್ರಣಾಲಯ, ಮೈಸೂರು, ೧೯೦೩, ದಾವಣಗೆರೆ ಶಾಸನ ಸಂಖ್ಯೆ ೬೭.

೬೯. ರೈಸ್ ಬಿ.ಎಲ್., ೧೯೩೦, ಎಪಿಗ್ರಾಫಿಯಾ ಕರ್ನಾಟಕಾ, ಸಂಪುಟ-೭, ಸರಕಾರಿ ಮುದ್ರಣಾಲಯ, ಮೈಸೂರು, ೧೯೦೩, ಹೊನ್ನಾಳಿ ಶಾಸನ ಸಂಖ್ಯೆ ೬೭.

೭೦. ಎ.ಕ ೧೧, ಶಾಸನ ಸಂಖ್ಯೆ ೩೬

೭೧. ಗಿರಿಜಾ ಟಿ., ಪೂರ್ವೋಕ್ತ, ೧೯೯೧, ಪು. ೩೧೯

೭೨. ಎಂ.ಎ.ಆರ್, ೧೯೩೭, ಪು. ೫೯

೭೩. ಎ.ಕ., ಸಂ-೧೧, ದಾವಣಗೆರೆ ಪು ೨೩

೭೪. ಎ.ಕ., ಸಂ-೧೧, ದಾವಣಗೆರೆ ಪು. ೨೯

೭೫. ಅದೇ, ಸಂಖ್ಯೆ ೯೪, ಹೊಳಲ್ಕೆರೆ ಪು. ೩೬೫

೭೬. ಅದೇ, ಸಂ-೪೧, ಜಗಲೂರು ಪು. ೨೩೮

೭೭. ಅದೇ, ದಾವಣಗೆರೆ, ಪು.ಸಂ. ೨೮

# ಅಧ್ಯಾಯ ಮೂರು

## ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ

೩.೧. ಹರಪನಹಳ್ಳಿ ಪಾಳೆಯಗಾರರು

೩.೨. ಸಂತೇಬೆನ್ನೂರು ನಾಯಕರು

೩.೩. ಕಣಕುಪ್ಪೆ ಪಾಳೆಯಗಾರರು

೩.೪. ಬಿಳಿಚೋಡು ಪಾಳೆಯಗಾರರು

೩.೫. ಉಚ್ಚಂಗಿದುರ್ಗ ಪಾಳೆಯಗಾರರು

## ಅಧ್ಯಾಯ ಮೂರು

# ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಆಳ್ವಿಕೆ

ಕರ್ನಾಟಕದಲ್ಲಿ ಆಡಳಿತ ನಡೆಸಿದ ವಿವಿಧ ಗಾತ್ರದ ಸಣ್ಣಪುಟ್ಟ ರಾಜಮನೆತನಗಳು ನಾಡಿನ ಇತಿಹಾಸ, ಸಂಸ್ಕೃತಿಗಳನ್ನು, ಶ್ರೀಮಂತಗೊಳಿಸುವಲ್ಲಿ ಬಹು ಮಹತ್ವದ ಪಾತ್ರ ವಹಿಸಿವೆ. ಕರ್ನಾಟಕದ ಪ್ರಮುಖ ರಾಜವಂಶಗಳ ಅಸ್ತಿತ್ವ ಸಣ್ಣಪುಟ್ಟ ರಾಜವಂಶಗಳ ತಳಹದಿಯ ಮೇಲೆ ಭದ್ರವಾಗಿತ್ತು. ಆ ಸಂದರ್ಭದಲ್ಲಿ ನಡೆದ ಕೆಲವು ಘಟನೆಗಳು ಚಿಕ್ಕ ಪ್ರದೇಶದಲ್ಲಿ ಸಣ್ಣಪುಟ್ಟ ರಾಜರ ಒಡೆತನವನ್ನು ಬಿಂಬಿಸಿದವು. ಈ ಸಣ್ಣಪುಟ್ಟ ರಾಜರಿಗೆ ನಾಯಕರು, ಸಾಮಂತರು, ಪಾಳೆಯಗಾರರು, ದೇಸಾಯಿಗಳು, ಸಂಸ್ಥಾನಿಕರು ಎಂದು ಕರೆಯುತ್ತಿದ್ದರು. ಈ ನಾಯಕರು ಆಳುತ್ತಿದ್ದ ಭೂವಿಸ್ತಾರ, ಸೈನ್ಯ ಶಕ್ತಿಯಾಧಾರಿತವಾಗಿತ್ತು.

ಈ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಸಣ್ಣ ಸಣ್ಣ ನಾಯಕರಾಗಿ ಬೆಳಕಿಗೆ ಬಂದರು. ಇವರು ಸಣ್ಣ ಪುಟ್ಟ ಪ್ರಾಂತ್ಯಗಳಲ್ಲಿ ಸ್ವತಂತ್ರರಾಗಿ ಅಧಿಕಾರವನ್ನು ನಡೆಸುತ್ತಿದ್ದರು. ಈ ಪಾಳೆಯಗಾರರ ಸಹಾಯದಿಂದ ವಿಜಯನಗರದ ಅರಸರು ಹೊರ ಆಕ್ರಮಣವನ್ನು ಎದುರಿಸುತ್ತಿದ್ದರು. ವಿಜಯನಗರ ಅರಸರಿಗೂ ಪಾಳೆಯಗಾರರಿಗೂ ನಿಕಟ ಸಂಪರ್ಕವಿತ್ತು. ಇವರು ವಿಜಯನಗರದ ಸಾಮ್ರಾಟರಿಗೆ ನಿಷ್ಠೆಯಿಂದಿದ್ದರು. ಅವರಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಾ ಯುದ್ಧಗಳ ಕಾಲದಲ್ಲಿ ಈ ಪಾಳೆಯಗಾರರು ಅವರ ಸಹಾಯಕ್ಕೆ ತಮ್ಮ ಸೈನ್ಯವನ್ನು ಕಳುಹಿಸುತ್ತಿದ್ದರು.

ಪಾಳೆಯಗಾರರು ವಿಜಯನಗರದ ಅರಸರನ್ನು ಭೇಟಿಯಾಗಲು ಹೋದಾಗಲೆಲ್ಲಾ ರಾಜಧಾನಿಯ ಹೊರಗಿನ "ಪಾಳೆಯ" ಎಂಬ ಸೇನಾ ಬಿಡಾರದಲ್ಲಿ ಬೀಡು ಬಿಡುತ್ತಿದ್ದರು. ಬಹುಶಃ ಈ ಕಾರಣದಿಂದಲೆ ಅವರನ್ನು ಪಾಳೆಯಗಾರರು ಎಂದು ಕರೆಯಲಾಗಿದೆ. ಪಾಳೆಯಗಾರರ ಅಧೀನದಲ್ಲಿಯ ಭೂ ಪ್ರದೇಶಕ್ಕೆ 'ಪೊಲ್ಲಂ' ಎಂದು ಹೆಸರು ಇದ್ದುದಕ್ಕೆ ಇವರಿಗೆ ಪಾಳೆಯಗಾರರೆಂಬ ಹೆಸರಿದ್ದಿತು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಪಾಳೆಯಗಾರರು ತಮ್ಮ ತ್ಯಾಗಜೀವನ, ಸಾಹಸಕಾರ್ಯಗಳು, ದಾನಧರ್ಮಗಳು, ಸಾಹಿತ್ಯಪೋಷಣೆ, ಸಂಗೀತ, ಕಲೆ

ಮತ್ತು ವಾಸ್ತುಶಿಲ್ಪ, ಚಿತ್ರಕಲೆ, ಕೆರೆಕಟ್ಟೆ ಬಾವಿಗಳನ್ನು ಕಟ್ಟಿಸಿಕೊಟ್ಟ ಸಾಮಾಜಿಕ ಸೇವಾ ಕಾರ್ಯಗಳಿಂದ ಇವರು ಹೆಸರಾಗಿದ್ದಾರೆ. ೧೪ನೇ ಶತಮಾನದ ಆರಂಭದಲ್ಲಿ ರಾಜನೇ ನೇರವಾಗಿ ಕೆಲವು ದಂಡನಾಯಕರಿಗೆ ಕೆಲವು ಪ್ರದೇಶಗಳನ್ನು ಆಳುವ ಅಧಿಕಾರ ವಹಿಸಿ ಕೊಡುವ ರೂಢಿ ಬೆಳೆಯಿತು. ಈ ಅಧಿಕಾರಿಗಳು ರಾಜನಿಂದ ದೊರಕಿದ ಪ್ರದೇಶಗಳ ಆದಾಯಗಳನ್ನು ಅನುಭವಿಸಿಕೊಂಡು ರಾಜನಿಗೆ ಅವಶ್ಯಕತೆ ಇದ್ದಾಗ ಸೈನ್ಯ ಸಹಾಯವನ್ನು ಒದಗಿಸಿಕೊಡುತ್ತಿದ್ದರು. ಈ ಸಂದರ್ಭದಲ್ಲಿ ಪಾಳೆಯಗಾರರು ಪ್ರಭಾವಿ ರಾಜಕೀಯ ಶಕ್ತಿಗಳಾಗಿ ಮೂಡಿಬಂದರು. ಇವರು ಮೂಲತಃ ವಿಜಯನಗರ ಅರಸರಿಂದ ರಾಜಕೀಯ ಅಸ್ತಿತ್ವವನ್ನು ಪಡೆದುಕೊಂಡಿದ್ದರು. ಪಾಳೆಯಗಾರರನ್ನು ಕನ್ನಡದಲ್ಲಿ ಪಾಳೆಗಾರ, ಪಾಳೆಗಾರರ, ಪಾಳೇಗಾರ, ಪಾಳೈಗಾರ ಎಂದು ತೆಲುಗಿನಲ್ಲಿ ಪಾಳ್ಳೇಗಾಡು, ತಮಿಳುನಲ್ಲಿ ಪಾಳೈಕ್ಕಾರನ್ ಇಂಗ್ಲೀಷನಲ್ಲಿ ಪೊಲಿಗಾರ್[೧] ಮತ್ತು ಮರಾಠಿಯಲ್ಲಿ ಪಾಳೇಗಾರ್ ಎಂಬ ಹೆಸರುಗಳಿಂದ ಕರೆಯುತ್ತಾರೆ. ಪಾಳೆಯ ಎಂಬ ಪದಕ್ಕೆ ದಂಡು, ಸೈನ್ಯ, ಸೇನಾವಿಭಾಗ, ಸೈನ್ಯರ ಬಿಡಾರ, ಠಾಣ್ಯ ಎಂಬ ಅರ್ಥಗಳಿವೆ. ಅಂದರೆ ಯುದ್ಧ ಕಾಲದಲ್ಲಿ ಸೈನಿಕರು ಇರುವ ನೆಲೆ ಎಂಬ ಅರ್ಥ ಕೊಡುತ್ತದೆ. ಅಂತಹ ಪಾಳೆಯಗಳಿಗೆ ಯಜಮಾನನಾದವನಿಗೆ 'ಪಾಳೆಯಗಾರ' ಎಂದು ಕರೆಯುತ್ತಿದ್ದರು.

ದಕ್ಷಿಣ ಭಾರತ ಹಾಗೂ ಕರ್ನಾಟಕದ ಇತರರ ಕಡೆಗಳಲ್ಲಿ ಸಂಭವಿಸಿದ ಕೆಲವು ಚಾರಿತ್ರಿಕ ಆಗುಹೋಗುಗಳಿಂದ ಚಿಕ್ಕಪ್ರದೇಶದಲ್ಲಿ ಒಡೆತನವನ್ನು ನಡೆಸುತ್ತಿದ್ದ ನಾಯಕರಿಗೆ ಪಾಳೆಯಗಾರರು ಎಂಬ ಹೆಸರು ರೂಢಿಯಾಯಿತು.[೨] ಎಂ.ಎಸ್. ಪುಟ್ಟಣನವರು ಪಾಳೆಯಗಾರರೆಂದರೆ ದಂಡಿನೊಡನೆ ಪಾಳಯವನ್ನು ಹಾಕಿಕೊಂಡು ಕದನಕ್ಕೆ ಸಿದ್ಧವಾಗಿರತಕ್ಕವರೆಂದು ಅರ್ಥ ನೀಡುತ್ತದೆ ಎಂದಿದ್ದಾರೆ. ಆದುದರಿಂದ ಪಾಳೆಯ ಎಂದರೆ ಸೈನಿಕ, ಶಿಬಿರ ಎಂಬ ಅರ್ಥವನ್ನು ಹಾಗೂ ಪಾಳೆಯಗಾರರು ಒಂದು ಪ್ರದೇಶದ ಒಡೆಯರು ತಿಳಿಯಬಹುದು.

ಪಾಳೆಯಗಾರರ ಪದವು ವಿಜಯನಗರ ಕಾಲದಿಂದ ಹೆಚ್ಚಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಈ ಕಾಲದಲ್ಲಿ ನಾಯಕರಿಗೆ ಪಾಳೆಯಗಾರ ಎಂದು ಕರೆದಿರುವ ಉಲ್ಲೇಖಗಳಿವೆ. ಕ್ರಿ.ಶ. ೧೬೦೭ರ ವಿಜಯನಗರ ಚಕ್ರವರ್ತಿ ತಿರುಮಲರಾಜನು ಚಂಗಾಳ್ವ ದೊರೆ ರುದ್ರಗಣನಿಗೆ ಮಳಲವಾಡಿ ಸೀಮೆಯನ್ನು ದಾನ ಕೊಟ್ಟ ಶಾಸನದಲ್ಲಿ ಈ ರೀತಿ ಉಲ್ಲೇಖಿಸಿದೆ. "ನಾನು ಕೊಟ್ಟಂಥ ಮಳಲವಾಡಿ ಸೀಮೆಯ ಪಿರಿಯ ರಾಜನ ಕೂಡಿದು. ಬಿಟಂಥಾ ಪೊಗುದಿ ರೂಕವು ಪಿರಿಯ ರಾಜನಿಗೆ ಬಿಟ್ಟುಕೊಟ್ಟುದು ಮುಂದೆ ಶ್ರೀರಂಗಪಟ್ಟಣಕ್ಕೆ ಬಂದು ನಿಂದಾ ದೊರೆಯಾಗಲಿ ಮುಂನಿಯರಾಗಲಿ ಪಾರುಪತ್ಯಗಾರನಾಗಲಿ ಪ್ರಭು ಪಾಳೆಯಗಾರನಾಗಲಿ ಅರ್ಪಣೆಗೆ ಅಪಿದವನ ತಂನ ಹೆತ್ತ ತಾಯಿ ತ ಆನೆ ಕರೆಸಿಕೊಂಡ ಯೋಧ ಹಾಗೆ[೩] ಅಚ್ಯುತರಾಯನ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ್ದ ನ್ಯೂನಿಜ್ 'ಪಾಳೆಯಗಾರ' ಎಂಬ ಪದವನ್ನು ಬಳಸಿದ್ದಾರೆ.[೪]

ರಾಮರಾಯನ ಬಖೈರಿನಲ್ಲಿ 'ಪಾಳೆಯಗಾರರಾದ' ಎಂಬ ಪದವನ್ನು ಉಲ್ಲೇಖಿಸಿದ್ದು, ಅವರಿಗೆ ಅಷ್ಟಾಧಿಕರ ನಂತರ ಸ್ಥಾನವನ್ನು ನೀಡಲಾಗಿತ್ತೆಂದು ತಿಳಿಸುತ್ತದೆ.[7] ಇವುಗಳಿಂದ ತಿಳಿದುಬರುವುದೇನೆಂದರೆ ವಿಜಯನಗರ ಶ್ರೀಕೃಷ್ಣದೇವರಾಯರ ಕಾಲಕ್ಕಾಗಲೆ ಅರಮನೆಯಲ್ಲಿ ಈ ಪದವನ್ನು ಸ್ವತಂತ್ರ ಆಡಳಿತ ನಡೆಸುವವರಿಗೆ ಬಳಸುತ್ತಿದ್ದರಿಂದ ಈ ಪದವು ಇದಕ್ಕೆ ಮುನ್ನವೇ ಬಳಕೆಯಲ್ಲಿತ್ತು ಎಂದು ತಿಳಿದುಬರುತ್ತದೆ. ಬರ್ಟನ್ ಸ್ಟೈನ್ ಅವರು ವಿಜಯನಗರ ಸಾಮ್ರಾಜ್ಯವನ್ನು ಸೆಗ್‌ಮೆಂಟರಿ ಸ್ಟೇಟ್ ಎಂಬ ಸಿದ್ಧಾಂತದ ಹಿನ್ನೆಲೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ ಈ ಸಿದ್ಧಾಂತವನ್ನು ಅನೇಕ ವಿದ್ವಾಂಸರು ವಿರೋಧ ವ್ಯಕ್ತಪಡಿಸಿದ್ದರಿಂದ ತನ್ನ ಸಿದ್ಧಾಂತವನ್ನು ಬದಲಿಸಿಕೊಳ್ಳಬೇಕಾಯಿತು. ಕೊನೆಗೆ ಬರ್ಟನ್ ಸ್ಟೈನ್ ಅವರು ರಾಜ ಮತ್ತು ನಾಯಕರ ನಡುವೆ ರಾಜಕೀಯ ಸಂಬಂಧ ಇರಲಿಲ್ಲ. ನಾಯಕರು ಸ್ಥಳೀಯ ಪ್ರತಿಷ್ಠಿತ ವ್ಯಕ್ತಿಗಳಾಗಿದ್ದರು ಎಂದು ನಿರೂಪಿಸಿದರು.

ಜಪಾನಿನ ಇತಿಹಾಸಕಾರರಾದ ನೊಬೊರು ಖರಾಷಿಮಾ ಅವರು ವಿಜಯನಗರ ಸಾಮ್ರಾಜ್ಯವು ಕೇಂದ್ರೀಕೃತ ಮತ್ತು ವಿಕೇಂದ್ರೀಕೃತ ಎರಡೂ ಅಂಶಗಳನ್ನು ಸಮನ್ವಯ ಮಾಡಿಕೊಂಡಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ. ಈ ನಾಯಕರನ್ನು ಫ್ಯೂಡಲ್ ಲಾರ್ಡ್‌ಗಳೆಂದು ಕರೆದರು. ವಿಜಯನಗರ ಸಾಮ್ರಾಜ್ಯ ಸಂಕ್ರಮಣ ಕಾಲದಲ್ಲಿದ್ದಾಗ ನಾಯಕರು ವಿಜಯನಗರ ಅರಸರ ಹಿಡಿತದಲ್ಲಿದ್ದರು. ಒಟ್ಟು ಆದಾಯದ ಅರ್ಧಭಾಗವನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸಿ ಉಳಿದ ಆದಾಯದಲ್ಲಿ ರಾಜನ ಪರವಾಗಿ ಯುದ್ಧ ಮಾಡಲು ಸೈನ್ಯ ಸಂಘಟನೆ ಮಾಡಬೇಕಾಗಿತ್ತು. ನಾಯಕರು ಆ ಕಾಲದ ರಾಜಕೀಯ ಪರಿಸ್ಥಿತಿಯಿಂದ ಲಾಭ ಪಡೆದು ದಾನ-ಧರ್ಮಗಳನ್ನು ಮಾಡುವುದರ ಮೂಲಕ ನಿಧಾನವಾಗಿ ತಮ್ಮ ಅಧಿಕಾರವನ್ನು ವಿಸ್ತರಣೆ ಮಾಡಿಕೊಂಡರು ಎಂದು ನೊಬೊರು ಖರಾಷಿಮಾ ವಿಶ್ಲೇಷಿಸಿದ್ದಾರೆ.

ಎ.ವಿ. ವೆಂಕಟರತ್ನಂ ಅವರು ನಾಯಕರನ್ನು ಊಳಿಗಮಾನ್ಯ ದೊರೆಗಳೆಂದು ಪರಿಗಣಿಸಿದರು. ಅವರ ಪ್ರಕಾರ ವಿಜಯನಗರ ಸಾಮ್ರಾಜ್ಯ ಸಂಯುಕ್ತ ಊಳಿಗಮಾನ್ಯ ಮತ್ತು ವಿಕೇಂದ್ರೀಕೃತ ಅಂಶಗಳನ್ನು ಒಳಗೊಂಡ ಒಂದು ಸಾಮ್ರಾಜ್ಯವಾಗಿತ್ತು ಎಂದು ತಮ್ಮ ಕೃತಿಯಾದ ದ ಲೋಕಲ್ ಸೆಲ್ಫ್ ಗೌರ್ನಮೆಂಟ್ ಇನ್ ವಿಜಯನಗರ ಎಂಪೈರ್‌ದಲ್ಲಿ ತಿಳಿಸುತ್ತಾರೆ. ಮುಂದುವರಿದು ಇವರು ವಿಜಯನಗರ ಸಾಮ್ರಾಜ್ಯದಲ್ಲಿ ಭಾಗಶಃ ಸ್ವಾತಂತ್ರ್ಯವನ್ನು ಹೊಂದಿದ್ದ ಸಾಮಂತರಾಗಿದ್ದರು. ಈ ಸಾಮಂತರನ್ನು ನಾಯಕ, ಮಹಾನಾಯಕ, ದಂಡನಾಯಕ, ಮಾಂಡಲೇಶ್ವರ, ರಾಜ ಮಹಾರಾಜ, ಒಡೆಯರ್ ಮುಂತಾದ ವಿವಿಧ ಹೆಸರುಗಳಿಂದ ಕರೆಯುತ್ತಿದ್ದರು. ಈ ಸಾಮಂತರಿಗೆ ಸಮದರ್ಜೆಯ ಅಧಿಕಾರ ಕೂಡ ಇದ್ದಿತು. ಇವರಿಗೆ ರಾಜನು ಭೂಮಿಯನ್ನು ಕೊಟ್ಟು, ಈ ಸಾಮಂತರಿಂದ ಸೈನಿಕ ಸೇವೆಯನ್ನು ಪಡೆದುಕೊಳ್ಳುತ್ತಿದ್ದನು. ಷರತ್ತಿನ ಮೇರೆಗೆ ಭೂಮಿಯನ್ನು ಪಡೆದುಕೊಂಡ ಸಾಮಂತರು ಅವರ ಪ್ರದೇಶಗಳನ್ನು ಅಮರ ಅಥವಾ ನಾಯಕತನಂ ಎಂದು

ಕರೆಯಲಾಗುತ್ತಿತ್ತು ಎಂದು ಹೇಳಿದ್ದಾರೆ. ಈ ಅಂಶಗಳನ್ನು ನೋಡಿದರೆ ವಿಜಯನಗರ ಸಾಮ್ರಾಜ್ಯದಲ್ಲಿ ಅಧಿಕಾರ ವಿಕೇಂದ್ರೀಕರಣ ಪದ್ಧತಿ ಇತ್ತು ಎಂದು ತಿಳಿಯುತ್ತದೆ. ಈ ಅಧಿಕಾರ ವಿಕೇಂದ್ರೀಕರಣ ೧೬ನೆಯ ಶತಮಾನದಲ್ಲಿ ರಾಜಕೀಯ ಅಧಿಕಾರ ವಿಕೇಂದ್ರೀಕರಣಗೊಂಡಿದ್ದನ್ನು ಸ್ಪಷ್ಟಪಡಿಸುತ್ತದೆ. ಎನ್. ವೆಂಕಟರಮಣಯ್ಯ ಅವರು ನಾಯಕರು ಮೂಲತಃ ಭೂಹಿಡುವಳಿದಾರರಾಗಿದ್ದರೆಂದು ಅಭಿಪ್ರಾಯಪಡುತ್ತಾರೆ. ವಿಜಯನಗರ ಸಾಮ್ರಾಜ್ಯದಲ್ಲಿ ನಾಯಕರು ರಾಜನಿಗೆ ಸೈನಿಕ ಸೇವೆ ಸಲ್ಲಿಸಲು ಪಡೆದ ಭೂಮಿಗೆ ಅಮರಂ ಎಂದೂ ಅವರಿಗೆ ಅಮರ ನಾಯಕರೆಂದು ಅದಕ್ಕೆ ನಾಯಂಕರ ಪದ್ಧತಿ ಎಂದು ಕರೆಯುತ್ತಿದ್ದರು ಎಂದು ಉಲ್ಲೇಖಿಸುತ್ತಾರೆ.

ಪಾಳೆಯಪಟ್ಟುಗಳು ೧೩ನೇಯ ಶತಮಾನದ ಆರಂಭದಲ್ಲೇ ಅಸ್ತಿತ್ವಕ್ಕೆ ಬಂದವು. ಈ ರೀತಿ ಪ್ರಾರಂಭವಾದ ಪಾಳೆಯಗಾರರಲ್ಲಿ ಗುಮ್ಮನಾಯಕನ ಪಾಳ್ಯ ಪ್ರಮುಖವಾದುದು. ಇದು ಇಂದಿನ ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ ಕೊಡಿಕೊಂಡ, ಕಂದಕೂರು ಪ್ರಾಂತ್ಯದ ಸುತ್ತಮುತ್ತಲಿನ ಪ್ರದೇಶಗಳಿಂದ ಕೂಡಿತ್ತು. ಇದು ಮೊದಲು ಕಾಡಿನಿಂದ ಆವೃತವಾಗಿದ್ದು, ಇಲ್ಲಿನ ಕಾಡನ್ನು ಕಡಿಸಿ ಊರುಗಳನ್ನು ಕಟ್ಟಿಸಿ ಈ ಪಾಳೆಯಪಟ್ಟನ್ನು ಹೊಯ್ಸಳರ ಬಲ್ಲಾಳನಿಗೆ ಸೇರಿದ್ದ ಯುವಗನಕೋಟೆ ಎಂಬ ಪ್ರದೇಶಕ್ಕೆ ಬಂದು ನೆಲೆಸಿದ್ದ ನರಸಿಂಹನಾಯಕ ಮತ್ತು ಖಾದ್ರಿಪತಿ ನಾಯಕ ಎಂಬ ಸಹೋದರರು ಕ್ರಿ.ಶ. ೧೨೪೩ರಲ್ಲಿ ಸ್ಥಾಪಿಸಿದರು.[೬] ನಿಕೊಲಸ್ ಬಿ.ಡಿರ್ಕ್ಸ್ ಅವರು ಪಾಳೆಯಗಾರರು ಕ್ರಿ.ಶ. ೧೩ನೆಯ ಶತಮಾನದಲ್ಲಿ ಚೋಳ ಸಾಮ್ರಾಜ್ಯದ ತದನಂತರ ದಕ್ಷಿಣ ಭಾರತದಲ್ಲಿ ಸ್ಥಳೀಯವಾಗಿ ಅತಿ ಮುಖ್ಯ ಸ್ಥಳಗಳಲ್ಲಿ ಬೆಳವಣಿಗೆ ಹೊಂದಿದರು ಎಂದು ಹೇಳಿದ್ದಾರೆ.[೭] ನ್ಯೂನಿಜ್ ಬರವಣಿಗೆಯಲ್ಲಿ ಈ ಕೆಳದರ್ಜೆಯ ಅಧಿಕಾರಿಗಳನ್ನು ಕ್ಯಾಪ್ಟನ್ಸ್‌ಗಳೆಂದು ಕರೆಯುತ್ತಾರೆ. ಈ ಕ್ಯಾಪ್ಟನ್ಸ್‌ಗಳನ್ನು ವಿಜಯನಗರ ಅರಸರ ಶಾಸನಗಳಲ್ಲಿ ಉಲ್ಲೇಖವಾಗಿರುವ ಅಮರನಾಯಕರಿಗೆ ಹೋಲಿಕೆ ಮಾಡಬಹುದು. ಆದ್ದರಿಂದ ವಿಜಯನಗರ ಕಾಲದಲ್ಲಿ ಅಧಿಕಾರ ವಿಕೇಂದ್ರೀಕರಣಗೊಂಡಿದ್ದು ಸ್ಪಷ್ಟವಾಗುತ್ತದೆ.

ನ್ಯೂನಿಜ್ ಪ್ರಕಾರ ನಾಯಕರಿಗೆ ರಾಜ್ಯವನ್ನು ಹಂಚಿಕೊಟ್ಟು ರಾಜನು ರಾಜ್ಯಭಾರ ನಡೆಸುತ್ತಾನೆ. ಅವರು ತಮ್ಮ ತಮ್ಮ ರಾಜ್ಯದಲ್ಲಿ ಸಿಗುವ ಆದಾಯವನ್ನು ಆ ರಾಜ್ಯಕ್ಕೆ ತಕ್ಕಂತೆ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು. ಹಾಗೂ ರಾಜನು ಎಷ್ಟು ಸೈನ್ಯವನ್ನು ಹೊಂದಿರಬೇಕಾಗಿತ್ತು ಎಂಬುದನ್ನು ನಿರ್ಧರಿಸುತ್ತಿದ್ದನು. ರಾಜನು ದರ್ಬಾರು ನಡೆಯುವಾಗ ಈ ನಾಯಕರು ಪಲ್ಲಕ್ಕಿಯಲ್ಲಿ ಬರುತ್ತಿದ್ದರು ಎಂದು ಅಭಿಪ್ರಾಯ ಪಡುತ್ತಾರೆ.

ಮಾರ್ಕ್ಸ್‌ವಿಲ್ಸ್ ಅವರು ಇವರು ಅಡವಿ ಪ್ರದೇಶಗಳಲ್ಲಿ ಅಧಿಕಾರ ಹೊಂದಿದ್ದು, ಹೋರಾಡುವ ಗುಣಗಳನ್ನು ಹೊಂದಿದವರಾಗಿದ್ದರು ಎಂದಿದ್ದಾರೆ. ಕೆ.ರಾಜಯ್ಯನ್ ಅವರು ಪಾಳೆಯಗಾರರು ಆನುವಂಶಿಕವಾಗಿ ಬಂದು ಪ್ರದೇಶದ ಮೇಲೆ ಸಾರ್ವಭೌಮತ್ವತೆಯನ್ನು ಹೊಂದಿದ್ದರು ಎಂದು ಹೇಳಿದ್ದಾರೆ. ಲಕ್ಷ್ಮಣ್ ತೆಲಗಾವಿಯವರು ಪಾಳೆಯಗಾರರು ಮೂಲತಃ ವೀರರಾಗಿದ್ದು ಶಸ್ತ್ರಸಜ್ಜಿತರಾಗಿ

ಅರಣ್ಯಗಳಲ್ಲಿದ್ದು ಸಾಹಸಕಾರ್ಯಗಳಿಗೆ ಹೆಸರುವಾಸಿಯಾಗಿದ್ದರು ಹಾಗೂ ಯುದ್ಧ ಕಲೆಗಳಲ್ಲಿ ಪಳಗಿದ ನಿಸ್ಸೀಮ ದೈವಭಕ್ತರಾಗಿದ್ದರು ಎಂದು ಹೇಳಿದ್ದಾರೆ.

ಟಿ.ವಿ. ಮಹಾಲಿಂಗ ಅವರು ವಿಜಯನಗರ ಅರಸರಿಂದ ಸಾಮಂತ ನಾಯಕರು ಕೆಲವು ಪ್ರದೇಶಗಳನ್ನು ಪಡೆದುಕೊಂಡು ವಂಶಪಾರಂಪರ್ಯವಾಗಿ ಸ್ವತಂತ್ರ ಆಡಳಿತ ನಡೆಸುತ್ತಿದ್ದರು ಹಾಗೂ ವಿಜಯನಗರ ಅರಸರಿಗೆ ಆ ಪ್ರದೇಶಕ್ಕೆ ತಕ್ಕಂತೆ ಕಪ್ಪಕಾಣಿಕೆಗಳನ್ನು ನೀಡುತ್ತಿದ್ದರು ಎಂದು ಅಭಿಪ್ರಾಯಪಡುತ್ತಾರೆ. ಮುಂದೆ ವಿಜಯನಗರ ಸಾಮ್ರಾಜ್ಯ ೧೫೬೫ರ ತಾಳಿಕೋಟೆ ಯುದ್ಧದಲ್ಲಿ ಸೋತು ದುರ್ಬಲಗೊಂಡಾಗ ಸಂಪೂರ್ಣವಾಗಿ ಸ್ವತಂತ್ರ ಆಡಳಿತ ನಡೆಸುತ್ತಿದ್ದರು ಎಂದು ತಿಳಿಸುತ್ತಾರೆ. ಇವರು ವಿಜಯನಗರ ಅರಸರಿಂದ ನೇಮಕವಾಗುತ್ತಿದ್ದ ದಂಡನಾಯಕರಿಗೂ ಹಾಗೂ ವಿಜಯನಗರೋತ್ತರ ನಾಯಕರಿಗೂ ಸಾಕಷ್ಟು ವ್ಯತ್ಯಾಸವನ್ನು ಗುರುತಿಸಿದ್ದಾರೆ. ಅವುಗಳೆಂದರೆ:

೧. ದಂಡನಾಯಕರು ತಮ್ಮ ಪ್ರಾಂತ್ಯದಲ್ಲಿ ರಾಜನನ್ನು ಪ್ರತಿನಿಧಿಸುತ್ತಿದ್ದರು ಹಾಗೂ ರಾಜನ ಪರವಾಗಿ ಪ್ರಾಂತ್ಯವನ್ನು ಆಳುತ್ತಿದ್ದರು. ಆದರೆ ನಾಯಕರು ಸೈನಿಕ ಸೇವೆ ಸಲ್ಲಿಸಬೇಕಾಗಿದ್ದ ಒಬ್ಬ ಸಾಮಂತ. ಅವರು ಸಂಪತ್ತು ಸೇವೆ ಸಲ್ಲಿಸಲು ಒಂದು ಅಮರಂ ಅಥವಾ ಭೂಮಿಯನ್ನು ಪಡೆಯುತ್ತಿದ್ದರು.

೨. ದಂಡನಾಯಕರನ್ನು ಒಂದು ಪ್ರಾಂತ್ಯದಿಂದ ಮತ್ತೊಂದು ಪ್ರಾಂತ್ಯಕ್ಕೆ ವರ್ಗಾಯಿಸಬಹುದಿತ್ತು. ಆದರೆ ನಾಯಕರು ತಮ್ಮ ಪ್ರದೇಶದಲ್ಲಿ ಸಾರ್ವಭೌಮರಾಗಿದ್ದು, ಸಾಮಾನ್ಯವಾಗಿ ರಾಜನು ಅವರ ಆಂತರಿಕ ಆಡಳಿತದಲ್ಲಿ ಕೈ ಹಾಕುತ್ತಿರಲಿಲ್ಲ. ಹಾಗೂ ವರ್ಗಾವಣೆ ಮಾಡುತ್ತಿರಲಿಲ್ಲ.

೩. ನಾಯಕರಿಗೆ ಕಾಡನ್ನು ಕಡಿದು ಕೃಷಿ ವಿಸ್ತರಣೆ ಮಾಡುವುದು ಆ ಪ್ರಾಂತ್ಯವನ್ನು ಅಭಿವೃದ್ಧಿ ಮಾಡುವ ಕೆರೆ ಕಾಲುವೆಗಳನ್ನು ಕಟ್ಟಿಸುವ ದೇವಾಲಯಗಳನ್ನು ನಿರ್ಮಿಸುವ ಅಧಿಕಾರವಿತ್ತು ಆದರೆ ದಂಡನಾಯಕರಿಗೆ ಆ ಅಧಿಕಾರ ಇರಲಿಲ್ಲ.

೪. ದಂಡನಾಯಕರು ಸಾಮಾನ್ಯವಾಗಿ ಬ್ರಾಹ್ಮಣರಾಗುತ್ತಿದ್ದರು. ಆದರೆ ನಾಯಕರು ಬೇರೆ ಬೇರೆ ಸಮುದಾಯಗಳಿಗೆ ಸೇರಿದವರಾಗಿದ್ದರು.

೫. ನಾಯಕತನವು ಪ್ರಾರಂಭದಲ್ಲಿ ವೈಯಕ್ತಿಕವಾಗಿದ್ದಿತು. ಆದರೆ ಕಾಲಕ್ರಮೇಣ ವಿಜಯನಗರ ದುರ್ಬಲತೆಯಿಂದ ವಂಶಪಾರಂಪರ್ಯವಾಯಿತು.

**ಪಾಳೆಯಗಾರರ ಲಕ್ಷಣಗಳನ್ನು ಈ ಕೆಳಕಂಡಂತೆ ನೋಡಬಹುದು.**

೧. ಪಾಳೆಯಗಾರರು ರಾಜವಂಶದ ಸಂತತಿಯವರು.

೨. ತಾವು ಹೊಂದಿದ್ದ ಸೈನ್ಯದ ಮೇಲೆ ಸಂಪೂರ್ಣ ಅಧಿಕಾರ ಹೊಂದಿದ್ದರು.

೩. ಸಾರ್ವಜನಿಕ ಸೇವೆಗಾಗಿ ಪಾಳೆಯಗಾರರು ಕೃತಜ್ಞತೆಗೆ ಅಂಗೀಕೃತರಾಗಿದ್ದರು.

೪. ಪ್ರಜೆಗಳ ಹಿತರಕ್ಷಣೆ ಮಾಡಲು ಇವರು ಸಮರ್ಥರಾಗಿದ್ದರು.

೫. ಇವರು ತಮ್ಮ ಮೇಲಿನ ರಾಜರಿಗೆ ಸೇವೆ ಸಲ್ಲಿಸುವುದರ ಮೂಲಕ ಹೆಚ್ಚಿನ ಅಧಿಕಾರ ಪಡೆದುಕೊಂಡರು. ಈ ಕಾರಣಗಳಿಂದ ಇದೊಂದು ಪ್ರಬಲ ರಾಜಕೀಯ ಶಕ್ತಿಯಾಗಿ ಹೊರಹೊಮ್ಮಿತು.

೬. ವಿಜಯನಗರೋತ್ತರ ಕಾಲದಲ್ಲಿ ಕನ್ನಡನಾಡಿನ, ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಸಮರ್ಥರಾಗಿದ್ದರು.

ಈ ಮೇಲಿನ ವಿದ್ವಾಂಸರ ಅಭಿಪ್ರಾಯದಿಂದ ತಿಳಿದುಬರುವುದೇನೆಂದರೆ ವಿಜಯನಗರ ಕಾಲದಲ್ಲಿ ನಾಯಕರು ಪ್ರವರ್ಧಮಾನಕ್ಕೆ ಬಂದು ರಾಜ್ಯಡಳಿತವನ್ನು ಸ್ಥಾಪಿಸಿದ್ದರೆಂದು ತಿಳಿದುಬರುತ್ತದೆ. ಪಾಳೆಯಗಾರರು ಮೂಲತಃ ಯೋಧರಾಗಿದ್ದು, ಗುಡ್ಡಗಾಡು ಪ್ರದೇಶದಲ್ಲಿ ತಮ್ಮ ಆಡಳಿತವನ್ನು ಆರಂಭಿಸಿದ ನಂತರ ಆ ಪ್ರದೇಶದಲ್ಲಿ ವಂಶಪಾರಂಪರ್ಯ ಅಧಿಕಾರವನ್ನು ಸ್ಥಾಪಿಸಿ ಅದರ ಜೊತೆಗೆ ಒಂದು ಸೈನ್ಯವನ್ನು ಸಂಘಟಿಸಿದರು. ಹಾಗೂ ಕ್ರಮೇಣ ತಮ್ಮನ್ನು ರಾಜರೆಂದು ಕರೆದುಕೊಂಡರು ಎಂದು ತಿಳಿದುಬರುತ್ತದೆ.

ಕರ್ನಾಟಕ ಪಾಳೆಯಗಾರರ ಸಾಮಾಜಿಕ ಹಿನ್ನೆಲೆಯನ್ನು ಗಮನಿಸುವುದಾದರೆ ಇವರು ವಿಭಿನ್ನ ಸಾಮಾಜಿಕ ಹಿನ್ನೆಲೆಯುಳ್ಳವರಾಗಿದ್ದರು. ಕರ್ನಾಟಕದಲ್ಲಿ ಬೇಡ ಬುಡಕಟ್ಟು, ವೀರಶೈವ, ಒಕ್ಕಲಿಗ, ತೆಲುಗು ಬಣಜಿಗ, ಯಾದವ, ಜೈನ ಮುಂತಾದ ಜಾತಿಗೆ ಸೇರಿದ ಪಾಳೆಯಗಾರರಾಗಿದ್ದರು. ಹೆಚ್.ಜಿ. ರಂಗಸ್ವಾಮಿ ಅಯ್ಯಂಗಾರ್ ಅವರು ಸಾಮಾನ್ಯವಾಗಿ ಪಾಳೆಯಗಾರರು ಬೇಡರಾಗಿದ್ದು, ನರಸಿಂಹನನ್ನೂ ಪೂಜಿಸುತ್ತಿದ್ದರು ಎಂದು ಹೇಳಿದ್ದಾರೆ.[೭] ಆದುದರಿಂದ ಕರ್ನಾಟಕದಲ್ಲಿ ಪಾಳೆಯಗಾರರಲ್ಲಿ ಬೇಡ ಸಮುದಾಯದ ಸಂಖ್ಯೆಯೇ ಜಾಸ್ತಿ ಇತ್ತು ಎಂದು ಹೇಳಬಹುದು.

ಆನೆಗೊಂದಿ, ಚಿತ್ರದುರ್ಗ, ರತ್ನಗಿರಿ, ನೀಡಗಲ್ಲು, ಶಿರಾ, ಬಳ್ಳಾರಿ, ಮೊಳಕಾಲ್ಮೂರು, ರಾಯದುರ್ಗ ಮದವಸೂರ, ಇಕ್ಕೇರಿ, ಸ್ವಾದಿ, ಚಂದ್ರವಳ್ಳಿ, ಕೊಲ್ಲಾಪುರ, ಮಂಡಿಕೋಟೆ, ಬೆಳಗುತ್ತಿ, ಬಂಕಾಪುರ, ನಂದಿಯೋಳ, ದಾವನಹಳ್ಳ, ಹರಪನಹಳ್ಳಿ, ಚಿಗಟೇರಿ, ಪೆನುಗೊಂಡೆ, ಕಡಪೆ, ತಂಜಾವೂರು, ಸುರಪುರ, ಹಗಲವಾಡಿ, ಬಸವಾಪಟ್ಟಣ, ಬೇಲೂರು ಸನ್ನಿವಾಳ, ಹರತಿಕೋಟೆ, ಬಾದಾಮಿ, ದೊರೆಮನೆ, ಜರಿಮಲೆ, ಗುಡೇಕೋಟೆ, ಗೋನೂರು, ಐಮಂಗಲ, ತರೀಕೇರಿ, ಪುರವರ ಮಿಡಗೇಶಿ, ಪಾವಗಡ, ಶಿರಾ, ಹೊಸಕೋಟೆ, ಗುತ್ತಿ, ಚನ್ನಪಟ್ಟಣ, ಕಪಿಲಿ, ಮಿರ್ಲೆದುರ್ಗ, ಕನಕಗಿರಿ, ಗುರಗುಂಟ, ಲೇಪಾಕ್ಷಿ, ಮಧುರೆ, ಆದವಾನಿ, ಚಂದ್ರಗಿರಿ, ಚಿಕ್ಕನಾಯಕನಹಳ್ಳಿ, ತಲಕಾಡು, ರಾಯಚೂರು, ರಾಣ್ಯ ಹದಿನಾಡು, ಯಳಂದೂರು, ಕೊರಟಗಿರಿ,

ಹೊನ್ನುಡಕಿ, ಕರಜಗಿ, ಉಚ್ಚಂಗಿದುರ್ಗ, ಮತ್ತೊಡು, ನಾಯಕನಹಟ್ಟಿ ಇನ್ನು ಮುಂತಾದ ಪಾಳೆಯಗಾರರು ಬೇಡರ ಜಾತಿಗೆ ಸೇರಿದವರಾಗಿದ್ದಾರೆ ಎಂದು ತಿಳಿಸಿದ್ದಾರೆ. ಕೆಲ ದಾಖಲೆಗಳಿಂದ ಶಾಸನಗಳಿಂದ ಮತ್ತು ಬಖೈರುಗಳಿಂದ ಹಾಗೂ ಅವರ ವೈವಾಹಿಕ ಸಂಬಂಧಗಳ ಆಧಾರದ ಮೇಲೆ ಅವರ ಜಾತಿಯ ಬಗ್ಗೆ ತಿಳಿಯಬಹುದಾಗಿದ ಅದಲ್ಲದೆ ತಮ್ಮ ಆಡಳಿತದ ಅವಧಿಯ ಕೊನೆಯವರೆಗೂ ತಮ್ಮ ಜಾತಿಯನ್ನು ಬದಲಾವಣೆ ಮಾಡಿಕೊಳ್ಳದೆ ಕೆಲವು ಸಾಂಸ್ಕೃತಿಕ ಬದಲಾವಣೆಯನ್ನು ಮಾತ್ರ ಮಾಡಿಕೊಂಡಿರುವುದು ಕಂಡುಬರುತ್ತದೆ.

ಒಟ್ಟಾರೆ ಬೇಡ ಬುಡಕಟ್ಟಿಗೆ ಸೇರಿದ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರು ತಮ್ಮ ಬುಡಕಟ್ಟು ಸಂಪ್ರದಾಯ, ಪದ್ಧತಿ, ಆಚರಣೆಗಳೊಂದಿಗೆ ಸ್ಥಳೀಯ ಸಂಸ್ಕೃತಿಯ ಪೋಷಣೆ, ಸಾಮಾಜಿಕ ನಿಯಂತ್ರಣ ದೈವತ್ವದ ಪರಿಕಲ್ಪನೆಯಲ್ಲಿ 'ರಾಜತ್ವ' ಅಧಿಕಾರದ ಪ್ರಾಪ್ತಿ ಎಂಬ ನಿಲುವನ್ನು ಹೊಂದಿ ಅಸ್ತಿತ್ವಕ್ಕೆ ಬಂದಿದ್ದಾರೆ.

### ೩.೧. ಹರಪನಹಳ್ಳಿ ಪಾಳೆಯಗಾರರು

ಕರ್ನಾಟಕದ ಇತಿಹಾಸವನ್ನು ಅವಲೋಕಿಸಿದಾಗ ದೊಡ್ಡ ಅರಸರನ್ನು ಗುರುತಿಸಿ ಸಣ್ಣಪುಟ್ಟ ಅರಸರನ್ನು ಕಡೆಗಣಿಸಿದ್ದು ಕಂಡುಬರುತ್ತದೆ. ಕೆಳದಿ, ಚಿತ್ರದುರ್ಗ ಪಾಳೆಯಗಾರರ ಸಮಕಾಲೀನ ಪಾಳೆಯಗಾರರಾಗಿ ಎರಡು ಶತಮಾನಗಳ ಕಾಲ ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರು ಅನೇಕ ಜನಪರ ಕಾರ್ಯಗಳನ್ನು ಕೈಗೊಳ್ಳುವುದರ ಮೂಲಕ ಚರಿತ್ರೆಯಲ್ಲಿ ದಾಖಲಾಗಿದ್ದಾರೆ. ಕೃಷ್ಣದೇವರಾಯನ ನಂತರ ವಿಜಯನಗರ ಸಾಮ್ರಾಜ್ಯ ದುರ್ಬಲಗೊಂಡಿತು. ಇಂತಹ ಸಂದರ್ಭದಲ್ಲಿ ಚಿಕ್ಕ ಚಿಕ್ಕ ಸೇನಾ ನಾಯಕರು ಸ್ವತಂತ್ರ ಪಾಳೆಯಗಾರರಾಗಿ ದಕ್ಷಿಣ ಭಾರತದಲ್ಲಿ ಗುರುತಿಸಿಕೊಂಡರು. ಕೆಳದಿ, ಚಿತ್ರದುರ್ಗ, ಮುತ್ತೊಡು, ಗುಡೇಕೋಟೆ, ನಾಯಕನಹಟ್ಟಿ, ಹಾಗಲವಾಡಿ, ಜರಿಮಲೆ, ಸುರಪುರ, ಸವಣೂರು, ಕನಕಗಿರಿ, ರಾಯದುರ್ಗ, ಹರಪನಹಳ್ಳಿ, ಮುಂತಾದ ಪಾಳೆಯಗಾರರು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಂಡರು.

ಇಂತಹ ಪಾಳೆಯಗಾರರಲ್ಲಿ ಹರಪನಹಳ್ಳಿ ಪಾಳೆಯಗಾರರು ಕೂಡ ಪ್ರಬಲರಾಗಿ ಕಂಡುಬರುತ್ತಾರೆ. ದಾವಣಗೆರೆ ಜಿಲ್ಲೆಯ ಪಾಳೆಯಗಾರರಲ್ಲಿ ಪ್ರಬಲರಾಗಿದ್ದ ಇವರು ಬೇಡ ಬುಡಕಟ್ಟು ಜಾತಿಯವರಾಗಿದ್ದರು. ಇವರು ಹಿಂದುಳಿದವರಾಗಿದ್ದು ಪ್ರಾಚೀನ ಕಾಲದಿಂದಲೂ ಸೇವೆ ನಿರತರಾಗಿರುವ ಒಂದು ಜನಾಂಗ. ಇವರು ಕಾವಲುಗಾರರಾಗಿದ್ದು ವಿಜಯನಗರ ಕಾಲದಲ್ಲಿ ಈ ವೃತ್ತಿಯನ್ನು ಪಾಲಿಸಿಕೊಂಡು ಬಂದಿದ್ದರು. ತದನಂತರ ವಿಜಯನಗರ ಸಾಮ್ರಾಜ್ಯ ದುರ್ಬಲಗೊಂಡಾಗ ಪಾಳೆಯಗಾರಿಕೆ ಅನುಭವಿಸಿದ್ದರು. ಈ ಪಾಳೆಯಗಾರಿಕೆಯಲ್ಲಿ ಒಟ್ಟು ೧೫ ಪುರುಷರು ಒಬ್ಬ ಮಹಿಳೆ ಸೇರಿದಂತೆ ೧೬ ಜನರು ಸುಮಾರು ೨ ಶತಮಾನಕ್ಕೂ ಹೆಚ್ಚು ಕಾಲ ಹರಪನಹಳ್ಳಿ ಪ್ರದೇಶವನ್ನು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಈ ನಾಯಕರ ರಾಜಕೀಯ ಚರಿತ್ರೆಯನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ.

**ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಚರಿತ್ರೆ**

ಹರಪನಹಳ್ಳಿ ಪ್ರದೇಶದಲ್ಲಿ ಪಾಳೆಯಗಾರರು ಸುಮಾರು ೨ ಶತಮಾನಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ದಾದಯ್ಯನಾಯಕ ಪಾಳೆಯಗಾರಿಕೆಯ ಸ್ಥಾಪಕರು. ಈ ಪಾಳೆಯಗಾರರು ಬೇಡರಿಗೆ ಸಂಬಂಧಿಸಿದ್ದು, ಅಲ್ಲಿನ ನಾಯಕರು ಅತಿ ಪ್ರಬಲ ಅರಸರಾಗಿದ್ದರು. ಇವರಿಗೆ ಒಟ್ಟು ೪೬೦ ಹಳ್ಳಿಗಳು ಸೇರಿದ್ದು, ಎಂಟು ಲಕ್ಷ ರೂಪಾಯಿಗಳ ವರಮಾನವಿತ್ತು. ಈ ವಂಶದ ಮೂಲ ಪುರುಷ ದಾದಯ್ಯನಾಯಕ ವಿಜಯನಗರ ಪತನಾನಂತರ ತನ್ನ ಅನುಯಾಯಿಗಳ ಬೆಂಬಲ ಪಡೆದು ನಾಯಕನಾಗಿ ಬಾಗಳಿ ಮತ್ತು ಅದರ ಸುತ್ತಮುತ್ತ ಪ್ರದೇಶವನ್ನು ಆಳಲಾರಂಭಿಸಿದರು.

**ದಾದಯ್ಯನಾಯಕ**

ರಕ್ಕಸಗಿ ತಂಗಡಗಿ ಯುದ್ಧದ ನಂತರ ವಿಜಯನಗರ ಸಾಮ್ರಾಜ್ಯ ದುರ್ಬಲಗೊಂಡಾಗ ಕರ್ನಾಟಕದಲ್ಲಿ ಹಲವು ಪಾಳೆಪಟ್ಟುಗಳು ಉಗಮವಾದವು. ಅವುಗಳಲ್ಲಿ ಹರಪನಹಳ್ಳಿ ಪಾಳೆಯಪಟ್ಟು ಒಂದು. ಈ ಪಾಳೆಯಪಟ್ಟನ್ನು ಸ್ಥಾಪಿಸಿದವನು ದಾದಯ್ಯನಾಯಕ. ಕಿರಾತ ಪಡೆಯನ್ನು ಕಟ್ಟಿ ನೆರೆಹೊರೆಯಲ್ಲಿ ನಡೆಯುತ್ತಿದ್ದ ಕಳ್ಳತನ, ದರೋಡೆಗಳನ್ನು ತಡೆಗಟ್ಟುತ್ತಿದ್ದನು. ಈತನು ಬೇಡ ಬುಡಕಟ್ಟಿಗೆ ಸೇರಿದವನಾಗಿದ್ದು, ತನ್ನ ಶಕ್ತಿ ಸಾಮರ್ಥ್ಯದಿಂದ ಹರಪನಹಳ್ಳಿಯನ್ನು ಕೇಂದ್ರವನ್ನಾಗಿಟ್ಟುಕೊಂಡು ಆಳ್ವಿಕೆ ನಡೆಸಿದನು. ಇವನು ಕಣ್ಣಪ್ಪನಕುಲಕ್ಕೆ ಸೇರಿದವನು ಮತ್ತು ಕುಮ್ಮಟದುರ್ಗದ ಕುಮಾರರಾಮನ ವಂಶಜನು ಎಂದು ದಾಖಲಿಸಲಾಗಿದೆ.[೧೦] ದಾದಯ್ಯ ನಾಯಕನು ರಾಯಚೂರಿನ ಸಮೀಪ ಶ್ರೀ ಚಂದ್ರಲಾಪರಮೇಶ್ವರಿ ಆಶೀರ್ವಾದ ಪಡೆದು ಹರಪನಹಳ್ಳಿಗೆ ಬಂದು ರಾಜ್ಯ ಸ್ಥಾಪಿಸಿದನಂತೆ. ದಾದಯ್ಯನು ಅಪ್ರತಿಮ ಬೇಟೆಗಾರನಾಗಿದ್ದು, ಒಮ್ಮೆ ಬೇಟೆಯಲ್ಲಿರುವಾಗ ಚಂದ್ರಲಾಪರಮೇಶ್ವರಿ ಕನಸಿನಲ್ಲಿ ಬಂದು ಬಾಗಳಿ ಪುಣ್ಯಕ್ಷೇತ್ರಕ್ಕೆ ಪ್ರಯಾಣ ಬೆಳೆಸಲು, ಅಲ್ಲಿ ರಾಜ್ಯ ಸ್ಥಾಪಿಸಲು ಆದೇಶಿಸಿದಳೆಂದು ಹೇಳಲಾಗುತ್ತದೆ.[೧೧] ದಾದಯ್ಯ ಬೇಟೆಯಾಡುತ್ತ ತನ್ನ ಸಹಚರರೊಂದಿಗೆ ಬಾಗಳಿಗೆ ಬಂದು ನೆಲೆಸಿದನು. ಇವನಿಗೆ ಕ್ರಿ.ಶ. ೧೫೬೬ರಲ್ಲಿ ಪಟ್ಟಾಭಿಷೇಕವಾಯಿತು ಎಂದು ಕೈಫಿಯತ್ತಿನ ಮೂಲಕ ತಿಳಿದುಬರುತ್ತದೆ. ೧೫೮೦ರಲ್ಲಿ ದಾದಯ್ಯನಾಯಕನು ಮೊದಲ ಪಾಳೆಯಗಾರನಾಗಿದ್ದ ಎಂದು ಕೆಳದಿ ನೃಪವಿಜಯದಲ್ಲಿ ಉಲ್ಲೇಖಿಸಲಾಗಿದೆ. ದಾದಯ್ಯನಾಯಕನು ಕ್ರಿ.ಶ. ೧೫೫೭ರಿಂದ ೧೫೯೩ರವರೆಗೆ ಹರಪನಹಳ್ಳಿಯನ್ನು ಕೇಂದ್ರವನ್ನಾಗಿಟ್ಟುಕೊಂಡು ಆಳ್ವಿಕೆ ನಡೆಸಿದನು. ಈ ನಾಯಕ ವಿಜಯನಗರ ಅರಸರಿಂದ ಶ್ರೀಮನ್ಮಹಾನಾಯಕಾಚಾರ್ಯ, ಭಾಷೆಗೆ ತಪ್ಪದ ನಾಯಕರ ಗಂಡ, ಮೊರೆ ಹೊಕ್ಕವರ ಕಾಯ್ವ, ಮಾರಾಂತರ ಗೆಲ್ಲುವ ಎಂಬ ಬಿರುದುಗಳನ್ನು ಪಡೆದಿದ್ದನು. ಕೋಟೆಯನ್ನು ಕಟ್ಟಿಸಿ ಸಮರ್ಥ ಬೇಡ ಪಡೆಯನ್ನು ಕಟ್ಟಿಕೊಂಡು ತನ್ನ ಪಾಳೆಯಪಟ್ಟನ್ನು ವಿಸ್ತರಿಸಿ ಆಳ್ವಿಕೆ ನಡೆಸಿದ ಖ್ಯಾತಿ ಇವನಿಗೆ ಸಲ್ಲುತ್ತದೆ. ವಿಜಯನಗರದ ಮನ್ನಣೆಯನ್ನು ಪಡೆದು ಹರಪನಹಳ್ಳಿ ಪ್ರಾಂತ್ಯವನ್ನು

ಸಮರ್ಥವಾಗಿ ಅಧಿಕಾರ ನಡೆಸುವುದಕ್ಕೆ ಅನುಕೂಲಕರವಾದ ಸಿಬ್ಬಂದಿಯನ್ನು ಪಡೆದುಕೊಂಡನೆಂದು ತಿಳಿಯಬಹುದು.

ಬಾಗಳಿಯ ಗೌಡರು ಚಾರಿತ್ರಿಕ ಮಹತ್ವವಾದ ಖಡ್ಗವೊಂದನ್ನು ದಾದಯ್ಯನಿಗೆ ಕೊಟ್ಟನು. ಇಲ್ಲಿ ಅವನು ನೆಲೆಸಿದಾಗ ಕತ್ತಿಗುಂಡಿ, ಜಿಟ್ಟಗನಮರಡಿ ಎಂದು ಸ್ಮರಿಸುತ್ತವೆ. ನೀಲಗುಂದ ಬಾಗಳಿಗಳಲ್ಲಿ ಬೇಟೆಯಾಡುತ್ತಾ ಕೊಟ್ಟಕಲ್ಲು ಸೋಮೇನಹಳ್ಳಿಗಳಲ್ಲಿ ಮೊದಲು ರಾಜ್ಯ ಸ್ಥಾಪನೆ ಮಾಡಿದ. ಬಾಗಳಿಯನ್ನು ಕೇಂದ್ರಸ್ಥಳವಾಗಿ ಮಾಡಿಕೊಂಡನು.[13] ದಾದಯ್ಯನಾಯಕನು ಬೇಟೆಯಾಡುವುದರಲ್ಲಿ ನಿಸ್ಸಿಮನಾಗಿದ್ದನು. ತನ್ನ ಶಕ್ತಿ ಸಾಮರ್ಥ್ಯದಿಂದ ಕಿರಾತ ಪಡೆಯನ್ನು ಕಟ್ಟಿಕೊಂಡು ಸುತ್ತಮುತ್ತ ನಡೆಯುತ್ತಿದ್ದ ಕಳ್ಳತನ ದರೋಡೆಗಳನ್ನು ತಡೆಗಟ್ಟಿದನು. ತಮ್ಮ ಕುಲಪದ್ಧತಿಯ ಪ್ರಕಾರ ಬೇಟೆಯಾಡಲು ಹೋದಾಗ ಹುಲಿಯನ್ನು ಹೆದರಿಸುತ್ತಿದ್ದ ಇವನ ಬೇಟೆ ನಾಯಿಗಳು ಮೊಲಗಳನ್ನು ಕಂಡು ಹೆದರಿ ಓಡಿಹೋದವು. ಈ ಸನ್ನಿವೇಶ ಕಂಡ ನಾಯಕನಿಗೆ ಹೆದರಿಕೆಯಾಯಿತು. ಈ ಪ್ರಸಂಗವನ್ನು ಜೋಯಿಸರಿಗೆ ತಿಳಿಸಿದನಂತೆ. ಅವರು ಸಾಮ್ರಾಜ್ಯ ಸ್ಥಾಪಿಸಲು ಪ್ರೋತಾಹ ನೀಡಿದನೆಂಬ ಐತಿಹ್ಯವು ಈ ಭಾಗದಲ್ಲಿ ಪ್ರಚಲಿತವಿದೆ.

ದಾದಯ್ಯ ನಾಯಕನು ಹರಪನಹಳ್ಳಿಯ ಎರಡು ಕೆರೆಗಳ ಮಧ್ಯದಲ್ಲಿ ಕೋಟೆಯನ್ನು ಕಟ್ಟಿಸಿ ತನ್ನ ಜಹಗೀರನ್ನು ವಿಸ್ತರಿಸಿದನು. ಕೋಟೆಯ ಸುತ್ತ ಆಳವಾದ ಕಂದಕವನ್ನು ನಿರ್ಮಿಸಿದನು. ತನ್ನ ಸೈನ್ಯವನ್ನು ಬಲಪಡಿಸುತ್ತಾ ಆಡಳಿತದಲ್ಲಿ ಸುಧಾರಣೆ ತಂದನು. ಮದಲಗಟ್ಟು, ಕೋಗಳಿ, ಸಂಡೂರು, ನೀಲಗುಂದದವರೆಗೆ ವಿಸ್ತರಿಸಿ ತನ್ನ ಆಡಳಿತ ವ್ಯಾಪ್ತಿಗೆ ಸುಮಾರು ೪೦೦ ಹಳ್ಳಿಗಳನ್ನು ಸೇರಿಸಿಕೊಂಡನು. ಆರ್ಥಿಕವಾಗಿ ಹೆಚ್ಚು ಹೆಚ್ಚು ಆದಾಯ ಬರುವಂತೆ ಮಾಡಿಕೊಂಡನು. ಅನೇಕ ಕೆರೆ ಬಾವಿಗಳನ್ನು ನಿರ್ಮಿಸಿ ಕೃಷಿಗೆ ಹೆಚ್ಚು ಮಹತ್ವವನ್ನು ನೀಡಿ ಜನಮನ್ನಣೆಯನ್ನು ಪಡೆದ.

ಕ್ರಿ.ಶ. ೧೫೭೩ರಲ್ಲಿ ಬಸವಾಪಟ್ಟಣದ ಕೆಂಗಣ್ಣನಾಯಕನಿಗೆ ಮತ್ತು ಚಿತ್ರದುರ್ಗದ ಓಬಣ್ಣ ನಾಯಕನಿಗೆ ಯುದ್ಧ ನಡೆಯಿತು. ಕೆಂಗಣ್ಣನಾಯಕ ಕೋಟೆಯನ್ನು ಮುತ್ತಿಗೆ ಹಾಕಲು ಆರಂಭಿಸಿದ. ಈ ಸಂದರ್ಭದಲ್ಲಿ ಓಬಣ್ಣ ನಾಯಕ ದಾದಯ್ಯನಾಯಕನ ನೆರವನ್ನು ಕೋರಿದನು. ಅದರಂತೆ ದಾದಯ್ಯನಾಯಕ ಚಿತ್ರದುರ್ಗದ ನಾಯಕರಿಗೆ ನೆರವನ್ನು ಕೊಡಲು ಒಪ್ಪಿ ಸೈನಿಕರನ್ನು ಒಟ್ಟುಗೂಡಿಸಿ ಚಿತ್ರದುರ್ಗಕ್ಕೆ ತಲುಪಿದ. ದಾದಯ್ಯನಾಯಕನು ಕೆಂಗಣ್ಣನಾಯಕನ ಜೊತೆ ಸುಮಾರು ೧೫ ದಿನಗಳ ಯುದ್ಧ ಮಾಡಿ ಚಿತ್ರದುರ್ಗಕ್ಕೆ ಜಯ ತಂದುಕೊಟ್ಟ. ದಾದಯ್ಯನಾಯಕನ ಸಾಹಸವನ್ನು ಕಂಡು ಮೆಚ್ಚಿದ ಓಬಣ್ಣನಾಯಕನು ತನ್ನ ಸಹೋದರಿಯಾದ ಹೊನ್ನವ್ವ ನಾಗತಿಯನ್ನು ಕೊಟ್ಟು ವಿವಾಹ ಸಂಬಂಧ ಬೆಳೆಸಿದನು. ಹೊನ್ನವ್ವ ನಾಗತಿ ಹರಪನಹಳ್ಳಿಯ ಸಮೀಪದಲ್ಲಿರುವ ಉಚ್ಚಂಗಿಕೋಟೆಯನ್ನು ಬಳುವಳಿಯಾಗಿ ಪಡೆದುಕೊಂಡಳು. ಉಚ್ಚಂಗಿದುರ್ಗದ ಕೋಟೆಯ ಮೇಲೆ ದಸರಾ ಹಬ್ಬದ ಸಂದರ್ಭದಲ್ಲಿ ಚಿತ್ರದುರ್ಗದ ಪಾಳೆಯಗಾರರು ದಾಳಿ ಮಾಡಿದರು.

ಪಲ್ಲಕ್ಕಿಯಲ್ಲಿದ್ದ ಉಚ್ಚಂಗೆಮ್ಮನ ಮೂರ್ತಿಯನ್ನು ಅಪಹರಿಸಿಕೊಂಡು ಹಿಂತಿರುಗಿದರು. ಈ ಪ್ರಸಂಗದಿಂದ ಹರಪನಹಳ್ಳಿ ಪಾಳೆಯಗಾರರಿಗೆ ಹಾಗೂ ಚಿತ್ರದುರ್ಗ ಪಾಳೆಯಗಾರರಿಗೆ ಇದ್ದ ಸಂಬಂಧ ಮುರಿದುಹೋಯಿತು.

ಹರಪನಹಳ್ಳಿ ಪಾಳೆಯಗಾರರಿಗೂ ಚಿತ್ರದುರ್ಗ ಪಾಳೆಯಗಾರರಿಗೆ ಯುದ್ಧಗಳು ಪ್ರಾರಂಭವಾದವು. ಚಿತ್ರದುರ್ಗ ಪಾಳೆಯಗಾರರು ಉಚ್ಚಂಗಿದುರ್ಗದ ಪಕ್ಕದಲ್ಲಿರುವ ಹಿರೇಮೇಗಳಗೇರಿ, ಚಿಕ್ಕಮೇಗಳಗೇರಿ, ಕಂಚಿಕೆರೆ ಮೊದಲಾದ ಕೋಟೆಗಳ ಮೇಲೆ ದಾಳಿ ಮಾಡಿ ಅವುಗಳನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರು. ಇದರಿಂದ ಇವರೀರ್ವರ ನಡುವೆ ಯುದ್ಧ ಮಾಡುವ ಅನಿವಾರ್ಯತೆ ಉಂಟಾಯಿತು.[೧೩] ಈ ಸಂದರ್ಭದಲ್ಲಿ ಹೊನ್ನವ್ವನಾಗತಿ ಕೋಟೆಯ ಮೇಲಿಂದ ಜಾರಿಬಿದ್ದು ಮರಣ ಹೊಂದಿದಳು. ಈ ಘಟನೆಯಿಂದ ಚಿತ್ರದುರ್ಗ ಪಾಳೆಯಗಾರರಿಗೂ ಮತ್ತು ಹರಪನಹಳ್ಳಿ ಪಾಳೆಯಗಾರರಿಗೂ ಮತ್ತಷ್ಟು ವೈರತ್ವ ಬೆಳೆದು ಹಲವು ಯುದ್ಧಗಳಿಗೆ ಕಾರಣವಾದವು. ದಾದಯ್ಯನಾಯಕ ಹೊನ್ನವ್ವನಾಗತಿ ನೆನಪಿಗಾಗಿ ಹರಪನಹಳ್ಳಿ ಕೋಟೆಯ ಎರಡು ಸುತ್ತುಗಳ ಒಂದು ಸುತ್ತಿಗೆ ತನ್ನ ಮನೆಯ ದೇವರ ಸುತ್ತೆಂದು, ಇನ್ನೊಂದು ಸುತ್ತಿಗೆ ಹೊನ್ನವ್ವನಾಗತಿ ಹೆಸರುಗಳನ್ನು ಇಟ್ಟನು. ಹೊನ್ನವ್ವರ ಚಿತ್ರವನ್ನು ಕಲ್ಲಿನಲ್ಲಿ ಕೆತ್ತಿಸಿ ಕೋಟೆಯೊಳಗೆ ಇರುವ ಆಂಜನೇಯ ದೇವಾಲಯದ ಗುಡಿ ಪಕ್ಕದಲ್ಲಿ ಇರಿಸಿದ. ಈ ಸ್ಥಳವನ್ನು ಇಂದಿಗೂ ಹೊನ್ನಹೊಂಡ ಎಂದು ಕರೆಯುತ್ತಾರೆ. ಮಳೆ ಬಿದ್ದ ಸಮಯದಲ್ಲಿ ಅಲ್ಲಿಂದ ನೀರು ಹರಿದುಬರುತ್ತದೆ. ಈಗಲೂ ಉಚ್ಚಂಗಿದುರ್ಗದ ಜನರು ಆ ಸ್ಥಳಕ್ಕೆ ಹೊನ್ನೆಝುರಿ ಎಂದು ಕರೆಯುತ್ತಾರೆ. ಹೊನ್ನವ್ವನಾಗತಿ ಮರಣಹೊಂದಿದ ಸ್ವಲ್ಪ ಕಾಲನಂತರ ದಾದಯ್ಯನಾಯಕನು ಜರಿಮಲೆಯ ಪಾಳೆಯಗಾರರ ಪುತ್ರಿ ಜಂಪಾನಾಗತಿ, ಗುಡೆಕೋಟೆಯ ವಿಮಾನಾಗತಿ, ಬಿಳಿಚೋಡಿನ ಹನುಮ ನಾಗತಿಯರನ್ನು ಮದುವೆ ಆಗಿದ್ದು ತಿಳಿದುಬರುತ್ತದೆ. ಜಂಪವ್ವನಾಗತಿಯನ್ನು ಪಟ್ಟದ ರಾಣಿಯನ್ನಾಗಿ ಸ್ವೀಕರಿಸಿದನು.

ದಾದಯ್ಯನಾಯಕನು ಪುವ್ವಲವಂಶದವನೆಂದು ಡಾ. ವಿರೂಪಾಕ್ಷಿ ಪೂಜಾರಹಳ್ಳಿಯವರು ಅಭಿಪ್ರಾಯಪಡುತ್ತಾರೆ. ಸುಮಾರು ೩೫ ವರ್ಷಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ ದಾದಯ್ಯನಾಯಕನಿಗೆ ಹರಪನಹಳ್ಳಿ ಪಾಳೆಯಗಾರಿಕೆಗೆ ಭದ್ರಬುನಾದಿ ಹಾಕಿದ ಕೀರ್ತಿ ಸಲ್ಲುತ್ತದೆ. ಇವರ ತಂದೆಯಾದ ಮಾಚಿನಾಯಕನಿಗೆ ನಾಲ್ಕು ಜನ ಮಕ್ಕಳು. ಹಿರಿಯ ಪುತ್ರ ದಾದಯ್ಯನಾಯಕ ಪಾಳೇಪಟ್ಟನ್ನು ಸ್ಥಾಪಿಸಿ ಸುಮಾರು ೩೫ ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ನಂತರ ಇವನ ಮಗ ರಂಗಣ್ಣನಾಯಕ ಅಥವಾ ರಂಗನಾಯಕ ಅಧಿಕಾರಕ್ಕೆ ಬಂದನು.

**ರಂಗನಾಯಕ**

ಜಂಪವ್ವನಾಗತಿಯ ಮಗನಾದ ಇವನು ಕ್ರಿ.ಶ. ಸು. ೧೫೮೪ರಲ್ಲಿ ಅಧಿಕಾರಕ್ಕೆ ಬಂದನು. ಬಾಲಕನಿದ್ದಾಗಲೇ ಇವನು ಅನೇಕ ಹೋರಾಟಗಳಲ್ಲಿ ಪಾಲ್ಗೊಂಡಿದ್ದನು. ತನ್ನ ರಾಜ್ಯವನ್ನು ಕೊಟ್ಟೂರಿನವರೆಗೂ ವಿಸ್ತರಿಸಿದನು.[೧೪] ಸುಮಾರು ೨೫ ವರ್ಷಗಳ ಕಾಲ ಆಳ್ವಿಕೆ ನಡೆಸಿದನು.

ಈತನು ಕೊಟ್ಟೂರಿನ ಗುರುಬಸವಸ್ವಾಮಿಗೆ ಭಕ್ತಿಯನ್ನು ಅರ್ಪಿಸಿದನು. ದೇವಾಲಯದ ಮಧ್ಯಭಾಗವನ್ನು ಮತ್ತು ಮಹಾದ್ವಾರವನ್ನು ಕಟ್ಟಿಸಿದನೆಂದು ಸ್ಥಳೀಯರು ಹೇಳುತ್ತಾರೆ. ಹರಪನಹಳ್ಳಿ ಸಮೀಪದ ದೇವರ ತಿಮ್ಮಲಾಪುರದ ಶ್ರೀವೆಂಕಟರಮಣಸ್ವಾಮಿ ದೇವಾಲಯದ ಎದುರು ಭಾಗದಲ್ಲಿ ರಂಗಣ್ಣನಾಯಕ ಮತ್ತು ಅವನ ತಂದೆ ದಾದಯ್ಯನಾಯಕನ ಕಲ್ಲಿನ ವಿಗ್ರಹಗಳು ಸ್ಥಾಪಿಸಲಾಗಿದೆ. ಈ ಕಲ್ಲಿನ ವಿಗ್ರಹಗಳನ್ನು ಈಗಲೂ ನೋಡಬಹುದು.

ತಂದೆಯ ಕಾಲದಲ್ಲಿ ಹಲವು ಯುದ್ಧಗಳಲ್ಲಿ ಹಾಗೂ ಆಡಳಿತದಲ್ಲಿ ಭಾಗವಹಿಸಿದ ಅನುಭವ ಹೊಂದಿದ್ದ ರಂಗಣ್ಣನಾಯಕನು ತನ್ನ ಆಳ್ವಿಕೆಯ ಕಾಲದಲ್ಲಿ ಹರಪನಹಳ್ಳಿ ನಾಡಿನ ಪ್ರಜೆಗಳು ನೆಮ್ಮದಿಯಿಂದ ಜೀವನ ನಡೆಸಿದರು. ಹರಪನಹಳ್ಳಿ ಪ್ರದೇಶದಲ್ಲಿ ಕೆರೆಗಳನ್ನು ನಿರ್ಮಿಸಿ ಕೃಷಿಗೆ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಇವನ ನಂತರ ಇವನ ಮಗ ಭರಮಣ್ಣ ನಾಯಕ ಅಧಿಕಾರ ವಹಿಸಿಕೊಂಡನು.

**ಭರಮಣ್ಣನಾಯಕ**

ಭರಮಣ್ಣನಾಯಕನು ಕ್ರಿ.ಶ. ೧೬೦೮ರಿಂದ ೧೬೪೦ರವರೆಗೆ ಆಳ್ವಿಕೆ ನಡೆಸಿದನು. ತನ್ನ ತಂದೆ ವಿಸ್ತರಿಸಿದ ರಾಜ್ಯವನ್ನು ರಕ್ಷಿಸಿಕೊಂಡು ದೀರ್ಘಕಾಲ ಆಡಳಿತ ನಡೆಸಿದನು. ಇವನ ಕಾಲದಲ್ಲಿ ಹಲವು ಕೋಟೆಗಳನ್ನು ವಶಪಡಿಸಿಕೊಂಡನೆಂದು ತಿಳಿದುಬರುತ್ತದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿರುವ ಹನಸಿ ಕೋಟೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನ ಮಾಡಿದನು. ಸ್ಥಳೀಯ ವಯೋವೃದ್ಧರ ಮಾಹಿತಿಯಂತೆ ಈ ಕೋಟೆಯನ್ನು ಭರಮಣ್ಣನಾಯಕನು ವಶಪಡಿಸಿಕೊಳ್ಳಲು ತುಂಬ ಕಷ್ಟಪಡಬೇಕಾಯಿತು. ಕೋಟೆಯನ್ನು ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ಕೋಟೆಯ ಅರಸ ರಾಗಿಯನ್ನು ಸಂಗ್ರಹಿಸಿ ಗಂಜಿಯನ್ನು ತಯಾರಿಸಿ ಗೋಡೆಗೆ ಚಲ್ಲಿಸಿದ. ಅದರಿಂದ ಹರಪನಹಳ್ಳಿ ಸೈನಿಕರಿಗೆ ಗೋಡೆಯನ್ನು ಹತ್ತಲು ಆಗಲಿಲ್ಲ. ಕೆಲಕಾಲದ ನಂತರ ಹರಪನಹಳ್ಳಿ ಸೈನಿಕರು ಕೋಟೆಯ ಪಕ್ಕದಲ್ಲಿರುವ ಹೊಲದಲ್ಲಿ ನವಣೆ ಬೆಳೆ ಬೆಳೆದಿತ್ತು. ಆ ಬೆಳೆಗೆ ಸೈನಿಕರು ಬೆಂಕಿ ಹಚ್ಚಿ ತಾವು ಅಜ್ಞಾತ ಸ್ಥಳದಲ್ಲಿ ಅಡಗಿದರು. ಹನಸಿ ಸೈನಿಕರು ಆ ಬೆಂಕಿಯನ್ನು ಆರಿಸಲು ಹೊಲಕ್ಕೆ ಹೋದ ಸಂದರ್ಭದಲ್ಲಿ ಹರಪನಹಳ್ಳಿ ಸೈನಿಕರು ಕೋಟೆಯ ಕಾವಲು ಪಡೆಯನ್ನು ಸಂಹರಿಸಿ ಕೋಟೆಯೊಳಗೆ ಪ್ರವೇಶಿಸಿ ಕೋಟೆಯನ್ನು ವಶಪಡಿಸಿಕೊಂಡರು ಎಂದು ಸ್ಥಳೀಯರು ಮಾಹಿತಿ ನೀಡುತ್ತಾರೆ. ಅದಾದ ನಂತರ ಅದರ ಸುತ್ತಮುತ್ತ ಇರುವ ಅನೇಕ ಸಣ್ಣಪುಟ್ಟ ಕೋಟೆಗಳನ್ನು ವಶಪಡಿಸಿಕೊಂಡನೆಂದು ತಿಳಿದುಬರುತ್ತದೆ. ಭರಮಣ್ಣನಾಯಕ ಹರಪನಹಳ್ಳಿ ಪರಿಸರದಲ್ಲಿ ಪ್ರಜೆಗಳಿಗೆ ನೆಮ್ಮದಿಯ ಆಡಳಿತ ನೀಡುವಲ್ಲಿ ಹಲವಾರು ಸಾಹಸ ಕಾರ್ಯಗಳನ್ನು ಕೈಗೊಂಡಿದ್ದನು. ಸು. ೩೦ ವರ್ಷಗಳ ಆಡಳಿತಾವಧಿಯಲ್ಲಿ ಅಲ್ಲಿನ ಪ್ರಜೆಗಳಿಗೆ ಕೃಷಿ, ನೀರಾವರಿ, ಕೆರೆ ಕಾಲುವೆಗಳನ್ನು ನಿರ್ಮಿಸಿ ಆರ್ಥಿಕವಾಗಿ ಭದ್ರಪಡಿಸುತ್ತಾನೆ. ಇವನ ನಂತರ ಹೊಂಬಣ್ಣನಾಯಕ ಅಧಿಕಾರಕ್ಕೆ ಬರುತ್ತಾನೆ.

## ಹೊಂಬಣ್ಣನಾಯಕ

ಹೊಂಬಣ್ಣ ನಾಯಕ ಅಥವಾ ಓಬಣ್ಣನಾಯಕ ಕೇವಲ ೫ ವರ್ಷಗಳ ಕಾಲ ಆಡಳಿತ ನಡೆಸಿದನು. ಇವನು ಸಣ್ಣಪುಟ್ಟ ಹಳ್ಳಿಗಳ ಮೇಲೆ ಯುದ್ಧ ಮಾಡಿ ತನ್ನ ರಾಜ್ಯವನ್ನು ಸ್ವಲ್ಪ ವಿಸ್ತರಿಸಿದನು. ಈ ನಾಯಕನು ಆಪ್ತರ ಮತ್ತು ಸೇನಾಪತಿಗಳ ಮಾರ್ಗದರ್ಶನದಂತೆ ರಾಜ್ಯವಾಳಿದ್ದು ತಿಳಿದುಬರುತ್ತದೆ. ಇವನ ಹೆಸರಿನಲ್ಲಿ ಅನೇಕ ಗ್ರಾಮಗಳು ಉಗಮವಾಗಿದ್ದು ಕಂಡುಬರುತ್ತದೆ. ಈಗಲೂ ಹರಪನಹಳ್ಳಿ ತಾಲೂಕಿನಲ್ಲಿ ಓಬಳಾಪುರ ಹೊಂಬಳಘಟ್ಟ ಎಂಬ ಗ್ರಾಮಗಳು ಕಂಡುಬರುತ್ತವೆ. ಇವನ ಕಾಲದಲ್ಲಿ ಪ್ರಜೆಗಳು ಶಾಂತಿ ಸೌಹಾರ್ದತೆಯಿಂದ ಇರುತ್ತಿದ್ದರು. ಈತನು ಬೇಟೆಯಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದನು ಎಂಬುದು ಕಂಡುಬರುತ್ತದೆ.

## ವೀರಮುಮ್ಮಡಿ ನಾಯಕ

ವೀರಮುಮ್ಮಡಿ ನಾಯಕ ಹೊಂಬಣ್ಣನಾಯಕನ ಕಿರಿಯ ಸಹೋದರ. ಹೊಂಬಣ್ಣ ನಾಯಕರಿಗೆ ಪುತ್ರ ಸಂತಾನವಿರಲಿಲ್ಲ. ಆದುದರಿಂದ ಸೋದರ ವೀರಮುಮ್ಮಡಿ ನಾಯಕನಿಗೆ ಪಟ್ಟಾಭಿಷೇಕ ಮಾಡಿದರು. ಇವನು ತನ್ನ ಸೈನ್ಯವನ್ನು ಬಲಪಡಿಸುವುದಕ್ಕೆ ಹೆಚ್ಚು ಮಹತ್ವ ಕೊಟ್ಟನು.[೧೫] ಸೈನಿಕರನ್ನು ಬಹಳ ಶಿಸ್ತಿನಿಂದ ಇರಿಸಿದ್ದನು. ಸೈನಿಕರ ಪ್ರೀತಿ ವಿಶ್ವಾಸ ಗಳಿಸಿದನು. ಹರಪನಹಳ್ಳಿ ಸೀಮೆಯಲ್ಲಿ ಕುಸ್ತಿ ಆಟದ ಉತ್ತಮ ಪುರುಷರನ್ನು ಸೇನೆಗೆ ಸೇರಿಸಿಕೊಂಡಿದ್ದನು. ಸೈನಿಕರಿಗೆ ಕತ್ತಿವರಸೆ, ಮಲ್ಲಯುದ್ಧ, ಈಟಿ ಎಸೆಯುವುದು, ಬಾಣ ಬಿಡುವುದು ಮುಂತಾದ ಯುದ್ಧ ಕೌಶಲ್ಯಗಳನ್ನು ತರಬೇತಿ ಕೊಡಿಸಿದನು. ಈಗಿನ ಕೂಡ್ಲಿಗಿ ತಾಲೂಕು ಪ್ರದೇಶಕ್ಕೆ ಸೇರಿದ ಬೆಳ್ಳಾಡುಕೋಟೆಯವರು ಹರಪನಹಳ್ಳಿ ನಾಯಕರ ವಿರುದ್ಧ ಪಿತೂರಿ ಮಾಡಿದ್ದರು. ಆ ಸುದ್ದಿಯನ್ನು ನಾರಾಯಣದೇವರ ಕೆರೆಗೆ ಒಬ್ಬ ತಳವಾರ ತಂದು ಮುಟ್ಟಿಸಿದನು. ಆಗ ಹರಪನಹಳ್ಳಿ ಸೈನಿಕರು ಬೆಳ್ಳಾಡು ಕೋಟೆಗೆ ಮುತ್ತಿಗೆ ಹಾಕಿದರು. ಒಂದು ವಾರ ಕಾಲ ನಡೆದ ಈ ಯುದ್ಧದಲ್ಲಿ ಅಪಾರ ಸಾವುನೋವುಗಳು ಸಂಭವಿಸುತ್ತವೆ. ಕೋಟೆ ಸಂಪೂರ್ಣ ನಾಶವಾಗಿ ಅಲ್ಲಿನ ಜನರು ಬೇರೆ ಕಡೆ ವಲಸೆ ಹೋದರು ಎಂದು ಕುಂ.ಬಾ. ಸದಾಶಿವಪ್ಪನವರು ತಮ್ಮ ಕೃತಿಯಾದ ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನದಲ್ಲಿ ತಿಳಿಸಿದ್ದಾರೆ. ಕೋಟೆ ಪ್ರದೇಶದಲ್ಲಿ ಒಂದು ತಗ್ಗು ಇದ್ದು, ಈಗಲೂ ಅದಕ್ಕೆ ರಕ್ತದ ಗುಂಡಿ ಎಂದು ಶಿವಪುರದ ಜನರು ಕರೆಯುತ್ತಾರೆ. ಈ ನಾಯಕನು ೧೨ ವರ್ಷಗಳ ಕಾಲ ರಾಜ್ಯಭಾರ ಮಾಡಿದನು ಎಂದು ತಿಳಿದುಬರುತ್ತದೆ. ಇವನ ಮರಣದ ನಂತರ ದಾದಯ್ಯನಾಯಕನ ಸಂತತಿ ಇಲ್ಲಿಗೆ ಕೊನೆಯಾಗುತ್ತದೆ ಎಂದು ವಿರೂಪಾಕ್ಷಿ ಪೂಜಾರಹಳ್ಳಿ ಅವರು ಅಭಿಪ್ರಾಯಪಡುತ್ತಾರೆ.

## ಮುಮ್ಮಡಿನಾಯಕ

ದಾದಯ್ಯನಾಯಕರ ಇನ್ನೊಬ್ಬ ಸಹೋದರ ಹೊಂಬಣ್ಣನಾಯಕ. ಈ ನಾಯಕನಿಗೆ ಇಬ್ಬರು ಮಕ್ಕಳು. ಗೋಣೆಪ್ಪ ಮತ್ತು ಹೊಂಬಣ್ಣ. ಹೊಂಬಣ್ಣನಿಗೆ ಗೋಣೆಪ್ಪ ಚೊಕ್ಕಪ್ಪ ದುರ್ಗಣ್ಣ

ಎಂಬ ಮೂವರು ಮಕ್ಕಳಿದ್ದರು. ಈ ಚೊಕ್ಕಪ್ಪನೆ ಮುಮ್ಮಡಿನಾಯಕ. ಇವನು ಅನೇಕ ಕೋಟೆಗಳನ್ನು ವಶಪಡಿಸಿಕೊಂಡು ಹರಪನಹಳ್ಳಿ ಪಾಳೆಯಪಟ್ಟನ್ನು ವಿಸ್ತರಿಸಿದನು. ಇವನ ಕಾಲದಲ್ಲಿ ೪೬೦ ಕಂದಾಯ ಗ್ರಾಮಗಳಿದ್ದವು. ಸುಮಾರು ಎಂಟು ಲಕ್ಷಕ್ಕೂ ಹೆಚ್ಚು ವರಹಗಳು ರಾಜ್ಯಕ್ಕೆ ಬರುತ್ತಿತ್ತು.[೧೭] ರಾಜ್ಯಕ್ಕೆ ಹೆಚ್ಚು ಆದಾಯ ತಂದುಕೊಟ್ಟ ಕೀರ್ತಿ ಇವನಿಗೆ ಸಲ್ಲುತ್ತದೆ. ಇವನು ಸಮರ್ಥ ಆಡಳಿತಗಾರನಾಗಿದ್ದು ಸುಮಾರು ೨೦ ವರ್ಷಗಳ ಕಾಲ ರಾಜ್ಯ ಆಳ್ವಿಕೆ ನಡೆಸಿದ್ದಾನೆ.

**ಮೊದಲನೇ ಬಸವಂತ ನಾಯಕ**

ಈತನ ಮತ್ತೊಂದು ಹೆಸರು ಕೊಟ್ರಬಸಪ್ಪ ನಾಯಕ. ಇವನು ಮುಮ್ಮಡಿನಾಯಕನ ಸಹೋದರ. ಹರಪನಹಳ್ಳಿ ಮತ್ತು ಇಡೀ ನಾಯಕ ಜನಾಂಗದ ಮಹಾಪರಿವರ್ತನೆಯ ಘಟನೆಗಳಲ್ಲಿ ಅಪೂರ್ವತೆ ಕಂಡುಬರುತ್ತದೆ. ಬಸವಂತ ನಾಯಕನು ಕೊಟ್ರಪ್ಪನಾಯಕನೆಂದು ಲಿಂಗದೀಕ್ಷೆ ಪಡೆದನೆಂದು ನಾಯಕ ಜನಾಂಗದ ಅರಸ ವೀರಶೈವರಾದ ಬಗ್ಗೆ ಅನೇಕ ಕುತೂಹಲಗಳಿವೆ.[೧೮]

೧. ಹರಪನಹಳ್ಳಿಯಲ್ಲಿ ದೊರೆತ ಒಂದು ಹಳೆಯ ದಾಖಲೆಯ ಪ್ರಕಾರ ಕಲ್ಯಾಣಪುರ ಪ್ರಾಂತದ ಮುಸ್ಟೂರುದಿಂದ ಬಂದ ಮಹಾಮಹಿಮರಾದ ಗಂಗಾಧರ ಸ್ವಾಮಿ ಒಡೆಯರು, ಹರಪನಹಳ್ಳಿಯ ಮೊದಲ ಬಸವಂತನಾಯಕನಿಗೆ ಮಹಾಮಹಿಮೆಗಳನ್ನು ತೋರಿಸಿ ಪುರಾಣ ಲಿಂಗ ಸಾಮರಸ್ಯ ಬೋಧಿಸಿದರು. ಅದಕ್ಕೆ ಬಸವಂತ ನಾಯಕನು ತನ್ನನ್ನು ಲಿಂಗಾಂಗಿಯನ್ನಾಗಿ ಮಾಡಬೇಕೆಂದು ಅವರನ್ನು ಬೇಡಿಕೊಂಡರು. ಆಗ ಅವರು ಈ ಪುರದ ಗುರುವರ್ಗದವರನ್ನು ವಿಚಾರಿಸಿ ಅವರಿಂದ ಲಿಂಗಾಧಾರಣೆ ಮಾಡಿಸಿಕೊಳ್ಳಲು ಹೇಳಿದರು. ಅದರಂತೆ ಸುಲಿಕಲ್ಲಪ್ಪಸ್ವಾಮಿ ಗುರುಪಾದಪ್ಪಸ್ವಾಮಿ, ಶಾಂತವೀರಸ್ವಾಮಿ, ಚನ್ನವೀರಸ್ವಾಮಿ, ಮಡಿವಾಳಸ್ವಾಮಿ, ಬಸವಸ್ವಾಮಿ, ಮಲ್ಲಿಕಾರ್ಜುನಸ್ವಾಮಿ, ಕಾಡುಸಿದ್ಧಸ್ವಾಮಿ ಇವರುಗಳು ಅರಸರನ್ನು ಹಂಪೆಗೆ ಕರೆದುಕೊಂಡು ಹೋಗಿ ಲಿಂಗದೀಕ್ಷೆ ಮಾಡಿ ಕೊಟ್ರಪ್ಪನಾಯಕ ಎಂಬ ಹೆಸರಿಟ್ಟರು ಎಂದು ಕುಂ.ಬಾ ಸದಾಶಿವಪ್ಪನವರು ತಮ್ಮ ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನದಲ್ಲಿ ಅಭಿಪ್ರಾಯ ಪಡುತ್ತಾರೆ.

೨. ಫ.ಗು. ಹಳಕಟ್ಟಿಯವರು ಬರೆದ ಸಾರಂಗ ಮಠಾಧೀಶ್ವರರು ಪುಸ್ತಕದಲ್ಲಿ ಹೀಗೆ ತಿಳಿಸುತ್ತಾರೆ. ಶಿವಸಂಗಪ್ಪಯ್ಯನು ಬಳ್ಳಾರಿ ಜಿಲ್ಲೆಯ ಕೊಟ್ಟೂರಿನವರು. ಬಾಳೆಹಳ್ಳಿ ಸಂಸ್ಥಾನಾಧಿಪತಿಗಳಿಂದ ಚನ್ನವೀರಸ್ವಾಮಿ, ಪರ್ವತ ಸಿಂಹಾಸನಾಧಿಪತಿಗಳಿಂದ ವೀರ ಭಿಕ್ಷಾವರ್ತಿಸ್ವಾಮಿ ಈ ಮೂರು ಜನರು ಹರಪನಹಳ್ಳಿ ಸಂಸ್ಥಾನದ ದೊರೆಗೆ ವೀರಶೈವ ದೀಕ್ಷೆಯನ್ನು ಕೊಟ್ಟರು ಎಂದು ತಿಳಿಸುತ್ತಾರೆ.

ಇನ್ನೊಂದು ಐತಿಹ್ಯದ ಪ್ರಕಾರ ಹರಪನಹಳ್ಳಿ ಪಾಳೆಯಗಾರರಿಗೂ ಕೆಳದಿ ಪಾಳೆಯಗಾರರಿಗೂ ಹೆಚ್ಚು ಸ್ನೇಹವಿತ್ತು. ಕೆಳದಿ ಅರಸರು ವೀರಶೈವರು. ಈ ಅರಸರ ಸ್ನೇಹ ಪ್ರಭಾವಕ್ಕೆ ಒಳಪಟ್ಟು ಹರಪನಹಳ್ಳಿಯ ಅರಸರೂ ವೀರಶೈವದೀಕ್ಷೆ ಪಡೆದಿರಬೇಕೆಂದು ಕೆಲವರು ಊಹಿಸುತ್ತಾರೆ.

ಇನ್ನೊಂದು ಐತಿಹ್ಯದ ಪ್ರಕಾರ ಬಸವಂತನಾಯಕನು ಬಾಗಳಿಯ ಗೌಡನಾದ ದೊಡ್ಡಸಿದ್ಧನ ಗೌಡನ ಜೊತೆ ಜೂಜಾಟ ಆಡಿದನು. ಇದರಲ್ಲಿ ಗೌಡ ಪರಾಭವನಾದನು, ಪಂದ್ಯದ ಒಪ್ಪಂದದಂತೆ ಗೌಡನು ತನ್ನ ಇಬ್ಬರು ಸಹೋದರಿಯನ್ನು ನಾಯಕನಿಗೆ ಕೊಟ್ಟು ವಿವಾಹ ಮಾಡಬೇಕಿತ್ತು. ಆದರೆ ಬೇಡ ಕುಲಕ್ಕೆ ಸೇರಿದ ಅರಸನಿಗೆ ವೀರಶೈವ ಧರ್ಮದ ಹೆಣ್ಣನ್ನು ಕೊಟ್ಟು ಹೇಗೆ ಮದುವೆ ಮಾಡಿಸಬೇಕು ಎಂಬ ಸಮಸ್ಯೆ ಉಂಟಾಯಿತು. ಇದನ್ನು ಅರಿತ ಬಸವಂತನಾಯಕನು ಹಂಪಿಗೆ ಹೋಗಿ ಲಿಂಗದೀಕ್ಷೆ ಪಡೆದುಕೊಂಡು ವೀರಶೈವನಾಗಿ ತನ್ನ ಹೆಸರನ್ನು ಕೊಟ್ರಪ್ಪನಾಯಕ ಎಂದು ಬದಲಾಯಿಸಿಕೊಂಡನು ಎಂಬ ಐತಿಹ್ಯ ಕೂಡ ಇರುವುದು ಕಂಡುಬರುತ್ತದೆ.

ಈ ಪಂದ್ಯದಲ್ಲಿ ಬಸವಂತನಾಯಕ ಸೋಲುವ ಸ್ಥಿತಿಯಲ್ಲಿದ್ದನು. ಶಿವನಪ್ಪ ಎಂಬ ತಳವಾರನ ಸಹಾಯದಿಂದ ಗೆಲುವು ಸಾಧಿಸಿದ್ದಕ್ಕೆ ಬಸವಂತನಾಯಕನು ಶಿವನಪ್ಪನಿಗೆ ಚಿಗಟೇರಿಯ ಕೋಟೆಯನ್ನು ಬಿಟ್ಟುಕೊಟ್ಟನು ಹಾಗೂ ಸಾಮಂತನಾಗಿ ಆಡಳಿತ ನಡೆಸಲು ಆಜ್ಞೆ ಮಾಡಿದನು. ಹರಪನಹಳ್ಳಿ ಪ್ರಸನ್ನವೆಂಕಟರಮಣ ಸ್ವಾಮಿಗೆ ಬಾಗಳಿ ಒಂದು ಗದ್ದೆಯನ್ನು ದೇವರ ಪೂಜಾಕಾರ್ಯಕ್ಕೆ ದತ್ತಿ ನೀಡಿದನು. ಶ್ರೀ ಕೂಡ್ಲಿ ಶಂಕರಭಾರತಿ ಸ್ವಾಮಿಗಳ ಮಠಕ್ಕೆ ನಿಟ್ಟೂರು ಬಸಾಪುರ ಗ್ರಾಮವನ್ನು ದತ್ತಿ ನೀಡಿದನು. ಹೀಗೆ ಬಸವಂತನಾಯಕನು ತನ್ನ ಅಧಿಕಾರಾವಧಿಯಲ್ಲಿ ಹಲವಾರು ಸಾಮಾಜಿಕ ಕಾರ್ಯಗಳು ಕೈಗೊಂಡನು.

**ಮರಿಕೊಟ್ರಪ್ಪ ನಾಯಕ**

ದಿನದಿಂದ ದಿನಕ್ಕೆ ವಿಸ್ತಾರಗೊಳ್ಳುತ್ತಿದ್ದ ಹರಪನಹಳ್ಳಿ ಪಾಳೆಯಪಟ್ಟಿಗೆ ಕೀರ್ತಿ ತಂದವರ ಸಾಲಿಗೆ ಇವನು ಸೇರುತ್ತಾನೆ. ಪಶ್ಚಿಮದ ತುಂಗಭದ್ರಾ ನದಿ ಪರಿಸರದ ಹಳ್ಳಿಗಳಲ್ಲದೆ ಹೊಸಪೇಟೆ ಸಮೀಪದ ಹೊಸೂರು ಪರಗಣವರೆಗೂ ರಾಜ್ಯ ವಿಸ್ತರಿಸಿದನು. ಈ ಪ್ರದೇಶದೊಳಗೆ ತಮ್ಮದೇ ಆದ ಕಾಣಿಕೆಗಳನ್ನು ನೀಡಿದನು.[೧೮] ಇವನ ಕಾಲದಲ್ಲಿ ಚಿಕ್ಕ ಪುಟ್ಟ ಯುದ್ಧಗಳು ಮಾತ್ರ ಜರುಗಿದವು. ಈತನು ದೈವಭಕ್ತನಾಗಿದ್ದು, ದರೋಡೆಕೋರರಿಗೆ ಶಿಕ್ಷೆಯನ್ನು ನೀಡಿದನು. ಇವನ ಕಾಲದಲ್ಲಿ ಕೆಲವು ಗ್ರಾಮಗಳು ಉದಯವಾಗಿದ್ದು, ದಾನವ್ವ, ಧರ್ಮವ್ವ, ಬಸವ್ವ ಎಂಬ ಹೆಸರಿನ ರಾಣಿಯರಿಂದ ದಾನವ್ವನಹಳ್ಳಿ, ಧರ್ಮಸಾಗರ, ನಾಗತಿಬಸಾಪುರ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿವೆ. ಈಗಲೂ ಈ ಗ್ರಾಮಗಳು ಹರಪನಹಳ್ಳಿ ಹಡಗಲಿ, ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳಲ್ಲಿ ಕಂಡುಬರುತ್ತವೆ.

**ಎರಡನೆಯ ಬಸವಂತನಾಯಕ**

ಈತನು ಕೇವಲ ಒಂದು ವರ್ಷ ಕಾಲ ಆಡಳಿತ ನಡೆಸಿದನು. ತನ್ನ ಆಡಳಿತಾವಧಿಯಲ್ಲಿ ಯಾವುದೇ ಯುದ್ಧಗಳನ್ನು ಮಾಡಲಿಲ್ಲ. ಇವನ ಆಡಳಿತಾವಧಿಯು ಪ್ರಜಾಹಿತ ಕಾರ್ಯಗಳಿಗೆ ಸೀಮಿತವಾಗಿತ್ತು. ಕೆರೆ, ಬಾವಿಗಳನ್ನು ನಿರ್ಮಿಸುವುದು. ದೇವಾಲಯದ ಬಳಿ ಅರವಟ್ಟಿಗೆಗಳನ್ನು ನಿರ್ಮಿಸುವುದು ಇವನ ಮಹತ್ತರವಾದ ಕಾರ್ಯಗಳಾಗಿದ್ದವು. ಇವನು ಅಕಾಲಮರಣಕ್ಕೆ ತುತ್ತಾದನು.

**ಬಾಗುಳಿ ಹರಿಯಮ್ಮಾಜಿ**

ಹರಪನಹಳ್ಳಿ ಪಾಳೆಯಗಾರರಲ್ಲಿ ಏಕೈಕ ರಾಣಿಯಾಗಿ ಆಡಳಿತ ನಡೆಸಿರುವುದು ಒಂದು ವಿಶೇಷ. ಉತ್ತಮ ಆಡಳಿತಗಾರಳಾದ ಇವಳು ತನ್ನ ಸೈನ್ಯದಲ್ಲಿ ಶಿಸ್ತು ತರಬೇಕೆಂದು ಪ್ರಯತ್ನಿಸಿದಳು. ಯುದ್ಧ ಹೋರಾಟಗಳಿಲ್ಲದೆ ಶಾಂತಿ ಸೌಹಾರ್ದತೆಯಿಂದ ಅಧಿಕಾರ ನಡೆಸುತ್ತಿದ್ದಳು. ಬಸವಂತನಾಯಕನ ರಾಣಿಯಾದ ಇವಳು ಹೆಚ್ಚು ಧಾರ್ಮಿಕ ಸೇವೆಯಲ್ಲಿ ತೊಡಗಿಸಿಕೊಂಡಿದ್ದಳು. ತುಂಗಭದ್ರಾ ನದಿ ದಂಡೆಯ ಮೇಲೆ "ಉದ್ಗಟ್ಟಿ" ಎಂಬಲ್ಲಿ ಒಂದು ಮಠವನ್ನು ಕಟ್ಟಿಸಿ ಅದಕ್ಕೆ ದಾನದತ್ತಿಗಳನ್ನು ನೀಡಿದಳು. ಹಾಗೂ "ಉದ್ಗಟ್ಟಿ" ಎಂಬ ಗ್ರಾಮವನ್ನು ಹಾವನೂರು ದೇಸಾಯಿ ಹನುಮಂತಗೌಡರು ಅವರಿಗೆ ದತ್ತಿ ನೀಡಿದರು. ಕೇವಲ ೫ ವರ್ಷಗಳ ಕಾಲ ಆಡಳಿತ ನಡೆಸಿ, ಅನೇಕ ಪ್ರಜಾಹಿತ ಕಾರ್ಯಗಳನ್ನು ಕೈಗೊಂಡು ಉತ್ತಮ ಆಡಳಿತ ನೀಡಿದ ಕೀರ್ತಿ ಇವಳಿಗೆ ಸಲ್ಲುತ್ತದೆ.

**ಮುದಿಬಸಪ್ಪನಾಯಕ**

ಹರಿಯಮ್ಮಾಜಿಯ ದತ್ತು ಪುತ್ರ ಹಾಗೂ ಹೊಂಬಣ್ಣ ಸಂತತಿಗೆ ಸೇರಿದವನು. ಇವನ ಮೊದಲ ಹೆಸರು ವುಡಚನಾಳು ಗೋಣೆಪ್ಪ. ನಂತರ ಮುದಿಬಸಪ್ಪ ನಾಯಕನೆಂತಲೂ ಕರೆಯಲಾಯಿತು. ಇವನ ಕಾಲದಲ್ಲಿ ಬಸವ ಎಂಬ ದಳವಾಯಿ ಹೊಳಲು ಗ್ರಾಮದ ಪಶ್ಚಿಮ ಗುಡಿಯನ್ನು ಕಾಯುತ್ತಿದ್ದ. ಇವನು ಅಲ್ಲಿನ ಬ್ರಾಹ್ಮಣರಿಗೆ ಹಿಂಸೆ ಮಾಡುತ್ತಿದ್ದನು. ಈ ವಿಷಯ ಅರಸನಿಗೆ ತಿಳಿಯಿತು. ಅರಸನು ಸೈನ್ಯ ಸಮೇತ ಹೊಳಲು ಕೋಟೆಗೆ ನುಗ್ಗಿ ದಳವಾಯಿಯನ್ನು ಕೊಲೆ ಮಾಡಿದನು.[೧೯] ಈ ಸಂದರ್ಭದಲ್ಲಿ ರಮಣಭಟ್ಟರು ಪೂಜಾಕಾರ್ಯಗಳಲ್ಲಿ ತೊಡಗಿ ಹರಪನಹಳ್ಳಿ ಅರಸರಿಗೆ ಜಯವಾಗಲಿ ಎಂದು ಜಪ ಮಾಡಿದರು. ಅದರಂತೆ ಅರಸನಿಗೆ ಜಯವಾಯಿತು. ಇದರ ಫಲವಾಗಿ ದಣನಾಯಕನ ಕೆರೆ, ಮಗಿಮಾವಿನಹಳ್ಳಿ ಕೆರೆ, ಮಾಗಣಿಗಳನ್ನು ಬ್ರಾಹ್ಮಣರಿಗೆ ದಾನ ನೀಡಿದನು. ನಂತರ ಹುಲಿಗಿ ಕೋಟೆಯನ್ನು ವಶಪಡಿಸಿಕೊಂಡು ಅಲ್ಲಿ ಒಂದು ಸೈನ್ಯದ ತುಕಡಿಯನ್ನು ಇರಿಸಿದನು. ಹೀಗೆ ಕೆಲವು ಕೋಟೆಗಳನ್ನು ವಶಪಡಿಸಿಕೊಂಡು ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ.

**ಮೊದಲ ವೀರಬಸಪ್ಪನಾಯಕ**

ಮುದಿಬಸಪ್ಪನಾಯಕರ ಪುತ್ರರಾದ ಇವರು ಉತ್ತಂಗಿ ಕೋಟೆಯನ್ನು ವಶಪಡಿಸಿಕೊಳ್ಳ ಬೇಕಾಗಿದ್ದಿತು. ಈ ಕೋಟೆ ಭದ್ರವಾಗಿದ್ದು ಇಲ್ಲಿ ಮಲ್ಲಿಪ್ಪ ಎಂಬ ಅರಸ ಸ್ವತಂತ್ರವಾಗಿ ಆಳ್ವಿಕೆ ನಡೆಸುತ್ತಿದ್ದನು. ಎಂಟು ದಿನಗಳ ಕಾಲ ನಡೆದ ಯುದ್ಧದಲ್ಲಿ ಹರಪನಹಳ್ಳಿ ಸೈನಿಕರು ಚೋರ ಕಿಂಡಿಯ ಮೂಲಕ ಪ್ರವೇಶಿಸಿ ಕೋಟೆಯ ಒಳಗೆ ನುಗ್ಗಿ ಕೋಟೆಯನ್ನು ಮುತ್ತಿಗೆ ಹಾಕಿದರು. ಹರಪನಹಳ್ಳಿ ಸೈನ್ಯದ ವಿರುದ್ಧ ಹೋರಾಡದೆ ಶಾಂತಿ ಒಪ್ಪಂದವನ್ನು ಮಾಡಿಕೊಂಡು ಪ್ರತಿವರ್ಷ ೧ ನೂರು ವರಹ ಕೊಡಲು ಒಪ್ಪಿದನು.

ಇವನಿಗೆ ಪುಟ್ಟರಸ ಎಂಬ ಹೆಸರಿನ ಪುತ್ರನಿದ್ದು ಆರುವರ್ಷದ ಪ್ರಾಯದಲ್ಲೆ ಮೃತನಾದನು. ಅವನ ಸಮಾಧಿಯ ಮೇಲೆ ಮಠ ಕಟ್ಟಿಸಿ ಒಂದು ಬಾವಿಯನ್ನು ತೊಡಿಸಿದನು. ಅದಕ್ಕೆ ಪುಟ್ಟರಸ ಮಠ ಎಂದು ಈಗಲೂ ಕರೆಯುವರು.

ಚಿತ್ರದುರ್ಗದ ಮದಕರಿನಾಯಕನ ಉಪಟಳವನ್ನು ಸಹಿಸಿಕೊಳ್ಳದೆ ಇವನು ಕೆಳದಿ ಬಸಪ್ಪನಾಯಕನಿಗೆ ಸಂಸ್ಥಾನವನ್ನು ರಕ್ಷಿಸಲು ಕೋರಿ ಪತ್ರ ಬರೆದನು. ಸಿದ್ಧೋಜಿಯೊಡನೆ ಸಂಧಾನ ಮಾಡಿಕೊಂಡಿದ್ದನು. ವೀರಬಸಪ್ಪ ನಾಯಕ ಮಾಗಳ ಸಮೀಪ ನದಿದಂಡೆಯಲ್ಲಿ ಬಿದರಹಳ್ಳಿ ಕೋಟೆಗೆ ಮುತ್ತಿಗೆ ಹಾಕಿ ಯುದ್ಧ ಸಾರಿದನು. ಬಿದರಹಳ್ಳಿ ಅರಸ ಸೋತು ಇವನಿಗೆ ಶರಣಾದನು. ಉತ್ತಮ ಸೈನಿಕರನ್ನು ಹೊಂದಿದ್ದ ಹರಪನಹಳ್ಳಿ ನಾಯಕರು ಈ ಗೆಲುವಿನಿಂದ ಅಪಾರ ದಾನ ಧರ್ಮಗಳನ್ನು ಕೈಗೊಂಡರು.[೨೦]

**ಮೊದಲ ಸೋಮಶೇಖರನಾಯಕ**

ಮೊದಲ ವೀರಬಸಪ್ಪನ ದತ್ತುಪುತ್ರ ಮೊದಲ ಸೋಮಶೇಖರನಾಯಕನ ಆಡಳಿತಾವಧಿಯಲ್ಲಿ ಅರ್ಥಿಕವಾಗಿ, ಸಾಮಾಜಿಕವಾಗಿ ಜನಪರ ಕೆಲಸಗಳಿಂದ ದಕ್ಷ ಆಡಳಿತವನ್ನು ನಡೆಸಿದ ಸಮರ್ಥ ನಾಯಕನೆಂದು ಹರಪನಹಳ್ಳಿ ಪಾಳೆಯಗಾರರಲ್ಲಿ ಪ್ರಮುಖನೆನಿಸಿರುವನೆಂದು ಕುಂ.ಬಾ.ಸದಾಶಿವಪ್ಪನವರು ಅಭಿಪ್ರಾಯಪಡುತ್ತಾರೆ. ಈ ಅರಸ ಪರಾಕ್ರಮಿ, ದೈವಭಕ್ತ, ಸ್ನೇಹಪರ ಹಾಗೂ ದಕ್ಷ ಆಡಳಿತಗಾರ. ಇವನ ಕಾಲದಲ್ಲಿ ಪ್ರಜೆಗಳು ಸುಖ ಶಾಂತಿಯಿಂದ ಇದ್ದರು. ಇವನ ಕಾಲದಲ್ಲಿ ಹೆಸರಾಂತ ಮಾಯಕೊಂಡದ ಯುದ್ಧ, ಹಾಲಘಟ್ಟಿಯುದ್ಧ, ಕೂಲಹಳ್ಳಿ ಬಯಲು ಯುದ್ಧಗಳು ನಡೆಯಿತು. ಈ ಅವಧಿಯಲ್ಲಿ ಹರಪನಹಳ್ಳಿ ಪಾಳೆಯಪಟ್ಟು ಮಹಾಪರಿವರ್ತನೆಯ ಸ್ಥಿತ್ಯಂತರ ಕಂಡಿತ್ತು.

ಮರಾಠರ ಸಿದ್ಧೋಜಿಯ ಮಗ ಚಿತ್ರದುರ್ಗ ಪಾಳೆಯಗಾರರೊಡನೆ ಪಿತೂರಿ ನಡೆಸಿ ಕೊಟ್ಟೂರನ್ನು ಮುತ್ತಿಗೆ ಹಾಕಲು ಪ್ರಯತ್ನಿಸಿದ. ಈ ವಿಷಯ ತಿಳಿದ ಸೋಮಶೇಖರನಾಯಕ ರಾಣಿ ಸೋಮಮ್ಮಾಜಿಯವರು ದೇವರ ಪ್ರಾರ್ಥನೆ ಮಾಡಿ ಕೊಟ್ಟೂರೇಶ್ವರನಿಂದ ಪ್ರಸಾದ

ಸ್ವೀಕರಿಸಿ ಯುದ್ಧಕ್ಕೆ ಸನ್ನದ್ಧರಾದರು. ಘೋರ ಯುದ್ಧ ನಡೆದು ಮರಾಠರಿಗೆ ಸೋಲುಂಟಾಯಿತು. ಅವಮಾನಿತನಾದ ಮರಾಠರು ಮದಕರಿನಾಯಕನನ್ನು ಸಹಾಯಕ್ಕೆ ಕರೆತಂದರಾದರೂ ನಿಷ್ಪ್ರಯೋಜನವಾಯಿತು. ಎದುರಾಳಿಯ ಸಾಮರ್ಥ್ಯಕ್ಕೆ ಕುಗ್ಗಿಹೋದರು.[೨೧] ಹೀಗೆ ಯುದ್ಧದಲ್ಲಿ ವಿಜಯಿಯಾದ ಸೋಮಶೇಖರನಾಯಕನು ಉಚ್ಚಂಗಿದುರ್ಗದ ಹತ್ತಿರವಿರುವ ಗುಡ್ಡದ ಮೇಲೆ ಶಮಿಪೂಜಾ ಮಾಡಿಕೊಳ್ಳುವ ಸಂಪ್ರದಾಯವಿತ್ತು. ವಿಜಯದಶಮಿ ದಿನ ಪಂಚಲೋಹದಿಂದ ನಿರ್ಮಿತವಾದ ಉಚ್ಚಂಗಮ್ಮನ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿಕೊಂಡು ಬನ್ನಿ ಮುಡಿಯಲು ಹರಪನಹಳ್ಳಿ ಪಾಳೆಯಗಾರರು ಸೈನ್ಯ ಸಮೇತ ಹೋಗುತ್ತಿದ್ದರು. ಇದನ್ನು ತಿಳಿದ ಚಿತ್ರದುರ್ಗದ ಪಾಳೆಯಗಾರರು ಸೈನ್ಯದೊಡನೆ ಗುಡ್ಡದ ಹಿಂದೆ ಅಡಗಿದ್ದರು. ದಾರಿಯಲ್ಲಿ ಬರುವ ಸಂದರ್ಭದಲ್ಲಿ ಚಿತ್ರದುರ್ಗದ ಸೈನ್ಯ ಏಕಾಏಕಿ ದಾಳಿ ಮಾಡಿ ಉಚ್ಚಂಗಮ್ಮನ ಉತ್ಸವಮೂರ್ತಿಯನ್ನು ತೆಗೆದುಕೊಂಡು ಹೋದರು. ಈ ಕಾರ್ಯದಲ್ಲಿ ಮದಕರಿನಾಯಕನ ಪರಮಾಪ್ತರಲ್ಲೊಬ್ಬನಾದ ತುಂಬಗುದ್ದಿಯ ಶಾನುಭೋಗರ ಭೀಮಪ್ಪ ಎಂಬಾತನ ಕೈವಾಡವೂ ಶ್ಲಾಘನೀಯವಾದುದೆಂದು ಹೇಳುತ್ತಾರೆ. ಚಿತ್ರದುರ್ಗದ ಪಾಳೆಯಗಾರರು ಈ ಮೂರ್ತಿಯನ್ನು ತೆಗೆದುಕೊಂಡು ಚಿತ್ರದುರ್ಗದಲ್ಲಿ ಪ್ರತಿಷ್ಠಾಪಿಸಿದರು. ಇದನ್ನರಿತ ಸೋಮಶೇಖರನಾಯಕನು ಹಾಲಘಟ್ಟೆ ನಾಯಕನು ಅವಮಾನ ಮಾಡಿದನೆಂದು ಹಾಲಘಟ್ಟೆ ಕೋಟೆಯನ್ನು ಮುತ್ತಿದನು. ಈ ಎಲ್ಲಾ ಕಾರಣಗಳಿಂದ ಸೋಮಶೇಖರನಾಯಕ ಕೆಲವು ಯುದ್ಧಗಳನ್ನು ಕೈಗೊಳ್ಳುತ್ತಾನೆ. ಅವುಗಳೆಂದರೆ ೧. ಮಾಯಕೊಂಡ ಯುದ್ಧ, ೨. ಹಾಲಘಟ್ಟೆ ಯುದ್ಧ, ೩. ಕೂಲಹಳ್ಳಿ ಯುದ್ಧ.

೧. **ಮಾಯಕೊಂಡ ಕದನ:** ಉತ್ಸವಮೂರ್ತಿಯನ್ನು ಮೋಸದಿಂದ ಚಿತ್ರದುರ್ಗದ ನಾಯಕರು ತೆಗೆದುಕೊಂಡು ಹೋದರು. ಇದರಿಂದ ಹರಪನಹಳ್ಳಿ ಪಾಳೆಯಗಾರರು ಕಳವಳಗೊಂಡರು. ರಾಯದುರ್ಗ ಹಾಗೂ ಸವಣೂರಿನ ನವಾಬರು ಸೋಮಶೇಖರನಾಯಕನಿಗೆ ನೆರವಾಗಿ ಬಂದರು. ರಾಯದುರ್ಗದ ನಾಯಕ ಕೊನೇಟಿನಾಯಕ ಅಶ್ವದಳ, ಕಾಲುದಳಗಳೊಂದಿಗೆ ಹಾಗೂ ಸವಣೂರಿನ ನವಾಬ ಮಜೀದ್‌ಖಾನರು ಅಶ್ವದಳ, ಕಾಲುದಳಗಳೊಂದಿಗೆ ಆಗಮಿಸಿದರು. ಇವರ ಜೊತೆಗೆ ಕೆಳದಿಯ ಬಸಪ್ಪನಾಯಕ ಅಪಾರ ಸೈನ್ಯದೊಂದಿಗೆ ಸಬುನೀಸ ಕೃಷ್ಣಪ್ಪನನ್ನು ಕಳುಹಿಸಿದನು. ಇವರೆಲ್ಲರೂ ಹರಪನಹಳ್ಳಿ ನಾಯಕರ ನೆರವಿಗಿ ನಿಂತರು. ಚಿತ್ರದುರ್ಗದ ಪಾಳೆಯಗಾರರು ಹೀರೆಮದಕರಿ ನಾಯಕರೊಂದಿಗೆ ದಾವಣಗೆರೆ ಮಾಯಕೊಂಡ ಪ್ರದೇಶದಲ್ಲಿ ಸೇರಿದ್ದರು. ಹರಪನಹಳ್ಳಿ ಪಾಳೆಯಗಾರ ಮೊದಲ ಸೋಮಶೇಖರನಾಯಕ ತನ್ನ ಸೈನ್ಯದೊಂದಿಗೆ ಮಾಯಾಕೊಂಡಕ್ಕೆ ಕ್ರಿ.ಶ. ೨೪.೦೩.೧೭೪೮ರಲ್ಲಿ ಆಗಮಿಸಿದ.[೨೨] ಚಿತ್ರದುರ್ಗ ನಾಯಕರಿಗೂ ಹರಪನಹಳ್ಳಿ ಪಾಳೆಯಗಾರರಿಗೂ ಮೊದಲಿನಿಂದಲೂ ದ್ವೇಷ ಅಸೂಯೆ ಇತ್ತು. ಆದರೆ ಸೋಮಶೇಖರನಾಯಕನ ಕಾಲದಲ್ಲಿ ದ್ವೇಷ ಪ್ರಬಲವಾಗಿ ಬೆಳೆದಿತ್ತು. ಈ ಮೇಲಿನ ಸೈನ್ಯಗಳ ನಡುವೆ ಯುದ್ಧ ಪ್ರಾರಂಭವಾಯಿತು. ಸೋಮಶೇಖರನಾಯಕ ಹೊಸಪೇಟೆಯಲ್ಲಿದ್ದಾಗ ರಾಜ್ಯದ

ಪರಿಸ್ಥಿತಿ ಶಾಂತವಾಗಿಲಿಲ್ಲ ಉಚ್ಚಂಗಿದುರ್ಗದ ಮೇಲೆ ಚಿತ್ರದುರ್ಗದ ನಾಯಕರು ಆಕ್ರಮಣ ನಡೆಸಿದರು. ಇವರಿಬ್ಬರ ನಡುವೆ ಗಜಕಾಳಗ ಪ್ರಾರಂಭವಾಯಿತು. ಆನೆಗಳ ಮೇಲೆ ಕುಳಿತು ಮುಖಾಮುಖಿ ಯುದ್ಧ ಮಾಡಿದರು. ಖಡ್ಗಯುದ್ಧದಲ್ಲಿ ಹೀರೆಮದಕರಿ ನಾಯಕನನ್ನು ಕೊಲ್ಲುಂತಾಯಿತು. ೧೭೬೬ರವರೆಗೂ ಸೋಮಶೇಖರನಾಯಕ ಹೈದರನಿಗೆ ಆಪ್ತನಂತೆ ವರ್ತಿಸತೊಡಗಿದ, ನಂತರ ಅಧಿಕಾರಕ್ಕೆ ಬಂದ ಟಿಪ್ಪುವಿಗೆ ಯಾವ ಪಾಳೆಯಗಾರರ ಮೇಲೂ ವಿಶ್ವಾಸವಿರಲಿಲ್ಲ.[೨೩] ಈ ಮಾಯಕೊಂಡ ಯುದ್ಧದಲ್ಲಿ ಮಡಿದ ಮದಕರಿನಾಯಕನ ಸಮಾಧಿಯನ್ನು ಮಾಯಾಕೊಂಡದಲ್ಲಿ ಈಗಲೂ ನೋಡಬಹುದು.

ಮದಕರಿನಾಯಕನ ನಂತರ ಕಸ್ತೂರಿ ರಂಗಪ್ಪನಾಯಕ ಅಧಿಕಾರಕ್ಕೆ ಬಂದನು. ಹಿಂದೆ ನಡೆದ ಘಟನೆಗಳನ್ನು ಸ್ಮರಿಸಿಕೊಂಡು ಹರಪನಹಳ್ಳಿಯ ಮೇಲೆ ಯುದ್ಧ ಮಾಡಲು ಸಂಚು ರೂಪಿಸುತ್ತಾನೆ. ಗುತ್ತಿಯ ಮುರಾರಿರಾಯನಿಗೆ ಸಹಾಯಕ್ಕೆ ಬರಬೇಕೆಂದು ಕೇಳಿದರು. ಈ ವಿಷಯವನ್ನು ತಿಳಿದ ಸೋಮಶೇಖರನಾಯಕನು ನಮ್ಮ ನಮ್ಮ ಕಲಹಗಳಲ್ಲಿ ನೀವು ಕೈ ಹಾಕುವುದು ಯೋಗ್ಯವಲ್ಲವೆಂದು ಮುರಾರಿರಾಯನಿಗೆ ಪತ್ರ ಬರೆದು ತಿಳಿಸಿದನು. ಇದರಿಂದ ಮುರಾರಿರಾಯನು ತಟಸ್ಥನಾದನು. ಮುಂದೆ ಕಸ್ತೂರಿರಂಗಪ್ಪನಾಯಕ ನಿಧನನಾದನು. ಇವನ ನಂತರ ಅಧಿಕಾರಕ್ಕೆ ಬಂದ ೨ನೇ ಮದಕರಿನಾಯಕನು ತನ್ನ ಸೈನ್ಯವನ್ನು ಸಜ್ಜುಗೊಳಿಸಿ ಹರಪನಹಳ್ಳಿ ಪಾಳೆಯಗಾರರ ಮೇಲೆ ಯುದ್ಧ ಸಾರಿದನು. ಹರಪನಹಳ್ಳಿಯ ಗಡಿಭಾಗದಲ್ಲಿ ದರೋಡೆ, ಲೂಟಿಯನ್ನು ಮಾಡಿದನು. ಸೋಮಶೇಖರನಾಯಕ ಐದುನೂರು ಸೈನ್ಯ ಸಹಾಯ ತೆಗೆದುಕೊಂಡು ಉಜ್ಜನಿಕೋಟೆ, ಕೂಲಹಳ್ಳಿ ಕೋಟೆಗಳನ್ನು ಗೆದ್ದುಕೊಂಡನು. ೧೨ ದಿನಗಳ ಕಾಲ ನಡೆದ ಈ ಯುದ್ಧ ಸೋಮಶೇಖರನಾಯಕ ವಿಜಯಿಯಾದನು.

**೨. ಹಾಲಘಟ್ಟ ಯುದ್ಧ:** ಹಾಲಘಟ್ಟ ನಾಯಕನ ವಶದಲ್ಲಿದ್ದ ಈ ಕೋಟೆಯನ್ನು ವಶಪಡಿಸಿಕೊಳ್ಳಲು ಸೋಮಶೇಖರನಿಗೆ ಕಾರಣವಿತ್ತು. ತುಂಬಿದ ಸಭೆಯಲ್ಲಿ ಹಾಲಘಟ್ಟಿಯ ನಾಯಕನು ಸೋಮಶೇಖರ ನಾಯಕನನ್ನು ವಿನಾಕಾರಣ ಅವಮಾನ ಮಾಡಿದ ಎಂಬ ಸುದ್ದಿ ಬಂದಿತು. ಚಿತ್ರದುರ್ಗನಾಯಕ ಇರಬೇಕೆಂದು ಸೋಮಶೇಖರನಾಯಕ ಹಾಲಘಟ್ಟಿಯ ನಾಯಕನ ಮೇಲೆ ದಂಡೆತ್ತಿ ಹೋದನು. ಆದರೆ ಕನಸಿನಲ್ಲಿ ಆ ಕೋಟೆಯ ಅಧಿದೇವತೆಯಾದ ದುರ್ಗಿಯು, ರಾಯನೇ ನೀನು ನಿನ್ನ ಪ್ರಾಣಮಿತ್ರರಲ್ಲಿ ಒಬ್ಬರನ್ನು, ನನಗೆ ಬಲಿ ಕೊಡಬೇಕು. ಹಾಗೆ ಮಾಡಿದರೆ ಮಾತ್ರ ಮಾರ್ಗವನ್ನು ಸ್ವಾಧೀನ ಮಾಡುವೆನೆಂದು ನುಡಿದಳು[೨೪] ಎಂಬ ಹೇಳಿಕೆ ಇದೆ.

ಸಂಜೀವನಾಯಕ ಮತ್ತು ಕೆಂಚನಾಯಕರನ್ನು ಹರಪನಹಳ್ಳಿಯನ್ನು ಕಾಯಲು ಬಿಟ್ಟು ತಾನು ವಿಶಾಲವಾದ ಸೈನ್ಯದೊಂದಿಗೆ ಯುದ್ಧಕ್ಕೆ ಹೊರಟನು. ಈ ಯುದ್ಧದಲ್ಲಿ ಸೋಮಶೇಖರ ನಾಯಕನಿಗೆ ಜಯವಾಗದೆ ಉಚ್ಚಂಗಿದುರ್ಗಕ್ಕೆ ಹಿಂದಿರುಗುವನು. ಹರಪನಹಳ್ಳಿಯಲ್ಲಿದ್ದ

ಕೆಂಚನಾಯಕನು ಈ ಸುದ್ದಿಯನ್ನು ಕೇಳಿ ಹರಿಹರದ ಮಾರ್ಗವಾಗಿ ಸೈನ್ಯ ಸಮೇತ ಹೋಗಿ ಹಾಲಘಟ್ಟ ಕೋಟೆಯನ್ನು ವಶಪಡಿಸಿಕೊಂಡನು. ಕೋಟೆಯ ಮೇಲೆ ಆಂಜನೇಯ ಧ್ವಜವನ್ನು ಏರಿಸಿ ಕೋಟೆಯ ಮುಂಭಾಗದಿಂದ ಇಳಿದು ಬರುತ್ತಿರುವಾಗ ವಿಜಯದ ನಂತರದಲ್ಲಿ ಅವನ ಕಡೆಯವನೆ ಆದ ಅಸ್ಲಾಡಿಜೋಗ ಎಂಬ ದಳವಾಯಿಯು ಎಸೆದ ಈಟಿಯು ಕೆಂಚನಾಯಕನಿಗೆ ತಗುಲಿತು.[೨೫] ಇವಾವುದನ್ನು ಲೆಕ್ಕಿಸದೆ ತನ್ನ ಕುದುರೆ ಏರಿ ಮಿತ್ರರ ಸಹಾಯದಿಂದ ಹರಪನಹಳ್ಳಿ ಗಡಿಪ್ರದೇಶದಲ್ಲಿ ಬಂದು ಪ್ರಾಣ ಬಿಟ್ಟನು. ಈ ವಾರ್ತೆಯನ್ನು ತಿಳಿದ ಸೋಮಶೇಖರನನಾಯಕನು ಕೆಂಚನಾಯಕನ ಖಡ್ಗವನ್ನು ಊರೆಲ್ಲ ಮರೆವಣಿಗೆ ಮಾಡಿಸಿದ ಹಾಗೂ ಕೆಂಚನಾಯಕನ ಶರೀರವನ್ನು ಅಯ್ಯನಕೇರಿಯ ದಂಡೆಯ ಮೇಲೆ ತಾಳಮ್ಮನ ಗುಡಿಯ ಹಿಂದೆ ಸಮಾಧಿ ಮಾಡಿ ಅಲ್ಲಿ ವೀರಗಲ್ಲನ್ನು ನೆಟ್ಟರು. ಈ ವೀರಗಲ್ಲನ್ನು ಈಗಲೂ ನೋಡಬಹುದು. ಇದು ಹಾಲಘಟ್ಟಿ ಯುದ್ಧವೆಂದು ಪ್ರಸಿದ್ಧವಾಯಿತು.

**ಕೂಲಹಳ್ಳಿಯುದ್ಧ:** ಹರಪನಹಳ್ಳಿಯ ಕೋಟೆ ಪ್ರದೇಶದಲ್ಲಿರುವ ಹಿರೇಕೆರೆ ಕೋಡಿಯಿಂದ ಬೇಡರ ಕೇರಿಯ ಮುಂದಿರುವ ಸ್ಥಳಕ್ಕೆ ಕೂಲಹಳ್ಳಿ ಬಯಲು ಎನ್ನುತ್ತಾರೆ.[೨೬] ಸೋಮಶೇಖರ ನಾಯಕನು ಈ ಪ್ರದೇಶದಲ್ಲಿ ಗೋಣಿಬಸಪ್ಪ ಮಠವನ್ನು ಸ್ಥಾಪಿಸಿದನು. ಇದರಲ್ಲಿ ಜಂಗಮರು ಸೇರಿದರು. ಇವರು ಕಾವಿ ಬಟ್ಟೆಯಲ್ಲಿರುವ ಯುದ್ಧ ವೀರರು. ಈ ಪ್ರದೇಶದಲ್ಲಿ ಚಿತ್ರದುರ್ಗದ ನಾಯಕರೊಂದಿಗೆ ಯುದ್ಧ ನಡೆಯುತ್ತದೆ. ಇದಕ್ಕೆ ಕಾರಣ ಒಂದು ಪ್ರಸಂಗದಲ್ಲಿ ಸಂಜೀವನಾಯಕ ಬೇಟೆಗೆ ಹೋದಾಗ ಅವನ ಮಡದಿ ಮನೆಯಲ್ಲಿರುತ್ತಾಳೆ. ಚಿತ್ರದುರ್ಗದ ಸೈನಿಕರು ಕೂಲಹಳ್ಳಿ ಬಯಲಿಗೆ ಬಂದು ಗಲಭೆಯನ್ನು ಎಬ್ಬಿಸಿದರು. ಆ ಸಂದರ್ಭದಲ್ಲಿ ಸಂಜೀವ ನಾಯಕನ ಹೆಂಡತಿ ತನ್ನ ಗೆಳತಿಯರೊಂದಿಗೆ ಸೈನಿಕರ ಮೇಲೆ ಯುದ್ಧಕ್ಕೆ ನಿಂತಳು. ಕೊನೆಗೆ ವಿರೋಧಿಗಳನ್ನು ಸದೆಬಡಿಯಲು ಮುಂದಾಗಿ ವೀರಮರಣವನ್ನಪ್ಪಿದಳು. ಅದೇ ಸಮಯಕ್ಕೆ ಬೇಟೆಯಿಂದ ಮರಳಿದ ಸಂಜೀವನಾಯಕ ಚಿತ್ರದುರ್ಗದ ಸೈನಿಕರನ್ನು ಸದೆಬಡಿದನು. ಶತ್ರುಸೈನ್ಯವನ್ನು ಹಿಮ್ಮೆಟ್ಟಿಸಿದನು ಎಂದು ಸ್ಥಳೀಯರು ಮಾಹಿತಿ ನೀಡುತ್ತಾರೆ. ಈ ಯುದ್ಧದ ವಿಜಯದ ಸ್ಮರಣಾರ್ಥವಾಗಿ ಸೋಮಶೇಖರನಾಯಕನು ಈ ಸ್ಥಳದಲ್ಲಿ ವೀರಗಲ್ಲುಗಳನ್ನು ಸ್ಥಾಪಿಸಿದನು.

ಹೀಗೆ ಈ ಮೂರು ಯುದ್ಧಗಳು ಸೋಮಶೇಖರನ ಕಾಲದಲ್ಲಿ ನಡೆದು ಹರಪನಹಳ್ಳಿ ಪಾಳೆಯಪಟ್ಟನ್ನು ರಕ್ಷಿಸಿದ ಕೀರ್ತಿ ಅವನಿಗೆ ಸಲ್ಲುತ್ತದೆ. ಇವನ ಆಡಳಿತಾವಧಿಯಲ್ಲಿ ಕೆಲವು ನಾಯಕರ ಸ್ನೇಹವನ್ನು ಬೆಳೆಸಿ ರಾಜ್ಯರಕ್ಷಣೆಯನ್ನು ಮಾಡಿದನು. ತನ್ನ ರಾಜ್ಯಕ್ಕೆ ತೊಂದರೆಯನ್ನುಂಟು ಮಾಡುವ ಅರಸರೊಂದಿಗೆ ಯುದ್ಧ ಮಾಡುವ ಮೂಲಕ ಅವರನ್ನು ಹತ್ತಿಕ್ಕಿದನು. ಅನಂತರ ಇವನಿಗೆ ಯಾವ ವಿರೋಧಿಗಳಿಲ್ಲದೆ ಇವನ ಸಾಮ್ರಾಜ್ಯ ಸುಮಾರು ೧೦-೧೨ ವರ್ಷಗಳ ಕಾಲ ಯುದ್ಧಗಳಿಲ್ಲದೆ ಸುಖ ಶಾಂತಿಯಿಂದ ಕೂಡಿತ್ತು ಎಂದು ಹೇಳಬಹುದು.

ಹರಪನಹಳ್ಳಿ ಪಾಳೆಯಗಾರರಲ್ಲೇ ಅತ್ಯಂತ ಪರಾಕ್ರಮಿ ಹಾಗೂ ದಕ್ಷ ಆಡಳಿತಗಾರನಾಗಿದ್ದ ಸೋಮಶೇಖರನಾಯಕನಿಗೆ ಜಂಬಣ್ಣನೆಂಬ ಮಗನಿದ್ದನು. ಇವನಿಗೆ ಪುಟ್ಟರಸ ಎಂದೂ

ಕರೆಯುತ್ತಿದ್ದರು. ಇವನ ೧೬ನೇ ವಯಸ್ಸಿನಲ್ಲಿ ಮರಣ ಹೊಂದಿದನು. ಈ ಮರಣದ ನೋವಿನಿಂದ ಸೋಮಶೇಖರ ನಾಯಕನು ೧೭೫೪ರಲ್ಲಿ ಮರಣ ಹೊಂದಿದ ಎಂದು ತಿಳಿದುಬರುತ್ತದೆ.

ಮೆಕಂಜಿಯ ದಾಖಲೆಯ ಪ್ರಕಾರ ಸೋಮಶೇಖರನಾಯಕನು ಹೈದರಾಬಾದ್ ನಿಜಾಮನಿಗೆ ೧೨,೦೦೦, ಗುತ್ತಿ ಮರಾಠರಿಗೆ ೬೦೦೦, ಪೇಶ್ವೆಯವರಿಗೆ ೨-೩ ಲಕ್ಷ ಕಪ್ಪ ಕಾಣಿಕೆ ಹಾಗೂ ಹೈದರನಿಗೆ ೧೨೦೦೦ ಪಗೋಡಗಳನ್ನು ಕೊಡುತ್ತಿದ್ದನೆಂದು ತಿಳಿದುಬರುತ್ತದೆ. ಸೋಮಶೇಖರನಾಯಕನ ಮರಣದ ನಂತರ ವಿಧವೆ ರಾಣಿ ದತ್ತುಮಗನನ್ನು ಪಡೆದಳು. ಅವನು ಕೂಡ ಮರಣ ಹೊಂದಿದನು.

ಇವನ ನಂತರ ಹರಪನಹಳ್ಳಿ ಪಾಳೆಯಪಟ್ಟನ್ನು ಆಳ್ವಿಕೆ ಮಾಡಲು ಹಲವು ಸಮಸ್ಯೆಗಳು ಉಂಟಾಯಿತು. ಸೋಮಶೇಖರನ ಪತ್ನಿ ಸೋಮಮ್ಮಾಜಿ ಗಂಡನ ಸಂಬಂಧಿಯ ಮಗನಾದ ಅಡವಿ ಬೊಮ್ಮಣ್ಣನನ್ನು ದತ್ತು ತೆಗೆದುಕೊಂಡು ಪಟ್ಟವನ್ನು ಕಟ್ಟಿ ಅರಸನ್ನಾಗಿ ಮಾಡಿದಳು. ನಂತರ ಅಡವಿ ಬೊಮ್ಮಣ್ಣ ವೀರ ಬಸಪ್ಪನೆಂದು ಕರೆಸಿಕೊಂಡು ಕೇವಲ ೨ ವರ್ಷಗಳ ಕಾಲ ಮಾತ್ರ ಆಡಳಿತ ನಡೆಸಿದ್ದು ಕಂಡುಬರುತ್ತದೆ. ಇವನು ದುರ್ಬಲನೂ ಸುಖಿಯೂ ಆಗಿದ್ದನು. ಇವನ ಆಡಳಿತಾವಧಿಯಲ್ಲಿ ಹೊಳಲು ಅಗ್ರಹಾರದ ದಳವಾಯಿ ಬಸವನಾಯಕನು ಬ್ರಾಹ್ಮಣರಿಗೆ ಕಿರುಕುಳ ನೀಡಿದನು. ೨ನೇ ವೀರ ಬಸಪ್ಪನಾಯಕನ ದೌರ್ಬಲ್ಯವನ್ನು ಮನಗಂಡು ಈ ಪ್ರದೇಶದಲ್ಲಿ ದಂಗೆ ಎಬ್ಬಿಸಿದನು. ಇದನ್ನು ಸಹಿಸಲಾರದೆ ಸೋಮಮ್ಮಾಜಿ ತಾನೆ ಸೈನ್ಯದೊಡನೆ ದಂಡೆತ್ತಿ ಹೋಗಿ ದಳವಾಯಿಯನ್ನು ಸಂಹರಿಸಿದಳು. ಸೋಮಮ್ಮಾಜಿ ಜೋಯಿಸರಿಗೆ ನಾರಾಯಣದೇವರ ಕೆರೆ, ಡಣಾನಾಯಕನ ಕೆರೆಗಳನ್ನು ದಾನ ನೀಡಿದಳು. ವೀರಬಸಪ್ಪನ ಕಾಲದಲ್ಲಿ ವೀರಭದ್ರೇಶ್ವರ ಮೂರ್ತಿ ಸ್ಥಾಪನೆಯಾಗಿದೆ ಎಂದು ದೇವಾಸ್ಥಾನದ ಅರ್ಚಕರು ಹಾಗೂ ಗ್ರಾಮದ ಹಿರಿಯರು ಅಭಿಪ್ರಾಯಪಡುತ್ತಾರೆ.

ಕೆಲವು ಕಾಲಾನಂತರ ದುರ್ಬಲನಾದ ೨ನೇ ವೀರಬಸಪ್ಪನಾಯಕ ಮರಣ ಹೊಂದಿದ ನಂತರ ಹರಪನಹಳ್ಳಿಗೆ ಪಾಳೇಪಟ್ಟಿಗೆ ಮುಂದಿನ ನಾಯಕನ ಯೋಚನೆ ಬಂತು. ಇಂತಹ ಸಂದರ್ಭದಲ್ಲಿ ಸೋಮಮ್ಮಾಜಿ ಗೊಡಚಿನಾಳು ಗ್ರಾಮದ ಮತ್ತೊಬ್ಬನನ್ನು ದತ್ತು ಪಡೆದುಕೊಂಡಳು. ಇವನನ್ನು ಬಸಪ್ಪನಾಯಕನೆಂದು ಹೆಸರಿಟ್ಟು ಪಟ್ಟದರಸನನ್ನಾಗಿ ಮಾಡಿದಳು.

**ಬಸಪ್ಪನಾಯಕ:** ಈತನು ಸೋಮಶೇಖರನಾಯಕನಂತೆ ದಕ್ಷ ಆಡಳಿತಗಾರನಾಗಿದ್ದನು. ಇವನು ತನ್ನ ಹಿರಿಯರ ಗೌರವಾರ್ಥವಾಗಿ ಸೋಮಶೇಖರನಾಯಕರ ಬಸಪ್ಪನಾಯಕ ಎಂದು ಕರೆಯಿಸಿಕೊಳ್ಳುತ್ತಿದ್ದನು. ಇವನು ಹೈದರಾಲಿ ಮತ್ತು ಟಿಪ್ಪುಸುಲ್ತಾನರಿಗೆ ವಿಧೇಯನಾಗಿದ್ದು, ಕ್ರಿ.ಶ. ೧೭೭೨ರಲ್ಲಿ ಶ್ರೀ ಕೂಡ್ಲಿ ಶೃಂಗೇರಿ ಮಠದ ನರಸಿಂಹ ಭಾರತಿ ಸ್ವಾಮಿಗಳಿಗೆ ಸೋಮಲಾಪುರವನ್ನು ದಾನವಾಗಿ ಕೊಟ್ಟನು.[೩೨] ಇವನಿಗೆ ಬ್ರಾಹ್ಮಣರ ಹಾಗೂ ಗುರುಹಿರಿಯರ ಮೇಲೆ ಭಕ್ತಿ, ಗೌರವವಿತ್ತು.

ಕೊಪ್ಪಳದುರ್ಗವನ್ನು ಟಿಪ್ಪುಸುಲ್ತಾನನು ವಶಪಡಿಸಿಕೊಳ್ಳಬೇಕೆಂದು ನಾರಾಯಣದೇವರ ಕೆರೆಯ ಮಾರ್ಗವಾಗಿ ಹೋಗಿ ಏಳು ದಿನ ಮುತ್ತಿಗೆಯನ್ನು ಹಾಕಿದನು. ಆದರೆ ಕೊಪ್ಪಳ ಮಾರ್ಗವನ್ನು ವಶಪಡಿಸಿಕೊಳ್ಳಲು ಆಗಲಿಲ್ಲ. ಆ ಸಂದರ್ಭದಲ್ಲಿ ನಾರಾಯಣದೇವರ ಕೆರೆಯಲ್ಲಿದ್ದ ಗೊಡಚಿನಹಾಳು ಬಸಪ್ಪನಾಯಕನು ಹೋಗಿ ಗೆದ್ದು ಕೊಟ್ಟನು. ಇದರಿಂದ ಟಿಪ್ಪುಸುಲ್ತಾನ್ ಸಂತೋಷಪಡದೆ ಅಸೂಯಾಪರನಾಗಿ ಬಸಪ್ಪನಾಯಕನನ್ನು ಸೋಲಿಸುವ ಉಪಾಯವನ್ನು ಮಾಡುತ್ತಿದ್ದನು.[೨೮] ಕೊಪ್ಪಳ ದುರ್ಗವನ್ನು ಗೆಲ್ಲಿಸಿ ಕೊಟ್ಟಿದ್ದಕ್ಕಾಗಿ ಬಹುಮಾನ, ಸನ್ಮಾನ ಮಾಡುವುದಕ್ಕಾಗಿ ಹಗರಿಬೊಮ್ಮನಹಳ್ಳಿಗೆ ಬರಬೇಕೆಂದು ಟಿಪ್ಪುಸುಲ್ತಾನ ಆಹ್ವಾನ ನೀಡಿದನು. ಅದಕ್ಕೆ ಬಸಪ್ಪನಾಯಕನು ಸಂತೋಷದಿಂದ ಒಪ್ಪಿಕೊಂಡನು. ಆದರೆ ಅರಸೀಕೆರೆಯ ದಿವಾನ ಹಂಪರಸಪ್ಪನು ಇದರಲ್ಲಿ ಏನೋ ಕುತಂತ್ರವಿದೆ ಹೋಗಕೂಡದೆಂದು ಕೇಳಿಕೊಂಡರೂ ತನ್ನನ್ನು ಸುಲ್ತಾನನು ಏನು ಮಾಡಿಯಾನು ಎಂಬ ಗರ್ವದಿಂದ ಹೊದನು. ತನ್ನ ಹಿರಿಯ ಅಣ್ಣನಾದ ಅಯ್ಯಪ್ಪ, ಅತ್ತಿಗೆ, ಅಣ್ಣನ ಇಬ್ಬರು ಮಕ್ಕಳು ನಾಯಕರು ಸ್ವಲ್ಪ ಸೈನ್ಯದೊಂದಿಗೆ ಹಗರಿಬೊಮ್ಮನಹಳ್ಳಿಗೆ ಹೊರಟರು.[೨೯] ನಾಯಕನನ್ನು ಹಗರಿಬೊಮ್ಮನಹಳ್ಳಿಗೆ ಕರೆಸಿದುದಕ್ಕೆ ಹಲವು ಅನುಮಾನಗಳಿದ್ದರೂ ಹೊರಡಲು ನಿಶ್ಚಯಿಸಿದನು. ಆದರೆ ಟಿಪ್ಪುಸುಲ್ತಾನ್ ಇವರೆಲ್ಲರನ್ನು ಬಂಧಿಸಿ ಕಬ್ಬಾಳದುರ್ಗದ ಸೆರೆಮನೆಗೆ ತಳ್ಳಿದನು. ನಂತರ ಬಸಪ್ಪನಾಯಕನು ಆತನ ಮೂರು ಜನಪತ್ನಿಯರನ್ನು ಶ್ರೀರಂಗಪಟ್ಟಣದ ಸೆರೆಮನೆಗೆ ಕಳುಹಿಸಿದನು. ಅಲ್ಲಿ ಕೆಲವು ಕಾಲಾನಂತರ ಬಸಪ್ಪನಾಯಕ ಮರಣ ಹೊಂದಿದನು ಎಂದು ತಿಳಿದುಬರುತ್ತದೆ.

ಟಿಪ್ಪು ಮುಂದೆ ನಾರಾಯಣದೇವರಕೆರೆ ಕೋಟೆಯಲ್ಲಿದ್ದ ರಾಣಿವಾಸದವರ ಒಡವೆಗಳನ್ನೆಲ್ಲ ದೋಚಿ ಕೋಟೆಯನ್ನು ಹಾಳುಮಾಡಿದ. ಉಚ್ಚಂಗಿದುರ್ಗ ಕೊಟ್ಟೂರು ಹರಪನಹಳ್ಳಿ ಗಡಿಯಲ್ಲಿದ್ದ ವೀರನದುರ್ಗ ಮುಂತಾದ ಪ್ರದೇಶಗಳ ಮೇಲೆ ಮುತ್ತಿಗೆ ಹಾಕಿದ.[೩೦] ಸಾಮಂತರಾದ ವೀರನದುರ್ಗ, ಕೊಟ್ಟೂರು, ನಾರಾಯಣದೇವರಕೆರೆ, ಉಚ್ಚಂಗಿದುರ್ಗ, ನೀಲಗುಂದ, ಬಾಗಳಿ, ಹೊಳಲು, ಬೆಟಗೇರಿ, ತಂಬ್ರಹಳ್ಳಿ ಮೊದಲಾದ ಸಾಮಂತರು ಟಿಪ್ಪುವಿನ ದಾಳಿಯನ್ನು ಎದುರಿಸಿ ಹಿಮ್ಮೆಟ್ಟಿಸಿದರು. ಪುನಃ ಟಿಪ್ಪು ಈ ಭಾಗಕ್ಕೆ ಬರಲಿಲ್ಲ.

**೨ನೇ ಸೋಮಶೇಖರನಾಯಕ:** ಇವನು ಬಸಪ್ಪನಾಯಕನ ಅಣ್ಣ ಅಯ್ಯಪ್ಪನಾಯಕನ ಹಿರಿಯಪುತ್ರ. ನಾಯಕನ ವಂಶದವನಾಗಿದ್ದರಿಂದ ಮಂತ್ರಿಯಾದ ಹಂಪರಸಪ್ಪ ಇವನನ್ನು ಸಿಂಹಾಸನದಲ್ಲಿ ಕೂಡಿಸಿ ರಾಜ್ಯದ ಆಡಳಿತವನ್ನು ಸ್ವಯಂ ತಾನೇ ನೋಡಿಕೊಳ್ಳುತ್ತಿದ್ದನು. ಬಾಲಕನಾದ ಇವನಿಗೆ ಆಡಳಿತದಲ್ಲಿ ಮಂತ್ರಿಗಳು ಸಹಾಯ ಮಾಡುತ್ತಿದ್ದರು.

ಇವನಿಗೆ ಸಂಬಂಧಿಸಿದಂತೆ ಹಿರಿಯರು ಹೀಗೆ ಹೇಳುತ್ತಾರೆ. ೨ನೇ ಸೋಮಶೇಖರನು ರಾಜ್ಯದ ಆಡಳಿತ ಅನುಭವವಿಲ್ಲದವನು. ಇದರ ದುರುಪಯೋಗ ಮಾಡಿಕೊಂಡು ಕೆಲವರು ನೀಲಗುಂದ ಗ್ರಾಮದ ಗೌಡರ ಮನೆಗೆ ಅರಮನೆಯ ಸಂಪತ್ತನ್ನು ಸಾಗಿಸತೊಡಗಿದರು. ಈ

ಕೃತ್ಯವನ್ನು ಕಂಡು ಹಂಪರಸಪ್ಪನು ನಿರ್ಬಂಧ ಮಾಡಿದನು. ೧೬ ವರ್ಷದ ವಯಸ್ಸಿನವನಾದ ಅರಸ ರಾಣಿವಾಸವಾದರೂ ಮತ್ತು ಗುರುಹಿರಿಯರು ವಿರೋಧಿಸಿದರೂ ಅವರ ಮಾತನ್ನು ಗಣನೆಗೆ ತೆಗೆದುಕೊಳ್ಳದೆ ಕೆಲವು ರಾಜದ್ರೋಹಿಗಳ ಮಾತಿನಲ್ಲಿ ವಿಶ್ವಾಸವಿಟ್ಟು ನೀಲಗುಂದದ ಕನ್ಯೆಯನ್ನು ವಿವಾಹ ಮಾಡಿಕೊಳ್ಳಲು ಪ್ರಯತ್ನಿಸಿದನು. ಇದು ಯೋಗ್ಯವಲ್ಲವೆಂದು ತಿಳಿದು ಹಂಪರಸಪ್ಪನು ಗುಡೇಕೋಟೆಯ ಪಾಳೆಯಗಾರರ ಪುತ್ರಿಯರಾದ ಬಸಮ್ಮಾಜಿ, ನೀಲಮ್ಮಾಜಿ, ಎಂಬ ಕನ್ಯಾಮಣಿಗಳನ್ನು ತಂದು ವಿವಾಹ ಮಾಡಿದನು. ಅರಮನೆಯ ಹೆಣ್ಣುಮಕ್ಕಳು ಒಟ್ಟುಗೂಡಿ ಜರಿಮಲೆ ಪಾಳೆಯಗಾರರ ಮನೆಯಿಂದ ಹೀರೇಬಸಮ್ಮಾಜಿ, ಸುಮಮ್ಮಾಜಿ ಎಂಬ ಕನ್ಯೆಯರನ್ನು ತಂದು ವಿವಾಹ ಮಾಡಿದರು. ಒಟ್ಟಿಗೆ ಈ ಅರಸನಿಗೆ ನಾಲ್ಕು ಜನ ಮಡದಿಯರು. ಅರಸನು ನೀಲಗುಂದದ ಕನ್ಯೆಯ ಮೇಲೆ ಹೆಚ್ಚು ಪ್ರೀತಿಯನ್ನು ಇಟ್ಟುಕೊಂಡಿದ್ದನು. ಹೀಗಾಗಿ ಕೆಲವರು ಅರಸನ ಮನಸ್ಸು ಕೆಡಿಸಿ ಸಂಸ್ಥಾನದ ಪ್ರಮುಖರ ಮೇಲೆ ಕ್ರಮ ಕೈಗೊಳ್ಳುವಂತೆ ಮಾಡಿ ಯಶಸ್ವಿಯಾದರು. ಆಗ ರಾಜ ಪ್ರಮುಖರಿಗೆ ಶಿಕ್ಷೆ ನೀಡಿದನು. ಕೆಲವರು ಬೇರೆ ಕಡೆ ಪಲಾಯನ ಮಾಡಿದರು. ಚಿಂತಾಮಣಿಯಪ್ಪ, ರಾಯಸ್ತ ಉಪೇಂದ್ರಪ್ಪ ಮುಂತಾದವರು ಅರಸನ ಗಮನಕ್ಕೆ ಬಾರದೇ ಅಡಗಿದರು. ಕುರದಗಡ್ಡಿ ಕಿಲ್ಲೆಪಾಲಕನು ಮತ್ತು ಸಾಮಂತನಾಗಿದ್ದ ಗಡಾದ ಭರಮಣ್ಣ ದಿವಾನರಾದ ಹಂಪರಸಪ್ಪ ಇವರು ಅರಮನೆಯನ್ನು ಆಶ್ರಯಿಸಿದರು.[೩೧] ಈ ರೀತಿ ಕುಟಿಲ ನೀತಿಯಿಂದ ರಾಜರ ಆಪ್ತವರ್ಗ ರಾಜನಿಂದ ದೂರ ಹೋದರು. ಆಪ್ತರಲ್ಲಿ ಕೆಲವರು ಅರಮನೆಯ ಸಂಪತ್ತನ್ನು ದೋಚಿದರು. ಟಿಪ್ಪುವಿನ ಭಯದಲ್ಲಿ ಇದ್ದ ಈ ಪಾಳೆಯಪಟ್ಟು ಟಿಪ್ಪುಸುಲ್ತಾನನ ಮರಣದವರೆಗೂ ಸೋಮಮ್ಮಾಜಿ ಬಸಪ್ಪನಾಯಕನು ಕರೆದುಕೊಂಡು ಪೂನಾದ ಪೇಶ್ವೆಯವರ ಆಶ್ರಯದಲ್ಲಿದ್ದಳು. ಟಿಪ್ಪುವಿನ ಮರಣದ ನಂತರ ಹರಪನಹಳ್ಳಿಗೆ ಬಂದು ಆಡಳಿತ ನಡೆಸಿದರು.

ಕ್ರಿ.ಶ. ೧೭೯೯ರಲ್ಲಿ ಟಿಪ್ಪುಸುಲ್ತಾನ್ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಮರಣ ಹೊಂದಿದಾಗ ಹರಪನಹಳ್ಳಿ ಪಾಳೆಯಪಟ್ಟನ್ನು ಬ್ರಿಟಿಷರು ವಶಪಡಿಸಿಕೊಂಡರು. ಬ್ರಿಟಿಷ್ ಅಧಿಕಾರಿ ಜನರಲ್ ಹ್ಯಾರಿಸ್ ನಾಯಕರನ್ನು ಹಾಗೂ ದಿವಾನರನ್ನು ಹರಿಹರಕ್ಕೆ ಕರೆಸಿಕೊಂಡರು. ರಾಜಪ್ರಭುತ್ವಕ್ಕೆ ಕಡಿವಾಣ ಹಾಕಿದರು. ೬೦,೦೦೦ ರೂಪಾಯಿಗಳ ಜಾಗೀರು ಹಣವನ್ನು ಬ್ರಿಟಿಷರು ನೀಡಲು ಮುಂದಾದರು. ಆದರೆ ಅದಕ್ಕೆ ಅರಸ ಒಪ್ಪಲಿಲ್ಲ. ದಿವಾನ ತನಗೆ ಪ್ರತ್ಯೇಕ ಪರಿಹಾರವನ್ನು ಕೊಡಬೇಕೆಂದು ಅಗ್ರಹಿಸಿದನು. ಇದರಿಂದ ಅರಸನು ದಿವಾನನ ಮೇಲೆ ಸಿಡಿಮಿಡಿಗೊಂಡನು. ಕೊನೆಗೆ ನಾಯಕ ಮತ್ತು ದಿವಾನರ ಜಗಳದಿಂದಾಗಿ ಆಂಗ್ಲರು ಅವರನ್ನು ಬಂಧನದಲ್ಲಿರಿಸಿದರು. ನಾಯಕನು ದಿವಾನನನ್ನು ಕೊಲ್ಲುವ ಪ್ರಯತ್ನ ಮಾಡಿದ. ಆದರೆ ದಿವಾನ ತಪ್ಪಿಸಿಕೊಂಡು ಬ್ರಿಟಿಷರ ಆಶ್ರಯ ಪಡೆದನು.

ಹರಪನಹಳ್ಳಿ ಪಾಳೆಯಪಟ್ಟನ್ನು ಆಂಗ್ಲರು ೧೮೦೨ರಲ್ಲಿ ವಶಪಡಿಸಿಕೊಂಡು ತನ್ನ ಅಧೀನದಲ್ಲಿದ್ದವರಿಗೆ ಕೆಲವು ಗ್ರಾಮಗಳನ್ನು ಕೊಟ್ಟರು. ೧೮೨೫ರಲ್ಲಿ ಸೋಮಶೇಖರನಾಯಕ

ಮರಣ ಹೊಂದಿದನು.[೫೭] ಅರಸನ ಮಡದಿ ಹಿರೇಬಸಮ್ಮಾಜಿ ಲಿಂಗವಂತ ಮತದವಳು. ಅವಳ ಸಮಾಧಿ ಈಗಲೂ ಅಡವಿಹಳ್ಳಿ ತಿಮ್ಮಲಾಪುರ ಗ್ರಾಮಗಳ ಮಧ್ಯದಲ್ಲಿ ಇದೆ. ಸಮಾಧಿಯ ಮೇಲೆ ಒಂದು ಕಲ್ಲಿನ ಕಟ್ಟೆ, ಅದರ ಮೇಲೆ ಒಂದು ಬಸವಣ್ಣನ ವಿಗ್ರಹವನ್ನು ಇರಿಸಿರುವರು. ಆ ಕಟ್ಟೆಗೆ ಅಮ್ಮಾಜಿಕಟ್ಟೆ ಎಂದು ಕರೆಯುತ್ತಾರೆ. ದಿವಾನ ಬ್ರಿಟಿಷರಿಗೆ ಶರಣಾಗಿದ್ದರಿಂದ ಆತನಿಗೆ ನಾಲ್ಕು ಗ್ರಾಮಗಳು ಜಾಗೀರು ನೀಡಿದರು.

ಸೋಮಶೇಖರ ನಾಯಕ ತನ್ನ ಆಡಳಿತಾವಧಿಯಲ್ಲಿ ತೆಗೆದುಕೊಂಡ ತಪ್ಪು ನಿರ್ಧಾರಗಳಿಂದ ತನ್ನನ್ನು ಅವಲಂಬಿಸಿದ್ದ ಅವನ ನಾಲ್ಕು ರಾಣಿಯರು ಆಂಗ್ಲರಲ್ಲಿ ಪರಿಹಾರಕ್ಕೆ ಪ್ರಯತ್ನಿಸಿ ವಿಫಲರಾದರು. ಪ್ರಜೆಗಳು ಮತ್ತು ಪರಿವಾರದವರು ಕಷ್ಟಗಳಿಗೆ ಒಳಗಾದರು. ನೀಲಮ್ಮಾಜಿ ಕೆಲಕಾಲ ಸಂಸ್ಥಾನದ ಆಡಳಿತ ನಡೆಸಿದಳು. ಅರಸ ಆಂಗ್ಲರ ಜೊತೆ ಒಪ್ಪಂದ ಮಾಡಿಕೊಂಡಿದ್ದರೆ ಇಂದು ಹರಪನಹಳ್ಳಿ ಪಟ್ಟಣ ಜಿಲ್ಲಾ ಕೇಂದ್ರವಾಗಿರುತ್ತಿತ್ತು.

ಹೀಗೆ ಹರಪನಹಳ್ಳಿ ಪಾಳೆಯಪಟ್ಟನ್ನು ನಾಯಕರು ಸುಮಾರು ೨೫೪ ವರ್ಷಗಳ ಕಾಲ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಈ ಪಾಳೆಯಪಟ್ಟಿನಲ್ಲಿ ೧೫ ಪಾಳೆಯಗಾರರು ಹಾಗೂ ಒಬ್ಬ ನಾಗತಿ ಸೇರಿದಂತೆ ಒಟ್ಟು ೧೬ ಜನ ಹರಪನಹಳ್ಳಿ ಪಾಳೆಯಪಟ್ಟನ್ನು ಆಳ್ವಿಕೆ ಮಾಡಿದ್ದಾರೆ. ವಿಜಯನಗರ ಪತನಾನಂತರ ದಾದಯ್ಯ, ರಂಗಣ್ಣ, ಬರಮನಾಯಕ, ಓಬಣ್ಣನಾಯಕರು ವಿಜಾಪುರದ ಆದಿಲ್‌ಶಾಹಿ ನವಾಬರಿಗೆ ಕಪ್ಪಕಾಣಿಕೆ ಕೊಡುತ್ತಿದ್ದರು. ವೀರ ಮುಮ್ಮಡಿನಾಯಕ, ಬಸವಂತನಾಯಕ ಇವರ ಕಾಲದಲ್ಲಿ ಆದಿಲ್‌ಶಾಹಿಗಳ ಪ್ರಾಬಲ್ಯವನ್ನು ಕಡಿಮೆ ಮಾಡಿಕೊಂಡು ಶಿವಾಜಿಯ ನಂತರ ಮರಾಠರೊಂದಿಗೆ ರಾಜಿ ಸಂಧಾನ ಮಾಡಿಕೊಂಡು ಇವರಿಗೆ ಕಪ್ಪಕಾಣಿಕೆ ಸಲ್ಲಿಸುತ್ತಾ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಹರಪನಹಳ್ಳಿ ಪಾಳೆಯಗಾರರು ಅವನತಿಯಾದ ನಂತರ ಈ ಪಾಳೆಯಪಟ್ಟು ಬ್ರಿಟಿಷರ ವಶಕ್ಕೆ ಸೇರಿಕೊಂಡಿತು. ಆ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯು ಒಂದು ತಾಲ್ಲೂಕು ಕೇಂದ್ರವಾಯಿತು. ಈ ತಾಲ್ಲೂಕು ೧೯೯೭ರಿಂದ ದಾವಣಗೆರೆ ಜಿಲ್ಲೆಗೆ ಸೇರಿಕೊಂಡಿದೆ. ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡ ಕೋಟೆಗಳು ದೇವಾಲಯಗಳು ಕೆರೆ, ಕಾಲುವೆ, ಅರಮನೆ ಇನ್ನೂ ಮುಂತಾದ ಸ್ಮಾರಕಗಳು ಹರಪನಹಳ್ಳಿ ಪರಿಸರದಲ್ಲಿ ಇಂದಿಗೂ ಕಂಡುಬರುತ್ತವೆ. ಈ ಸ್ಮಾರಕಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೩.೨. ಸಂತೆಬೆನ್ನೂರು ಪಾಳೆಯಗಾರರು

ಸಂತೆಬೇನ್ನೂರು ಈಗಿನ ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿದೆ. ಸಂತೆಬೆನ್ನೂರು ಹಾಗೂ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆಗಳಲ್ಲಿ ಕ್ರಿ.ಶ. ೧೬ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಪಾಳೆಯಪಟ್ಟು ಕಟ್ಟಿಕೊಂಡು ಆಡಳಿತ ನಡೆಸಿದ ಒಂದು ರಾಜವಂಶಕ್ಕೆ ಸಂತೆಬೆನ್ನ್ನೂರು, ಬಸವಾಪಟ್ಟಣ ಮತ್ತು ತರೀಕೆರೆ ಪಾಳೆಯಗಾರರು

ಎಂದು ಕರೆಯಲಾಗಿದೆ. ಈ ಮೂರು ಪಾಳೆಯಪಟ್ಟು ರಾಜರು ಒಂದೇ ವಂಶದವರಾಗಿದ್ದು, ಈ ಪಾಳೆಯಪಟ್ಟು ಬಸವಾಪಟ್ಟಣದಿಂದ ಆರಂಭವಾಗಿರುವುದು ದಾಖಲೆಗಳು, ಕೈಫಿಯತ್ತುಗಳು ಶಾಸನಗಳಿಂದ ತಿಳಿದುಬರುತ್ತದೆ. ಸಂತೆಬೆನ್ನೂರನ್ನು ಕೇಂದ್ರವಾಗಿಟ್ಟುಕೊಂಡು ಮೊದಲು ವಿಜಯನಗರ ಅರಸರ ಸಾಮಂತರಾಗಿ, ಅಮರ ನಾಯಕರಾಗಿ ಆನಂತರ ಸ್ವತಂತ್ರ ಅರಸರಾಗಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ.

ಸಂತೆಬೆನ್ನೂರು ಎಂಬ ಪ್ರದೇಶಕ್ಕೆ ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ "ರಂಗಾಪುರ" ಎಂಬ ಹೆಸರಿತ್ತು. ಹಿಂದೆ ಇದೊಂದು ಪ್ರಸಿದ್ಧ ವ್ಯಾಪಾರ ಸ್ಥಳವಾಗಿತ್ತು. ೧೪ನೆಯ ಶತಮಾನದ ಶಾಸನವೊಂದರಲ್ಲಿ ಈ ಸ್ಥಳವನ್ನು 'ಬೆಂನ್ನೂರು' ಎಂದು ಕರೆಯಲ್ಪಟ್ಟಿದೆ. ಸಂತೆಬೆನ್ನೂರು ನಾಯಕರ ಆಡಳಿತ ಕಾಲದ ಗ್ರಾಮವಾಗಿದ್ದ ಈ ಪ್ರದೇಶ ನಾಯಕರ ಆಡಳಿತಾವಧಿಯಲ್ಲಿ ಸಾಕಷ್ಟು ಅಭಿವೃದ್ಧಿ ಹೊಂದಿತಲ್ಲದೆ ಇಲ್ಲಿ ಕೋಟೆ ಅರಮನೆ, ದೇವಾಲಯಗಳು ಕೆರೆ ಕಾಲುವೆಗಳು ನಿರ್ಮಾಣವಾದವು. ನಾಯಕರ ಅಭಿವೃದ್ಧಿ ಕಾರ್ಯಗಳಿಂದ ಈ ಗ್ರಾಮ ಒಂದು ವಾಣಿಜ್ಯಕೇಂದ್ರವಾಗಿ ಮಾರ್ಪಟ್ಟಿತು. ಇಲ್ಲಿ ಪ್ರತಿ ವಾರವೂ ದೊಡ್ಡ ಪ್ರಮಾಣದ ಸಂತೆ ನಡೆಯುತ್ತಿದ್ದರಿಂದ ಸಂತೆಬೆನ್ನೂರು ಎಂದು ಕರೆಯಲ್ಪಟ್ಟಿತು. ನಾಯಕರು ಈ ಪ್ರದೇಶವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಲು ಪ್ರಾರಂಭಿಸಿದರು. ಆದುದರಿಂದ ಇಲ್ಲಿನ ನಾಯಕರಿಗೆ ಸಂತೆಬೆನ್ನೂರು ನಾಯಕರು, ಸಂತೆಬೆನ್ನೂರು ಪ್ರಭುಗಳು, ಸಂತೆಬೆನ್ನೂರು ಪಾಳೆಯಗಾರರು ಎಂದು ಹೆಸರು ಬಂದಿರುವುದನ್ನು ಕಾಣಬಹುದು.

ಸಂತೆಬೆನ್ನೂರು, ಬಸವಾಪಟ್ಟಣ ಆನಂತರ ತರೀಕೆರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಈ ಮೂರು ಪ್ರದೇಶದಿಂದ ಆಳಿದ ರಾಜವಂಶವನ್ನು ಇತ್ತೀಚಿನ ಇತಿಹಾಸಕಾರರು ಪ್ರತ್ಯೇಕವಾಗಿ ಗುರುತಿಸಲು ಪ್ರಾರಂಭಿಸಿದರು. ಆದರೆ ಮೂಲತಃ ಒಂದೇ ಕುಟುಂಬಕ್ಕೆ ಸೇರಿದ ಈ ನಾಯಕರು ಆರಂಭದಲ್ಲಿ ವಿಜಯನಗರ ಅರಸರಿಂದ ಸಂತೆಬೆನ್ನೂರು ಪ್ರದೇಶವನ್ನು ಅಮರಮಾಗಣಿಯನ್ನಾಗಿ ಪಡೆದುಕೊಂಡು ಪಾಳೆಯಪಟ್ಟನ್ನು ಆರಂಭಿಸಿದ್ದು ಕಂಡುಬರುತ್ತದೆ. ನಂತರ ತರೀಕೆರೆ, ಬಾಣಾವರಗಳಿಂದಲೂ ತಮ್ಮ ರಾಜಧಾನಿಯನ್ನು ಬದಲಾಯಿಸಿಕೊಂಡು ಆಡಳಿತ ನಡೆಸಿದ್ದಾರೆ.

ಈ ನಾಯಕರಿಗೆ ಸಂಬಂಧಿಸಿದಂತೆ ಬಿ.ಎಲ್.ರೈಸ್ ಅವರು ತಮ್ಮ ಎಫಿಗ್ರಾಫಿಯಾ ಕರ್ನಾಟಕಾ ಎಂಬ ಸಂಪುಟಗಳಲ್ಲಿ ೨೭ ಶಾಸನಗಳನ್ನು ಪ್ರಕಟಿಸಿದ್ದಾರೆ. ಶ್ರೀ ಕೂಡ್ಲಿ ಶೃಂಗೇರಿ ಮಠದವರು ೧೫ ಶಾಸನಗಳು, ಇತಿಹಾಸ ದರ್ಶನದಲ್ಲಿ ೪ ಶಾಸನಗಳು ಪ್ರಕಟಿಸಿರುವುದು ಕಂಡುಬರುತ್ತದೆ. ಒಟ್ಟಾರೆ ಸಂತೆಬೆನ್ನೂರು ನಾಯಕರಿಗೆ ಸಂಬಂಧಿಸಿದಂತೆ ೫೩ ಶಾಸನಗಳು ಪ್ರಕಟವಾಗಿವೆ. ಇವುಗಳಿಂದ ನಾಯಕರ ವಂಶಾವಳಿ, ಆಡಳಿತ ಕಾಲ, ವ್ಯಾಪ್ತಿ, ದಾನದತ್ತಿ, ದೇವಾಲಯ, ಕೋಟೆ, ಪುಷ್ಕರಿಣಿ ಅರಮನೆ ಮುಂತಾದ ಅಂಶಗಳ ವಿವರಗಳು ನಮಗೆ ಸ್ಪಷ್ಟವಾಗಿ ಲಭ್ಯವಾಗುತ್ತದೆ.

ವಿಜಯನಗರ ಅರಸರ ಸಾಮಂತರಾಗಿದ್ದ ಈ ನಾಯಕರು ೧೫೬೫ರಲ್ಲಿ ತಾಳಿಕೋಟೆ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ದುರ್ಬಲಗೊಂಡ ನಂತರ ಸ್ವತಂತ್ರರಾಗಿ ಆಳ್ವಿಕೆ ನಡೆಸಿದರು. ಅನಂತರ ಬಿಜಾಪುರ ಆದಿಲ್‌ಶಾಹಿ, ಕೆಳದಿ ನಾಯಕರು ಚಿತ್ರದುರ್ಗ ಪಾಳೆಯಗಾರರು, ಹೈದರ್, ಟಿಪ್ಪುಸುಲ್ತಾನ್, ಮರಾಠರು ಮೈಸೂರು ಒಡೆಯರ ಅಧೀನರಾಗಿ ಆಡಳಿತ ನಡೆಸಿದ್ದಾರೆ. ಮುಂದೆ ಭಾರತದಲ್ಲಿ ಬ್ರಿಟಿಷರ ಆಧಿಪತ್ಯ ಪ್ರಾರಂಭವಾದಾಗ ಅವರ ವಿರುದ್ಧ ಹೋರಾಡಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡರು. ೧೬ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಸುಮಾರು ೩ ಶತಮಾನಗಳ ಕಾಲ ಆಳ್ವಿಕೆ ನಡೆಸಿದ ಇವರು ಕರ್ನಾಟಕದ ದಾವಣಗೆರೆ, ಶಿವಮೊಗ್ಗ, ಚಿತ್ರದುರ್ಗ, ಚಿಕ್ಕಮಗಳೂರು, ಹಾಸನ, ಹಾವೇರಿ ಜಿಲ್ಲೆಗಳಿಗೆ ಒಳಪಟ್ಟ ಪ್ರದೇಶಗಳಲ್ಲಿ ಆಡಳಿತ ನಡೆಸಿರುವುದು ಇವರ ಕಾಲದ ಶಾಸನಗಳಿಂದ ನಮಗೆ ಮಾಹಿತಿ ಲಭ್ಯವಾಗುತ್ತದೆ.

ಸಂತೆಬೆನ್ನೂರು ನಾಯಕರ ವಂಶದ ಬಗ್ಗೆ ವಿದ್ವಾಂಸರು ಬೇರೆ ಬೇರೆ ರೀತಿಯ ಅಭಿಪ್ರಾಯವನ್ನು ಮಂಡಿಸುತ್ತಾರೆ. ಬಿ.ಎಲ್.ರೈಸ್ ಶಾಸನ ಸಂಪುಟಗಳಲ್ಲಿ ರಾಮಚಂದ್ರದೇವರ ಪಾದ ಪದ್ಮಾರಾಧಕರಾದ ಹನುಮಂತ ದೇವರ ಭಕ್ತರಾದ ವಾಲ್ಮೀಕಿ ಗೋತ್ರದ ಪೂರ್ವಾನ್ವಯದ ಎಂದು ಈ ರಾಜವಂಶದ ಮಾಹಿತಿಯನ್ನು ತಿಳಿಸುತ್ತದೆ. ಚನ್ನಗಿರಿ ಮತ್ತು ತರೀಕೆರೆ ಶಾಸನಗಳಲ್ಲಿ ವಂಶೋದ್ಧಾರಕರೆಂದು ಕರೆದುಕೊಂಡಿದ್ದಾರೆ. ಈ ಶಾಸನಗಳಿಂದ ತಿಳಿಯುವುದಾದರೆ ಇವರು ಬೇಡ ಕುಲದವರೆಂದು ತಿಳಿಯಬಹುದು. ಇವರಿಗೆ ಬೇಡರು, ಕಿರಾತರು, ಪುಳಿಂದರು, ಶಬರರು ಮುಂತಾದ ಹೆಸರುಗಳಿರುವುದು ಕಂಡುಬರುತ್ತದೆ.

ಈ ವಂಶದ ಮೂಲದ ಬಗ್ಗೆ ಅನೇಕ ರೀತಿಯ ಭಿನ್ನಾಭಿಪ್ರಾಯಗಳಿವೆ. ೧೬ನೆಯ ಶತಮಾನದ ಪ್ರಾರಂಭದಲ್ಲಿ ವಿಜಯನಗರ ಅರಸರ ಸೈನ್ಯ ಪಡೆಯ ಮುಖ್ಯಸ್ಥನಾಗಿದ್ದ ಧರ್ಮರಾಜನೆಂಬುವನು ಬೇಟೆಯಾಡುತ್ತಾ ಅಲ್ಲಿ ಒಬ್ಬ ಬೇಡರ ಯುವತಿಯನ್ನು ಕಂಡು ಆಕೆಯನ್ನು ಮದುವೆಯಾಗಲು ಬಯಸುತ್ತಾನೆ. ಆದರೆ ಆಕೆಯ ತಂದೆ ಬೇರೆ ಜಾತಿಗೆ ಸೇರಿದವನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿಸಲು ನಿರಾಕರಿಸುತ್ತಾನೆ. ನಂತರ ಆಕೆಯಲ್ಲಿ ಹುಟ್ಟಿದ ಮಕ್ಕಳಿಗೆ ಮುಂದೆ ಆಡಳಿತ ವಹಿಸಿಕೊಟ್ಟಲ್ಲಿ ಮಾತ್ರ ಮದುವೆಗೆ ಸಮ್ಮತಿಸುವೆನೆಂದು ಕರಾರಿನ ಮೇರೆಗೆ ಮದುವೆ ಮಾಡಿಕೊಟ್ಟನು. ಧರ್ಮರಾಜ ಆ ಯುವತಿಯನ್ನು ಮದುವೆಯಾಗಿ ಬಸವಾಪಟ್ಟಣದಲ್ಲಿ ನೆಲೆ ನಿಂತು ಅಲ್ಲಿ ಪಾಳೆಯಪಟ್ಟನ್ನು ಕಟ್ಟಿದನೆಂದು ಸುಮತೀಂದ್ರ ನಾಡಿಗರು ಅಭಿಪ್ರಾಯ ಪಡುತ್ತಾರೆ. ಈತನಿಗೆ ಕೆಂಗಣ್ಣ ಮತ್ತು ರಾಯಪ್ಪ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಕೆಂಗಣ್ಣನಾಯಕ ಬಸವಾಪಟ್ಟಣದ ಕೋಟೆಯನ್ನು ಕಟ್ಟಿಸಿದ್ದಲ್ಲದೆ ಈ ಪಾಳೆಯಪಟ್ಟನ್ನು ವಿಸ್ತರಿಸಿದನು. ಹೀಗೆ ಈ ವಂಶದ ಮೂಲಪುರುಷ ಧರ್ಮರಾಜನೆಂದು ಗೆಜೆಟಿಯರ್‌ಗಳಲ್ಲಿ ಉಲ್ಲೇಖವಿದ್ದರೆ, ಧರ್ಮರಾಜ ಈ ವಂಶದ ಮೂಲಪುರುಷ ಎನ್ನುವುದು ಒಂದು ಕಟ್ಟುಕತೆ ಎನ್ನುತ್ತಾರೆ.[೩೩] ಇವರ ಪ್ರಕಾರ ಈ ಪ್ರದೇಶದಲ್ಲಿ ದ್ಯಾಮಗುಡ್ಡ ಎಂಬ ಹೆಸರಿನ ಒಂದು ದೊಡ್ಡ

ಗುಡ್ಡವಿದ್ದುದರಿಂದ ಇಂತಹ ಒಂದು ಕಟ್ಟು ಕಥೆ ಹರಡಿದ್ದಾರೆ ಎಂದು ಹೇಳುತ್ತಾರೆ. ಇವರ ಪ್ರಕಾರ ಈ ವಂಶದ ಮೂಲಪುರುಷ ರಾಮಕೋಟಿ ಹನುಮಪ್ಪನಾಯಕ. ಈ ನಾಯಕ ಉಚ್ಚಂಗಿದುರ್ಗ ಕಡೆಯಿಂದ ಬಸವಾಪಟ್ಟಣದ ಕಡೆ ಬಂದನೆಂದು ತರೀಕೆರೆಯ ಕೈಫಿಯತ್ತಿನಂತೆ ಅಭಿಪ್ರಾಯಪಡುತ್ತಾರೆ.

ವಿಜಯನಗರ ಅರಸರಿಂದ ಅಮರಮಾಗಣಿ ಪಡೆದು ಸಂತೆಬೆನ್ನೂರಿನಿಂದ ಒಂದು ಶತಮಾನ ಆಳ್ವಿಕೆ ನಡೆಸಿದ ಈ ಮನೆತನ ಬಸವಾಪಟ್ಟಣದಿಂದ ಸುಮಾರು ೮೦ ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ಮುಂದೆ ತಮ್ಮ ರಾಜಧಾನಿಯನ್ನು ಬದಲಾಯಿಸಿಕೊಂಡು ತರೀಕೆರೆಯಿಂದ ೧೫೦ಕ್ಕೂ ಹೆಚ್ಚು ವರ್ಷಗಳ ಕಾಲ ಆಡಳಿತ ನಡೆಸಿ ತಮ್ಮ ಪಾಳೆಯಪಟ್ಟನ್ನು ಪೂರ್ವದ ಚಿತ್ರದುರ್ಗದಿಂದ ಪಶ್ಚಿಮಕ್ಕೆ ಈಗಿನ ತೀರ್ಥಹಳ್ಳಿ ತಾಲ್ಲೂಕು ಕಾವಲುದುರ್ಗದವರೆಗೂ ದಕ್ಷಿಣದ ಬಾಬಾಬುಡನ್‌ಗಿರಿ ತಪ್ಪಲಿನಿಂದ ಉತ್ತರದ ಈಗೀನ ಹಾವೇರಿ ಜಿಲ್ಲಾ ಕದರಮಂಡಲಿಯವರಿಗೆ ತಮ್ಮ ರಾಜ್ಯವನ್ನು ವಿಸ್ತರಿಸಿ ಆಡಳಿತ ನಡೆಸುತ್ತಿದ್ದರೆಂದು ತಿಳಿದುಬರುತ್ತದೆ.[೩೪] ಇವರ ಇತಿಹಾಸವನ್ನು ತಿಳಿಯಲು ಪ್ರಮುಖವಾಗಿ ಗೆಜೆಟಿಯರ್ ಮತ್ತು ಬಿ.ಎಲ್. ರೈಸ್ ಅವರು ಸಂಪಾದನೆಯ ಎಪಿಗ್ರಾಫಿಯಾ ಕರ್ನಾಟಕ ಪ್ರಮುಖ ಆಧಾರವಾಗಿವೆ. ಇವುಗಳನ್ನು ಆಧರಿಸಿ ಇತಿಹಾಸಕಾರರು ಹಲವಾರು ಕೃತಿಗಳನ್ನು ರಚಿಸಿರುವುದು ಕಂಡುಬರುತ್ತವೆ. ಈ ಕೃತಿಗಳು ಹಲವು ಹೊಸ ವಿಷಯಗಳನ್ನು ಬೆಳಕಿಗೆ ತರುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಈ ಪ್ರದೇಶದ ಚರಿತ್ರೆಯನ್ನು ರಚಿಸುವಲ್ಲಿ ಸಂತೆಬೆನ್ನೂರಿನವರಾದ ಸುಮತೀಂದ್ರ ನಾಡಿಗ್, ಎಂ.ಚಿದಾನಂದ ಮೂರ್ತಿ, ಮತಿಗಪ್ಪ ಕೃಷ್ಣಮೂರ್ತಿ, ಗೋ. ರು. ಚನ್ನಬಸಪ್ಪ, ವಿರೂಪಾಕ್ಷಿ ಪೂಜಾರಹಳ್ಳಿ, ಕೆ.ಜಿ. ಸುರೇಶ್, ಹೆಚ್.ನೀಲಪ್ಪ, ಅಬ್ದುಲ್ ಸತ್ತಾರ್, ಬೆನಕನಹಳ್ಳಿ ಜಿ.ನಾಯಕ್, ಇಕ್ಬಾಲ್ ಅಹ್ಮದ್ ಮುಂತಾದ ವಿದ್ವಾಂಸರು ಈ ಪಾಳೆಯಪಟ್ಟಿನ ಕುರಿತು ಅಧ್ಯಯನ ಕೈಗೊಂಡಿರುವುದು ಕಂಡುಬರುತ್ತದೆ.

**ಸಂತೆಬೆನ್ನೂರು ಪಾಳೆಯಗಾರ ರಾಜಕೀಯ ಚರಿತ್ರೆ**

ಸಂತೆಬೆನ್ನೂರು ನಾಯಕರು ಮೂರು ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದಾರೆ. ಸಂತೆಬೆನ್ನೂರಿನಿಂದ ಆಳ್ವಿಕೆಯನ್ನು ಆರಂಭಿಸಿ, ನಂತರದಲ್ಲಿ ಬಸವಾಪಟ್ಟಣ, ತರೀಕೆರೆಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಈ ನಾಯಕರು ತಮ್ಮ ಶೌರ್ಯ ಪರಾಕ್ರಮಗಳಿಂದ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ವಿಶಿಷ್ಟವಾದ ಛಾಪನ್ನು ಮೂಡಿಸಿದ್ದಾರೆ.

ಇವರ ವಂಶದ ಮೂಲ ಪುರುಷನ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗೆಜೆಟಿಯರ್ ವಿಶ್ವಕೋಶದಲ್ಲಿ ಪ್ರಚಲಿತದಲ್ಲಿರುವ ಐತಿಹ್ಯದಂತೆ ಸಂತೆಬೆನ್ನೂರು ನಾಯಕರ ಮೂಲಪುರುಷ ಧೂಮರಾಜ ಎಂದು ಹೇಳಲ್ಪಟ್ಟಿದೆ. ಐತಿಹ್ಯದ ಪ್ರಕಾರ ೧೬ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಸೈನ್ಯಪಡೆಯ ಮುಖ್ಯಸ್ಥನಾದ ಧೂಮರಾಜ ಬೇಟೆಯಾಡುತ್ತಾ ಈ ಪ್ರದೇಶಕ್ಕೆ

ಆಗಮಿಸಿದನು. ಈ ಭಾಗದಲ್ಲಿ ಬೇಟೆಯಾಡುತ್ತಾ ಕಾಡಿನಲ್ಲಿ ಅಲೆದಾಡುವ ಸಂದರ್ಭದಲ್ಲಿ ಬೇಡ ಯುವತಿಯನ್ನು ಮದುವೆಯಾಗಿ ಅಲ್ಲಿಯೇ ನೆಲೆ ನಿಂತನೆಂದು ಹೇಳಲಾಗುತ್ತದೆ. ಸಂತೆಬೆನ್ನೂರು ನಾಯಕರ ವಂಶದ ಕೈಫಿಯತ್ತಿನಲ್ಲಿ[೨೫] ಈ ವಂಶದ ಮೂಲಪುರುಷ ರಾಮಕೋಟೆ ಹನುಮಪ್ಪ ನಾಯಕನೆಂದು ಹೇಳಲಾಗಿದೆ. ಏಕೆಂದರೆ ಹನುಮಪ್ಪನಾಯಕನ ಕಾಲದಿಂದ ಚಾರಿತ್ರಿಕ ದಾಖಲೆಗಳು ಹೇರಳವಾಗಿ ಸಿಗುವುದರಿಂದ ಇವನೇ ಈ ಪಾಳೆಯಗಾರರ ನಿಜವಾದ ಸ್ಥಾಪಕ ಎಂದು ಹೇಳಲಾಗುತ್ತದೆ.

**ಮೂಲಪುರುಷ ಧೂಮರಾಜ(ಕ್ರಿ.ಶ. ೧೫೦೦-೧೫೫೦)**

ಹಲವಾರು ಭಿನ್ನಾಭಿಪ್ರಾಯಗಳಿದ್ದರೂ ಈ ವಂಶದ ಸ್ಥಾಪಕ ಅಥವಾ ಮೂಲಪುರುಷ ಧೂಮರಾಜನೆಂದು ಗೆಜೆಟಿಯರ್‌ಗಳು, ವಿಶ್ವಕೋಶಗಳು ಸ್ಪಷ್ಟಪಡಿಸುತ್ತವೆ. ಇವನು ವಿಜಯನಗರದಿಂದ ಇಲ್ಲಿಗೆ ಬಂದು ಬೇಡರ ಯುವತಿಯನ್ನು ಮದುವೆಯಾಗಿ ಇಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿದನೆಂದು ಹೇಳಲಾಗುತ್ತದೆ. ಸುಮತೀಂದ್ರ ನಾಡಿಗರು ತಮ್ಮ ಕೃತಿಯಲ್ಲಿ ಈ ವಂಶದ ಮೂಲಪುರುಷ ಧೂಮರಾಜ ಎನ್ನುವುದು ಒಂದು ಕಟ್ಟುಕಥೆ ಎಂದು ಹೇಳುತ್ತಾರೆ. ಇವರ ಪ್ರಕಾರ ಈ ಪ್ರದೇಶದಲ್ಲಿ ಧೂಮಗುಡ್ಡ ಅಥವಾ ದುಮ್ಮಿಗುಡ್ಡ ಎಂಬ ಹೆಸರಿನ ಗುಡ್ಡಗಳು ಇರುವುದರಿಂದ ಇಂತಹ ಕಟ್ಟುಕಥೆ ಹರಿಸಿದ್ದಾರೆ ಎಂದು ಅಭಿಪ್ರಾಯಪಡುತ್ತಾರೆ. ಹೆಚ್ಚಿನ ದಾಖಲೆಗಳ ಪ್ರಕಾರ ಈ ಪಾಳೆಯಪಟ್ಟಿನ ಮೂಲಪುರುಷ ರಾಮಕೋಟೆ ಹನುಮಪ್ಪನೆಂದೂ, ಇವನು ವಿಜಯನಗರ ಸಾಮ್ರಾಜ್ಯದ ದಳಪತಿಯಾಗಿದ್ದನೆಂದು ಉಚ್ಚಂಗಿದುರ್ಗದಿಂದ ಬಂದವನೆಂದು ಅಭಿಪ್ರಾಯ ಪಡಲಾಗಿದೆ.

ಇನ್ನೊಂದು ದಾಖಲೆ ಪ್ರಕಾರ ಈ ವಂಶದ ಮೂಲಪುರುಷ ಹನುಮನಾಯಕನೆಂದು ಹೇಳಲಾಗುತ್ತದೆ. ೧೫೫೮ರ ಶಾಸನದ ಪ್ರಕಾರ ಹನುಮನಾಯಕನು ಸಂತೆಬೆನ್ನೂರು ಸಮೀಪ ಗೊಲ್ಲರಹಳ್ಳಿಗೆ ಬಂದು ನೆಲೆಸಿ ಅಲ್ಲಿ ಚಿಕ್ಕ ಕೋಗಿಲೂರು ಹನುಮಂತ ದೇವರನ್ನು ತನ್ನ ಕುಲದೈವ ಮಾಡಿಕೊಂಡು ಬೇಟೆಯಾಡುತ್ತ ಬಂದು ಇಲ್ಲಿ ನೆಲೆಸಿದನೆಂದು ತಿಳಿದುಬರುತ್ತದೆ. ಹೀಗೆ ಈ ವಂಶದ ಮೂಲಪುರುಷನ ಬಗ್ಗೆ ಭಿನ್ನಾಭಿಪ್ರಾಯವಿರುವುದು ಕಂಡುಬರುತ್ತದೆ.

**ಹನುಮಪ್ಪನಾಯಕ(೧೫೫೦-೧೫೬೭)**

ಪ್ರಸ್ತುತ ವಿಷಯಕ್ಕೆ ಲಭ್ಯವಿರುವ ಶಾಸನಗಳ ಆಧಾರದಿಂದ ಹನುಮಪ್ಪನಾಯಕ ಈ ವಂಶದ ಮೊದಲ ದೊರೆಯಾಗಿದ್ದಾನೆ. ಸಂತೆಬೆನ್ನೂರು ನಾಯಕರ ಸ್ಪಷ್ಟವಾದ ಚರಿತ್ರೆ ಹನುಮಪ್ಪ ನಾಯಕನಿಂದ ಆರಂಭವಾಗುತ್ತದೆ. ಕೆಂಗಣ್ಣನಾಯಕನ ಮಗನಾದ ಹನುಮಪ್ಪ ನಾಯಕನು ಸಂತೆಬೆನ್ನೂರನ್ನು ನಿರ್ಮಿಸಿ ಅಲ್ಲಿ ಅರಮನೆಯನ್ನು ಕಟ್ಟಿಸಿದ.[೩೬] ಈತನಿಗೆ ರಾಮಿಕೋಟೆ ಹನುಮನಾಯಕನೆಂದು ಹೆಸರಿತ್ತು. ಈತನು ವಿಜಯನಗರ ಸಾಮ್ರಾಜ್ಯದ ಪರವಾಗಿ ಬಿಜಾಪುರದ ಸುಲ್ತಾನರ ವಿರುದ್ಧ ಯುದ್ಧದಲ್ಲಿ ಪಾಲ್ಗೊಂಡಿದ್ದನು. ಆದುದರಿಂದ ವಿಜಯನಗರದ ಅರಸರು

ಈತನಿಗೆ ಸಂತೆಬೆನ್ನೂರನ್ನು ದಾನವಾಗಿ ನೀಡಿದರು. ನಂತರ ಶಿವಮೊಗ್ಗದವರೆಗೂ ತಮ್ಮ ಪ್ರದೇಶಗಳನ್ನು ವಶಪಡಿಸಿಕೊಂಡು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿಕೊಂಡನು.[೩೭] ಹೀರೆಮಾಡಾಳು ಗ್ರಾಮದಲ್ಲಿ ದೊರೆಯುವ ಕ್ರಿ.ಶ. ೧೫೬೦ರ ಶಾಸನಗಳಲ್ಲಿ ಹನುಮಪ್ಪನಾಯಕನು ದಾದಾಜಿರಾಯ ಎಂಬುವನಿಗೆ ಹೀರೆಮಾಡಾಳು ಗ್ರಾಮವನ್ನು ದಾನವಾಗಿ ನೀಡಿದ ಹಾಗೂ ಈ ಗ್ರಾಮದಲ್ಲಿ ಶಿವಲಿಂಗವನ್ನು ಸ್ಥಾಪಿಸಿದ ಬಗ್ಗೆ ಉಲ್ಲೇಖಗಳಿವೆ.[೩೮] ಅಳಿಯ ರಾಮರಾಯ ಆಳುತ್ತಿದ್ದ ಸಂದರ್ಭದಲ್ಲಿ ಹನುಮಪ್ಪನಾಯಕನಿಗೆ ಉತ್ತಂಗಿ ವೆಂಟಕಿ ಸಲ್ಲುವ ಮದಕರಿ ನಾಡು ಅಮರಮಾಗಣಿಯಾಗಿ[೩೯] ನೀಡಿದನು. ಹನುಮಪ್ಪನಾಯಕನು ಚಿಕ್ಕಕೊಗಲೂರು ಮತ್ತು ಇತರೆ ಸ್ಥಳಗಳಲ್ಲಿ ತನ್ನ ಆಳ್ವಿಕೆಯನ್ನು ಆರಂಭಿಸಿದನು ಎಂದು ತಿಳಿದುಬರುತ್ತದೆ. ಹನುಮಪ್ಪನಾಯಕನು ಹರಿಕೇರಿ ಹೋಬಳಿಯ ಪಂಚಗ್ರಾಮಗಳನ್ನು ದಾನ ನೀಡುತ್ತಾನೆ. ಕ್ರಿ.ಶ. ೧೫೫೮ರ ಕೂಡ್ಲಿ ಶೃಂಗೇರಿ ಮಠದ ಶಾಸನದಲ್ಲಿ ಈ ಸಂಸ್ಥಾನದ ಮೂಲಪುರುಷ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಇದೇ ಶಾಸನದಲ್ಲಿ ತಮ್ಮ ಹಿರಿಯರು ಕಟ್ಟಿಸಿಕೊಟ್ಟ ಮಠದ ಧರ್ಮಕ್ಕೆ ಎಂಬ ವಾಕ್ಯವನ್ನು ನೋಡಿದರೆ ಹನುಮಪ್ಪ ನಾಯಕನಿಗಿಂತ ಮುಂಚಿತವಾಗಿ ಈ ಪ್ರದೇಶದಲ್ಲಿ ತಮ್ಮ ಪೂರ್ವಜರು ಆಡಳಿತ ನಡೆಸಿರುವುದು ಕಂಡುಬರುತ್ತದೆ. ಹನುಮಪ್ಪ ನಾಯಕನಿಗೆ ಹಿಲ್ಲಪ್ಪನಾಯಕ, ಕೆಂಗಪ್ಪನಾಯಕ ಮತ್ತು ರಾಜಪ್ಪ ನಾಯಕ ಎಂಬ ಮೂರು ಜನ ಗಂಡುಮಕ್ಕಳಿದ್ದರು. ಹನುಮಪ್ಪನಾಯಕನ ಮರಣದ ನಂತರ ಹಿಲ್ಲಪ್ಪನಾಯಕನು ಸಂತೆಬೆನ್ನೂರಿನಲ್ಲಿ ಅಧಿಕಾರಕ್ಕೆ ಬರುತ್ತಾನೆ.

**ಹಿಲ್ಲಪ್ಪನಾಯಕ(೧೫೬೭–೧೫೬೫)**

ಹನುಮಪ್ಪನಾಯಕನ ನಂತರ ಅವನ ಮಗನಾದ ಹಿಲ್ಲಪ್ಪನಾಯಕ ಅಧಿಕಾರಕ್ಕೆ ಬಂದ. ಇವನಿಗೆ ಬಿಲ್ಲಪ್ಪ, ಹುಚ್ಚಪ್ಪ ಎಂಬ ಹೆಸರುಗಳಿದ್ದು ಈ ಹೆಸರುಗಳು ಚನ್ನಗಿರಿ ಶಾಸನದಲ್ಲಿ ಉಲ್ಲೇಖವಾಗಿವೆ. ಹಿಲ್ಲಪ್ಪನಾಯಕನ ಬಗ್ಗೆ ಚಿಕ್ಕಗಂಗೂರಿನಲ್ಲಿ ದೊರೆತ ಶಿಲಾಶಾಸನದಲ್ಲಿ(೧೫೬೭)[೪೦] ವಿಜಯನಗರದ ಅರಸ ವೀರಪ್ರತಾಪ ಶ್ರೀ ಸದಾಶಿವರಾಯರು ದುಮ್ಮಿ ಸೀಮೆಯನ್ನು ಮಲುಕಲ್ಲೂಡೆಯರಿಗೆ ಅಮರನಾಯಕತನಕ್ಕೆ ದಾನವಾಗಿ ನೀಡಿದ ಬಗ್ಗೆ ತಿಳಿದುಬರುತ್ತದೆ. ಆತನ ಠಾಣಾದಾರನಾದ ದಿಲಾವರನೆಂಬುವನು ಪ್ರಜೆಗಳಿಗೆ ತೊಂದರೆ ಕೊಡುತ್ತಿದ್ದನು. ಸದಾಶಿವರಾಯನು ಅವನನ್ನು ನಿಗ್ರಹಿಸಲು ಹಿಲ್ಲಪ್ಪನಾಯಕನನ್ನು ಕಳುಹಿಸಿದನು. ಹಿಲ್ಲಪ್ಪನಾಯಕನು ದಿಲಾವರನ್ನು ನಿಗ್ರಹಿಸಿ ಅಲ್ಲಿನ ಪ್ರಜೆಗಳಿಗೆ ತೊಂದರೆಯಿಂದ ಪಾರುಮಾಡಿದನು. ಆದುದರಿಂದ ಸದಾಶಿವರಾಯನು ಹಿಲ್ಲಪ್ಪನಾಯಕನಿಗೆ ದುಮ್ಮಿ ಸೀಮೆಯನ್ನು ದಾನವಾಗಿ ನೀಡಿದನು. ಈ ಸಂದರ್ಭದಲ್ಲಿ ಹಿಲ್ಲಪ್ಪ ನಾಯಕನಿಗೆ ಸಹಾಯ ಮಾಡಿದವರು ಚಿಕ್ಕ ಗಂಗೂರಿನ ಗೌಡಯ್ಯ ಇವನನ್ನು ದಿಲಾವರ ಕೊಂದಿದ್ದುಕ್ಕೆ ಗೌಡಯ್ಯನ ಈ ಮಕ್ಕಳಿಗೆ ಚಿಕ್ಕಗಂಗೂರಿನಲ್ಲಿ ಎರೆಹೊಲವನ್ನು ದಾನವಾಗಿ ಕೊಟ್ಟ ವಿವರಗಳು ಈ ಶಾಸನದಲ್ಲಿ ತಿಳಿದುಬರುತ್ತದೆ. ಈ ಶಾಸನದ ಉಲ್ಲೇಖದಂತೆ ಸಂತೆಬೆನ್ನೂರು ಹನುಮನಾಯಕರ ಮಕ್ಕಳು ಹಿಲ್ಲಪ್ಪನಾಯಕನಿಗೆ ದುಮ್ಮಿ ಸೀಮೆಯನ್ನು ಕೊಟ್ಟಿರುವ

ವಿಷಯ ತಿಳಿದುಬರುತ್ತದೆ. ಈ ಶಾಸನದಲ್ಲಿ ಸಂತೆಬೆನ್ನೂರು ಹನುಮನಾಯಕ ಎಂದು ತಿಳಿದುಬರುವುದರಿಂದ ಈ ನಾಯಕ ವಂಶ ಸಂತೆಬೆನ್ನೂರುನಿಂದ ಪ್ರಾರಂಭವಾಗಿರುವುದು ಎಂದು ಸ್ಪಷ್ಟವಾಗುತ್ತದೆ. ಇವನಿಗೆ ಕೆಂಗಪ್ಪನಾಯಕ ಎಂಬ ಸಹೋದರ ಇರುವುದರಿಂದ ಈತನು ತನ್ನ ತಾಯಿ ಮನೆ ಬಸವಾಪಟ್ಟಣದಲ್ಲಿ ಹುಟ್ಟಿ ಅಲ್ಲಿಂದ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಬಸವಾಪಟ್ಟಣದಲ್ಲಿ ವಯೋವೃದ್ಧರು 'ಕೆಂಗಪ್ಪನಾಯಕ ಈ ಪ್ರದೇಶದಲ್ಲಿ ಆಡಳಿತ ನಡೆಸಿ ಅನೇಕ ಜನೋಪಕಾರಿ ಕಾರ್ಯಗಳನ್ನು ಕೈಗೊಂಡಿದ್ದನು' ಎಂದು ತಿಳಿಸುತ್ತಾರೆ. ೧೫೬೫ರ ಚನ್ನಗಿರಿ ಶಾಸನದಂತೆ ಹನುಮನಾಯಕರ ಮಗ ಪಿಲ್ಲಪ್ಪನಾಯಕ ಹಾಗೂ ಬಿಲ್ಲಪ್ಪ ನಾಯಕ ಒಬ್ಬನೇ ಆಗಿರಬೇಕೆಂದು ತಿಳಿದುಬರುತ್ತದೆ.

**ಕೆಂಗಪ್ಪ ನಾಯಕ(೧೫೬೫-೧೫೭೦)**

ರಾಮಕೋಟೆ ಹನುಮಪ್ಪನಾಯಕನ ಮಗ ಹಾಗೂ ಪಿಲ್ಲಪ್ಪನಾಯಕನ ಸಹೋದರ ಕೆಂಗಪ್ಪನಾಯಕ ಇವರು ಕೆಲಕಾಲ ಒಟ್ಟಿಗೆ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಪಿಲ್ಲಪ್ಪನಾಯಕ ಸಂತೆಬೆನ್ನೂರಿನಿಂದ ಆಡಳಿತ ನಡೆಸಿದರೆ ಕೆಂಗಪ್ಪನಾಯಕ ಬಸವಾಪಟ್ಟಣದಿಂದ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ ಪಿಲ್ಲಪ್ಪನಾಯಕನ ಮರಣದ ನಂತರ ಕೆಂಗಪ್ಪನಾಯಕನು ಸಂತೇಬೆನ್ನೂರಿಗೆ ಬಂದು ಆಳ್ವಿಕೆ ನಡೆಸುತ್ತಾನೆ.

ಕೆಂಗಪ್ಪನಾಯಕನು ರಂಗಾಪುರ ಗ್ರಾಮಕ್ಕೆ ಸಂತೆಬೆನ್ನೂರು ಎಂದು ನಾಮಕರಣ ಮಾಡಿದನು.[೪೧] ಕೈಫಿಯತ್ತಿನಂತೆ ಕೆಂಗಪ್ಪನಾಯಕನು ಬೇಟೆಯಾಡಲೆಂದು ಮದಕರಿ ಸೀಮೆಗೆ ಸೇರಿದ್ದ ರಂಗಾಪುರ ಗ್ರಾಮದ ಕಡೆ ಆಗಮಿಸಿದನು. ಈ ಸ್ಥಳದಲ್ಲಿ ಮೊಲವೊಂದು ಬೇಟೆ ನಾಯಿಯ ವಿರುದ್ಧವೇ ತಿರುಗಿ ಬಿದ್ದು, ಕಚ್ಚಿದ್ದನ್ನು ಕಂಡ ಕೆಂಗಪ್ಪನಾಯಕನು ಇದು ಗಂಡು ಭೂಮಿ ಎಂದು ತಿಳಿದು ಕೋಟೆ ಕಟ್ಟಿಸಿದ. ಆತನ ಕನಸಿನಲ್ಲಿ ವೃಷಭೇಶ್ವರ ಸ್ವಾಮಿಜಿಗಳು ಕಾಣಿಸಿಕೊಂಡು ಆ ಸ್ಥಳದಲ್ಲಿ ಕೋಟೆ ಕಟ್ಟಿ ರಾಜ್ಯ ಸ್ಥಾಪಿಸಲು ಸೂಚಿಸಿದರು. ಆ ಸೂಚನೆಯಂತೆ ಕೋಟೆಯನ್ನು ಕಟ್ಟಿಸಿದ. ಇದೇ ಸಂದರ್ಭದಲ್ಲಿ ಅರಮನೆಯನ್ನು ಹಾಗೂ ರಾಮಚಂದ್ರ ದೇವಾಲಯವನ್ನು ಕಟ್ಟಿಸಿದ. ದೇವಾಲಯದ ಮುಂದೆ ರಾಮತೀರ್ಥವೆಂಬ ಸುಂದರವಾದ ಪುಷ್ಕರಿಣಿಯನ್ನು ಕಟ್ಟಿಸಿದ. ಇವುಗಳಲ್ಲದೆ ದೇವರಹಳ್ಳಿಯ ಉಡುಗಿರಿ ರಂಗನಾಥಸ್ವಾಮಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ್ದು ತಿಳಿದುಬರುತ್ತದೆ.

ಕೆಂಗಪ್ಪ ನಾಯಕನು ವಿಜಯನಗರ ಅರಸರ ಅನೇಕ ಯುದ್ಧಗಳಲ್ಲಿ ಭಾಗಿಯಾಗಿದ್ದನೆಂದು ತಿಳಿದುಬರುತ್ತವೆ. ೧೫೬೫ರ ತಾಳಿಕೋಟೆ ಯುದ್ಧದಲ್ಲಿ ಭಾಗವಹಿಸಿದ್ದಕ್ಕಾಗಿ ಅಳಿಯ ರಾಮರಾಯ ಸಂತೇಬೆನ್ನೂರು ಗ್ರಾಮವನ್ನು ಅಮರ ಮಾಗಣಿಯಾಗಿ ಕೊಟ್ಟನು ಎಂದು ಅನೇಕ ದಾಖಲೆಗಳು ತಿಳಿಸುತ್ತವೆ.

**ಇಮ್ಮಡಿ ಕೆಂಗಹನುಮಪ್ಪನಾಯಕ**

ಇವನು ಮೊದಲನೇ ಕೆಂಗಪ್ಪನಾಯಕನ ಮಗ. ಕೆಂಗಪ್ಪನಾಯಕನ ಉತ್ತರಾಧಿಕಾರಿಯಾಗಿ ಅಧಿಕಾರ ನಡೆಸುತ್ತಾನೆ. ಈತನಿಗೆ ಹೀರೆಹನುಮಪ್ಪನಾಯಕ, ಇಮ್ಮಡಿ ಕೆಂಗಹನುಮಪ್ಪ ನಾಯಕನೆಂತಲೂ ಹೆಸರುಗಳಿವೆ. ತನ್ನ ರಾಜ್ಯವನ್ನು ವಿಸ್ತರಿಸಲು ಬಿಜಾಪುರದ ಸುಲ್ತಾನರ ಸಹಾಯ ಪಡೆದು ಇಕ್ಕೇರಿ ನಾಯಕರ ಮೇಲೆ ಯುದ್ಧ ಮಾಡುತ್ತಾನೆ. ಆದರೆ ಅದು ಯಶಸ್ವಿ ಆಗುವುದಿಲ್ಲ. ನಂತರ ಚಿತ್ರದುರ್ಗ ಪಾಳೆಯಗಾರರಿಗೆ ಸೇರಿದ್ದ ರಂಗಪಟ್ಟಣಕ್ಕೆ ಮುತ್ತಿಗೆ ಹಾಕುತ್ತಾನೆ. ಆದರೆ ಅದರಲ್ಲೂ ಯಶಸ್ವಿ ಸಿಗುವುದಿಲ್ಲ.[೪೨] ಕೆಂಗಹನುಮಪ್ಪನಾಯಕನು ಹೀರೆಕೊಂಗಲೂರು, ಸಂತೆಬೆನ್ನೂರು, ಮೆದಿಕರೆ, ತಣಿಗೆರೆ, ಸಿದ್ಧನಮಠ ಗ್ರಾಮಗಳಲ್ಲಿ ಕೆರೆಗಳನ್ನು ಕಟ್ಟಿಸಿದ್ದು ತಿಳಿದುಬರುತ್ತದೆ. ದಾವಣಗೆರೆ ತಾಲ್ಲೂಕಿನ ವಡೇರಹಳ್ಳಿ ಗ್ರಾಮದ ಕಲ್ಲೇಶ್ವರ ದೇವಾಲಯದ ಗೋಡೆಗೆ ಈತನಿಗೆ ಸಂಬಂಧಿಸಿದಂತೆ ಇವನ ಸಹಾಯಕ ಆಡುಗೆರೆ ಮಲ್ಲಣ್ಣ ಶಾಸನವನ್ನು ಬರೆಸಿದ್ದು, ಇದನ್ನು ಈಗಲೂ ನೋಡಬಹುದು. ಇವನ ಮರಣದ ನಂತರ ಇತನ ಮಗ ನಿಚ್ಚಮದುಮಣಿಗ ಕೆಂಗಾಹನುಮಪ್ಪನಾಯಕ ಅಧಿಕಾರಕ್ಕೆ ಬಂದನು.

**ನಿಚ್ಚಮದುಮಣಿಗ ಕೆಂಗಾಹನುಮಪ್ಪನಾಯಕ**

ಇಮ್ಮಡಿ ಕೆಂಗಹನುಮಪ್ಪನಾಯಕನ ಮಗನಾದ ಈತನು ಸುಮಾರು ೧೦ ವರ್ಷಗಳ ಕಾಲ ಆಡಳಿತ ನಡೆಸಿದನು. ತನ್ನ ಆಳ್ವಿಕೆಯ ಕಾಲದಲ್ಲಿ ಬೆಳಗನೂಡು ಮತ್ತು ಕುಳೇನೂರು ಗ್ರಾಮದ ಕೆರೆಯನ್ನು ಕಟ್ಟಿಸಿದ್ದಾನೆ ಎಂದು ಅಲ್ಲಿನ ವಯೋವೃದ್ಧರು ತಿಳಿಸುತ್ತಾರೆ. ಇವನು ಸುಂದರನೂ, ವಿಲಾಸಿಯೂ ಆಗಿದ್ದರಿಂದ ಅನೇಕ ಮದುವೆಗಳನ್ನು ಮಾಡಿಕೊಂಡಿದ್ದನು. ಆದ್ದರಿಂದ ಇವನಿಗೆ 'ನಿಚ್ಚಮದುವಣಿಗ' ಎಂಬ ಹೆಸರೂ ಇದ್ದಿತ್ತು.

ಈ ನಾಯಕನು ಚಿತ್ರದುರ್ಗ ಪಾಳೆಯಗಾರನಾದ ಕಸ್ತೂರಿರಂಗಪ್ಪನಾಯಕನೊಂದಿಗೆ ಯುದ್ಧ ಮಾಡಿದನು. ಚಿತ್ರದುರ್ಗ ಪಾಳೆಯಗಾರರಿಗೆ ಸೇರಿದ್ದ ಮಾಯಕೊಂಡ, ದೇವರಪುರದ ಕೋಟೆ, ಹೊಳಲ್ಕೆರೆ, ಜಾನಕಲ್‌ದುರ್ಗ, ಚಿತ್ರಹಳ್ಳಿಗಳ ಮೇಲೆ ದಾಳಿ ಮಾಡುತ್ತಾನೆ. ಆದರೆ ಈ ದಾಳಿಗಳು ಯಶಸ್ವಿಯಾಗುವುದಿಲ್ಲ ಹಾಗೂ ಈ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ವಿಫಲನಾಗುತ್ತಾನೆ.[೪೩] ಈ ದಾಳಿಯಿಂದ ತಾನು ಕೆಲವು ಪ್ರದೇಶಗಳನ್ನು ಕಳೆದುಕೊಳ್ಳುತ್ತಾನೆ. ಆಗ ವಿಜಯನಗರ ಸಾಮ್ರಾಟನಾಗಿದ್ದ ವೆಂಕಟಪತಿರಾಯ ಇವನಿಗೆ ಮಗರ(ಗರಗ)ನಾಡನ್ನು ಅಮರಮಾಗಣಿಯಾಗಿ ಕೊಟ್ಟಿದ್ದನು. ನಂತರ ಸವಣೂರು ನವಾಬರು ಸಂತೆಬೆನ್ನೂರಿನ ಮೇಲೆ ದಾಳಿ ಮಾಡಿ ಅದನ್ನು ವಶಪಡಿಸಿಕೊಳ್ಳುತ್ತಾರೆ. ಆದರೆ ಸ್ವಲ್ಪ ಕಾಲದ ನಂತರ ಸಂತೆಬೆನ್ನೂರನ್ನು ಮತ್ತೆ ವಶಪಡಿಸಿಕೊಳ್ಳುತ್ತಾನೆ.

ಈತನಿಗೆ ಕಳಸಪ್ಪಯ್ಯ ಎಂಬ ಪ್ರಧಾನಿ ಇದ್ದನು. ಈತ ತನ್ನ ತಂದೆ ತಾಯಿ ಹೆಸರಿನಲ್ಲಿ ಅವರಿಗೆ ಪುಣ್ಯವಾಗಲೆಂದು ೫೦ ವರಹ ಭೂಮಿಯನ್ನು ದಾನ ಮಾಡುತ್ತಾನೆ.[೪೪] ಇವನಿಗೆ

ಹಿರೇಹನುಮಪ್ಪನಾಯಕ, ಚಿಕ್ಕಕೆಂಗಹನುಮಪ್ಪ ನಾಯಕ ಎಂಬ ಇಬ್ಬರು ಪುತ್ರರಿರುತ್ತಾರೆ. ಇವರಿಬ್ಬರಲ್ಲಿ ಭಿನ್ನಾಭಿಪ್ರಾಯ ಉಂಟಾದಾಗ ತನ್ನ ಸಾಮ್ರಾಜ್ಯವನ್ನು ೨ ಭಾಗ ಮಾಡಿ ಕೊಡುತ್ತಾನೆ. ಹಿರಿಯ ಮಗನನ್ನು ಕಡೂರಿನಲ್ಲಿ ಚಿಕ್ಕವನನ್ನು ಬಾಣಾವರದಲ್ಲಿ ಆಡಳಿತಾಧಿಕಾರಿಗಳಾಗಿ ನೇಮಿಸಿದನು. ಆದರೆ ತಂದೆಯ ನಿರ್ಧಾರ ಸರಿಯಿಲ್ಲವೆಂದು ಹೋರಾಟದ ಮೂಲಕ ಕಡೂರನ್ನು ವಶಪಡಿಸಿಕೊಳ್ಳುತ್ತಾನೆ. ಆಗ ಹಿರಿಯವನು ಇಕ್ಕೇರಿ ಅರಸ ವೆಂಕಟಪ್ಪನಾಯಕನ ನೆರವು ಕೋರಿದನು. ಇಕ್ಕೇರಿ ಅರಸನು ಚಿಕ್ಕಕಲ್ಲಪ್ಪನೆಂಬ ದಳವಾಯಿಯನ್ನು ಕಳುಹಿಸಿದನು. ಇದನ್ನರಿತ ಕಿರಿಯವನು ಬೇಲೂರು ವೆಂಕಟಾದ್ರಿನಾಯಕ ಮೈಸೂರು ಚಿಕ್ಕನಾಯಕನಹಳ್ಳಿ, ಚಿತ್ರದುರ್ಗ ಹಾಗೂ ಸಿರಾದ ರಂಗಪ್ಪನಾಯಕ ಮುಂತಾದವರ ಸೈನ್ಯವನ್ನು ಬರಮಾಡಿಕೊಂಡು ಹೇರಳ ಬಲವನ್ನು ಮುಂದಿಟ್ಟುಕೊಂಡು ಎದುರಿಸುತ್ತಾನೆ. ಹಿರಿಯನು ಇವರ ಎದುರು ನಿಲ್ಲಲಾರದೆ ಮತ್ತೆ ಇಕ್ಕೇರಿಯವರಿಗೆ ಮೊರೆಯಿಡುತ್ತಾನೆ. ಆಗ ಇಕ್ಕೇರಿ ಅರಸ ವೆಂಕಟಪ್ಪನಾಯಕನನ್ನು ಗಂಗೂರುನಲ್ಲಿ ಕೂಡಿಕೊಂಡನು. ತಕ್ಷಣ ನಾಯಕನು ಇಕ್ಕೇರಿಯ ನಾಯಕರಿಗೆ ಗಾಜನೂರು, ಶಿವಮೊಗ್ಗ, ಲಕ್ಕವಳ್ಳಿ ಸೀಮೆ ಹಾಗೂ ಎಡತೊರೆಗಳನ್ನು ಕಾಣಿಕೆಯಾಗಿ ನೀಡಿದನು. ಹಿರಿಯವನ ಪರವಾಗಿ ಯುದ್ಧ ಮಾಡಲು ಇಕ್ಕೇರಿ ಅರಸ ತನ್ನ ಸೈನ್ಯದೊಂದಿಗೆ ತುಂಗಭದ್ರಾ ನದಿ ದಡದಲ್ಲಿ ಬಿಡಾರ ಹೂಡಿ ಮುತ್ತಿಗೆ ಹಾಕಲು ಸಿದ್ಧಗೊಂಡನು. ಈ ವಿಷಯವನ್ನು ತಿಳಿದು ಕಿರಿಯವನಿಗೆ ಸಹಾಯಕ್ಕೆ ಬಂದವರು ರಣರಂಗದಿಂದ ಪಲಾಯನ ಮಾಡಿದರು. ಆಗ ವೆಂಕಟಪ್ಪನಾಯಕನು ಹಿರಿಯ ಲಿಂಗಣ್ಣನಾಯಕನ ಸಂಗಡ ಹೇರಳ ಬಲವನ್ನು ಕಳುಹಿಸಿ ಕಡೂರನ್ನು ಆಕ್ರಮಿಸಿ ಹಿರಿಯನಿಗೆ ಕೊಟ್ಟನು. ನಂತರ ಬಾಣಾವರಕ್ಕೆ ಕೆಳದಿ ಸೈನ್ಯವು ಹೊರಟಿತು. ಈ ವಿಷಯವನ್ನು ಕೇಳಿ ಚಿಕ್ಕಕುಮಾರನು ಕೆಳದಿಯವರ ಮೊರೆ ಹೋಗಲು ಅವರಿಬ್ಬರ ವಿವಾದವನ್ನು ವೆಂಕಟಪ್ಪನಾಯಕ ಬಗೆ ಹರಿಸಿದನು.[೪೫] ಹೀಗೆ ಸಹೋದರರಿಬ್ಬರು ಸಂಧಾನ ಮಾಡಿಕೊಂಡು ಚಿಕ್ಕಕೆಂಗಹನುಮಪ್ಪನಾಯಕ ಬಾಣಾವರ ಪ್ರಾಂತ್ಯವನ್ನು ಆಳಿದನು. ಹಿರೇಕೆಂಗಪ್ಪನಾಯಕ ಬಸವಾಪಟ್ಟಣ, ಸಂತೆಬೆನ್ನೂರು ಪ್ರಾಂತ್ಯದ ಆಡಳಿತವನ್ನೂ ನೋಡಿಕೊಳ್ಳಲು ಒಪ್ಪಂದ ಮಾಡಿಕೊಂಡರು. ಇವರ ವೈಮನಸ್ಸಿನಿಂದ ಇವರ ತಂದೆ ಕೊರಗಿ ಮರಣ ಹೊಂದಿದನು. ನಂತರ ಹಿರೇಹನುಮಪ್ಪನಾಯಕನು ತಂದೆಯ ಮರಣದ ನಂತರ ಅಧಿಕಾರಕ್ಕೆ ಬಂದನು.

**ರಾಜಪ್ಪನಾಯಕ, ಬಾಲಗಿರಿನಾಯಕ, ದಳನಾಯಕ**

ಇವರನ್ನು ಕುರಿತಂತೆ ಒಂದೊಂದು ಶಾಸನಗಳಿರುವುದನ್ನು ಕಾಣುತ್ತೇವೆ. ಕ್ರಿ.ಶ. ೧೫೭೧ರ ಬಾಗೂರು ಗ್ರಾಮದ ಶಿಲಾಶಾಸನದಂತೆ[೪೬] ಹನುಮಪ್ಪನಾಯಕನ ಮಗ ರಾಜಪ್ಪನಾಯಕನು ತನ್ನ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು ಬಾಗೂರು ಗ್ರಾಮದಲ್ಲಿ ಲಕ್ಷ್ಮೀದೇವಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ ವಿವರಗಳನ್ನು ಈ ಶಾಸನ ತಿಳಿಸುತ್ತದೆ. ಕೆಲ್ಲೋಡು ಗ್ರಾಮದ ಶಾಸನದಲ್ಲಿ[೪೭] ಹನುಮಪ್ಪನಾಯಕನ ಮಗ ದಳನಾಯಕನು ಕೆಲಗೂಡಿ

ಆಂಜನೇಯ ದೇವರಿಗೆ ಕುರುಬರಹಳ್ಳಿಯನ್ನು ದಾನವಾಗಿ ನೀಡಿದ ವಿವರಗಳು ಕಂಡುಬರುತ್ತವೆ. ಆದರೆ ಸಂತೆಬೆನ್ನೂರಿನ ವಂಶಾವಳಿಯನ್ನು ಅವರ ಕೈಫಿಯತ್ತಿನಲ್ಲಿ ನೋಡಿದರೆ ಇವರ ಹೆಸರುಗಳು ಪ್ರಸ್ತಾಪವಾಗಿಲ್ಲ. ಆದುದರಿಂದ ಈ ಮೇಲಿನ ನಾಯಕರು ಕೇವಲ ಸಂತೆಬೆನ್ನೂರು ಸೀಮೆಗೆ ಒಳಪಟ್ಟ ಪ್ರಾಂತ್ಯಕ್ಕೆ ಆಡಳಿತಾಧಿಕಾರಿಗಳಾಗಿರಬೇಕು ಎಂದು ತಿಳಿದುಬರುತ್ತದೆ. ಬಾಲಗಿರಿ ನಾಯಕನಿಗೆ ಸಂಬಂಧಿಸಿದಂತೆ ತರೀಕೆರೆ ಶಾಸನಗಳಲ್ಲಿ ಮಾತ್ರ ಹೆಸರು ಕಂಡುಬರುತ್ತದೆ. ಈ ಬಾಲಗಿರಿನಾಯಕನ ಹೊರಕೆರೆ ರಂಗನಾಥಸ್ವಾಮಿಗೆ ದತ್ತಿ ನೀಡಿದ್ದ ವಿವರಗಳು ಕಂಡುಬರುತ್ತದೆ.

ಈ ಮೇಲಿನ ಶಾಸನಗಳಂತೆ ಇವರು ಮೂವರು ಸಹೋದರರಾಗಿದ್ದು ಹೊಸದುರ್ಗ, ಹೊಳಲ್ಕೆರೆ ಪ್ರಾಂತ್ಯಗಳ ಆಡಳಿತ ನಡೆಸುತ್ತಿದ್ದರು ಎಂದು ಕಂಡುಬರುತ್ತದೆ.

**ಹಿರೇಕೆಂಗಾಹನುಮಪ್ಪನಾಯಕ**

ಸಂತೇಬೆನ್ನೂರು ಪಾಳೆಯಗಾರರಲ್ಲಿ ಇವನು ಪ್ರಬಲ ಅರಸನಾಗಿದ್ದನು. ತಂದೆಯ ನಂತರ ಹಿರೇಕೆಂಗಹನುಮಪ್ಪನಾಯಕ ರಾಜ್ಯದ ಆಡಳಿತ ವಹಿಸಿಕೊಳ್ಳುತ್ತಾನೆ. ಮಹತ್ವಾಕಾಂಕ್ಷಿಯಾದ ಈತನು ಸುಸಜ್ಜಿತವಾದ ಸೈನ್ಯವನ್ನು ಹೊಂದಿದ್ದ. ಅಣ್ಣ ತಮ್ಮಂದಿರಲ್ಲಿ ಮನಸ್ತಾಪ ಉಂಟಾದಾಗ ಚಿಕ್ಕಕೆಂಗಹನುಮತಂಪ್ಪನಾಯಕ ಬಾಣಾವರ ಪ್ರಾಂತ್ಯಕ್ಕೆ ಹೋಗಿ ಅಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿದ ನಂತರ ೧೬೩೮ರಲ್ಲಿ ಸಂತೆಬೆನ್ನೂರು ಪಾಳೆಯಪಟ್ಟಿನ ಅಧಿಕಾರ ವಹಿಸಿಕೊಂಡನು.

ಬಸವಾಪಟ್ಟಣ ಮತ್ತು ಸಂತೆಬೆನ್ನೂರು ಪ್ರಾಂತ್ಯಗಳನ್ನು ಒಟ್ಟಿಗೆ ಸೇರಿಸಿಕೊಂಡು ಆಳುತ್ತಿದ್ದನು. ಈ ಸಂದರ್ಭದಲ್ಲಿ ಬಿಜಾಪುರದ ದಂಡನಾಯಕ ರಣದುಲ್ಲಾಖಾನ್ ಭಾರಿ ದಂಡು ತೆಗೆದುಕೊಂಡು ಬಂದು ಸಂತೆಬೆನ್ನೂರು, ಬಸವಾಪಟ್ಟಣ ಕೋಟೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು.[೪೮] ರಣದುಲ್ಲಾಖಾನನ ದಾಳಿಯನ್ನು ಎದುರಿಸಲು ಹಿರೇಕೆಂಗಹನುಮಂತಪ್ಪನಾಯಕನು ಸುಸಜ್ಜಿತವಾದ ಸೈನ್ಯವನ್ನು ತಯಾರಿ ಮಾಡಿಕೊಂಡಿರುತ್ತಾನೆ. ಒಂದು ಭಾರಿ ಸೈನ್ಯದೊಂದಿಗೆ ರಣಾದುಲ್ಲಾಖಾನ್ ೧೬೩೭ರಲ್ಲಿ ದಕ್ಷಿಣದತ್ತ ದಂಡೆಯಾತ್ರೆಗೆ ಆಗಮಿಸುತ್ತಾನೆ. ಈತನ ಸಹಾಯಕನಾಗಿ ಷಹಜಿಯನ್ನು ಕರೆದುಕೊಂಡು ಆಗಮಿಸುತ್ತಾನೆ. ಇವರನ್ನು ಎದುರಿಸಲು ಸಂತೆಬೆನ್ನೂರಿನ ಹೀರೆಕೆಂಗ ಹನುಮಪ್ಪನಾಯಕ, ಬೇಲೂರಿನ ವೆಂಕಟಾದ್ರಿನಾಯಕ, ಬಾಣಾವರದ ವೆಂಕಟಪತಿನಾಯಕರು ಸೇರಿಕೊಂಡು ಯುದ್ಧಕ್ಕೆ ಸಜ್ಜುಗೊಳಿಸುತ್ತಾರೆ. ವಿಜಾಪುರದ ಸೈನ್ಯವು ದಾರಿಯಲ್ಲಿ ಸಿಕ್ಕಿದ ಸೀಮೆಗಳನ್ನೆಲ್ಲಾ ವಶಪಡಿಸಿಕೊಂಡು ಇಕ್ಕೇರಿಯ ಸೀಮೆಯನ್ನು ಪ್ರವೇಶ ಮಾಡುತ್ತಾನೆ.[೪೯] ಇಕ್ಕೇರಿಯ ವೀರಭದ್ರನಾಯಕ ಈ ಸೇನೆಯ ವಿರುದ್ಧ ಸೇರುತ್ತಾನೆ. ಅಲ್ಲಿಂದ ಕವಲೆಗುಡ್ಡದ ಕಡೆಗೆ ಪಲಾಯನ ಮಾಡುತ್ತಾನೆ. ಕವಲೆಗುಡ್ಡದ ಮೇಲೆ ದಾಳಿ ಮಾಡಿದಾಗ ವೀರಭದ್ರ ನಾಯಕನು ಕೃಷ್ಣಯ್ಯನೆಂಬ ರಾಯಭಾರಿಯನ್ನು ಕಳುಹಿಸುತ್ತಾನೆ. ಕೆಳದಿಯವರು ಒಪ್ಪಂದ ಮಾಡಿ ಕೊಂಡು ಸಾಮಂತರಾಗಿರಲು ಒಪ್ಪಿಕೊಂಡು ವಿಜಾಪುರ ಸುಲ್ತಾನನಿಗೆ ಕಪ್ಪಕಾಣಿಕೆಯನ್ನು

ಕೊಟ್ಟು ಕಳುಹಿಸುತ್ತಾರೆ. ಇದಾದ ನಂತರ ಬಿಜಾಪುರದ ಸೈನ್ಯ ಸಿರಾದ ಮೇಲೆ ದಾಳಿ ಮಾಡಿ ರಂಗಪ್ಪ ನಾಯಕನನ್ನು ಕೊಂದುಹಾಕುತ್ತಾರೆ. ಸಿರಾದ ಪಾಳೆಯಪಟ್ಟು ನಾಶವಾದಾಗ ಅಲ್ಲಿಂದ ಹೊರಟ ಸೈನ್ಯ ತುಮಕೂರು, ಮಾಸ್ತಿ, ಹೊಸಕೋಟೆ, ಬೆಂಗಳೂರು, ಕಂಗೊಂದಿ, ಸಿಡಲಘಟ್ಟಗಳನ್ನು ವಶಪಡಿಸಿಕೊಳ್ಳುತ್ತಾನೆ.[೫೦]

ಹೀಗೆ ವಶಪಡಿಸಿಕೊಂಡ ರಣಾದುಲ್ಲಾಖಾನ್ ಸೈನ್ಯ ಶ್ರೀರಂಗಪಟ್ಟಣದ ಮೇಲೆ ದಾಳಿ ನಡೆಸಲು ಹೊಂಚು ಹಾಕುತ್ತಿದ್ದನು. ಈ ಸಮಯದಲ್ಲಿ ಶ್ರೀರಂಗಪಟ್ಟಣದಲ್ಲಿ ಕಂಠೀರವ ನರಸರಾಜನು ಆಡಳಿತ ನಡೆಸುತ್ತಿದ್ದನು. ಹನುಮಪ್ಪನಾಯಕನು ಇವನೊಂದಿಗೆ ಒಪ್ಪಂದ ಮಾಡಿಕೊಂಡು ರಣಾದುಲ್ಲಾಖಾನನ್ನು ಸೋಲಿಸಿ ಹಿಮ್ಮೆಟ್ಟಿಸುತ್ತಾರೆ. ಇದರಿಂದ ಖಾನನು ಸೋಲನ್ನು ಒಪ್ಪಿಕೊಂಡು ಹಿಂತಿರುಗಿದನು. ಈ ಸೇಡನ್ನು ತೀರಿಸಿಕೊಳ್ಳಲು ರಣಾದುಲ್ಲಾಖಾನನು ಇಕ್ಕೇರಿಯ ಶಿವಪ್ಪ ನಾಯಕನೊಂದಿಗೆ ಒಪ್ಪಂದ ಮಾಡಿಕೊಂಡು ಸಂತೆಬೆನ್ನೂರು, ಬಸವಾಪಟ್ಟಣದ ಮೇಲೆ ದಾಳಿ ನಡೆಸುತ್ತಾನೆ. ಈ ದಾಳಿಯ ಸಂದರ್ಭದಲ್ಲಿ ಹಿರೇಕೆಂಗಹನುಮಪ್ಪನಾಯಕನು ಶೌರ್ಯದಿಂದ ಯುದ್ಧ ಮಾಡಿದರೂ ಗೆಲ್ಲಲು ಆಗಲಿಲ್ಲ. ಹನುಮಪ್ಪನಾಯಕನ ಇಬ್ಬರು ಸಹೋದರರು ಯುದ್ಧದಲ್ಲಿ ಮರಣ ಹೊಂದುತ್ತಾರೆ. ಚಿಕ್ಕಕೆಂಗಹನುಮಪ್ಪನಾಯಕನು ತಪ್ಪಿಸಿಕೊಂಡು ಓಡಿ ಹೋಗುತ್ತಾನೆ.

ಬಿಜಾಪುರದ ದಂಡನಾಯಕ ರಣಾದುಲ್ಲಾಖಾನ್ ಸಂತೆಬೆನ್ನೂರು, ಬಸವಾಪಟ್ಟಣ ಕೋಟೆಗಳನ್ನು ವಶಪಡಿಸಿಕೊಂಡಿತ್ತಲ್ಲದೆ, ಸಂತೆಬೆನ್ನೂರು ನಾಯಕ ಕುಲದೇವರಾದ ರಾಮಚಂದ್ರ ದೇವಸ್ಥಾನ, ಕಲ್ಲೇಶ್ವರ ದೇವಸ್ಥಾನವನ್ನು, ಹಿರೇಕೋಗಲೂರಿನ ಸುಖನೇಶ್ವರ, ಕಲ್ಲೇಶ್ವರ, ಮಲ್ಲೇಶ್ವರ, ದೇವಸ್ಥಾನಗಳನ್ನು, ಸಿದ್ಧನಮಠದ ರಾಮೇಶ್ವರ ದೇವಾಲಯವನ್ನು, ತಣಿಗೆರೆಯ ಕಲ್ಲೇಶ್ವರ ದೇವಸ್ಥಾನವನ್ನು ಧ್ವಂಸ ಮಾಡುತ್ತಾನೆ.[೫೧] ರಾಮಚಂದ್ರ ದೇವಾಲಯವಿದ್ದ ಜಾಗದಲ್ಲಿ ಮಸೀದಿಯನ್ನು ಕಟ್ಟಿಸಲು ಏರ್ಪಾಡು ಮಾಡಿಕೊಂಡು ಹಿರೇಕೆಂಗಹನುಮಪ್ಪನಾಯಕನನ್ನು ದಸ್ತಗಿರಿ ಮಾಡಿ ಬಿಜಾಪುರಕ್ಕೆ ಕರೆದುಕೊಂಡು ಹೋಗಿ ಸೆರೆಮನೆಗೆ ಹಾಕಿದನು.

ಹೀಗೆ ಸಂತೆಬೆನ್ನೂರು ಪಾಳೆಯಪಟ್ಟು ಬಿಜಾಪುರ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತು. ಈ ಸಂದರ್ಭದಲ್ಲಿ ಚಿಕ್ಕಕೆಂಗಹನುಮಪ್ಪನಾಯಕ ಬಾಣಾವರದಲ್ಲಿದ್ದನು. ಹಿರೇಕೆಂಗಹನುಮಪ್ಪನಾಯಕನ ನಂತರ ಸಂತೆಬೆನ್ನೂರು ಪಾಳೆಯಪಟ್ಟಿಗೆ ರಾಜನಾಗಿ ಆಡಳಿತ ನಡೆಸುತ್ತಾನೆ.

**ಚಿಕ್ಕಕೆಂಗಹನುಮಪ್ಪನಾಯಕ/ಸರ್ಜಾಹನುಮಪ್ಪನಾಯಕ**

ಸಂತೆಬೆನ್ನೂರು ಪಾಳೆಯಗಾರರಲ್ಲಿ ಇವನು ಪರಾಕ್ರಮಿಯಾಗಿದ್ದನು. ಸುಲ್ತಾನರ ಆಳ್ವಿಕೆಯಲ್ಲಿದ್ದ ಸಂತೆಬೆನ್ನೂರು ಪಾಳೆಯಪಟ್ಟನ್ನು ತನ್ನ ಚಾಣಾಕ್ಷತನದಿಂದ ಈ ಪ್ರದೇಶವನ್ನು ಪಡೆದುಕೊಂಡು ಆಳ್ವಿಕೆ ನಡೆಸಿದನು.

ತನ್ನ ಅಣ್ಣನಾದ ಹಿರೇಕೆಂಗಹನುಮಪ್ಪನಾಯಕನನ್ನು ರಣಾದುಲ್ಲಾಖಾನ್ ಬಿಜಾಪುರಕ್ಕೆ ಕರೆದುಕೊಂಡುಹೋದ ವಿಷಯ ತಿಳಿದು ತಾನೇ ಸ್ವತಃ ವಿಜಾಪುರಕ್ಕೆ ಹೋಗಿ ಸಮಯ ಸಾಧಿಸಿ ಅಲ್ಲಿ ಸುಲ್ತಾನನು ಏರ್ಪಡಿಸಿದ್ದ ಹುಲಿಯ ಕಾಳಗದಲ್ಲಿ ಭಾಗವಹಿಸಿ ಹುಲಿಯೊಂದಿಗೆ ಹೋರಾಡಿ ಅದನ್ನು ಕೊಂದುಹಾಕಿದನು. ಇದರಿಂದ ಸುಲ್ತಾನನ ಮೆಚ್ಚುಗೆ ಗಳಿಸಿದನು.[೫೨] ಬಿಜಾಪುರದ ಸುಲ್ತಾನ ಇವನ್ನು ಮೆಚ್ಚಿ "ಸರ್ಜಾ" ಎಂಬ ಬಿರುದನ್ನು ನೀಡಿದನು. ಅಲ್ಲದೆ ಇವನನ್ನು ಸನ್ಮಾನಿಸಿದನು. ಸಂತೆಬೆನ್ನೂರು ಬಸವಾಪಟ್ಟಣದ ಪ್ರಾಂತ್ಯವನ್ನು ಮರಳಿ ನೀಡಿದ್ದಲ್ಲದೆ ತನ್ನ ಅಣ್ಣನನ್ನು ಬಿಡಿಸಿಕೊಂಡು ಸಂತೆಬೆನ್ನೂರಿಗೆ ಆಗಮಿಸಿದನು.

ಹೀಗೆ ತನ್ನ ಅಣ್ಣನನ್ನು ಬಿಡಿಸಿಕೊಂಡು ಸಂತೆಬೆನ್ನೂರಿಗೆ ಆಗಮಿಸಿದ ಸರ್ಜಾ ಹನುಮಪ್ಪನಾಯಕರಿಗೆ ಅಲ್ಲೊಂದು ಆಘಾತ ಕಾದಿತ್ತು. ತಮ್ಮ ಕುಲದೇವರಾದ ಶ್ರೀರಾಮಚಂದ್ರ ದೇವಾಲಯವಿದ್ದ ಜಾಗದಲ್ಲಿ ಮಸೀದಿ ನಿರ್ಮಾಣವಾಗಿರುವುದನ್ನು ಕಂಡು ಕೋಪೋದ್ರಿಕ್ತನಾದನು. ಆ ಮಸೀದಿಯಲ್ಲಿ ಹಂದಿಯನ್ನು ಕೊಲ್ಲಿಸಿ ಅಪವಿತ್ರಗೊಳಿಸಿದನು. ಅದರಲ್ಲಿ ನಿರ್ಮಾಣ ಮಾಡಿದ್ದ ಮಿನಾರಗಳನ್ನು ಕೆಡವಿ ಹಾಕಿಸಿದನು. ಪ್ರಾರ್ಥನೆ ಮಾಡದಂತೆ ಅಪವಿತ್ರಗೊಳಿಸಿದನು. ಈ ಕಾರ್ಯಗಳಿಂದ ಅವನಿಗೆ ಪುಂಡಹನುಮಪ್ಪನಾಯಕನೆಂತಲೂ ಹೆಸರು ಬಂತು.

ಅಣ್ಣನಿಂದ ಅಧಿಕಾರವನ್ನು ಪಡೆದ ಸರ್ಜಾಹನುಮಪ್ಪನಾಯಕನು ಬಸವಾಪಟ್ಟಣ, ಸಂತೆಬೆನ್ನೂರಲ್ಲಿ ಆಡಳಿತವನ್ನು ನಡೆಸಲು ಇಚ್ಛಿಸದೆ, ತನ್ನ ರಾಜಧಾನಿಯನ್ನು ಬಸವಾ ಪಟ್ಟಣದಿಂದ ತರೀಕೆರೆಗೆ ಬದಲಾವಣೆ ಮಾಡಿದನು. ತಮ್ಮ ಆಡಳಿತ ಕೇಂದ್ರವನ್ನು ತರೀಕೆರೆಗೆ ಬದಲಾಯಿಸಿದರೂ ಇವನ ನಂತರ ಬಂದ ಅರಸರು ತಮ್ಮನ್ನು ಸಂತೆಬೆನ್ನೂರು ನಾಯಕರೆಂದೆ ಶಾಸನಗಳಲ್ಲಿ ಉಲ್ಲೇಖಿಸಿದ್ದಾರೆ.[೫೩] ಇವನ ನಂತರ ಮುಂದೆ ಆಡಳಿತ ನಡೆಸಿದ ಎಲ್ಲಾ ಅರಸರು ತಮ್ಮ ಹೆಸರೊಂದಿಗೆ ಸರ್ಜಾ ಎಂಬ ಹೆಸರನ್ನು ಉಳಿಸಿರುವುದು ಕಂಡುಬರುತ್ತದೆ. ಸರ್ಜಾ ಕೆಂಗಹನುಮಪ್ಪನಾಯಕನು ಈ ವಂಶದ ಅತ್ಯಂತ ಬಲಿಷ್ಠ ಅರಸನಾಗಿದ್ದನು. ಅತ್ಯಂತ ಸುಸಜ್ಜಿತವಾದ ಸೇನೆಯನ್ನು ಹೊಂದಿದ್ದನು. ತಮ್ಮ ಸಾಮ್ರಾಜ್ಯವನ್ನು ಸ್ವಲ್ಪ ವಿಸ್ತರಿಸಿದ್ದರು.

ತರೀಕೆರೆಯಿಂದ ಆಡಳಿತವನ್ನು ಪ್ರಾರಂಭಿಸಿ ತರೀಕೆರೆ ಪಟ್ಟಣವನ್ನು ವಿಸ್ತರಿಸಿದನು. ಅಲ್ಲಿ ಇರುವ ಕೋಟೆಯನ್ನು ಬಲಪಡಿಸಿದ ಆ ಪ್ರದೇಶದಲ್ಲಿ ದೇವಸ್ಥಾನ ಅರಮನೆಯನ್ನು ಕಟ್ಟಿಸಿದ. ಬಾಬಾಬುಡನ್‌ಗಿರಿ ತಪ್ಪಲಲ್ಲಿ ಕಾಮನದುರ್ಗ, ಹನುಮಯ್ಯನಗಿರಿ ಮುಂತಾದವುಗಳನ್ನು ಜೀರ್ಣೋದ್ಧಾರ ಮಾಡಿಸಿದ.[೫೪] ಈ ಪ್ರದೇಶವನ್ನು ಪ್ರಮುಖ ಸೇನಾಕೇಂದ್ರವನ್ನಾಗಿ ಮಾಡಿಕೊಂಡನು. ಅಕ್ಕಪಕ್ಕದವರಿಂದ ದಾಳಿಯನ್ನು ತಪ್ಪಿಸಲು ಸುಸಜ್ಜಿತವಾದ ಸೈನ್ಯವನ್ನು ಇಟ್ಟುಕೊಂಡಿದ್ದ. ಕೆರೆಗೂಡಿನ ತಾಮ್ರ ಶಾಸನದಲ್ಲಿ[೫೫] ಸರ್ಜಾಹನುಮಪ್ಪ ನಾಯಕನು ತನ್ನನ್ನು ವಿಜಯನಗರದ ಅರಸು ವೀರಪ್ರತಾಪ ಶ್ರೀರಂಗರಾಯ ಭುಜಾದಂಡಾಧಿಪತಿ ಎಂದು ಕರೆದುಕೊಂಡಿದ್ದಾನೆ. ಈ ಶಾಸನದಲ್ಲಿ

ಬಾಲಾಜಿ ಪಂಡಿತ ಎಂಬುವವರಿಗೆ ಕಾತೂರು ಸೀಮೆಯ ಮಾಚೇನಹಳ್ಳಿ ಎಂಬ ಗ್ರಾಮವನ್ನು ದಾನವಾಗಿ ನೀಡಿದ ವಿವರಗಳು ಉಲ್ಲೇಖಗೊಂಡಿವೆ.

ಕೂಡ್ಲಿ ಶೃಂಗೇರಿ ಮಠದ ಶ್ರೀ ವಿದ್ಯಾರಣ್ಯ ಭಾರತಿ ಸ್ವಾಮಿಗಳಿಗೆ ಸರ್ಜಾಹನುಮಪ್ಪ ನಾಯಕ ಒಟ್ಟು ಆರು ಶಾಸನಗಳನ್ನು ಬರೆಸಿಕೊಟ್ಟಿದ್ದು ಸರ್ಜಾಹನುಮಪ್ಪನಾಯಕನು ಶೆಟ್ಟಿಹಳ್ಳಿ, ಸನ್ಯಾಸಿಕೊಪ್ಪ, ಮಲವನಗೊಪ್ಪ, ದಂದೂರು ಜಾವಳ್ಳ, ಹಾಗೂ ಹಂಗರಹಾಳು ಗ್ರಾಮಗಳನ್ನು ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಲೆಂದು, ತಮ್ಮ ಹಿರಿಯರು ಕಟ್ಟಿಸಿಕೊಟ್ಟ ಶೃಂಗೇರಿ ಮಠದ ಧರ್ಮಕ್ಕೆ ವಿವಿಧ ದಾರ್ಮಿಕ ಕಾರ್ಯಗಳಿಗೆ ದತ್ತಿ ಬಿಟ್ಟಿರುವ ವಿಚಾರ ತಿಳಿಯುತ್ತದೆ.[೫೬]

ಹುಟ್ಟು ಯೋಧನಾದ ಸರ್ಜಾಕೆಂಗಹನುಮಪ್ಪನಾಯಕ ದೈವಭಕ್ತನೂ ದಾನಶೀಲನೂ ಆಗಿದ್ದನು. ಈತನು ಕವಿಗಳಿಗೆ, ಸಾಹಿತಿಗಳಿಗೆ ಪ್ರೋತ್ಸಾಹ ನೀಡುತ್ತಿದ್ದನು. ಈತನ ಕಾಲದಲ್ಲಿ ಕೃಷ್ಣಶರ್ಮ ಎಂಬ ಕವಿ ಶ್ರೀ ಸರ್ಜಾಹನುಮೇಂದ್ರಯ ಯಶೋವಿಲಾಸಂ ಎಂಬ ಸರ್ಜಾಕೆಂಗಹನುಮಪ್ಪನಾಯಕನನ್ನು ಕುರಿತು ಕಾವ್ಯ ರಚಿಸಿದನು.[೫೭] ಧೀರ್ಘಕಾಲ ಆಳ್ವಿಕೆ ನಡೆಸಿದ ಈ ನಾಯಕನಿಗೆ ರಾಮಪ್ಪನಾಯಕ, ತಿಮ್ಮಪ್ಪನಾಯಕ ಎಂಬ ಸಹೋದರರು ಇದ್ದರು. ಇವರು ಯುದ್ಧದಲ್ಲಿ ಮರಣ ಹೊಂದಿದ್ದರು. ಈತನಿಗೆ ಸೀತಾರಾಮಪ್ಪ ಮತ್ತು ಬಸಪ್ಪನಾಯಕ ಎಂಬ ಪುತ್ರರು, ಗಂಗಾಬಿಕೆ ಎಂಬ ಪುತ್ರಿಯೂ ಇದ್ದಳು. ಇವಳನ್ನು ಚಿತ್ರದುರ್ಗದ ಚಿಕ್ಕಣ್ಣನಾಯಕನಿಗೆ ಮದುವೆ ಮಾಡಿಕೊಡಬೇಕೆಂದು ಸಂದೇಶ ಕಳುಹಿಸಿದನು. ಆದರೆ ಚಿಕ್ಕಣನಾಯಕನು ಸರ್ಜಾಕೆಂಗಾ ಹನುಮಪ್ಪನಾಯಕನಿಗೆ ಅವಮಾನವಾಗುವಂತೆ ನಡೆದುಕೊಂಡು ಇದರಿಂದ ಕೋಪೋದ್ರಿಕ್ತನಾದ ಸರ್ಜಾನಾಯಕ ಅವನ ಮೇಲೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಿದ. ಇದನ್ನರಿತ ಚಿಕ್ಕಣ್ಣ ದಾರಿಯಲ್ಲಿ ಚಿಕ್ಕಯಗಟಿ, ಯಲಂಬಳಸೆ, ಚೌಳ ಹಿರಿಯೂರು ಮುಂತಾದ ಗ್ರಾಮಗಳನ್ನು ವಶಪಡಿಸಿಕೊಂಡನು. ಇದನ್ನರಿತ ಹನುಮಪ್ಪನಾಯಕ ಚಿಕ್ಕಣ್ಣ ನಾಯಕನ ಮೇಲೆ ಯುದ್ಧ ಮಾಡಲು ಸನ್ನದ್ಧರಾದರು. ಇಕ್ಕೇರಿಯ ನಾಯಕರು ಮಧ್ಯೆ ಪ್ರವೇಶಿಸಿ ಇಬ್ಬರಿಗೂ ಸಮಾಧಾನ ಮಾಡಿದರು. ಮುಂದೆ ಚಿಕ್ಕಣ್ಣನಾಯಕನು ಹನುಮಾಂಬೆಯನ್ನು ಮದುವೆ ಮಾಡಿಕೊಂಡನು. ಇದರಿಂದ ಇವರಿಬ್ಬರಲ್ಲಿ ಇದ್ದ ದ್ವೇಷ, ಅಸೂಯೆ, ಅವಿಶ್ವಾಸದಿಂದ ವೈವಾಹಿಕ ಬಾಂಧವ್ಯ ಕೊನೆಗೊಂಡಿತು.

ಈ ನಾಯಕರು ತರೀಕೆರೆ ಪ್ರಾಂತ್ಯದಿಂದ ಆಳ್ವಿಕೆ ಆರಂಭಿಸಿದ್ದರಿಂದ ಸಂತೆಬೆನ್ನೂರನ್ನು ಬಿಜಾಪುರ ಸುಲ್ತಾನರು, ಚಿತ್ರದುರ್ಗದ ಪಾಳೆಯಗಾರರು, ಕೆಳದಿ ನಾಯಕರು, ಮೊಘಲರು, ಮರಾಠರು, ಹೈದರ್ ಮತ್ತು ಟಿಪ್ಪು ಸುಲ್ತಾನರು, ಮೈಸೂರು ಅರಸರು ಆಳ್ವಿಕೆ ನಡೆಸಿದರು. ತರೀಕೆರೆ ಮೈಸೂರು ಪ್ರಾಂತ್ಯದೊಂದಿಗೆ ವಿಲೀನವಾಯಿತು. ಅತ್ಯಂತ ಸಮರ್ಥನೂ ಮಹತ್ವಾಕಾಂಕ್ಷಿಯೂ ದೈವಭಕ್ತನೂ ಆದ ಸರ್ಜಾಹನುಮಪ್ಪನಾಯಕ ಅಷ್ಟೇ ದುರದೃಷ್ಟಶಾಲಿ ಆಗಿದ್ದನು. ತನ್ನ ಆಳ್ವಿಕೆಯ ಕೊನೆಯ ಕಾಲದಲ್ಲಿ ಸಂತೆಬೆನ್ನೂರು ಪಾಳೆಯಪಟ್ಟನ್ನು ಕಳೆದುಕೊಂಡು

ತರೀಕೆರೆಗೆ ಬಂದು ಅಧಿಕಾರ ನಡೆಸಿದ್ದನು. ಕೊನೆಯ ಕಾಲದಲ್ಲಿ ಹಿತಶತ್ರುಗಳ ಕಾಟದಿಂದ ಮನೋವಿಕಲ್ಪವಾಗಿ ತನ್ನ ಬಂಧುಗಳಿಗೆ, ಅಧಿಕಾರಿಗಳಿಗೆ, ಸೇವಕರಿಗೆ ನಾನಾ ಬಗೆಯ ಕಿರುಕುಳಗಳನ್ನು ಕೊಡುತ್ತಿದ್ದನು. ಈ ರೀತಿಯ ವರ್ತನೆಯಿಂದ ರಾಜ್ಯದಲ್ಲಿ ಅಶಾಂತಿ ಉಂಟಾಯಿತು. ತನ್ನ ಪತ್ನಿ ಗಂಗಾಜಿಕೆಯನ್ನು ನಾನಾ ರೀತಿಯಲ್ಲಿ ಚಿತ್ರಹಿಂಸೆ ನೀಡಿ ಅಮಾನುಷವಾಗಿ ಕೊಂದುಹಾಕಿದನು. ಇದಾದ ಕೆಲವೇ ದಿನಗಳಲ್ಲಿ ಗೃಹಬಂಧನದಲ್ಲಿದ್ದ ಸರ್ಜಾಹನುಮಪ್ಪನಾಯಕನಿಗೆ ಮತಿವಿಕಲ್ಪವೂ ತೀರ ಉಲ್ಬಣವಾಗಿ ಮರಣ ಹೊಂದಿದನು.

ಸರ್ಜಾಹನುಮಪ್ಪನಾಯಕನಿಗೆ ಬಾಲಗಿರಿ ನಾಯಕ ಎಂಬ ಸಹೋದರನಿದ್ದನು ಎಂಬುದು ಶಾಸನದಿಂದ ತಿಳಿಯುತ್ತದೆ. ಕ್ರಿ.ಶ. ೧೬೫೫ರ ತರಿಕೆರೆ ಶಾಸನದಲ್ಲಿ[೫೮] ಕೆಂಗಪ್ಪನಾಯಕನ ಪುತ್ರರಾದ ಬಾಲಗಿರಿನಾಯಕರು ಭಾರದ್ವಾಜ ಗೋತ್ರದ ಕೊನೆರಿ ಭಟ್ಟರಿಗೆ ಕೊಟ್ಟು ದಾನಪಟ್ಟ ಶಿಥಿಲವಾದ ಕಾರಣ ಅವರ ವಂಶದ ಜಕ್ಕಭಟ್ಟರಿಗೆ ಮರಳಿ ಕಲ್ಲತ್ತಿ ವೀರಭದ್ರ ಸನ್ನಿಧಿಯಲ್ಲಿ ಹೀರೆ ಕಾತೂರು, ಹಾದಿಕೆರೆ, ಕಂಟಿನಮಡು, ಅಮೃತಪುರ, ದೋರನಾಳು, ತರೀಕೆರೆ, ಚಿಕ್ಕಕಾತೂರು, ದುಗ್ಗನಹಾಳು, ಮತ್ತಿತರ ಹತ್ತು ಸ್ಥಳಕ್ಕೆ ಸಲ್ಲುವ ಗದ್ದೆ ತೋಟ ಹೊಲ ಮನೆಗಳನ್ನು ಸರ್ಜಾ ಹನುಮಪ್ಪನಾಯಕ ಮರಳಿ ಬರೆದು ಕೊಟ್ಟಿರುವ ವಿಷಯ ಉಲ್ಲೇಖವಾಗಿದೆ.

ಸರ್ಜಾಹನುಮಪ್ಪನಾಯಕನು ಮೂಲ ಶೃಂಗೇರಿ ಮಠಕ್ಕೆ ದಾನಧರ್ಮಗಳು ಕೊಟ್ಟಿರುವ ವಿಷಯ ಉಲ್ಲೇಖವಿದೆ. ಕ್ರಿ.ಶ. ೧೬೫೧ರ ಶೃಂಗೇರಿ ಮಠದ ಕಡತದಲ್ಲಿ[೫೯] ಸ್ವಾಮಿಗಳಿಗೆ ಪತ್ರವನ್ನು ಬರೆದುಕೊಟ್ಟನು. ಕ್ರಿ.ಶ. ೧೬೪೪ರ ಕೂಡ್ಲಿ ಶೃಂಗೇರಿ ಮಠದ ಶಾಸನದಲ್ಲಿ[೬೦] ಶ್ರೀವಿದ್ಯಾರಣ್ಯ ಭಾರತೀ ಸ್ವಾಮಿಗಳಿಗೆ ಯಡತೊರೆ ಸೀಮೆಯ ಶೆಟ್ಟಿಹಳ್ಳಿ ಗ್ರಾಮವನ್ನು ದಾನವಾಗಿ ನೀಡುತ್ತಾನೆ. ಹಾಗೆಯೇ ಕೂಡ್ಲಿ ಶೃಂಗೇರಿ ಮಠದ ಮತ್ತೊಂದು ಶಾಸನದಲ್ಲಿ ಸನ್ಯಾಸಿಕೊಪ್ಪವನ್ನು ದಾನವಾಗಿ ನೀಡಿರುವುದು ಕಂಡುಬರುತ್ತದೆ.

ಹೀಗೆ ಸರ್ಜಾಹನುಮಪ್ಪನಾಯಕ ಮಠ ಮಾನ್ಯಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿರುವುದು ದಾಖಲೆಗಳಲ್ಲಿ ಉಲ್ಲೇಖಗೊಂಡಿದೆ. ಇವರ ನಂತರ ತನ್ನ ಮಗನಾದ ಸರ್ಜಾ ಸೀತಾರಾಮಪ್ಪನಾಯಕ ಅಧಿಕಾರಕ್ಕೆ ಬಂದನು.

**ಸರ್ಜಾಸೀತಾರಾಮಪ್ಪನಾಯಕ**

ಸರ್ಜಾಹನುಮಪ್ಪನಾಯಕನ ನಂತರ ಆತನ ಮಗ ಸೀತಾರಾಮಪ್ಪನಾಯಕ ಸಂತೆಬೆನ್ನೂರು ಪಾಳೆಯಪಟ್ಟಿಗೆ ಅರಸನಾಗುತ್ತಾನೆ. ಇವನ ಕಾಲದಲ್ಲಿ ಪ್ರಮುಖವಾದ ರಾಜಕೀಯ ಘಟನೆಗಳು ನಡೆದಿರುವುದಿಲ್ಲ. ಸೀತಾರಾಮಪ್ಪನಾಯಕನಿಗೂ ಕೆಳದಿಯ ಅರಸ ಸೋಮಶೇಖರ ನಾಯಕನಿಗೆ ಸ್ನೇಹಸಂಬಂಧ ಅನ್ಯೋನ್ಯವಾಗಿತ್ತು. ತನ್ನ ಪಾಳೆಯಪಟ್ಟಿಗೆ ಅಪತ್ತು ಬಂದಾಗ ಕೆಳದಿಯ ನಾಯಕ ಈತನಿಗೆ ಸಹಾಯ ಮಾಡುತ್ತಿದ್ದನು. ಈ ನಾಯಕ ತನ್ನ ಪೂರ್ವಜರಂತೆ ಗ್ರಾಮಗಳನ್ನು ದಾನವಾಗಿ ಕೊಟ್ಟಿರುವುದು ಕಂಡುಬರುತ್ತದೆ.

ಕ್ರಿ.ಶ. ೧೬೬೦ರ ಮಾಗಾಣಿ ಬೆಂಡುಗ ಗ್ರಾಮದ ಶಾಸನದಂತೆ[೬೧] ಈತನು ಎಲೆಗೌಡ ಎಂಬುವನಿಗೆ ಬೆಂಡುಗದ ಗದ್ದೆಯನ್ನು ದಾನವಾಗಿ ಕೊಟ್ಟಿರುವುದು ಕಂಡುಬರುತ್ತದೆ. ತರೀಕೆರೆ ಶಾಸನದಂತೆ ಹುಲಿತಿಮ್ಮಾಪುರ ಗ್ರಾಮವನ್ನು ರಾಮನದುರ್ಗ ಚೆನ್ನಿಗರಾಯ ಸ್ವಾಮಿಗೆ ದಾನ ಕೊಟ್ಟದ್ದಾಗಿ ತಿಳಿದುಬರುತ್ತದೆ. ಅಲ್ಲದೆ ಕೂಡ್ಲಿ ಶೃಂಗೇರಿ ಮಠದ ಭಾರತೀಸ್ವಾಮಿಗಳಿಗೆ ದೇವಲಾಪುರ ಹಾಗೂ ದಂದೂರು ಗ್ರಾಮವನ್ನು ದಾನಕೊಟ್ಟದ್ದು ತಿಳಿಸುತ್ತದೆ.[೬೨] ಕ್ರಿ.ಶ. ೧೬೮೧ರ ತರೀಕೆರೆಯ ತಾಮ್ರ ಶಾಸನದಲ್ಲಿ ಸಂತೆಬೆನ್ನೂರು ನಾಯಕರ ವಂಶದ ಬಗ್ಗೆ ನಿಖರವಾದ ಮಾಹಿತಿ ದೊರೆಯುತ್ತದೆ. ಶಾಸನದಲ್ಲಿರುವ ಇವರ ವಂಶಾವಳಿಯನ್ನು ಗಮನಿಸಿದರೆ ಇಮ್ಮಡಿ ಹನುಮಪ್ಪ ನಾಯಕನ ಪುತ್ರ ನಿತ್ಯಮಧುವಣಿಗ ಹನುಮಪ್ಪನಾಯಕ ಈತನ ಪುತ್ರ ಸರ್ಜಾಹನುಮಪ್ಪನಾಯಕ ಈತನ ಮಗ ಸೀತಾರಾಮಪ್ಪನಾಯಕ ಎಂದು ತಿಳಿಸುತ್ತದೆ.[೬೩] ಅದೇ ಶಾಸನದಲ್ಲಿ ತೀರ್ಥರಾಜಪುರದಲ್ಲಿ  ಅಂದರೆ ಈಗಿನ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ಸುರಾಲಯವನ್ನು ಕಟ್ಟಿಸಿ ಅಲ್ಲಿ ಈ ಶ್ರೀ ವೆಂಕಟೇಶ್ವರ ಸ್ವಾಮಿ ದೇವರ ಪ್ರತಿಷ್ಠಾಪನೆ ಮಾಡಿ ಅದಕ್ಕೆ ಹಿರೇಕಾತೂರು ಗ್ರಾಮವನ್ನು ದಾನ ಕೊಟ್ಟ ವಿಚಾರವಿದೆ.[೬೪] ಈ ಶಾಸನದಂತೆ ಸಂತೆಬೆನ್ನೂರು ನಾಯಕರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯವರಿಗೆ ಆಡಳಿತ ನಡೆಸಿದ ವಿವರಗಳು ದಾಖಲೆಯಾಗಿದೆ.

ಹೀಗೆ ಈತನ ಕಾಲದಲ್ಲಿ ಹಲವು ದಾನಧರ್ಮಗಳು ನಡೆದವು ಎಂದು ತಿಳಿಯಬಹುದು. ಧರ್ಮಪಾಲಕನೂ ಶಕ್ತಿಶಾಲಿಯೂ ಆಗಿದ್ದ ಸೀತಾರಾಮಪ್ಪನಾಯಕನ ಕಾಲದಲ್ಲಿ ಯಾವುದೇ ಯುದ್ಧಗಳು ನಡೆದಿರುವುದಿಲ್ಲ ಎಂದು ಹೇಳಬಹುದು. ಈತನ ನಂತರ ಇವನ ಮಗ ಹುಚ್ಚ ಹನುಮಪ್ಪನಾಯಕ ಆಳ್ವಿಕೆಗೆ ಬರುತ್ತಾನೆ.

**ಹುಚ್ಚಹನುಮಪ್ಪನಾಯಕ**

ಸೀತಾರಾಮಪ್ಪನಾಯಕನ ನಂತರ ಇವರ ಮಗ ಹುಚ್ಚಹನುಮಪ್ಪನಾಯಕ ಅಧಿಕಾರಕ್ಕೆ ಬಂದನು. ಈತನು ಸುಮಾರು ೩೬ ವರ್ಷಗಳ ಕಾಲ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೬೮೭ರ ಕೂಡ್ಲಿ ಶೃಂಗೇರಿ ಮಠದ ಶಾಸನದಲ್ಲಿ ಮಠದ ನರಸಿಂಹಭಾರತೀ ಸ್ವಾಮಿಗಳಿಗೆ ದಂದೂರು, ಲಿಂಗಲಾಪುರ, ದೇವಲಾಪುರ ಗ್ರಾಮಗಳಿಂದ ದಾಹಾವರ್ತನೆಯ ಹಣವನ್ನು ಮಠದ ಧರ್ಮಕ್ಕಾಗಿ ಬಳಸುವುದೆಂದು ಕಟ್ಟೆ ಮಾಡಿಸಿದ್ದನ್ನು ತಿಳಿಸುತ್ತದೆ.[೬೫] ಶಂಕರ ಭಾರತಿ ಸ್ವಾಮಿಗಳಿಗೆ ದೇವಲಾಪುರ ಗ್ರಾಮದಿಂದ ಆರೇರ ಪಟ್ಟಿ ಮೊಗಲರ ಪಟ್ಟಿ ಮುಂತಾದವು ಬರೆಯಿಸಿಕೊಟ್ಟಿದನ್ನು ಶಾಸನದಿಂದ ತಿಳಿದುಬರುತ್ತದೆ. ಕೂಡ್ಲಿ ಶೃಂಗೇರಿ ಮಠದ ಇನ್ನೊಂದು ಶಾಸನದಲ್ಲಿ ಹುಚ್ಚಹನುಮಪ್ಪನಾಯಕನು ಶ್ರೀ ಅಮ್ಮನವರ ನವರಾತ್ರಿ ಉತ್ಸವಕ್ಕಾಗಿ ೫೦ ವರಹಗಳನ್ನು ಕೊಟ್ಟಿರುವ ವಿಷಯ ಉಲ್ಲೇಖವಾಗಿದೆ. ಇವನು ಸುಮಾರು ೩೬ ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಇವನಿಗೆ ಸಂಬಂಧಿಸಿದಂತೆ ಹೆಚ್ಚು ವಿಷಯಗಳು ತಿಳಿಯದೇ ಇರುವುದು ವಿಷಾದಕರ ಸಂಗತಿಯಾಗಿದೆ.

**ಪಟ್ಟಾಭಿರಾಮಪ್ಪನಾಯಕ**

ಹುಚ್ಚ ಹನುಮಪ್ಪನಾಯಕ ಉತ್ತಾರಾಧಿಕಾರಿಯಾಗಿ ಆತನ ಮಗನಾದ ಪಟ್ಟಾಭಿರಾಮಪ್ಪ ನಾಯಕ ಅಧಿಕಾರಕ್ಕೆ ಬಂದನು. ಈತನು ಕೇವಲ ೩ ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾಗಿ ತರೀಕೆರೆ ಕೈಫಿಯತ್ತು ತಿಳಿಸುತ್ತದೆ.

ಇವನ ಆಡಳಿತಾವಧಿಯಲ್ಲಿ ಸಿರಾದ ವಜೀರನಾದ ದುರ್ಗಾಕೂಲಿಖಾನನು ಕಪ್ಪ ಕಾಣಿಕೆ ವಸೂಲಿ ಮಾಡಲು ಭಾರಿ ಸೈನ್ಯದೊಂದಿಗೆ ಪಟ್ಟಾಭಿರಾಮಪ್ಪನಾಯಕನ ಮೇಲೆ ದಾಳಿ ಮಾಡಲು ಯತ್ನಿಸಿದರು. ಆದರೆ ನಾಯಕನು ಇಕ್ಕೇರಿಯ ಅರಸ ಸೋಮಶೇಖರನ ನೆರವು ಕೇಳುತ್ತಾನೆ. ಆತನು ಸೈನ್ಯವನ್ನು ಕಳುಹಿಸಿ ಪಟ್ಟಾಭಿರಾಮಪ್ಪನಾಯಕನಿಂದ ಸಲ್ಲುವ ಹಣವನ್ನು ತಾನೇ ಕೊಡುತ್ತೇನೆಂದು ವಾಗ್ದಾನ ಮಾಡಿ ದುರ್ಗಾಕೂಲಿಖಾನನ್ನು ಹಿಂದಕ್ಕೆ ಕಳುಹಿಸಿದನು. ಇನ್ನೊಂದು ಐತಿಹ್ಯದಂತೆ ಸೋಮಶೇಖರನಾಯಕನು ಸೋಲಿಸಿ ಹಿಮ್ಮೆಟ್ಟಿಸಿದ್ದಾಗಿ ತಿಳಿದುಬರುತ್ತದೆ. ಹಾಗೂ ಪಟ್ಟಾಭಿರಾಮಪ್ಪನಾಯಕನನ್ನು ಪಾಳೆಯಪಟ್ಟಿನಲ್ಲಿ ಮುಂದುವರಿಯಲು ಅನುಕೂಲ ಮಾಡಿ ಕೊಟ್ಟನೆಂದು ತಿಳಿದುಬರುತ್ತದೆ.[೬೬]

**ಸರ್ಜಾನಿತ್ಯಮದುವಣಿಗ ಹನುಮಪ್ಪನಾಯಕ**

ಪಟ್ಟಾಭಿರಾಮಪ್ಪನಾಯಕನ ನಂತರ ಆತನ ಉತ್ತರಾಧಿಕಾರಿಯಾಗಿ ತನ್ನ ಮಗ ಅಧಿಕಾರಕ್ಕೆ ಬಂದನು. ಈತನು ಸುಮಾರು ೪೬ ವರ್ಷಗಳ ಕಾಲ ಸುದೀರ್ಘವಾದ ಆಳ್ವಿಕೆ ನಡೆಸಿರುತ್ತಾನೆ. ಇವನ ಆಡಳಿತಾವಧಿಯಲ್ಲಿ ನವಾಬ್ ಹೈದರಾಲಿ ಇವನ ವಶದಲ್ಲಿ ಉಚ್ಚಂಗಿ, ರಂಗಯ್ಯನಗಿರಿ, ಹನುಮಗಿರಿಗಳನ್ನು ವಶಪಡಿಸಿಕೊಂಡನು.[೬೭] ಹೈದರಾಲಿ ವಶಪಡಿಸಿಕೊಂಡ ಮೇಲೆ ಸರ್ಜಾ ನಿತ್ಯಮದುವಣಿಗ ಹನುಮಪ್ಪನಾಯಕನು ಕೇವಲ ತರೀಕೆರೆ, ಯುಗಟೆಯೆಂಬ ಎರಡು ತಾಲ್ಲೂಕುಗಳ ಆಡಳಿತವನ್ನು ಮಾತ್ರ ನಡೆಸಬೇಕಾಯಿತು.

**ಸರ್ಜಾಇಮ್ಮಡಿಹನುಮಪ್ಪನಾಯಕ**

ಸರ್ಜಾಸೀತಾರಮಪ್ಪನಾಯಕನ ನಂತರ ಆತನ ಮಗ ೨ನೇ ಸರ್ಜಾಹನುಮಪ್ಪ ನಾಯಕ ಸಂತೆಬೆನ್ನೂರು ಪಾಳೆಯಪಟ್ಟಿನ ಆಳ್ವಿಕೆಗೆ ಬಂದನು. ಈತನು ಕೇವಲ ೨ ವರ್ಷಗಳ ಕಾಲ ಮಾತ್ರ ಆಳ್ವಿಕೆ ನಡೆಸಿದನು. ಇವರ ಪತ್ನಿ ಸುಬ್ಬಮ್ಮ ನಾಗತಿ. ಇವರಿಗೆ ಕೃಷ್ಣಪ್ಪನಾಯಕ ಮತ್ತು ಸರ್ಜಾಹನುಮಪ್ಪನಾಯಕ ಎಂಬ ಇಬ್ಬರು ಮಕ್ಕಳು ಇದ್ದರು.

ಇವನ ಕಾಲದಲ್ಲಿ ಹೈದರಾಲಿ ದಾಳಿ ಮಾಡಿ ಜಯವನ್ನು ಸಾಧಿಸಿ ೧೮ ಸಾವಿರ ಪೊಗದಿ ಹಣವನ್ನು ಕೊಡಲು ನಿರ್ಣಯಿಸಿ ಮರಳಿ ರಾಜ್ಯವನ್ನು ಬಿಟ್ಟುಕೊಟ್ಟನು. ಆದರೆ ಸರ್ಜಾಹನುಮಪ್ಪನಾಯಕನು ಇದನ್ನೂ ಸಹ ಕೊಡಲು ಆಗದೆ ಇದ್ದುದರಿಂದ ಹೈದರಾಲಿ ಸಂತೆಬೆನ್ನೂರು ರಾಜ್ಯವನ್ನು ತನ್ನ ವಶಕ್ಕೆ ಪಡೆದುಕೊಂಡನು. ಒಂದು ಸಾವಿರ ವರಹದ ಸೀಮೆಯನ್ನು ಜಹಗೀರ್ ಆಗಿ ಕೊಟ್ಟು ಮಂಜರಾಬಾದು ಪ್ರಾಂತ್ಯ ಆಳಲು ಕಳುಹಿಸಿದನು.

ಇವನು ತರೀಕೆರಿಯಿಂದ ಮಂಜರಾಬಾದನ್ನು ಆಳುತ್ತಿದ್ದಾಗ ಹೈದರನಿಗೆ ಸಹಾಯ ಮಾಡಲು ಕೊನೆಯ ಮತ್ತೂರು ಯುದ್ಧಕ್ಕೆ ಹೋದಾಗ ಅಲ್ಲಿ ನಿಧನನಾದನೆಂದು ತಿಳಿದುಬರುತ್ತದೆ.[೧೮] ಇವನ ಮರಣದ ನಂತರ ಇವನ ಮಗ ಸರ್ಜಾಕೃಷ್ಣಪ್ಪ ನಾಯಕನು ಅಧಿಕಾರಕ್ಕೆ ಬಂದನು.

ಕೃಷ್ಣಪ್ಪನಾಯಕನು ಆಳ್ವಿಕೆಗೆ ಬಂದ ನಂತರ ಸಂತೆಬೆನ್ನೂರು ಪಾಳೆಯಪಟ್ಟನ್ನು ಮರಳಿ ಪಡೆಯಬೇಕೆಂಬ ಆಸೆಯಿಂದ ಶ್ರೀರಂಗಪಟ್ಟಣದವರೊಡನೆ ಹೋರಾಡಿ ಸೋತನು. ಹಾಗೂ ಟಿಪ್ಪುಸುಲ್ತಾನ್‌ನಿಂದ ೧೭೮೮ರಲ್ಲಿ ಬಂಧಿಸಲ್ಪಟ್ಟನು. ಇವನು ತನ್ನ ೪೧ನೇ ವಯಸ್ಸಿನಲ್ಲಿ ನಿಧನವಾದನು. ಕೃಷ್ಣಪ್ಪನಾಯಕನ ಮರಣಾನಂತರ ಆತನ ಮಗನಾದ ಸರ್ಜಾರಂಗಪ್ಪ ನಾಯಕನಿಗೆ ಸಂತೆಬೆನ್ನೂರು ಪಾಳೆಯಪಟ್ಟಿನ ಅಧಿಕಾರವನ್ನು ವಹಿಸಿದನು.[೧೯]

**ಸರ್ಜಾರಂಗಪ್ಪನಾಯಕ**

ಸರ್ಜಾರಂಗಪ್ಪನಾಯಕ ಸಂತೆಬೆನ್ನೂರು ಪಾಳೆಯಗಾರ ಚರಿತ್ರೆಯಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದಾನೆ. ಇವನಿಗೆ ಸೀತಮ್ಮನಾಗತಿ ಎಂಬ ಸಹೋದರಿ ಇದ್ದು, ಅವಳನ್ನು ರಘುನಾಥನಾಯಕ ಎಂಬುವನಿಗೆ ವಿವಾಹ ಮಾಡಿಕೊಡಲಾಯಿತು. ರಘುನಾಥನಾಯಕನು ಸಂತೆಬೆನ್ನೂರು ಸೀಮೆಗೆ ಒಳಪಟ್ಟ ಕೆಲ ಪ್ರಾಂತ್ಯದ ಆಡಳಿತ ನಡೆಸುತ್ತಿದ್ದುದಾಗಿ ತಿಳಿದುಬರುತ್ತದೆ. ಸರ್ಜಾರಂಗಪ್ಪನಾಯಕರಿಗೆ ತಿಮ್ಮಮ್ಮನಾಗತಿ ಎಂಬುವಳೊಡನೆ ವಿವಾಹವಾಗಿತ್ತು. ಇದು ಅಲ್ಲದೆ ಇವನಿಗೆ ಇನ್ನೂ ಇಬ್ಬರು ಪತ್ನಿಯರಿದ್ದರು ಎಂದು ತಿಳಿದುಬರುತ್ತದೆ. ಪಾಳೆಯಪಟ್ಟಿನ ಅಧಿಕಾರ ವಹಿಸಿಕೊಂಡ ಮೇಲೆ ಟಿಪ್ಪುಸುಲ್ತಾನನ ಪರವಾಗಿ ಬ್ರಿಟಿಷರ ವಿರುದ್ಧ ಮೂರು ಹಾಗೂ ನಾಲ್ಕನೇ ಮೈಸೂರು ಯುದ್ಧದಲ್ಲಿ ಭಾಗವಹಿಸಿದ್ದನು. ೪ನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣವಾಯಿತು. ಟಿಪ್ಪುವಿನ ಜೊತೆಗಿದ್ದ ಸರ್ಜಾರಂಗಪ್ಪನಾಯಕನನ್ನು ಕಾರಾಗೃಹ ಬಂಧನದಲ್ಲಿಟ್ಟರು. ಈತನು ಹೇಗೋ ತಪ್ಪಿಕೊಂಡು ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಯ ವಿರುದ್ಧ ದೊಡ್ಡ ಬಂಡಾಯವನ್ನೇ ಸಂಘಟಿಸಿದನು. ಇದು ರಂಗಪ್ಪನಾಯಕರ ಅಡಾವುಡಿ[೨೦] ಬ್ರಿಟಿಷರು ಈ ದಂಗೆಯನ್ನು ಅಡಗಿಸಿ ಸರ್ಜಾರಂಗಪ್ಪನಾಯಕನನ್ನು ಬಂಧಿಸಿದರು. ಇದೇ ಸಮಯದಲ್ಲಿ ೧೮೩೦ರಲ್ಲಿ ಬೂದಿಬಸಪ್ಪ ಕಂಪನಿ ವಿರುದ್ಧ ಬಂಡಾಯ ಎದ್ದು ಜನರ ಬೆಂಬಲವನ್ನು ಗಳಿಸಿದನು ಹಾಗೂ ಸರ್ಕಾರಕ್ಕೆ ಕಂದಾಯ ಕೊಡದಂತೆ ಜನರಿಗೆ ತಿಳಿಸಿ ತಾನೆ ಕಂದಾಯವನ್ನು ವಸೂಲಿ ಮಾಡುತ್ತಿದ್ದನು. ಈ ಸಂದರ್ಭದಲ್ಲಿ ಸರ್ಜಾರಂಗಪ್ಪನಾಯಕ ಸೆರಮನೆಯಿಂದ ತಪ್ಪಿಸಿಕೊಂಡು ಬೂದಿಬಸಪ್ಪನ ಜೊತೆ ಸೇರಿಕೊಂಡನು. ಮೈಸೂರಿನಲ್ಲಿದ್ದ ೧೫೦೦ ಮಂದಿ ಬೇಡರ ಪಡೆ ಕಂದಾಚಾರದ ಸಿಪಾಯಿಗಳನ್ನು ತನ್ನ ಕಡೆ ಮಾಡಿಕೊಳ್ಳುವಲ್ಲಿ ರಂಗಪ್ಪನಾಯಕ ಯಶಸ್ವಿಯಾದನು. ಇವನಿಗೆ ಸಹಾಯಕನಾಗಿ ಇವನ ಮಗ ಸರ್ಜಾ ಹನುಮಪ್ಪನಾಯಕನು ಬೆಂಗಾವಲಾಗಿ ನಿಂತನು. ಕ್ರಿ.ಶ. ೧೮೩೧ರಲ್ಲಿ ಜಾಗರಪುರ ಗೊಣಕಲ್ಲು

ಸಮೀಪ ಶತ್ರುಗಳೊಂದಿಗೆ ಯುದ್ಧ ಮಾಡುವಾಗ ಸರ್ಜಾರಂಗಪ್ಪನಾಯಕನು ನಿಧನನಾದನು. ರಂಗಪ್ಪನಾಯಕನ ಮರಣದ ನಂತರ ಸರ್ಜಾಹನುಮಪ್ಪನಾಯಕ ಅಧಿಕಾರಕ್ಕೆ ಬಂದನು.

**ಸರ್ಜಾಹನುಮಪ್ಪನಾಯಕ**

ಸರ್ಜಾಹನುಮಪ್ಪನಾಯಕ ಸಂತೆಬೆನ್ನೂರಿನ ಪಾಳೆಯಪಟ್ಟಿನ ಅಧಿಕಾರವನ್ನು ವಹಿಸಿಕೊಂಡನು. ಇವನಿಗೆ ಸರ್ಜಪ್ಪನಾಯಕನೆಂತಲೂ ಕರೆಯುತ್ತಾರೆ. ಇವನೊಂದಿಗೆ ಬಂಧುಬಳಗದವರು, ಸ್ನೇಹಿತರು, ಅಣ್ಣತಮ್ಮಂದಿರೂ ಎಲ್ಲರೂ ಸೇರಿಕೊಂಡು ಇವರ ಹೋರಾಟಕ್ಕೆ ಬೆಂಬಲ ಸೂಚಿಸಿದರು.

ಸರ್ಜಾಹನುಮಪ್ಪನಾಯಕ ಬಾಬಾಬುಡನ್‌ಗಿರಿಯಲ್ಲಿದ್ದ ಕಾಮನದುರ್ಗಾವನ್ನು ತನ್ನ ಚಟುವಟಿಕೆಯ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು. ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿ ವಸೂಲಿ ಮಾಡಿ ಇಟ್ಟಿದ್ದ ಹಣವನ್ನು ಲೂಟಿ ಮಾಡಿದರು. ಕಂಪನಿಯ ಕಛೇರಿಗಳನ್ನು ಲೂಟಿ ಮಾಡಿದರು. ಈ ಕಾರ್ಯಚಟುವಟಿಕೆಯಿಂದ ಬಂದ ಹಣವನ್ನು ಜನರಿಗೆ ಹಂಚಿದರು.

ದಾಳಿಯಿಂದ ವಶಪಡಿಸಿಕೊಂಡ ಮದ್ದು ಗುಂಡುಗಳು, ಕತ್ತಿ ಕಠಾರಿಗಳು ಇವರ ಸೈನ್ಯದವರು ಉಪಯೋಗಿಸಿದರು. ಈ ರೀತಿಯ ಕಾರ್ಯಚಟುವಟಿಕೆಯಿಂದ ಜನರಿಗೆ ಸಾಕಷ್ಟು ಉಪಯೋಗವಾಗುತ್ತಿತ್ತು. ಆದುದರಿಂದ ಜನರು ಅವರಿಗೆ ಎಲ್ಲಾ ರೀತಿಯ ಸಹಾಯ ಸಹಕಾರ ನೀಡಿದರು. ಜನರು ಸ್ವತಃ ತಾವಾಗಿಯೇ ಸೈನ್ಯಕ್ಕೆ ಸೇರುತ್ತಿದ್ದರು. ಈ ರೀತಿಯ ಆಚರಣೆಗಳು ಲೂಟಿಗಳು ಹೆಚ್ಚಾಗಿದ್ದುದರಿಂದ ಸರ್ಕಾರ ಆಡಳಿತ ನಡೆಸಲು ತೊಂದರೆಯಾಗುತ್ತಿತ್ತು. ಅದುದರಿಂದ ಸರ್ಕಾರ ಇವರ ವಿರುದ್ಧ ದಿವಾನನನ್ನು ಕಳುಹಿಸಿ ಕಾಮನದುರ್ಗಕ್ಕೆ ಮುತ್ತಿಗೆ ಹಾಕಿದರು. ಕಾಮನದುರ್ಗದಲ್ಲಿ ನಡೆದ ಸಂಘರ್ಷದಲ್ಲಿ ಬಂಡಾಯಗಾರರು ಆತ್ಮವಿಶ್ವಾಸದಿಂದ ಹೋರಾಡಿದರು. ಇವರು ಮೈಸೂರಿನ ವಿರುದ್ಧ ಜಯವನ್ನು ಗಳಿಸಿದರು.

ಈ ಸಂದರ್ಭದಲ್ಲಿ ಕಂಪನಿ ಸರ್ಕಾರ ಮುಮ್ಮಡಿ ಕೃಷ್ಣರಾಜ ಒಡೆಯರ್‌ರಿಂದ ಅಧಿಕಾರವನ್ನು ಕಿತ್ತುಕೊಂಡಿತು. ಮೈಸೂರಿನಲ್ಲಿ ಕಂಪನಿ ಸರ್ಕಾರ ನೇರ ಆಡಳಿತ ಪ್ರಾರಂಭಿಸಿತು. ಹನುಮಪ್ಪ ನಾಯಕನನ್ನು ಸೋಲಿಸುವುದಕ್ಕೆ ಯೋಜನೆ ಹಾಕಿಕೊಂಡರು. ಈ ಯೋಜನೆಗೆ ಗೋವಿಂದ ರಾಯರು ಪ್ರಮುಖರಾಗಿದ್ದರು.

ಸರ್ಜಾನಾಯಕನಿಗೆ ರಂಗಮ್ಮ ಎಂಬ ಒಬ್ಬ ಪ್ರೇಯಸಿ ಇದ್ದಳು. ಆಕೆ ಹೂವಿನ ಹಳ್ಳಿಯಲ್ಲಿದ್ದಳು. ಆಕೆಯ ಪರಿಚಯ ಗೋವಿಂದರಾಯನಿಗೂ ಇತ್ತು. ರಂಗಮ್ಮನಿಗೆ ನಾನಾ ಬಗೆಯ ಆಮಿಷಗಳನ್ನು ಒಡ್ಡಿ ತಮಗೆ ಸಹಾಯ ಮಾಡಲು ಒಪ್ಪುವಂತೆ ಮಾಡಿದರು. ಅವರ ಮಾತಿನಂತೆ ಸಹಾಯ ಮಾಡಿದಳು. ಹನುಮಪ್ಪನಾಯಕನಿಗೆ ಊಟದಲ್ಲಿ ಮದ್ದು ಹಾಕಿ ತಿನಿಸಿದಳು. ನಾಯಕ ಮೂರ್ಛೆಗೊಂಡಾಗ ಅವನ ಆಯುಧಗಳನ್ನೆಲ್ಲಾ ಎತ್ತಿಕೊಂಡು ಮೈಸೂರಿನ ಸೈನಿಕರಿಗೆ ಸುದ್ದಿಯನ್ನು ತಿಳಿಸಿದರು. ಅಷ್ಟರಲ್ಲೆ ಮೂರ್ಛೆಯಿಂದ ಎದ್ದು ಮೈಸೂರಿನ ಸೈನಿಕರೊಂದಿಗೆ

ವೀರಾವೇಶದಿಂದ ಹೋರಾಡಿದರ ಕೊನೆಗೆ ನಾಯಕನು ನಿತ್ರಾಣಗೊಂಡು ಕೆಳಗೆ ಬಿದ್ದನು. ಆಗ ಮೈಸೂರಿನ ಸೈನಿಕರು ನಾಯಕನನ್ನು ಬಂಧಿಸಿ ಮೈಸೂರಿಗೆ ತೆಗೆದುಕೊಂಡು ಹೋದರು.[೭೨] ಹನುಮಪ್ಪನಾಯಕ ಚೇತರಿಸಿಕೊಂಡ ಮೇಲೆ ವಿಚಾರಣೆ ಮಾಡಿದರು. ಆದರೆ ನಾಯಕ ತನ್ನ ಕಾರ್ಯವನ್ನು ಸಮರ್ಥಿಸಿಕೊಳ್ಳುತ್ತಾನೆ. ಕೊನೆಗೆ ನಾಯಕನಿಗೆ ಗಲ್ಲುಶಿಕ್ಷೆ ಕೊಡಲು ನಿರ್ಧರಿಸುತ್ತಾರೆ. ಆದರಂತೆ ಬೆಂಗಳೂರಿನ ಗುಟ್ಟಹಳ್ಳಿ ವನಪ್ರದೇಶದಲ್ಲಿ ನೇಣುಹಾಕಿ ಕೊಲ್ಲುತ್ತಾರೆ. ಈತನ ಮರಣದ ನಂತರ ತಮ್ಮ ಸಂಗಡಿಗರು ತಮ್ಮ ಕತ್ತಿಗಳಿಗೆ ಬಲಿಯಾಗುತ್ತಾರೆ.[೭೩]

ಸರ್ಜಾಹನುಮಪ್ಪನಾಯಕ ಛಲಗಾರನಾಗಿದ್ದನು. ಇವನ ಗಂಭೀರತೆ ಇವನಿಗೆ ಸಹಾಯಕವಾಗಿತ್ತು. ಈ ನಾಯಕನು ಆಂಜನೇಯನ ಪರಮ ಭಕ್ತನಾಗಿದ್ದನು. ಜನತೆಯ ಅಚ್ಚುಮೆಚ್ಚಿನ ನಾಯಕನಾಗಿದ್ದನು. ಸರ್ಜಾಹನುಮಪ್ಪನಾಯಕ ತನ್ನ ಸಾಹಸಗಳಿಂದ ಔದಾರ್ಯದಿಂದ, ದೇಶಪ್ರೇಮದಿಂದ, ಜನಪದದ ಮೇಲೆ ಪ್ರಭಾವ ಬೀರಿ ಸಾಹಸ ಗಾಥೆಯಾದನು. ಲಾವಣಿ, ಜನಪದಗಳಲ್ಲಿ ಇಂದಿಗೂ ಜನರ ಮನಸ್ಸಿನಲ್ಲಿ ಉಳಿದಿದ್ದಾನೆ.

ಕ್ರಿ.ಶ. ೧೮೩೧ರ ಕಡೂರಿನ ಶಾಸನದ ಪ್ರಕಾರ ಹನುಮಪ್ಪನಾಯಕ ಬಾಳಪ್ಪ ನಾಯಕನೆಂಬ ಸ್ನೇಹಿತನಿದ್ದುದು ತಿಳಿದುಬರುತ್ತದೆ. ಹನುಮಪ್ಪನಾಯಕನ ಜೊತೆ ಇವನಿಗೂ ಗಲ್ಲುಶಿಕ್ಷೆ ವಿಧಿಸಲಾಗಿತ್ತೆಂದು ತಿಳಿದುಬರುತ್ತದೆ. ಈ ಶಾಸನವೇ ಸಂತೆಬೆನ್ನೂರು ನಾಯಕರ ಕೊನೆಯ ದಾಖಲೆಯಾಗಿದೆ. ಕಂಪನಿ ಸರ್ಕಾರದ ಆಕ್ರಮಣದಿಂದ ಸಂತೆಬೆನ್ನೂರು ನಾಯಕರ ಆಡಳಿತ ಇಲ್ಲಿಗೆ ಕೊನೆಗೊಳ್ಳುತ್ತದೆ.

ಸರ್ಜಾಹನುಮಪ್ಪನಾಯಕನ ನಂತರ ಈ ಪಾಳೆಯಪಟ್ಟಿನ ಆಳ್ವಿಕೆ ಕೊನೆಗೊಂಡಿತು. ನಂತರ ಪಟ್ಟಾಭಿರಾಮಪ್ಪನಾಯಕ-II, ಸರ್ಜಾಹನುಮಪ್ಪ-IV, ಪಟ್ಟಾಭಿರಾಮಪ್ಪ-II, ಸರ್ಜಾಹನುಮಪ್ಪನಾಯಕ-V ಸಂಪ್ರದಾಯದಂತೆ ತಮ್ಮ ವಂಶವನ್ನು ನಡೆಸಿದರು. ಇವರಿಗೆ ಕಂಪನಿ ಸರ್ಕಾರವು ನಿವೃತ್ತಿವೇತನವನ್ನು ಕೊಡುತ್ತಿತ್ತು. ಸರ್ಜಾಹನುಮಪ್ಪನಾಯಕನ ಇನೇ ಹೆಂಡತಿ ಯಶೋಧಮ್ಮನಾಗತಿ ಈ ಪಾಳೆಯಪಟ್ಟಿನ ಅಧಿಕಾರ ವಹಿಸಿಕೊಂಡಳು, ಯಶೋದಮ್ಮ ನಾಗತಿ ಅಕಾಲಮರಣಕ್ಕೆ ತುತ್ತಾದ್ದರಿಂದ ವಾರಸುದಾರರಿಲ್ಲದೆ ಈ ಪಾಳೆಯಪಟ್ಟು ಅವಸಾನಗೊಂಡಿತು. ಯಶೋಧಮ್ಮನಾಗತಿ ತನ್ನ ಅಂತ್ಯ ಕಾಲದಲ್ಲಿ ಮರಣಶಾಸನ ಬರೆದು ತನ್ನ ಎಲ್ಲಾ ಆಸ್ತಿಯನ್ನು ಚಿತ್ರದುರ್ಗದ ಶ್ರೀಮುರುಘರಾಜೇಂದ್ರ ಬೃಹನ್ಮಠಕ್ಕೆ ಸೇರುವಂತೆ ದಾನ ಕೊಟ್ಟು ಮರಣ ಹೊಂದಿದಳು. ಇವಳ ನಿಧನದಿಂದ ಸರಿಸುಮಾರು ಮೂರು ಶತಮಾನಗಳ ಕಾಲ ಅಸ್ತಿತ್ವದಲ್ಲಿದ್ದ ಸಂತೆಬೆನ್ನೂರು ನಾಯಕರ ವಂಶ ವಾರಸುದಾರರಿಲ್ಲದೆ ಅಂತ್ಯಗೊಂಡಿತು.

### ೩.೩. ಕಣಕುಪ್ಪೆ ಪಾಳೆಯಗಾರರು

ಜಗಲೂರು ತಾಲ್ಲೂಕಿನಲ್ಲಿ ಕಂಡುಬರುವ ಒಂದು ಸಣ್ಣ ಗ್ರಾಮ ಕಣಕುಪ್ಪೆ. ಈ ಗ್ರಾಮ ಸಾಧಾರಣ ಗ್ರಾಮವಾದರೂ ಐತಿಹಾಸಿಕ ಮಹತ್ವವನ್ನು ಪಡೆದಿದೆ. ಕಣಕುಪ್ಪೆ ಎಂದು ಹೆಸರು

ಬರಲು ಕಾರಣ ಈ ಹಿಂದೆ ಗುಡ್ಡದಲ್ಲಿ ಪಾಳೆಯಗಾರ ಕೊಮಾರಪ್ಪನಾಯಕರು ಈ ಗುಡ್ಡದಲ್ಲಿ ಕೋಟೆ ನಿರ್ಮಿಸಲು ಪ್ರಾರಂಭಿಸಿದಾಗ ಮಣ್ಣು ತೆಗೆಯುವ ಸಂದರ್ಭದಲ್ಲಿ ದೊಡ್ಡ ಶಂಖ ದೊರಕಿತು. ಕೊಮರಪ್ಪನಾಯಕ ಆ ಶಂಖವನ್ನು ಪೂಜೆ ಮಾಡಿಸಿ ಚಿತ್ರದುರ್ಗದ ಜೋಯಿಸರನ್ನು ಕರೆಸಿ ಆ ಶಂಖದ ಬಗ್ಗೆ ವಿಚಾರಣೆ ಮಾಡಿದಾಗ ತಿಮ್ಮಪ್ಪಜೋಯಿಸರು ಗುಡ್ಡದ ಸ್ಥಳ ಗವಿಶಂಖ ಮುಂತಾದವುಗಳನ್ನು ನೋಡಿ ಇಲ್ಲಿ ಈ ಹಿಂದೆ ಕಣ್ವ ಋಷಿಗಳು ನೆಲೆಸಿದ ಸ್ಥಳವಾದ್ದರಿಂದ ಈ ಗುಡ್ಡಕ್ಕೆ ಕಣ್ವರಕುಪ್ಪೆ ಎಂದು ಹೆಸರಿಟ್ಟರು. ಇದು ಕ್ರಮೇಣ ಕಣಕುಪ್ಪೆಯಾಯಿತು ಎಂದು ಹೇಳಬಹುದು.

ಕ್ರಿ.ಶ. ೧೬೭೫ರಲ್ಲಿ ಚಿತ್ರದುರ್ಗದಲ್ಲಿ ತಿಮ್ಮಣ್ಣನಾಯಕ, ನಂತರ ಇಮ್ಮಡಿ ಮದಕರಿನಾಯಕನ ಸಾಕು ಮಗ ಓಬಣ್ಣನಾಯಕನಿಗೆ ಪಟ್ಟವಾಯಿತು.[೭೪] ಓಬಣ್ಣನಾಯಕನು ಶಕ್ತಿವಂತನಾಗಿದ್ದ ಅವರೊಂದಿಗೆ ದುರಾಚಾರಿಯೂ, ಪ್ರಜಾಪೀಡಕನಾಗಿದ್ದ ಇವನು ಪಟ್ಟಕ್ಕೆ ಬಂದಾಗ ಗುರಿಕಾರರಿಗೆ ಮತ್ತು ದಳವಾಯಿಗಳಿಗೆ ಒಂದು ತಿಂಗಳ ಸಂಬಳವನ್ನು ಇನಾಮಾಗಿ ಕೊಡಬೇಕಾಗಿತ್ತು.[೭೫] ಆದರೆ ಅವನು ಕೊಡಲಿಲ್ಲ. ಈ ಕಾರಣವನ್ನು ಮುಂದಿಟ್ಟುಕೊಂಡು ದಳವಾಯಿಗಳು ರಾಣಿವೇ ಗುರಿಕಾರರು ಮೊದಲಾದವರು ಕೋಟೆಯಲ್ಲಿನ ಚಿಕ್ಕ ಬಾಗಿಲಿನ ಬಳಿ ಈತನ ತಲೆಗೆ ಹೊಡೆದು ಸಾಯಿಸಿದರು. ಇತ್ತ ನೋಡದೆ ಕಾಟನಾಯಕನ ಮಗ ಲಿಂಗಣ್ಣನಾಯಕ ಮರಣ ಹೊಂದಿದನು. ಇವನ ಮರಣದ ನಂತರ ಈತನ ಮಗ ಸೂರ್ಯಕಾಂತನನ್ನು ಪಟ್ಟಕ್ಕೆ ಏರಿಸಿದರು.[೭೬] ಈತನು ನೀತಿವಂತ. ಆದರೆ ಬುದ್ಧಿವಂತನಾಗಿರಲಿಲ್ಲ. ಎಲ್ಲಾ ಪಾಳೆಯಗಾರರು ಗದ್ದುಗೆಯನ್ನೇರಿದಾಗ ಸೈನಿಕರಿಗೆ ದಾನ, ಬಹುಮಾನ ಹಂಚುವ ಪದ್ಧತಿ ಇವನಿಗೆ ಹಿಡಿಸಲಿಲ್ಲ. ದಳವಾಯಿಗಳು ನಾನಾ ವಿಧವಾಗಿ ಒಪ್ಪಿಸಲು ಪ್ರಯತ್ನಿಸಿದರು ಆದರೆ ಈತನು ಕೇಳಲಿಲ್ಲ. ದಳವಾಯಿಗಳು ಅಸಮಾಧಾನಗೊಂಡು ಅವನನ್ನು ಕೊಂದುಹಾಕಿದರು. ಇಂತಹ ಸಂದರ್ಭದಲ್ಲಿ ಚಿತ್ರದುರ್ಗ ಕೋಟೆಯಲ್ಲಿ ರಾಜಕೀಯ ಅನೈಕ್ಯತೆ ಉಂಟಾಯಿತು. ಓಬಣ್ಣನಾಯಕ ಕೊಲೆ ಆದಾಗ ಚಿಕ್ಕನಾಯಕನ ತಂದೆ ಕೊಮಾರಪ್ಪನಾಯಕರು ಹರಪನಹಳ್ಳಿಗೆ ಓಡಿಹೋಗಿ ಅಲ್ಲಿಂದ ಬಂದು ಕಣಕುಪ್ಪೆಯಲ್ಲಿ ನೆಲೆಸಿದರು. ನ್ಯಾಯಯುತವಾಗಿ ಸಿಂಹಾಸನಕ್ಕೆ ಹಕ್ಕುದಾರನಾಗಿದ್ದ ಚಿಕ್ಕಣ್ಣನಾಯಕನನ್ನು ಕರೆತರಲು ದಳವಾಯಿ ದೇಸಣ್ಣ ಮತ್ತು ರಂಗಪ್ಪ ಇಬ್ಬರು ಹೋಗಿ ಕಣಕುಪ್ಪೆಯಿಂದ ಚಿಕ್ಕಣನಾಯಕನನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಬಂದು ಕ್ರಿ.ಶ. ೧೬೭೫ರಲ್ಲಿ ಸಿದ್ಧೇಶ್ವರನ ದೇವಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿದರು.[೭೭] ಹೀಗೆ ಚಿತ್ರದುರ್ಗದ ಪಾಳೆಯಪಟ್ಟಿನಲ್ಲಿ ರಾಜಕೀಯ ಅನೈತಿಕತೆ ಉಂಟಾಯಿತು. ಈ ಸಂದರ್ಭದಲ್ಲಿ ಅಧಿಕಾರಕ್ಕೆ ಬಂದ ಚಿಕ್ಕಣ್ಣನಾಯಕ ಸುಮಾರು ಹನ್ನೊಂದು ವರ್ಷಗಳ ಕಾಲ ಆಡಳಿತ ನಡೆಸಿ ಚಿತ್ರದುರ್ಗದ ಪಾಳೆಯಪಟ್ಟು ಅಭಿವೃದ್ಧಿ ಹೊಂದಲು ಪ್ರಮುಖ ಪಾತ್ರ ವಹಿಸಿದನು.

**ಚಿಕ್ಕಣ್ಣನಾಯಕ**

ಈತನು ಕ್ರಿ.ಶ. ೧೬೭೫ರಿಂದ ೧೬೮೬ರವರೆಗೆ ಆಳ್ವಿಕೆ ಮಾಡಿದನು. ಇವನ ಕಾಲದಲ್ಲಿ ಚಿತ್ರದುರ್ಗದ ಪಾಳೆಯಪಟ್ಟು ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಮಹತ್ತರ

ಬೆಳವಣಿಗೆ ಹೊಂದಿದ ಕಾಲಘಟ್ಟವಾಗಿತ್ತು. ಚಿಕ್ಕಣ್ಣನಾಯಕ ಇತರೆ ಪಾಳೆಯಗಾರರಿಗಿಂತ ಹೆಚ್ಚು ಯುದ್ಧಗಳಲ್ಲಿ ತೊಡಗಬೇಕಾಯಿತು. ನಿಡಗಲ್ಲು ನಾಯಕರು, ಹರಪನಹಳ್ಳಿ ಪಾಳೆಯಗಾರರು, ಮೊಘಲರು, ಬಿಜಾಪುರದ ಮುಸಲ್ಮಾನರು(ಸೇನಾನಿ ರಣಾದುಲ್ಲಾಖಾನನು) ಮುಂತಾದ ಅರಸರೊಡನೆ ಯುದ್ಧ ಮಾಡಿ ಚಿತ್ರದುರ್ಗ ಪಾಳೆಯಪಟ್ಟಿನ ರಕ್ಷಣೆಗೆ ನಿಂತ ಅರಸನಾಗಿದ್ದನು. ಈತನ ಕಾಲದಲ್ಲಿ ಹಲವಾರು ದೇವಾಲಯಗಳು ಕೋಟೆಗಳು ನಿರ್ಮಾಣವಾದವು.

ಉಚ್ಚಂಗಿದುರ್ಗದ ಕೋಟೆ, ಕಣಕುಪ್ಪೆಕೋಟೆ, ಹೊಸದುರ್ಗಕೋಟೆ ಚಿತ್ರದುರ್ಗದ ಮೆಲುದುರ್ಗದಲ್ಲಿ ವಿನಾಯಕನ ಗುಡಿ ಹೊಂಡ, ಹೊರಕೆರೆ ದೇವರಪುರದ ಸುತ್ತ ಉಯ್ಯಾಲೆ ಕಂಬಗಳನ್ನು ನಿರ್ಮಿಸಿದನು. ಈ ರೀತಿ ತಮ್ಮ ಆಳ್ವಿಕೆಯ ಕಾಲದಲ್ಲಿ ಅಭಿವೃದ್ಧಿ ಕಾರ್ಯಗಳು ಕೈಗೊಂಡು ಕಣಕುಪ್ಪೆ ಪಾಳೆಯಪಟ್ಟನ್ನು ಶ್ರೀಮಂತಗೊಳಿಸಿದನು.

ಕ್ರಿ.ಶ. ೧೬೭೬ರಲ್ಲಿ ಹರಪನಹಳ್ಳಿಯ ಪಾಳೆಯಗಾರರು ಅಣಜಿ ಕೋಟೆಯನ್ನು ಮುತ್ತಿ, ಅಲ್ಲಿನ ಅಧಿಕಾರಿಯಾಗಿದ್ದ ಭೂನಪ್ಪನನ್ನು ಕೊಂದುಹಾಕಿದರು.[೭೮] ಈ ವಿಷಯವನ್ನು ತಿಳಿದ ಚಿಕ್ಕಣ್ಣನಾಯಕ ಕಣಕುಪ್ಪೆಯಿಂದ ಅಣಜಿಗೆ ಪಯಣ ಬೆಳೆಸಿದನು. ಅಲ್ಲಿ ಕೆಂಚನಗೌಡರೊಂದಿಗೆ ಸೇರಿಕೊಂಡ ಹರಪನಹಳ್ಳಿ ಪಾಳೆಯಗಾರರನ್ನು ಅಲ್ಲಿಂದ ಓಡಿಸಿದನು. ಅಣಜಿಯಲ್ಲಿದ್ದ ಸೈನಿಕರಿಗೆ ಉಡುಗೊರೆಯನ್ನು ದಾನ ಮಾಡಿ ವಾಪಸ್ಸು ಬಂದನು.

೧೬೭೭ರಲ್ಲಿ ಷಂಶೇರ್‌ಖಾನ್‌ನ ಸೈನ್ಯ ಹರಿಹರ ಕೋಟೆಯನ್ನು ಮುತ್ತಿಗೆ ಹಾಕುವುದನ್ನು ಅಲ್ಲಿನ ಒಬ್ಬ ಸೈನಿಕನಿಂದ ಮಾಹಿತಿ ತಿಳಿದುಕೊಂಡನು. ಅಷ್ಟರಲ್ಲಿ ಖಾನನು ತನ್ನ ಬಲವಾದ ಸೈನ್ಯದೊಂದಿಗೆ ಹರಿಹರವನ್ನು ಮುತ್ತಿಗೆ ಹಾಕಿದನು.[೭೯] ಆಗ ಚಿಕ್ಕಣ್ಣನಾಯಕನು ಬಾರೆಗುಡ್ಡದ ಬಳಿ ರಾತ್ರಿ ಬಂದಿಳಿದು ಅಲ್ಲಿನ ಮರಗಳಿಗೆ ಹಾಗೂ ಎತ್ತುಗಳ ಕೊಂಬುಗಳಿಗೆ ಪಂಜುಗಳನ್ನು ಹಾಗೂ ದೀವಟಿಗೆಗಳನ್ನು ಹಚ್ಚಿ ನಗಾರಿ ಮತ್ತು ರಣವಾದ್ಯಗಳನ್ನು ಏಕಕಾಲದಲ್ಲಿ ಮೊಳಗಿಸಿ ನೂರಾರು ಬಾಣಗಳಿಗೆ ಬೆಂಕಿ ಹಚ್ಚಿ ಖಾನನ ಮೇಲೆ ದಾಳಿ ಮಾಡಿದ. ಈ ದಾಳಿಯನ್ನು ಎದುರಿಸುವಲ್ಲಿ ವಿಫಲನಾದ ಖಾನನು ದಿಕ್ಕೆಟ್ಟು ಪರಾರಿಯಾದನು.

ಕ್ರಿ.ಶ. ೧೬೭೮ರಲ್ಲಿ ಚಿಕ್ಕಣ್ಣನಾಯಕನು ರಾಯದುರ್ಗವನ್ನು ಮುತ್ತಿಗೆ ಹಾಕಿದನು. ಅಲ್ಲಿನ ದೊರೆ ಬುಟುಗಲು ಬೊಮ್ಮಣ್ಣನಾಯಕನು ಊರಬಾಗಿಲ ಬೀಗದ ಕೈಯನ್ನು, ರಾಜಮುದ್ರೆಯನ್ನು ತಂದು ನಾಯಕನಿಗೆ ಒಪ್ಪಿಸಿ ಶರಣಾದನು. ಆಗ ಅವನನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಹೋಗಿ ತಮ್ಮ ಮಗಳನ್ನು ವಿವಾಹ ಮಾಡಿಸಿ ರಾಯದುರ್ಗಕ್ಕೆ ವಾಪಸ್ಸು ಕಳುಹಿಸಿದನು.[೮೦]

ಕ್ರಿ.ಶ. ೧೬೭೯ರಲ್ಲಿ ತರೀಕೆರೆ ಪಾಳೆಯಗಾರರು ಹನುಮವ್ವಳನ್ನು ಚಿಕ್ಕಣ್ಣನಾಯಕನಿಗೆ ಮದುವೆ ಮಾಡಿಕೊಡುತ್ತೇವೆಂದು ಬಿದನೂರು ಚೆನ್ನಾಮ್ಮಾಜಿ ಮತ್ತು ಶಬನಿ ಕೃಷ್ಣಪ್ಪ ಇವರ ಮಧ್ಯಸ್ಥಿಕೆ ಮೂಲಕ ಹೇಳಿಕಳುಹಿಸಿದರು. ಆಗ ದುರ್ಗದ ದೊರೆ ತನ್ನ ಪಟ್ಟದ ಆಯುಧವಾದ ಚಂದ್ರಾಯುಧವನ್ನು ಕಳುಹಿಸಿದ. ಇದನ್ನು ತಿಳಿದ ತರೀಕೆರೆ ಪಾಳೆಯಗಾರರು ತಮಗೆ ಅವಮಾನ

ಪಾಪಿತೆಂದು ಶಕನವ್ವ ಎಂಬ ಒಬ್ಬ ಹೆಣ್ಣುಮಗಳನ್ನು ಆ ಚಂದ್ರಾಯುಧಕ್ಕೆ ಮದುವೆ ಮಾಡಿದರು.[೮೧] ಇದರಿಂದ ಕೋಪಗೊಂಡ ಚಿಕ್ಕಣ್ಣನಾಯಕ ತರೀಕೆರೆ ಪಾಳೆಯಗಾರರ ಮೇಲೆ ಯುದ್ಧ ಮಾಡಲು ಸಿದ್ಧನಾದನು. ಆಗ ಹನುಮವ್ವಳನ್ನು ಮದುವೆ ಮಾಡಿಕೊಡುವುದಾಗಿ ಒಡಂಬಡಿಕೆ ಮಾಡಿಕೊಂಡರು. ಚಿಕ್ಕಣ್ಣನಾಯಕನು ತರೀಕೆರೆಗೆ ಹೋಗಿ ಅಪಾರ ಪ್ರಮಾಣದ ವರಹಗಳನ್ನು ಖರ್ಚು ಮಾಡಿ ಹನುಮವ್ವಳನ್ನು ಮದುವೆ ಮಾಡಿಕೊಂಡನು. ಈ ವೈವಾಹಿಕ ಸಂಬಂಧದಿಂದ ತರೀಕೆರೆ ಪಾಳೆಯಗಾರರೊಂದಿಗೆ ಚಿಕ್ಕಣ್ಣನಾಯಕ ಸಂಬಂಧ ಉತ್ತಮವಾಗಿ ಮುಂದುವರಿಯಿತು. ಮುಂದೆ ಇವರ ಮಧ್ಯೆ ಯಾವುದೇ ಯುದ್ಧಗಳು, ಸಂಘರ್ಷಗಳು ಕಂಡುಬರುವುದಿಲ್ಲ.

ಕ್ರಿ.ಶ. ೧೬೭೭ರಲ್ಲಿ ಚಿಕ್ಕಣ್ಣನಾಯಕ ತಮ್ಮ ತಂದೆ ತಾಯಿಗೆ ಪುಣ್ಯವಾಗಲೆಂದು ನಾಗೇನಹಳ್ಳಿ ಗ್ರಾಮವನ್ನು ತಿರುಪತಿ ಪೆದ್ದರಾಮಂಜಯ್ಯನವರಿಗೆ ಅಗ್ರಹಾರವೆಂದು ದಾನ ನೀಡಿದ್ದಾರೆ.[೮೨] ಹಾಗೆಯೇ ಕ್ರಿ.ಶ. ೧೬೭೮ರಲ್ಲಿ ಶೃಂಗೇರಿ ಮಠದ ಶಂಕರ ಭಾರತೀಸ್ವಾಮಿಗಳ ಕೃಪೆಯಿಟ್ಟು ಉಡುಗೊರೆ ವಿಭೂತಿ, ಪ್ರಸಾದವನ್ನು ಅರಸ ಚಿಕ್ಕಣ್ಣನಾಯಕರಿಗೆ ಕಳುಹಿಸಿದರು. ಅದನ್ನು ತೆಗೆದುಕೊಂಡು ಶ್ರೀಸದ್ಗುರುಗಳ ಮಠಕ್ಕೆ ಬಾಗೂರು ಸೀಮೆ ಮಾದಗಟ್ಟ ಎಂಬ ಗ್ರಾಮವನ್ನು ದಾನಪತ್ರ ಬರೆಸಿ ಉಡುಗೊರೆ ಸಹಿತ ಬ್ರಹ್ಮಭಟ್ಟರ ಮೂಲಕ ಗುರುಗಳ ಸನ್ನಿಧಾನಕ್ಕೆ ಕಳುಹಿಸಿದ್ದಾರೆ.[೮೩] ಬಾಗೂರು ಗ್ರಾಮದ ಶ್ರೀ ಚನ್ನಿಗರಾಯಸ್ವಾಮಿಗೆ ತೇರು ಮತ್ತು ಚಿನ್ನದ ಮುಲಾಮಿನ ಗರುಡೋತ್ಸವದ ವಾಹನವನ್ನು ಮಾಡಿಸಿ ದಾನ ಕೊಟ್ಟು ಬಾಗೂರು ಕೋಟೆಯನ್ನು ಸಹ ಕಟ್ಟಿಸಿದ್ದಾರೆ.[೮೪]

ಕ್ರಿ.ಶ. ೧೬೮೩ರಲ್ಲಿ ಬಾಗೂರು ಚನ್ನಬಸವ ದೇವರ ಮಕ್ಕಳು ರುದ್ರಪ್ಪ ದೇವರಿಗೆ ಬಾಗೂರು ಸೀಮೆಗೆ ಸೇರಿದ ವೀರಾಪುರ ಗ್ರಾಮವನ್ನು ದಾನವಾಗಿ ಕೊಟ್ಟು ದಾನಶಾಸನ ಬರೆಸಿದ್ದಾರೆ.[೮೫]

ಹೀಗೆ ಚಿಕ್ಕಣ್ಣನಾಯಕನು ಅನೇಕ ಯುದ್ಧಗಳ ಮೂಲಕ ಕೋಟೆಗಳನ್ನು ಗೆದ್ದು ತನ್ನ ಪಾಳೆಯಪಟ್ಟನ್ನು ಸಾಮಾಜಿಕ, ಧಾರ್ಮಿಕ, ರಾಜಕೀಯವಾಗಿ ಅಭಿವೃದ್ಧಿ ಮಾಡಿ ಅನೇಕ ಮಠಗಳಿಗೆ, ಸ್ವಾಮೀಜಿಗಳಿಗೆ ದಾನ ನೀಡಿ ಅವರ ಕೃಪೆಗೆ ಪಾತ್ರರಾಗಿರುವುದನ್ನು ಕಾಣಬಹುದು. ಒಟ್ಟಾರೆ ಚಿಕ್ಕಣ್ಣನಾಯಕನ ಆಳ್ವಿಕೆಯಲ್ಲಿ ಕಣಕುಪ್ಪೆ ಪಾಳೆಯಪಟ್ಟು ಹಾಗೂ ದುರ್ಗದ ಪಾಳೆಯಪಟ್ಟು ಸರ್ವತೋಮುಖ ಬೆಳವಣಿಗೆ ಹೊಂದಿರುವುದನ್ನು ಕಾಣಬಹುದು.

**ಕೋಮಾರಪ್ಪನಾಯಕ**

ಚಿಕ್ಕಣ್ಣನಾಯಕರು ಚಿತ್ರದುರ್ಗದಲ್ಲಿ ಪಟ್ಟವೇರಿದಾಗ ಕಣಕುಪ್ಪೆಯನ್ನು ನೋಡಿಕೊಳ್ಳಲು ತಂದೆ ಕೊಮಾರಪ್ಪನಾಯಕನನ್ನು ನೇಮಿಸಿದನು.[೮೬] ಕಣಕುಪ್ಪೆ ಗುಡ್ಡದ ಮೇಲೆ ಜರಿಮಲೆ ಬೇಡರು ಸೇರಿಕೊಂಡು ಸುತ್ತಮುತ್ತಲಿನ ಗ್ರಾಮಗಳಲ್ಲಿ ಕಳ್ಳತನ ಮಾಡುತ್ತಾ ತೊಂದರೆ ಕೊಡುತ್ತಿದ್ದರು.

ಆಗ ಕೊಮಾರಪ್ಪನಾಯಕ ಜರಿಮಲೆ ಬೇಡರನ್ನು ಗುಡ್ಡದಿಂದ ಓಡಿಸಿದರು. ಆ ಗುಡ್ಡದಲ್ಲಿ ಗವಿಗಳು ಹೊಂಡಗಳು ವಿಸ್ತಾರವಾದ ಪ್ರದೇಶವನ್ನು ನೋಡಿ ಇಲ್ಲೊಂದು ಕೋಟೆ ಕಟ್ಟಬೇಕು ಎಂದು ಚಿಕ್ಕಣ್ಣನಾಯಕರ ಬಳಿ ಕೇಳಿಕೊಂಡರು. ಚಿಕ್ಕಣ್ಣನಾಯಕರ ಒಪ್ಪಿಗೆ ಮೇರೆಗೆ ಕಾಮಾಟಿಗ ಓಬಣ್ಣನ ಜೊತೆಗೆ ಸ್ವಲ್ಪ ಕೂಲಿ ಕಾರ್ಮಿಕರನ್ನು ಕಳುಹಿಸಿ ಅಲ್ಲಿನ ಗಿಡ ಮರಗಳನ್ನು ಕಡಿಯಲು, ನಂತರ ಕೋಟೆಯನ್ನು ಕಟ್ಟಲು ತರಹಾಕಿ ಮೊದಲು ಹಂತವಾಗಿ ಕೆಳಗಣ ಕೋಟೆಯನ್ನು ಪೂರ್ಣಗೊಳಿಸಿದರು. ನಂತರ ಮೇಲುದುರ್ಗದ ಸುತ್ತ ಹೊಂಡ ಕಟ್ಟಿಸಿ, ಕೊಮಾರಪ್ಪ ಇರಲಿಕ್ಕೆ ಒಂದು ಮನೆಯನ್ನು ಕಟ್ಟಿಸಿ ಕಾಮಾಟಿಗರಿಗೆ ಉಡುಗೊರೆ ಕೊಟ್ಟು ಊಟ ಮಾಡಿಸಿ ಹತ್ತು ಕುರಿಗಳನ್ನು ಕಡಿದು ಸುತ್ತಲೂ ಚರಗ ಚೆಲ್ಲಿ ಮನೆಗೆ ಪ್ರವೇಶ ಮಾಡಿದರು ಎಂದು ತಿಳಿದುಬರುತ್ತದೆ.

ಗುಡ್ಡದ ಪೂರ್ವದಿಕ್ಕಿನ ಕಡೆ ಬೇಲಿ ಹಾಕಿಸಿದ್ದರು. ಅಲ್ಲಿಗೆ ಕಳ್ಳರು ಬೆಂಕಿ ಹಚ್ಚಿ ತೊಂದರೆ ಕೊಡುತ್ತಿದ್ದರು. ಆಗ ಕೊಮಾರಪ್ಪನು ಬೇಲಿ ಕಿತ್ತುಹಾಕಿ ಒಂದು ಬುರುಜನ್ನು ಕಟ್ಟಿಸಿದನು. ಕಣಕುಪ್ಪೆ ಕೋಟೆ ಎಂದು ಹೆಸರಿಸಿದರು. ಇದರ ಹಿಂದೆ ಒಂದು ಐತಿಹ್ಯವಿದೆ ಎಂದು ಹಿರಿಯರು ತಿಳಿಸುತ್ತಾರೆ. ಕೋಟೆಯ ಸುತ್ತಮುತ್ತಲಿನ ಮೂರು ಗುಡ್ಡಗಳಿಗೆ ಮೇಲುದುರ್ಗ, ಮನ್ನಲಗಟ್ಟು, ಕೊತ್ತಲಗಟ್ಟ ಎಂಬ ಹೆಸರಿಟ್ಟುದು.[೭೭] ಗುಡ್ಡಗಳ ಸುತ್ತ ಇದ್ದ ಗಿಡಮರಗಳನ್ನು ಕಡಿಸಿ ಹೊಂಡ ತೆಗೆಸಿ ಕೋಟೆ ಕಾವಲಿಗೆ ೪೦೦ ಜನ ಸೈನಿಕರನ್ನು ನೇಮಿಸಿಕೊಂಡರು. ಕೋಟೆಯ ಸುತ್ತ ಕುರಿ, ಕೋಣ, ಅಕ್ಕಿ, ತುಪ್ಪ ತರಿಸಿ ಕೋಟೆಯ ಸುತ್ತಲ್ಲಿ ಚರಗಾ ಚೆಲ್ಲಿದರು. ಹೀಗೆ ಕೋಟೆಯನ್ನು ನಿರ್ಮಿಸಿ ತಮ್ಮ ಆಳ್ವಿಕೆಯನ್ನು ಕಣಕುಪ್ಪೆ ಕೋಟೆಯಿಂದಲೂ ಆಡಳಿತ ನಡೆಸಿದ್ದಾರೆ.

**ಕಾಟನಾಯಕ**

ಚಿಕ್ಕಣ್ಣನಾಯಕನ ಆಳ್ವಿಕೆಯ ನಂತರ ಚಿತ್ರದುರ್ಗದಲ್ಲಿ ಭರಮಪ್ಪನಾಯಕ ಪಟ್ಟವೇರಿದನು. ಈತನು ಆಳ್ವಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಕಣಕುಪ್ಪೆಗೆ ನಾಯಕನನ್ನಾಗಿ ಕಾಟನಾಯಕನನ್ನು ನೇಮಿಸಿದರು. ಕಾಟನಾಯಕನು ಕಣಕುಪ್ಪೆಗೆ ಬಂದು ಕಾಟಮದೇವರಿಗೆ ಒಂದು ಮನೆ ಮತ್ತು ಅರಸರಿಗೆ ಇರಲು ಒಂದು ಮನೆ ಕಟ್ಟಿಸಲು ಪ್ರಾರಂಭಿಸಿದ. ಅರಮನೆಯ ಬಾಗಿಲು ಮರದ್ದಾಗಿದ್ದ ಕಾರಣ ಅದರ ಮುಂದೆ ಒಂದು ದೊಡ್ಡ ಹೊಂಡವನ್ನು ತೊಡಿಸಿದ. ಕೋಟೆಯ ಮೂಡಗಡಿಗೆ ಒಂದು ಕಲ್ಲುಬಾಗಿಲನ್ನು ಹಾಕಿಸಿ ಅರಮನೆಯ ಮುಂದೆ ಒಂದು ಚಾವಡಿಯನ್ನು ಕಟ್ಟಿಸಿದನು. ಕಾಟಮದೇವರು ಮತ್ತು ಉಚ್ಚಂಗಿದೇವರ ಉತ್ಸವ ಮಾಡಲು ಚಿತ್ರದುರ್ಗದ ದೊರೆ ಹಾಗೂ ಕೊಮಾರಪ್ಪ ಕಣಕುಪ್ಪೆಗೆ ಆಗಮಿಸಿದರು. ಕಾಟಮಲಿಂಗ ದೇವರು ಕಣಕುಪ್ಪೆಯಲ್ಲಿತ್ತು. ಉಚ್ಚಂಗಿ ದೇವರು ಉಚ್ಚಂಗಿದುರ್ಗದಲ್ಲಿದ್ದ ಕಾರಣ ಅದನ್ನು ಬಿಳಿಚೋಡ ಮಾರ್ಗವಾಗಿ ಒಂದು ಆಲದ ಮರದ ಬಳಿ ಎದುರುಗೊಂಡು ಚಿತ್ರದುರ್ಗದಿಂದ ಸಿಡಿಕಂಭವನ್ನು ತರಿಸಿ ಸಿಡಿ ಆಡಿಸಿದ.

ಬೇವಿನ ಸೀರೆ ಉಟ್ಟು ಗಂಗಾ ಪೂಜೆ ಮಾಡಿಸಿ ಉತ್ಸವವನ್ನು ಆಚರಿಸಿದರು. ಈ ಸಂದರ್ಭದಲ್ಲಿ ಕಾಟನಾಯಕನು ದೊರೆಗಳ ಹತ್ತಿರ ಗಾರೆಬಾಗಿಲ ಬಳಿ ಬಂದು ಹೊಂಡ ತಗಿಸಬೇಕು ಹಾಗೂ ಕೋಟೆ ಕೆಳಗೆ ಒಂದು ಪೇಟೆ ಕಟ್ಟಿಸಬೇಕು ಎಂದು ಕೇಳಿದರು. ಆಗ ದೊರೆಗಳ ಒಪ್ಪಿಗೆ ಕೊಟ್ಟರು. ಪೇಟೆ ಮನೆಗಳನ್ನು ಹಾಗೂ ಹೊಂಡ ತೆಗೆಸಿದ ಮೇಲೆ ಪೇಟೆಯಲ್ಲಿ ಸೆಟ್ಟಿತನಕ್ಕೆ ವ್ಯಾಪಾರಿ ಗುದ್ರಪ್ಪ ಎನ್ನುವವನಿಗೆ ಅವನೇ ಸೂಕ್ತ ಎಂದು ಅನುಮತಿ ಕೊಟ್ಟನು. ಕಾಟನಾಯಕರ ಕಾಲದಲ್ಲಿ ದೇವಾಲಯಗಳ ಜೊತೆಗೆ ಕಾಟನಾಯಕ ಕೆರೆ, ತಂದೆಯ ಹೆಸರಿನಲ್ಲಿ ಜಯಣ್ಣ ನಾಯಕನ[೨೨] ಕೆರೆಗಳನ್ನು ನಿರ್ಮಿಸಿ ಮರಣ ಹೊಂದಿದನು.

### ಚಿಕ್ಕಭರಮಪ್ಪನಾಯಕ

ಕಾಟನಾಯಕನ ತರುವಾಯ ೧೬೯೧ರಲ್ಲಿ ಚಿಕ್ಕ ಭರಮಪ್ಪನಾಯಕನಿಗೆ ಪಟ್ಟಕಟ್ಟಿ ಚಿತ್ರದುರ್ಗದಿಂದ ಕಣಕುಪ್ಪೆ ಪಾಳೆಯಪಟ್ಟಿಗೆ ನಾಯಕತನ ವಹಿಸಿಕೊಟ್ಟು ಕಳುಹಿಸಿದರು. ಇವನಿಗೆ ಮೂರುಸಾವಿರ ಜನ ಕಾಲಾಳು ನೂರು ಕುದುರೆ, ಆನೆ, ನಿಶಾನಿ, ನಗಾರಿಗಳನ್ನು ಕೊಟ್ಟು ಕಳುಹಿಸಿದರು. ಭರಮಪ್ಪನಾಯಕ ಕಿವುಡು ಆಗಿದ್ದರಿಂದ ಹಾಗೂ ಅಸಮರ್ಥ ದೊರೆಯಾಗಿದ್ದರಿಂದ ಆ ಹುದ್ದೆಗೆ ಸರಿಯಾದ ವ್ಯಕ್ತಿಯಲ್ಲ ಎಂದು ಕಣಕುಪ್ಪೆ ಪಾಳೆಯಪಟ್ಟಿನಿಂದ ಹೊಸದುರ್ಗ ಸೀಮೆಗೆ ನಾಯಕನಾಗಿ ಕಳುಹಿಸಿದರು. ಬಿಜಾಪುರದ ದಿಲಾವರಖಾನ್‌ನನ್ನು ಸೋಲಿಸಲು ಈತನ ಪಾತ್ರವೂ ಕೂಡ ಮಹತ್ವವಾಗಿತ್ತು.

### ಕಿರಿಯ ಜಂಪಣ್ಣನಾಯಕ

ಈತನು ಕಣಕುಪ್ಪೆ ಪಾಳೆಯಪಟ್ಟಿನ ಪ್ರಮುಖ ಸಮರ್ಥ ನಾಯಕನಾಗಿದ್ದನು. ಚಿಕ್ಕ ಭರಮಪ್ಪನಾಯಕನನ್ನು ಹೊಸದುರ್ಗ ಸೀಮೆಗೆ ನಾಯಕನಾಗಿ ಅಧಿಕಾರ ವಹಿಸಿಕೊಟ್ಟಾಗ ಕಿರಿಯ ಜಂಪಣ್ಣನಾಯಕ ಕಣಕುಪ್ಪೆ ಪಾಳೆಯಪಟ್ಟಿಗೆ ನಾಯಕನಾಗಿ ನೇಮಿಸಿಕೊಂಡನು. ಈತನು ಸಮರ್ಥ ಹಾಗೂ ಪ್ರಬಲ ನಾಯಕನಾಗಿದ್ದು, ಈತನ ಅಧಿಕಾರ ಅವಧಿಯಲ್ಲಿ ಕಣಕುಪ್ಪೆ ಪಾಳೆಯಪಟ್ಟು ಉನ್ನತ ಸ್ಥಿತಿಯಲ್ಲಿತ್ತು.

ಕಿರಿಯ ಜಂಪಣ್ಣನಾಯಕ ಜನಪದರ ಹಾಡುಗಳಲ್ಲಿ ಇಂದಿಗೂ ಜೀವಂತವಾಗಿರುವುದನ್ನು ಕಾಣುತ್ತೇವೆ. ಚಿನ್ನಹಗರಿ ನದಿ ಪರಿಸರದ ಕೋಲು ಪದಗಳಲ್ಲಿ ಈ ನಾಯಕನನ್ನು ಗುಣಗಾನ ಮಾಡಿರುವುದನ್ನು ಕಾಣುತ್ತೇವೆ.[೨೯] ನಿರ್ವಾಣಪ್ಪ ಮತ್ತು ಮೆದಕೇರಪ್ಪನ ಹೆಸರುಗಳಲ್ಲಿ ಒಂದೊಂದು ಬಾವಿಯನ್ನು ತೋಡಿಸಿದ ಕಾಟನಾಯಕನ ತಮ್ಮ ನಿಂಗಪ್ಪನೊಂದಿಗೆ ಜೊತೆಗೂಡಿ ಕೋಟೆಯೊಳಗೆ ಮುಖ್ಯ ಪ್ರಾಣದೇವರ ಗುಡಿಯ ಹಿಂದೆ ಒಂದು ಅರಮನೆಯನ್ನು ಕಟ್ಟಿಸಿದ. ಈ ಕೋಟೆಯನ್ನು ಚೆನ್ನಮಲ್ಲಪ್ಪನವರು ಚನ್ನಮಲ್ಲೇಶ್ವರ ದೇವರನ್ನು ತೆಗೆದುಕೊಂಡು ಬಂದಾಗ ಅವರಿಗೆ ಈ ಅರಮನೆಯನ್ನು ಬಿಟ್ಟುಕೊಟ್ಟಿದ್ದಾನೆ ಎಂದು ಹಿರಿಯರು ಹೇಳುತ್ತಾರೆ. ಕಣಕುಪ್ಪೆ ಕೋಟೆಯಲ್ಲಿ ಇವನು ತೆಲುಗು ಕಮ್ಮಾರ ಗುರುವಯ್ಯ ಎಂಬುವರ ಹತ್ತಿರ "ಕಾಟಮಲಿಂಗ" ಎಂಬ

ಫಿರಂಗಿಯನ್ನು, ದೇವುಗಾ(ಹಾವುಗ) ಎಂಬುವವನ ಹತ್ತಿರ ಉಚ್ಚಂಗಿ ಎಂಬ ಫಿರಂಗಿಯನ್ನು ಮಾಡಿಸಿದ.[೯೦]

ಚಿತ್ರದುರ್ಗದ ಕಾಮಗೇತಿ ಅರಸರಲ್ಲಿ(ಜಂಪಳ್ಳಿನಾಯಕ) ಜಂಪಣ್ಣನಾಯಕ ಎಂಬುವನು ಕಣಕುಪ್ಪೆ ಪ್ರದೇಶಕ್ಕೆ ದಳವಾಯಿಯಾದಾಗ ಇವನ ಬಗ್ಗೆ ಜನಪದ ಗೀತೆಗಳು ಹುಟ್ಟಿಕೊಂಡಿವೆ. ಜಗಳೂರು ಪರಿಸರದಲ್ಲಿ ವಿರೋಧಿಗಳೊಂದಿಗೆ ಯುದ್ಧ ಮಾಡಿದ ಜಟ್ಟಿಗನು, ವೀರನು ಆದ ಜಂಪಣ್ಣನಾಯಕ ಜನಮನದಲ್ಲಿ ಮಾಸದ ಜೀವಂತವಾಗಿದ್ದಾನೆ.[೯೧]

ಎರಡು ಕೈಯಾಗೆ ಎರಡು ಮುದುಕಿಯ ಸರಪಳಿ

ಗರಡಿ ಮನೆಗ್ಹೋಗಿ ಬರುವಾನೆ ॥ಕೋಲು॥

ಗರಡಿ ಮನೆಯಾಗೆ ಬರುವ ಜಂಪಣ್ಣಗೆ

ಗುರುಕಾನೆನೆದ್ದು ಕೈ ಮುಗುದೆ ॥ಕೋಲು॥

ಒಂಟಿ ಕೊರಳಿಗೆ ಗಂಟಿನ ಸರಮಾಲೆ

ಎಂಟಾಳ ನಡುವೆ ಬರುವಾನೆ ॥ಕೋಲು॥

ಎಂಟಾಳ ನಡುವೆ ಬರುವಾನೆ ಜಂಪಣ್ಣಗೆ

ಎಂಟ(ನೆ)ದಿವಸಕ್ಕೆ ಮರಣಾವೂ ॥ಕೋಲು॥

ಆನೆಯ ಕೊರಳಿಗೆ ಕೀಲು ಸರಪಣಿ ಹಾಕಿ

ಆರಾಳ ನಡುವೆ ಬರುವ ಜಂಪಣ್ಣಗೆ

ಆರೇ ದಿವಸಕ್ಕೆ ಮರಣಾವೂ ॥ಕೋಲು॥

ಕಟ್ಟಿ ಮೇಗಳ ರಾಗಿ ರಕ್ತ ಕಕ್ಕುಲುವಾಗ

ಪುತ್ರ ಜಂಪಣ್ಣ ಬದುಕಾನೆ ॥ಕೋಲು॥

ಎರಿಮೇಗಳ ಕಾಗೆ ನೀರು ನೀತಿ ಕಕ್ಕಲು ಮಗ

ವೀರ ಜಂಪಣ್ಣ ಉಳಿವಾನೆ ॥ಕೋಲು॥

ಧೀರ ಜಂಪಣ್ಣ ಉಳಿವಾನೆ ಅವರ ತಾಯಿ

ಭೂಮಿಗೆ ಬಾಯಿ ಬಿಡುತಾಳೆ ॥ಕೋಲು॥

ಹಟ್ಟಿನೆ ತಿಪ್ಪಯ್ಯ ಸತ್ಯವುಳ್ಳವನು ಕಾಣೆ

ಸತ್ತೆಮ್ಮೆ ಹಾಲು ಕರುದುಣ್ಣೋ ||ಕೋಲು||

ಸತ್ತೆಮ್ಮೆ ಹಾಲು ಕರೆದು ಪಾನಕ ಮಾಡಿ

ಸತ್ತೇಳು ಮಡಕೆ ಕರೆವ್ಯಾನೆ ||ಕೋಲು||

ಹಗಲನ್ನ ಚಚರಿಕೆ ಮುಗಿಲು ಮುಟ್ಟುವ ಬಾಣ

ಜಗಳೂರು ಪಾಪಯ್ಯ ಕಳುವ್ಯಾನೆ ||ಕೋಲು||

ಬರಿಯುತ ಬರಿಗಾಲು ಕರಿಯ ಕಗ್ಗಲಿ ಮುಳ್ಳು

ಗೆಳೆಯ ಕರವು ಬರುವಾಗ ||ಕೋಲು||

ಗೆಳೆಯನೆ ಬರುವಾಗ ಕಣ್ಣೀರು ಸ್ವಾನಂದು

ಸುರಿದಾವು ||ಕೋಲು||

ಹೀಗೆ ಕಾಟನಾಯಕನ ಮಗನಾದ ಕಿರಿಯ ಜಂಪಣ್ಣನಾಯಕನು ಮಾಡಿದಂತಹ ಕಾರ್ಯಗಳಿಂದ ಇಂದಿಗೂ ಜನಪದದ ಹಾಡುಗಳಲ್ಲಿ ಮನೆಮಾತಾಗಿದ್ದಾನೆ.

**ಕೋಟೆಯ ಮುತ್ತಿಗೆ**

ಕಣಕುಪ್ಪೆಯಲ್ಲಿ ಕಿರಿಯ ಜಂಪಣ್ಣನಾಯಕನಿದ್ದಾಗ ಚಿತ್ರದುರ್ಗದ ಕೋಟೆಗೆ ಹೈದರನು ಮುತ್ತಿಗೆ ಹಾಕಿದನು. ಕೋಟೆಯನ್ನು ಮುತ್ತಿಗೆ ಹಾಕಲು ೧೧ ದಿನಗಳು ಕಾಲ ಸಮಯವಾಯಿತು. ಈ ಕೋಟೆ ಹೈದರನ ವಶವಾದಾಗ ಠಾಣ್ಯವಾಗಿ ರೂಪಿತವಾಯಿತು. ಕಣಕುಪ್ಪೆ ಕೋಟೆಯನ್ನು ಮುತ್ತಿಗೆ ಹಾಕಿದ ನಂತರ ಹೈದರನು ಮುತ್ತಿಗಾರಹಳ್ಳಿ, ಬರಮನಹಳ್ಳಿಯಲ್ಲಿ ಒಂದು ತಿಂಗಳ ಕಾಲ ಇದ್ದು ಮುಂದೆ ಗುಡೇಕೋಟೆ, ಮೊಳಕಾಲ್ಮೂರು ಕಡೆ ದಾಳಿ ಮಾಡಲು ಹೊರಟನು. ೨ನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಹೈದರನು ಮರಣ ಹೊಂದಿದಾಗ ಟಿಪ್ಪುಸುಲ್ತಾನ್ ಅಧಿಕಾರಕ್ಕೆ ಬಂದನು. ಈ ಸಮಯದಲ್ಲಿ ಟಿಪ್ಪು ಕಣಕುಪ್ಪೆ ಕೋಟೆಯಲ್ಲಿ ಸುಮಾರು ೩೦೦ ಜನ ಸೈನಿಕರನ್ನು ಇಟ್ಟು ಈ ಠಾಣ್ಯವನ್ನು ರಕ್ಷಿಸಿದ.

ಕಾಲಾನಂತರದಲ್ಲಿ ಕಂಪನಿ ಸರ್ಕಾರ ಟಿಪ್ಪುವಿನ ಮೇಲೆ ದಾಳಿ ಮಾಡಿ ಬೆಂಗಳೂರು ಪ್ರದೇಶವನ್ನು ವಶಪಡಿಸಿಕೊಂಡು ಮರಾಠರಿಗೆ ಬಿಟ್ಟುಕೊಟ್ಟರು. ಮರಾಠರ ಪರಶುರಾಮಭಾವ ಸರದಾರನ ಸೈನ್ಯ ಬೆಂಗಳೂರಿನಿಂದ ನೇರವಾಗಿ ಕಣಕುಪ್ಪೆ ಪಾಳೇಪಟ್ಟಿಗೆ ಬಂದಿತು. ಆಗ ಈ ಪ್ರದೇಶದ ಕೃಷ್ಣಾಜಿ ಠಾಣ್ಯ ಆಯಿತು. ಪುನಃ ಟಿಪ್ಪುಸುಲ್ತಾನ್ ಬ್ರಿಟಿಷರನ್ನು ಸೋಲಿಸಿ ಕಣಕುಪ್ಪೆ ಪಾಳೆಯಪಟ್ಟನ್ನು ಪುನಃ ಪಡೆದನು. ಕಾಲಾಂತರದಲ್ಲಿ ಬ್ರಿಟಿಷರು ಟಿಪ್ಪುನನ್ನು ಸೋಲಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡಾಗ ಈ ಕಣಕುಪ್ಪೆ ಪಾಳೆಯಪಟ್ಟನ್ನು ಕಂಪನಿ ಸರ್ಕಾರ ಮೈಸೂರು ಅರಸರಿಗೆ ಬಿಟ್ಟುಕೊಟ್ಟರು.[೬೨]

ಮದಕರಿನಾಯಕನು ಕೂಲಹಳ್ಳಿ ಕದನದಲ್ಲಿ ಹರಪನಹಳ್ಳಿ ಪಾಳೆಯಗಾರರ ವಿರುದ್ಧ ಹೋರಾಡಲು ಹೊಸಕೆರೆ ಹತ್ತಿರ ಬಂದು ಇಳಿದನು. ಈ ಕೂಲಹಳ್ಳಿ ಕದನದಲ್ಲಿ ಹರಪನಹಳ್ಳಿ ಪಾಳೆಯಗಾರರನ್ನು ಸೋಲಿಸಿ ಅಲ್ಲಿಂದ ವಾಪಸ್ಸು ಬರುವಾಗ ಕಣಕುಪ್ಪೆಗೆ ಬಂದು ಅಲ್ಲಿ ಒಂದು ರಾತ್ರಿ ಇದ್ದು ದೇವರದರ್ಶನ ಮಾಡಿಕೊಂಡು ಬೆಳಗಿನ ಜಾವ ಚಿತ್ರದುರ್ಗಕ್ಕೆ ಹೋದನು.[೯]

ಚಿತ್ರದುರ್ಗದ ಮೇಲೆ ನವಾಬನು ದಾಳಿ ಮಾಡಿದಾಗ ಕಣಕುಪ್ಪೆ ಮೇಲುದುರ್ಗದ ಕೋಟೆಯ ಮೇಲೆ ಇರುವ ಫಿರಂಗಿಗಳನ್ನು ತರಲು ಮದಕರಿನಾಯಕ ಆದೇಶಿಸುತ್ತಾನೆ. ಈ ಸಂದರ್ಭದಲ್ಲಿ ಫಿರಂಗಿಯನ್ನು ಮೇಲಿನಿಂದ ಕೆಳಗೆ ತರುವಾಗ ಆಕಸ್ಮಿಕವಾಗಿ ಮೇಲುದುರ್ಗದ ಮೇಲಿಂದ ಕೆಳಗೆ ಬಿದ್ದು ಎರಡು ತುಂಡಾಯಿತು. ಆಗ ಅವುಗಳನ್ನು ಚಿತ್ರದುರ್ಗಕ್ಕೆ ತೆಗೆದುಕೊಂಡು ಹೋದರು.

ಕಣಕುಪ್ಪೆಯು ಸುಲ್ತಾನನ ಠಾಣ್ಯಾ ಆದಾಗ ಸುಬೇದಾರ ಷೇಕು ಇಸುಮಾಲುಗೆ ಅಲ್ಲಿರುವ ಉಚ್ಚಂಗಿ ಮತ್ತು ಕಾಟಮಲಿಂಗ ಎಂಬ ತೋಪುಗಳನ್ನು ಕಳುಹಿಸಿಕೊಡಿ ಎಂಬ ಪರವಾನಿಗೆ ಬಂತು. ಆಗ ಸುಬೇದಾರ ಅವುಗಳನ್ನು ಗುಡ್ಡದಿಂದ ಕೆಳಗೆ ಹಾಕಿಸಿ ಕಮ್ಮಾರನನ್ನು ಕರೆಸಿ ಒಡೆದು ಅದರ ಕಬ್ಬಿಣವನ್ನು ಅರಮನೆಯಲ್ಲೆ ಇಟ್ಟನು.

ಗುಲಾಂ ಮೊಹಿದ್ದೀನನ್ನು ವಿಚಾರಣೆ ಮಾಡಿ ಕಲ್ಲೇದಾರ ಸೈದ್ ಹುಸೇನನಿಗೆ ಇಲ್ಲಿ ತೋಪುಗಳು ಇಲ್ಲ ಎಂದು ತಿಳಿಸಿದನು. ಬಸವನಕೋಟೆ ತೋಪು, ಆಲೂರು ತೋಪು ತರಿಸಿಕೊಂಡು ಕಾಟಮಲಿಂಗ ಮತ್ತು ಉಚ್ಚಂಗಿ ಇದ್ದ ಸ್ಥಳದಲ್ಲಿ ಇರಿಸಿದನು. ಈ ಎರಡು ತೋಪುಗಳು ದೊಡ್ಡಪ್ರಮಾಣದ ಗುಂಡುಗಳನ್ನು ಇರಿಸುವ ತೋಪುಗಳಾಗಿದ್ದವು.

ಹೀಗೆ ಚಿತ್ರದುರ್ಗದ ಪಾಳೆಯಗಾರ ಆಳ್ವಿಕೆಯಲ್ಲಿ ಕಣಕುಪ್ಪೆ ಪಾಳೆಯಪಟ್ಟಿಗೆ ಉಸ್ತುವಾರಿ ನೋಡಿಕೊಳ್ಳಲು ಕಂದಾಯ ವಸೂಲಿ ಮಾಡಲು ಶಾಂತಿ ಸುವ್ಯವಸ್ಥೆ ಕಾಪಾಡಲು ಪ್ರಮುಖ ಅಧಿಕಾರಿಗಳನ್ನು ನೇಮಿಸಿದ್ದರು. ಈ ನಾಯಕರು ತಮ್ಮ ಅಧಿಕಾರಾವಧಿಯಲ್ಲಿ ಕಣಕುಪ್ಪೆ ಪ್ರದೇಶದಲ್ಲಿ ಸಾಕಷ್ಟು ಜನಪರ ಕಾರ್ಯಗಳನ್ನು ಮಾಡಿರುವುದು ಕಂಡುಬರುತ್ತದೆ.

ಐತಿಹಾಸಿಕ ಪ್ರದೇಶವಾದ ಕಣಕುಪ್ಪೆ ಪರಿಸರದಲ್ಲಿ ಪಾಳೆಯಗಾರರು ಅನೇಕ ಸ್ಮಾರಕಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿರುವ ಕಣಕುಪ್ಪೆ ಕೋಟೆ ರಂಗಯ್ಯನದುರ್ಗ ಕೋಟೆ ಅನೇಕ ದೇವಾಲಯಗಳು, ಮಠಗಳು, ಬಾವಿಗಳು, ಕೆರೆಗಳು ಕಂಡುಬರುತ್ತದೆ. ಈ ಸ್ಮಾರಕಗಳ ನಿರ್ಮಾಣ ಸ್ವರೂಪ ಅವುಗಳಲ್ಲಿರುವ ಅವಶೇಷಗಳು ಮುಂತಾದ ಅಂಶಗಳನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೩.೪. ಬಿಳಿಚೋಡು ಪಾಳೆಯಗಾರರು

ಚಾರಿತ್ರಿಕ ಹಿನ್ನೆಲೆಯುಳ್ಳ ಬಿಳಿಚೋಡು ಗ್ರಾಮವು ಚಿತ್ರದುರ್ಗಕ್ಕೆ ೪೩ ಕಿ.ಮೀ. ಹಾಗೂ ದಾವಣಗೆರೆಗೆ ೨೮ ಕಿ.ಮೀ. ದೂರದಲ್ಲಿದೆ. ದಾವಣಗೆರೆ ಹಾಗೂ ಜಗಲೂರು ಮಾರ್ಗ

ಮಧ್ಯದಲ್ಲಿ ಈ ಗ್ರಾಮವಿದೆ. ಈ ಗ್ರಾಮದ ಸುತ್ತಮುತ್ತ ಅಣಜಿ, ದೇವಿಕೆರೆ, ಅಸಗೋಡು ಮುಂತಾದ ಗ್ರಾಮಗಳು ಕಂಡುಬರುತ್ತವೆ. ಐತಿಹಾಸಿಕ ಹಿನ್ನೆಲೆಯಂತೆ ಹಿಂದೆ ಅಶೋಕ ಚಕ್ರವರ್ತಿ ಕೆಲವು ಕಾಲ ಈ ಪ್ರದೇಶದಲ್ಲಿ ಬೀಡುಬಿಟ್ಟಿದ್ದನೆಂದು ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ತಿಳಿಸಿದ್ದಾರೆ. ಇಲ್ಲಿನ ಅನೇಕ ಶಾಸನಗಳು, ವೀರಗಲ್ಲುಗಳು, ಬುರುಜು ಬತೇರಿಗಳು ಕೋಟೆಗಳು, ದೇವಾಲಯಗಳು ಇನ್ನು ಮುಂತಾದ ಸ್ಮಾರಕಗಳು ಇಲ್ಲಿನ ಐತಿಹಾಸಿಕ ಹಿನ್ನೆಲೆಯನ್ನು ತಿಳಿಯಲು ಸಹಾಯಕವಾಗಿವೆ. ಕ್ರಿ.ಶ. ೧೫೫೦ರ ಜಗಲೂರಿನ ೨೪ನೇ ಶಾಸನದಲ್ಲಿ ವಿಜಯನಗರದವರ ಕಾಲದಲ್ಲಿ ಈ ಬಿಳಿಚೋಡು ಕೊಟ್ಟೂರು ಚಾವಡಿಯ ಉಚ್ಚಂಗಿವೆಂಠೆಗೆ ಸೇರಿತ್ತು ಎಂದು ತಿಳಿದುಬರುತ್ತದೆ.[೮]

ವಿಜಯನಗರ ಸಾಮ್ರಾಜ್ಯ ಅರಸರು ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿ ಅದಕ್ಕೆ ಸೇರಿದ ನಾನಾ ಭಾಗಗಳ ಮೇಲೆ ತಾವೇ ನೇರವಾಗಿ ಆಳ್ವಿಕೆ ನಡೆಸುವುದು ಕಷ್ಟವೆಂದು ಕಂಡುಬಂದಾಗ ಆಯಾ ಪ್ರದೇಶಗಳ ಉಸ್ತುವಾರಿ ನೋಡಿಕೊಳ್ಳಲು ಕಂದಾಯ ವಸೂಲಿ ಮಾಡಲು ಶಾಂತಿ ಸುವ್ಯವಸ್ಥೆ ಕಾಪಾಡಲು ಯುದ್ಧ ಸಮಯದಲ್ಲಿ ಸಹಾಯ ಮಾಡಲು ಇವೇ ಮೊದಲಾದ ಉದ್ದೇಶಗಳಿಗಾಗಿ ಕೇವಲ ಬಲಿಷ್ಠ ಹಾಗೂ ಪ್ರಬಲ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಬಿಳಿಚೋಡು ಪ್ರದೇಶದ ಪಾಳೆಯಗಾರರ ಇತಿಹಾಸ ನೋಡಿದಾಗ ಪ್ರಮುಖವಾಗಿ ಇಲ್ಲಿ ಎರಡು ಪಾಳೆಯಗಾರರ ಮನೆತನ ಆಳ್ವಿಕೆ ಮಾಡಿರುವುದನ್ನು ನಾವು ನೋಡಬಹುದು. ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರು ಸುಮಾರು ೨೧೧ ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ಇವರು ವಾಲ್ಮೀಕಿ ಮತಸ್ಥರೂ ಕಾಮಗೇತಿ ವಂಶಜರೂ ಆಗಿದ್ದು ಕಸ್ತೂರಿ ಎಂಬ ಅಭಿಧಾನವನ್ನು, ಶ್ರೀಮನ್ಮಹಾನಾಯಕಚಾರ್ಯ ಎಂಬ ಬಿರುದನ್ನು ಧರಿಸಿಕೊಂಡಿದ್ದರು. ಈ ಮನೆತನದಲ್ಲಿ ಮುಖ್ಯರೆನಿಸಿದ ೧೪ ಜನ ಪಾಳೆಯಗಾರರು ಚಿತ್ರದುರ್ಗವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದಾರೆ. ಕೊನೆಯ ನಾಯಕನ ಕಾಲದಲ್ಲಿ ಚಿತ್ರದುರ್ಗದ ದಳವಾಯಿ ಮುದ್ದಣನ ಉಪಟಳದಿಂದ ಈ ಮತ್ತಿ ವಂಶವೂ ಕೊನೆಗೊಂಡಿತು. ನಂತರ ಬಿಳಿಚೋಡು ಸಂತತಿ ಪ್ರಾರಂಭವಾಯಿತು.

ಬಿಳಿಚೋಡು ಸಂತತಿ ಕೂಡ್ಲಿಗಿ ಬೆಟ್ಟದ ಸಾಲು ಅನೇಕಲ್ಲು ಗುಡ್ಡದಲ್ಲಿ ಪ್ರಾರಂಭವಾಗಿ ಜರಿಮಲೆದುರ್ಗದವರೆಗೆ ಸಾಗುತ್ತದೆ. ಈ ಬೆಟ್ಟದ ತಪ್ಪಲಿನಲ್ಲಿ ಜಡೆಕಲ್ಲುದುರ್ಗವೆಂಬ ಊರಿದೆ. ಈ ಭಾಗದಿಂದ ರಸಬ್ಬಗಡಿ ಓಬನಾಯಕ, ಜಡವೇನಾಯಕ, ಬುಳ್ಳನಾಯಕ ಎನ್ನುವ ಮೂರು ಜನ ಸಹೋದರರು ತಮ್ಮ ಕಂಪಳ ಸಮೇತ ವಲಸೆ ಬಂದು ಬಿಳಿಚೋಡಿನಲ್ಲಿ ಬಂದು ಸೇರಿದರು. ತದನಂತರ ಶಾಗಲಿ ಗ್ರಾಮಕ್ಕೆ ಜಡವಿನಾಯಕರು, ಮತ್ತಿಗ್ರಾಮಕ್ಕೆ ಸಬ್ಬಗಡಿ ಓಬನಾಯಕರು ವಲಸೆ ಹೋದರು. ಬುಳ್ಳನಾಯಕರು ಮಾತ್ರ ಬಿಳಿಚೋಡಿನಲ್ಲಿ ನೆಲೆಸಿದರು. ಬುಳ್ಳನಾಯಕನ ಮಕ್ಕಳು ಚಿಕ್ಕಹನುಮನಾಯಕ ಮತ್ತು ಓಬಣ್ಣನಾಯಕ. ಹೀಗೆ ಬಿಳಿಚೋಡಿನಲ್ಲಿ ತಮ್ಮ ಸಂತತಿ

ಬೆಳೆಯುತ್ತಾ ಸಾಗಿತ್ತು.[೯೫] ಓಬಣ್ಣನ ನಂತರ ಕಸ್ತೂರಿರಂಗಪ್ಪನಾಯಕ ಆಳ್ವಿಕೆ ನಡೆಸಿದ್ದನಲ್ಲದೇ ತನ್ನ ಆಳ್ವಿಕೆಯಲ್ಲಿ ಬಸವಾಪಟ್ಟಣದ ಪಾಳೆಯಗಾರರೊಂದಿಗೆ ಕಾಳಗವನ್ನು ನಡೆಸಿ ಮಾಯಕೊಂಡ, ಸಂತೆಬೆನ್ನೂರು, ಹೊಳಲ್ಕೆರೆ, ಅಣಜಿ, ಜಗಳೂರು ಮತ್ತಿತ್ತರ ಪ್ರಾಂತ್ಯಗಳನ್ನು ಚಿತ್ರದುರ್ಗಕ್ಕೆ ಸೇರಿಸಿಕೊಂಡನು. ಚಿಕ್ಕಣ್ಣನಾಯಕರ ಬಳಿ ಪಾರುಪತ್ಯಗಾರನಾಗಿದ್ದ ಮಲ್ಲಶೆಟ್ಟಿ ಎನ್ನುವವನು ಬಿಳಿಚೋಡು ಸೀಮೆಯ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿ ಗ್ರಾಮದ ಕಂದಾಯವನ್ನು ಮನ್ನಾ ಮಾಡಿದ.

ದಳವಾಯಿ ಮುದ್ದಣ್ಣನ ಉಪಟಳಕ್ಕೆ ಗುರಿಯಾಗಿದ್ದ ಭರಮಣ್ಣನಾಯಕ ಬಿಳಿಚೋಡಿನಲ್ಲಿ ನೆಲೆಸಿದ್ದ. ಇಲ್ಲಿಂದ ಬಿಳಿಚೋಡು ಸಂತತಿ ಹೆಚ್ಚು ಪ್ರವರ್ಧಮಾನಕ್ಕೆ ಬಂದಿತು. ಭರಮಣ್ಣನಾಯಕ ದಳವಾಯಿಗಳ ದಂಗೆಗಳನ್ನು ಹತ್ತಿಕ್ಕಿ ಒಬ್ಬ ಸಮರ್ಥ ಆಡಳಿತಗಾರನಾದನು. ಮತ್ತಿ ವಂಶ ಕೊನೆಗೊಂಡಾಗ ಈತನೆ ೧೬೮೯ರಲ್ಲಿ ಚಿತ್ರದುರ್ಗದ ಪಾಳೆಯಗಾರನಾಗುತ್ತಾನೆ. ಇವನಿಂದ ಚಿತ್ರದುರ್ಗದ ಪಾಳೆಯಗಾರರ ಇತಿಹಾಸದಲ್ಲಿ ಬಿಳಿಚೋಡಿನ ಹೆಸರು ಶಾಶ್ವತವಾಯಿತು.

ಹರಪನಹಳ್ಳಿ, ರಾಯದುರ್ಗ, ಬಸವಾಪಟ್ಟಣದ ಪಾಳೆಯಗಾರರು ಮೊಗಲರು ಹೀಗೆ ಅನೇಕ ಶತ್ರುಗಳು ಇದ್ದರು. ಅತ್ಯಂತ ಧೈರ್ಯ ಹಾಗೂ ದಕ್ಷತೆಯಿಂದ ರಾಜ್ಯವಾಳಿ ಪ್ರಜಾಹಿತಕಾರ್ಯಗಳನ್ನು ಮಾಡಿ ದುರ್ಗದಲ್ಲಿ ಶಾಂತಿ ನೆಲೆಸುವಂತೆ ಮಾಡಿದನು. ಈತನು ಸದಾ ಯುದ್ಧ ನಿರತನಾಗಿದ್ದರಿಂದ ಬಿಚ್ಚುಗತ್ತಿ ಭರಮಣ್ಣನಾಯಕನಂತೆ ಪ್ರಸಿದ್ಧನಾದನು.[೯೬]

ಬಿಚ್ಚುಗತ್ತಿ ಭರಮಣ್ಣ ನಾಯಕನು ಬಿಳಿಚೋಡು ಸೀಮೆಯೊಳಗೆ ಕಲ್ಲೇನಹಳ್ಳಿ ಗ್ರಾಮದ ಅಗ್ರಹಾರವನ್ನು ಉಗ್ರಾಣದ ರಂಗಪ್ಪನಿಗೆ ವಹಿಸುವುದರ ಮೂಲಕ ಆ ಗ್ರಾಮದ ಹುಟ್ಟುವಳಿಯನ್ನು ಅನುಭವಿಸುವಂತೆ ಶಾಸನ ನೀಡಿರುವುದನ್ನು ತಿಳಿಸುತ್ತದೆ. ಹಾಗೆಯೇ ನಾಯಕನು ಚಿತ್ರದುರ್ಗದ ಸೀಮೆಗೆ ಸೇರಿದ ಹಳುವುದರ ಎಂಬ ಗ್ರಾಮದ ಅಗ್ರಹಾರವನ್ನು ಭಟ್ಟರ ತಿಮ್ಮಪ್ಪನಿಗೆ ವಹಿಸಿ ಅಗ್ರಹಾರ ದಾನಪತ್ರವನ್ನು ಬರೆಸಿಕೊಟ್ಟಿರುವ ವಿಷಯ ಶಾಸನಗಳಿಂದ ತಿಳಿದುಬರುತ್ತದೆ.

ಭರಮಪ್ಪನಾಯಕ ಜಗಲೂರು ವಿರಕ್ತಮಠಕ್ಕೆ ಗ್ರಾಮದಾನ ಮಾಡುವುದರ ಮೂಲಕ ವೀರಶೈವ ಧರ್ಮವನ್ನು ಪ್ರೋತ್ಸಾಹಿಸಿದನು. ಈ ಪಾಳೆಯಗಾರರು ಬಲಿಷ್ಠ ಕೋಟೆ, ಕೊತ್ತಲಗಳ, ಕಟ್ಟಿಸುವುದರ ಮೂಲಕ ಶತ್ರುಗಳ ದಾಳಿಯನ್ನು ಯಶಸ್ವಿಯಾಗಿ ತಡೆಗಟ್ಟುತ್ತಿದ್ದರೆಂದು ಸರ್ವೇಭೇದ್ಯವಾದುದು. ಚಿತ್ರದುರ್ಗದ ಏಳುಸುತ್ತಿನ ಕೋಟೆ ಕಟ್ಟಲು ಈ ನಾಯಕರು ವ್ಯವಸ್ಥೆ ಮಾಡಿರುವುದು ಕಂಡುಬರುತ್ತದೆ. ಸುಮಾರು ೨೦ಕ್ಕೂ ಹೆಚ್ಚು ಕೆರೆಗಳನ್ನು ಹೊಂಡಗಳನ್ನು ನಿರ್ಮಿಸಿದನು. ಈತನು ಕ್ರಿ.ಶ. ೧೭೨೦-೨೧ರಲ್ಲಿ ಆದಿವಾಲದ ಯುದ್ಧದಲ್ಲಿ ಗೆದ್ದರೂ ಭರಮಣ್ಣನಾಯಕ ಗಾಯಗೊಂಡು ಮರಣ ಹೊಂದುತ್ತಾನೆ. ಈತನ ಮರಣದ ನಂತರ ಹಿರೇ ಮದಕರಿನಾಯಕ ಅಧಿಕಾರಕ್ಕೆ ಬರುತ್ತಾನೆ.

ಓಬೇಮದಕರಿನಾಯಕ ಅಧಿಕಾರವಹಿಸಿಕೊಂಡ ನಂತರ ಹರಪನಹಳ್ಳಿ, ಬಿದನೂರು, ಸವಣೂರು, ಸಂತೆಬೆನ್ನೂರು ಮುಂತಾದ ಪಾಳೆಯಗಾರರರೊಡನೆ ಹೋರಾಡಿ ಈಶಾನ್ಯದಲ್ಲಿ ರಾಜ್ಯ ವಿಸ್ತರಿಸಿದ. ಮಾಯಕೊಂಡ ಕೋಟೆಯ ವಶಕ್ಕಾಗಿ ಹರಪನಹಳ್ಳಿ ಪಾಳೆಯಗಾರ ಸೋಮಶೇಖರ ನಾಯಕನೊಂದಿಗೆ ಮಾಯಕೊಂಡ ಯುದ್ಧದಲ್ಲಿ ವೀರಮರಣ ಹೊಂದುತ್ತಾನೆ.[೯೭] ಈಗಲೂ ಹೀರೆಮದಕರಿ ನಾಯಕನ ಸಮಾಧಿಯನ್ನು ಮಾಯಕೊಂಡದಲ್ಲಿ ನೋಡಬಹುದು. ಈತನು ಸುಮಾರು ೬೦ ಸೀಮೆಯ ಮೇಲೆ ಆಧಿಪತ್ಯ ಸ್ಥಾಪಿಸಿದ್ದನು. ಇವನ ನಂತರ ಚಿಕ್ಕಣ್ಣ ನಾಯಕನು ಅಧಿಕಾರಕ್ಕೆ ಬಂದನು. ಇವನ ನಂತರ ಕಸ್ತೂರಿರಂಗಪ್ಪನಾಯಕ, ರಾಜವೀರ ಮದಕರಿನಾಯಕ ಮುಂತಾದ ಪಾಳೆಯಗಾರರು ಆಡಳಿತ ನಡೆಸಿರುವುದು ಕಂಡುಬರುತ್ತದೆ. ಈ ಪಾಳೆಯಗಾರರು ಕಾಮಗೇತಿ ವಂಶದ ವಾಲ್ಮೀಕಿ ಗೋತ್ರದವರಾಗಿದ್ದು, ಮತ್ತಿ ಮತ್ತು ಬಿಳಿಚೋಡು ಸಂತತಿಯಾಗಿ ಆಳ್ವಿಕೆ ನಡೆಸಿದ್ದಾರೆ.

ಭರಮಣ್ಣನಾಯಕನ ಕಾಲದಲ್ಲಿ ಚಿತ್ರದುರ್ಗದಲ್ಲಿ ಚಿನ್ನದ ಮನೆ ಎನ್ನುವ ಒಂದು ಕಛೇರಿ ಇದ್ದು, ಅವರ ಮನೆಗೆ ಸಂಬಂಧಪಟ್ಟ ಹಾಗೂ ನಾಗತಿಯರ ಒಡವೆ ಮಾಡಿಸಲು ಎಂಟು ಜನ ಅಕ್ಕಸಾಲಿಗರ ತಂಡವಿತ್ತು. ಈ ಅಕ್ಕಸಾಲಿಗರಿಗೆ ಒಂದು ದಿನಕ್ಕೆ ಎರಡು ಗದ್ಯಾಣ ಸಂಬಳವಿತ್ತು. ಚಿನ್ನ ಕೊಟ್ಟು ತರುವ ಲೆಕ್ಕವಿಡಲು ಚಿನ್ನದ ಮನೆಯ ಉಸ್ತುವಾರಿಗಾಗಿ ಬಿಳಿಚೋಡಿನ ದ್ಯಾಮಣ್ಣ ಎಂಬುವವರನ್ನು ನೇಮಿಸಲಾಗಿತ್ತು. ಅಂದಿನಿಂದ ಬಿಳಿಚೋಡಿನ ದ್ಯಾಮಣ್ಣನವರ ಮನೆಯರಿಗೆ ಚಿನ್ನದ ಮನೆಯವರೆಂದೆ ಹೆಸರು ಬಂತು.[೯೮]

ಕೊನೆಯ ಮದಕರಿನಾಯಕನ ಕಾಲದಲ್ಲಿ ಬಿಳಿಚೋಡು ಹನುಮ ಎನ್ನುವ ಭಾರವಾದ ಫಿರಂಗಿಯೊಂದು ಶತ್ರುಗಳ ವಶವಾಯಿತು. ಬಿಳಿಚೋಡು ಪ್ರಾಂತ್ಯದಲ್ಲಿ ಹಲವು ನಾಗತಿಯರು ಜನಪದ ಕಾರ್ಯಗಳನ್ನು ಮಾಡಿರುವುದು ಕಂಡುಬರುತ್ತದೆ.

ಹೀಗೆ ಬಿಳಿಚೋಡು ವಂಶಸ್ಥರು ಚಿತ್ರದುರ್ಗ ಪಾಳೆಯಪಟ್ಟಿನಲ್ಲಿ ದೇವಾಲಯ, ಕೋಟೆ, ಕೆರೆ, ಕಾಲುವೆಗಳು ಬರುಜು ಬತೇರಿಗಳು ನಿರ್ಮಿಸಿ ಹಲವು ಜನಪದ ಕಾರ್ಯಗಳು ಮಾಡುವುದರೊಂದಿಗೆ ಜನರಿಗೆ ಬಹಳ ಹತ್ತಿರವಾಗಿದ್ದರು. ಈಗಲೂ ಬಿಳಿಚೋಡಿನ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಪಾಳೆಯಗಾರರು, ನಾಯಕರು ಅಧಿಕಾರಿಗಳು ನಿರ್ಮಿಸಿದ ಸ್ಮಾರಕಗಳನ್ನು ನೋಡಬಹುದು.

### ೩.೫. ಉಚ್ಚಂಗಿದುರ್ಗದ ಪಾಳೆಯಗಾರರು

ಉಚ್ಚಂಗಿದುರ್ಗ ಪ್ರಾಚೀನ ಕಾಲದಿಂದಲೂ ಐತಿಹಾಸಿಕವಾಗಿ ಪ್ರಸಿದ್ಧಿಯನ್ನು ಪಡೆದ ಪ್ರದೇಶವಾಗಿದೆ. ಈ ಪ್ರದೇಶದಲ್ಲಿ ಪಲ್ಲವರು, ಕದಂಬರು, ರಾಷ್ಟ್ರಕೂಟರು, ನೊಳಂಬರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಮಾಂಡಲಿಕರು, ಪಾಳೆಯಗಾರರು ಇಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ತದನಂತರ ಬ್ರಿಟಿಷರ ಕಾಲದಲ್ಲಿ ಈ ಪ್ರದೇಶವು

ಆಳ್ವಿಕೆಗೆ ಒಳಪಟ್ಟಿತು. ಇಲ್ಲಿ ಚಾರಿತ್ರಿಕ ಇತಿಹಾಸಕ್ಕಿಂತಲೂ ಹಿಂದಿನ ಪ್ರಾಕ್ಚಾರಿತ್ರಿಕ ನೆಲೆಗಳು ಕೂಡ ಕಂಡುಬಂದಿದೆ. ಇದಕ್ಕೆ ಕಾರಣ ಇಲ್ಲಿ ಹಿತಕರವಾದ ವಾತಾವರಣ, ಫಲವತ್ತಾದ ಭೂ ಪ್ರದೇಶ ಇವುಗಳ ಜೊತೆಗೆ ವಾಸಿಸಲು ಯೋಗ್ಯವಾದ ಗಿರಿಕಂದರಗಳಿರುವುದರಿಂದ ಈ ಪ್ರದೇಶದಲ್ಲಿ ಪ್ರಾಚೀನ ಕಾಲದಿಂಲೂ ಜನರು ನೆಲೆಸಿರುವುದಕ್ಕೆ ಕುರುಹುಗಳು ಕಂಡುಬರುತ್ತವೆ. ಆದುದರಿಂದ ಇಲ್ಲಿ ಕರ್ನಾಟಕದ ಪ್ರಮುಖ ರಾಜಮನೆತನಗಳು ಆಳ್ವಿಕೆ ನಡೆಸಿರುವುದು ಈ ಅವಶೇಷಗಳ ಮೂಲಕ ತಿಳಿದುಕೊಳ್ಳಬಹುದು. ಈ ಪ್ರದೇಶದಲ್ಲಿ ಕರ್ನಾಟಕದ ಪ್ರಮುಖ ರಾಜಮನೆತನಗಳು ಸಂಸ್ಥಾನಿಕರ ಮಾಂಡಲಿಕರು, ಪಾಳೆಯಗಾರರು ಆಡಳಿತ ನಡೆಸಿ ಅರಮನೆಗಳು, ಕೋಟೆ, ದೇವಾಲಯಗಳು, ಬುರುಜು ಬತೇರಿಗಳು ನಿರ್ಮಾಣ ಮಾಡಿರುವುದನ್ನು ನೋಡಬಹುದು. ಹಾಗೆಯೇ ಶಾಸನಗಳು, ಶಿಲಾಶಾಸನಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು ತಾಮ್ರಶಾಸನಗಳು ಈ ಪ್ರದೇಶದಲ್ಲಿ ದೊರೆತಿವೆ.

ಉಚ್ಚಂಗಿದುರ್ಗ ಪ್ರದೇಶದಲ್ಲಿ ಪಾಳೆಯಗಾರರ ಆಳ್ವಿಕೆ, ಕಲೆ ವಾಸ್ತುಶಿಲ್ಪ, ಸಾಮಾಜಿಕ, ರಾಜಕೀಯ, ಆಡಳಿತ ಮುಂತಾದ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ವಿಜಯನಗರ ಸಾಮ್ರಾಜ್ಯ ಪತನವಾದ ನಂತರ ಉಚ್ಚಂಗಿದುರ್ಗದಲ್ಲಿ ಪಾಳೆಯಗಾರರ ಸ್ವತಂತ್ರರಾಗಿ ಆಡಳಿತ ನಡೆಸಿ ಹಲವಾರು ಕೊಡುಗೆಗಳನ್ನು ನೀಡಿದ್ದಾರೆ. ಇಲ್ಲಿ ದಾದಯ್ಯ ನಾಯಕ ಮೊದಲ ಪಾಳೆಯಗಾರನಾಗಿ ಉಚ್ಚಂಗಿದುರ್ಗವನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಆಡಳಿತ ನಡೆಸಿರುವುದು ನಮಗೆ ತಿಳಿದುಬರುತ್ತದೆ. ದಾದಯ್ಯನಾಯಕ ಹರಪನಹಳ್ಳಿ ಪ್ರದೇಶವನ್ನು ಆಳ್ವಿಕೆ ಮಾಡುವುದಕ್ಕಿಂತ ಮೊದಲೆ ಉಚ್ಚಂಗಿದುರ್ಗ ಪ್ರದೇಶದಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿ ಇಲ್ಲಿಂದ ತನ್ನ ಆಳ್ವಿಕೆಯನ್ನು ಪ್ರಾರಂಭಿಸಿದ್ದನೆಂದು ತಿಳಿದುಬರುತ್ತದೆ. ದಾದಯ್ಯನಾಯಕ ಉಚ್ಚಂಗಿದುರ್ಗ ಪ್ರದೇಶದಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಲು ಕೆಲವು ಐತಿಹ್ಯಗಳಿವೆ.

ಒಂದನೆಯದಾಗಿ ದಾದಯ್ಯನಾಯಕನು ಬೇಟೆಯಾಡಲು ಹೋಗುವ ಸಂದರ್ಭದಲ್ಲಿ ಮೊಲವು ನಾಯಿಯನ್ನು ಅಟ್ಟಿಸಿಕೊಂಡು ಹೋಗುವ ದೃಶ್ಯವನ್ನು ಕಂಡು ಈ ಸ್ಥಳದಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿದನೆಂದು ತಿಳಿದುಬರುತ್ತದೆ. ಜೊತೆಗೆ ಈ ಪ್ರದೇಶವೇ ಹರಪನಹಳ್ಳಿ ನಗರವಾಗಿತ್ತು ಎಂದು ಇಲ್ಲಿನ ಹಿರಿಯರು ತಿಳಿಸುತ್ತಾರೆ.

ಎರಡನೆಯದಾಗಿ ಬೇಡ ಮುದ್ದಪ್ಪನಾಯಕನಿಗೆ ದಾದಯ್ಯ, ರಂಗಯ್ಯ, ತಿಮ್ಮಯ್ಯ ಮತ್ತು ಓಬಣ್ಣ ಎಂಬ ನಾಲ್ಕು ಮಕ್ಕಳಿದ್ದರು. ಅದರಲ್ಲಿ ದಾದಯ್ಯನಿಗೆ ಕನಸಿನಲ್ಲಿ ಮೊದಲಗಟ್ಟಿ ಬಳಿ ತುಂಗಭದ್ರಾ ನದಿಯನ್ನು ದಾಟಿ ಕಾನಹಳ್ಳಿಯಲ್ಲಿ ನೆಲೆಸಿದ್ದನೆಂದು ನಂತರ ಬಾಗಳಿ ಗೌಡರ ಪರಿಚಯದೊಂದಿಗೆ ಒಂದು ಕತ್ತಿಯ ವಿಷಯ ತಿಳಿದು ಆ ಕತ್ತಿ ಹೊಯ್ಸಳರ ಅರಸ ವಿಷ್ಣುವರ್ಧನ ಗುಂಡಿಯಲ್ಲಿ ಹೂಳಿಟ್ಟು ನಂತರ ವಿಷ್ಣುವರ್ಧನ ಸಮೀಪದ ಬೆಟ್ಟದಲ್ಲಿ ಅಡಗಿಕೊಂಡಿದ್ದನಂತೆ. ದಾದಯ್ಯನು ಕತ್ತಿಯನ್ನು ಗೌಡರ ಮನೆಯಿಂದ ಪಡೆದು ನೀಲಗುಂದದಲ್ಲಿ

ಬೇಟೆಯಾಡಿದ ನಂತರ ವಿಶ್ರಾಂತಿ ಪಡೆಯುವಾಗ ಅವನ ಮೇಲೆ ಸರ್ಪ ಇದ್ದ ವಿಷಯವನ್ನು ಕಾಮಭಟ್ಟರಿಂದ ತಿಳಿದು ಇಲ್ಲೇ ಒಂದು ರಾಜ್ಯವನ್ನು ಕಟ್ಟಿದನಂತೆ. ಅದೇ ಹರಪುರವಾಯಿತೆಂಬ ಪ್ರತೀತಿ ಈ ಭಾಗದಲ್ಲಿ ಇದೆ.

ಮೂರನೆಯದಾಗಿ ದಾದಯ್ಯನಾಯಕನಿಗೆ ಕನಸಿನಲ್ಲಿ ಒಂದು ದಿನ ದೇವಿಯು ಆದೇಶ ಮಾಡಿದಳಂತೆ. ಆ ಆದೇಶದಂತೆ ರಾಮಪ್ಪನ ಮನೆಯಲ್ಲಿ ದರೋಡೆ ಮಾಡಿಕೊಂಡು ಬಂದ ದರೋಡೆಕಾರರ ಬಳಿ ಇದ್ದ ಎಲ್ಲಾ ದನಕನಕಗಳು ದಾದಯ್ಯನಾಯಕನಿಗೆ ಲಭಿಸಿದವು. ಈ ಸಂಪತ್ತಿನಿಂದ ದಾದಯ್ಯನಾಯಕ ಈ ರಾಜ್ಯವನ್ನು ಕಟ್ಟಿದನು ಎಂಬ ಪ್ರತೀತಿ ತಿಳಿದುಬರುತ್ತದೆ.

ಲಿಂಗಣ್ಣ ಕವಿಯ ಕೆಳದಿ ನೃಪವಿಜಯಂ ಕೃತಿಯಲ್ಲಿ ಉಲ್ಲೇಖವಾದಂತೆ ಆದಿಯೋಳ್ ವುಚ್ಚಂಗಿಯೆಂಬ ಸ್ಥಳದೊಳಿರ್ದು ಅನಂತರಂ ಹರಿಪುರ ಪ್ರತಿನಾಮ ಹರಪನಹಳ್ಳಿ ಎಂಬ ಕೋಟೆಯಂ ಬಲಿಸಿ ಆ ಕೋಟೆಯೊಳಿರ್ದು ರಾಜ್ಯಂ ಗೆದ್ದ ದಾದೇಯನಾಯಕ ರಂಗರಾಜಯ್ಯ ಹಿರಿಯ ಬಸವಂತ ನಾಯಕ ಮುಂತಾದ ವಿಷಯಗಳು ತಿಳಿದುಬರುತ್ತವೆ

ಈ ಮೇಲಿನ ಹೇಳಿಕೆಗಳಿಂದ ತಿಳಿದುಬರುವುದೇನೆಂದರೆ ದಾದಯ್ಯನಾಯಕ ಉಚ್ಚಂಗಿದುರ್ಗದ ಪಾಳೆಯಪಟ್ಟಿನ ಸ್ಥಾಪಕನೆಂದು ತಿಳಿದುಬರುತ್ತದೆ. ದಾದಯ್ಯನಾಯಕ ಉಚ್ಚಂಗಿದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರ ರಾಜ್ಯ ಸ್ಥಾಪಕ ಈತನೆ ಎಂದು ಹೇಳಬಹುದು.

ದಾದಯ್ಯನಾಯಕನಿಗೆ ಕ್ರಿ.ಶ. ೧೫೬೬ರಲ್ಲಿ ಪಟ್ಟಾಭಿಷೇಕವಾಯಿತು. ಕ್ರಿ.ಶ. ೧೮೦೦ರಲ್ಲಿ ಹರಪನಹಳ್ಳಿ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಗೆ ವಶವಾಗುವ ಕಾಲದಲ್ಲಿ ಅವರಿಗೆ ಬರೆದುಕೊಟ್ಟ ಕೈಫಿಯತ್ತಿನಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದು ತಿಳಿದುಬರುತ್ತದೆ. ದಾದಯ್ಯನಾಯಕನು ಮೊದಲು ಬಾಗಳಿಯಲ್ಲಿದ್ದನು. ನಂತರ ದಾದಯ್ಯನಾಯಕನು ಚಿತ್ರದುರ್ಗದ ತಿಮ್ಮಣ್ಣ ನಾಯಕನಿಗೆ ಬಸವಾಪಟ್ಟಣದ ಕೆಂಗಣ್ಣನಾಯಕ ವಿರುದ್ಧ ಸಹಾಯ ಮಾಡಿದ್ದರಿಂದ ತನ್ನ ಮಗಳಾದ ಹೊನ್ನವ್ವ ನಾಗತಿಯನ್ನು ದಾದಯ್ಯನಾಯಕನಿಗೆ ಕೊಟ್ಟು ಉಚ್ಚಂಗಿದುರ್ಗವನ್ನು ಅಳಿಯ ದಾದಯ್ಯ ನಾಯಕನಿಗೆ ಬಳುವಳಿಯಾಗಿ ಕೊಟ್ಟಿರಬಹುದೆಂದು ತಿಳಿದುಬರುತ್ತದೆ.[೬೬]

ದಾದಯ್ಯನಾಯಕನು ಮೊದಲ ದೊರೆ. ಇವನು ಬಾಗಳಿಯ ಮಾಚಿನಾಯಕನ ಮಗ ಕ್ರಿ.ಶ. ೧೫೮೦ರಲ್ಲಿ ಈ ಪ್ರದೇಶದ ಪಾಳೆಯಗಾರನಾಗಿದ್ದನೆಂದು ಶಾಸನಾಧಾರಗಳಿಂದ ತಿಳಿದುಬರುತ್ತದೆ. ದಾದಯ್ಯನಾಯಕನಿಗೆ ವಿಜಯನಗರ ಅರಸರಿಂದ ಬಂದ ಬಿರುದುಗಳು "ಮನ್ಮಹಾನಾಚಾರ್ಯ". "ಭಾಷೆಗೆ ತಪ್ಪದ ನಾಯಕರ ಗಂಡ," "ಮೊರೆ ಹೊಕ್ಕವರ ಕಾಯ್ವ ಮಾರಾಂತಕ ಗೆಲುವ ಇನ್ನೂ ಮುಂತಾದವುಗಳಿವೆ. ಈತನು ಕ್ರಿ.ಶ. ೧೫೫೭ರಿಂದ ೧೫೯೩ರ ವರೆಗೆ ಆಳಿದನೆಂದು ತಿಳಿದುಬರುತ್ತವೆ ಈತನು ವಿಜಯನಗರ ಅರಸರ ಮನ್ನಣೆಯನ್ನು ಪಡೆದುಕೊಂಡು ಹರಪನಹಳ್ಳಿಯ ಪ್ರಾಂತ್ಯವನ್ನು ಪಾಲಿಸುವುದಕ್ಕೆ ಅನುಕೂಲವಾದ ಸಿಬ್ಬಂದಿಯನ್ನು

ಪಡೆದನೆಂದು ಹೇಳುತ್ತಾರೆ. ಈ ಮನೆತನದವರು ಈಗಲೂ ಹರಪನಹಳ್ಳಿಯಲ್ಲಿ ಜನಿಸಿದ ಅಂಶಗಳು ಸಿಗುತ್ತವೆ. ಇವರು ವಿಜಯನಗರ ಕೃಷ್ಣದೇವರಾಯ. ಪಟ್ಟಾಭಿಷೇಕ ಕಾಲದಲ್ಲಿ ಇದ್ದರು ಎಂಬ ಅಂಶ ದಾಖಲೆಗಳಿಂದ ತಿಳಿದುಬರುತ್ತದೆ.[೧೦೦] ಹೀಗೆ ದಾದಯ್ಯನಾಯಕನು ಸ್ಥಾಪಿಸಿದ ಉಚ್ಚಂಗಿದುರ್ಗ ಪಾಳೆಯಪಟ್ಟನ್ನು ಮುಂದೆ ಅನೇಕ ಪಾಳೆಯಗಾರರು ಆಡಳಿತ ನಡೆಸಿ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ.

**ರಂಗಣ್ಣನಾಯಕ**

ದಾದಯ್ಯನಾಯಕನ ಮಗನಾದ ರಂಗಣ್ಣನಾಯಕ ಕ್ರಿ.ಶ. ೧೫೫೩ರಿಂದ ೧೬೧೬ರವರೆಗೆ ಆಳ್ವಿಕೆ ಮಾಡಿದ್ದಾನೆ. ಹರಪನಹಳ್ಳಿ ಪಾಳೆಯಪಟ್ಟಿಗೆ ಅರಸನಾದ ಇವನು ಉಚ್ಚಂಗಿದುರ್ಗ ಪ್ರದೇಶವು ಇವನ ಆಳ್ವಿಕೆಗೆ ಒಳಪಟ್ಟಿತ್ತು. ತಂದೆಯ ಜೊತೆ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನು. ತನ್ನ ಪಾಳೆಯಪಟ್ಟನ್ನು ಕೊಟ್ಟೂರುವರೆಗೂ ವಿಸ್ತರಿಸಿದನು. ಜರಿಮಲೆ ಪಾಳೆಯಗಾರನ ಮಗಳಾದ ಜಂಪನಾಗತಿಯನ್ನು ಮದುವೆ ಮಾಡಿಕೊಂಡಿದ್ದನು. ಇವನು ಕೊಟ್ಟೂರು ಗುರುಬಸವಸ್ವಾಮಿಗೆ ಭಕ್ತಿಯನ್ನು ಅರ್ಪಿಸುವ ಉದ್ದೇಶದಿಂದ ದೇವಾಲಯದ ಮಧ್ಯಭಾಗವನ್ನು ಮತ್ತು ಮಹಾದ್ವಾರವನ್ನು ಕಟ್ಟಿಸಿದ್ದನು.[೧೦೧]

ಇವನ ನಂತರ ಭರಮಣ್ಣನಾಯಕ, ಬಸವಂತನಾಯಕ, ಹರಿಯಮ್ಮಾಜಿ, ಮುಮ್ಮಡಿ ಬಸಪ್ಪನಾಯಕ, ಸೋಮಶೇಖರನಾಯಕ ಮುಂತಾದ ಪಾಳೆಯಗಾರರು ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿರುವುದು ದಾಖಲೆಗಳಿಂದ ತಿಳಿದುಬರುತ್ತದೆ. ಉಚ್ಚಂಗಿದುರ್ಗ ಪ್ರದೇಶವನ್ನು ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಸೇರಿಸಿಕೊಂಡು ಪ್ರಮುಖ ಕೇಂದ್ರವನ್ನಾಗಿ ಮಾಡಿಕೊಂಡು ಈ ಪಾಳೆಯಗಾರರು ಹರಪನಹಳ್ಳಿ ಪ್ರದೇಶದಿಂದ ಆಳ್ವಿಕೆ ಮಾಡಿದ್ದಾರೆ. ಇವರ ಆಡಳಿತದ ಸಂದರ್ಭದಲ್ಲಿ ಉಚ್ಚಂಗಿದುರ್ಗ ಪ್ರದೇಶದಲ್ಲಿ ತಮ್ಮದೇ ಆದ ಕೊಡುಗೆಗಳನ್ನು ನೀಡುವುದರ ಮೂಲಕ ತಮ್ಮ ಆಡಳಿತ ಕುರುಹುಗಳನ್ನು ಉಳಿಸಿಕೊಂಡು ಹೋಗಿರುವುದು ಕಂಡುಬರುತ್ತದೆ. ದೇವಾಲಯ, ಕೋಟೆ, ಶಿಲಾಶಾಸನಗಳು ಮುಂತಾದ ಕುರುಹುಗಳನ್ನು ಕಾಣಬಹುದು. ಅಲ್ಲದೆ ದೇವಾಲಯಗಳ ಜೀರ್ಣೋದ್ಧಾರ ದೇವಾಲಯಗಳಿಗೆ ದಾನದತ್ತಿ ನೀಡುವುದರ ಮೂಲಕ ಉಚ್ಚಂಗಿ ಪ್ರದೇಶದಲ್ಲಿನ ಜನರ ಸುಖ ಶಾಂತಿ ನೆಮ್ಮದಿಯಿಂದ ಬಾಳಲು ಅನುವು ಮಾಡಿಕೊಟ್ಟಿದ್ದಾರೆ ಎಂದು ತಿಳಿದುಬರುತ್ತದೆ.

ಹೀಗೆ ದಾವಣಗೆರೆ ಜಿಲ್ಲೆಯಲ್ಲಿ ಪ್ರಮುಖ ಪಾಳೆಯಗಾರರು ಆಳ್ವಿಕೆ ನಡೆಸಿದ್ದು ಇವರ ಆಡಳಿತಾವಧಿಯಲ್ಲಿ ಹಲವು ಅಭಿವೃದ್ಧಿ ಕಾರ್ಯಗಳು, ಬದಲಾವಣೆಗಳು ಕಂಡುಬರುತ್ತವೆ. ಹರಪನಹಳ್ಳಿ, ಸಂತೆಬೆನ್ನೂರು ಪಾಳೆಯಗಾರರಂಥಹ ಪ್ರಮುಖ ಪಾಳೆಯಗಾರರು ಸುಮಾರು ಮೂರು ಶತಮಾನಗಳ ಕಾಲ ಆಳ್ವಿಕೆ ನಡೆಸಿದ್ದು ಕಿರುಪಾಳೆಯಪಟ್ಟುಗಳು ಅವರ ಸಹಾಯಕರಾಗಿ ಸಾಮಂತರಾಗಿ ಕೆಲವು ವರ್ಷಗಳು ಆಳ್ವಿಕೆ ನಡೆಸಿದ್ದಾರೆ.

**ಕೊನೆಟಿಪ್ಪಣಿಗಳು**

೧. ಶಿವಣ್ಣ ಕೆ.ಎನ್., ೧೯೭೬, ಚಿತ್ರದುರ್ಗ ಜಿಲ್ಲೆಯಲ್ಲಿ ವಿಜಯನಗರರ ಅರಸರ ಆಳ್ವಿಕೆ, ಚಂದ್ರವಳ್ಳಿ, ಪು.ಸಂ. ೬೧

೨. ರೈಸ್. ಬಿ.ಎಲ್., ಎಫಿಗ್ರಾಫಿಯಾ ಆಫ್ ಕರ್ನಾಟಿಕ, ಸಂ.೧೧, ಪು. ೨೮

೩. ಅದೇ, ಪು. ೭೫

೪. ಸುಜಾತ ಹೆಚ್.ಎಸ್.(ಸಂ), ಎಂ.ಎಸ್ ಪುಟ್ಟಣ್ಣ., ಲೇಖನಗಳು, ಪು.ಸ.೦ ೨೧೧

೫. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ಮಲೆಕರ್ನಾಟಕದ ಅರಸುಮನೆತನಗಳು ಪು.ಸಂ. ೪೯

೬. ರೈಸ್. ಬಿ.ಎಲ್.(ಸಂ.), ೧೮೭೬, ಮೈಸೂರು ಅಂಡ್ ಕೂರ್ಗ್ ಗೆಜೆಟಿಯರ್ ಸಂ–೨, ಪು.ಸಂ. ೨೨೫

೭. ಯೋಗೀಶ್ವರಪ್ಪ ಡಿ.ಎನ್., ೨೦೦೧, ನಿಡಗಲ್ಲು ನಾಯಕರು: ದಕ್ಷಿಣ ನಾಯಕರ ಅರಸು ಮನೆತನಗಳು ಪು.ಸಂ. ೫೫–೫೬

೮. ಶಾಮಲ ರತ್ನಕುಮಾರಿ ವಿ.ಎಸ್.(೨೦೦೧), ಹರತಿ ಪಾಳೆಯಗಾರರು: ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.ಸಂ. ೧೫೯

೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೭೧

೧೦. Political consultation, Fort St'George 7 August1801, report of March 1802 to the board Printed at Bellary 1892 p.p. 1-5

೧೧. Manual of the administration of the Madras presidency in illustration of the records of Government and the yearly administration report, 1886 p.p. 153-154

೧೨. ಅದೇ, ಪುಟ. ಸಂ. ೭೧

೧೩. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೇಗಾರರ ಇತಿಹಾಸ ದರ್ಶನ, ೨೦೦೬, ಪು.ಸಂ. ೨೯

೧೪. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪು.ಸಂ. ೭೨

೧೫. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರು, ೧೯೯೬, ಪು.ಸ.೦ ೧೭

೧೬. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಗಾರರ ಇತಿಹಾಸ ದರ್ಶನ, ಪು.ಸಂ.೩೬

೧೭. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪು. ಸಂ. ೭೩

೧೮. ಅದೇ, ಪು.ಸಂ. ೭೪

೧೯. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪು.ಸಂ. ೪೫

೨೦. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪು.ಸಂ. ೭೫

೨೧. ಅದೇ, ಪು.ಸಂ. ೭೫

೨೨. ಸದಾಶಿವಪ್ಪ ಕು.ಂಬಾ., ಪೂರ್ವೋಕ್ತ, ಪು.ಸಂ. ೪೯

೨೩. Munro reports, 1802, March 20, p.p 02

೨೪. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೩೦

೨೫. ಶ್ಯಾಮಲ ಸಿ.ಆರ್., ಪೂರ್ವಕರ್ನಾಟಕದ ಪಾಳೆಯಗಾರರು, ಪು.ಸಂ. ೩೪

೨೬. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪು.ಸಂ. ೭೭

೨೭. ಶ್ಯಾಮಲ ಸಿ.ಆರ್., ಪೂರ್ವೋಕ್ತ, ಪು.ಸಂ. ೩೯

೨೮. ಅದೇ, ಪು.ಸಂ. ೪೦

೨೯. ಅದೇ ಪು.ಸಂ.೪೦

೩೦. ಗಿರಿಜಾ ಟಿ., ಪೂರ್ವೋಕ್ತ, ಪು.ಸಂ ೬೭೨

೩೧. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೩೭

೩೨. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪು.ಸಂ. ೭೯

೩೩. ಅಬ್ದುಲ್ ಸತ್ತಾರ್, ತರೀಕೆರೆಯ ಪಾಳೆಯಗಾರರು, ಪು. ಸಂ. ೫

೩೪. ರಾಜಾರಾಂ ಹೆಗಡೆ, ಅಶೋಕ ಶೆಟ್ಟರ್, ಮತ್ತು ಕರ್ನಾಟಕದ ಅರಸುಮನೆತನಗಳು, ಪು.ಸಂ. ೨೪೧

೩೫. ಕಲಬುರ್ಗಿ ಎಂ.ಎಂ.(ಸಂ), ಕರ್ನಾಟಕದ ಕೈಫಿಯತ್ತುಗಳು, ಪು.ಸಂ. ೪೭

೩೬. ಅಬ್ದುಲ್ ಸತ್ತಾರ್ ಪಿ., ಪೂರ್ವೋಕ್ತ, ಪು.ಸಂ. ೧೩

೩೭. ದಿವಾಕರ ಆರ್.ಆರ್., ಕರ್ನಾಟಕ ಥ್ರೂ ದಿ ಏಜಸ್ ಪು.ಸಂ. ೬೮೦

೩೮. ರೈಸ್ ಬಿ.ಎಲ್.(ಸಂ), ಎ.ಕ., ಚನ್ನಗಿರಿ ೪೮-೪೯, ಪು.ಸಂ. ೪೪೯

೩೯. ಭಾನುಮತಿ ವೈ.ಸಿ., ೧೯೯೬ ಕೃಷ್ಣಶರ್ಮ ವಿರಚಿತ ಸರಜಾಹನುಮೇಂದ್ರ ಯಶೋವಿಲಾಸಂ, ಪು.ಸಂ. ೧೦೨

೪೦. ರೈಸ್. ಬಿ.ಎಲ್.(ಸಂ.), ೧೮೭೬, ಪೂರ್ವೋಕ್ತ, ಪು.ಸಂ. ೪೬೫

೪೧. ಭಾನುಮತಿ ವೈ.ಸಿ., ಪೂರ್ವೋಕ್ತ ಪು.ಸಂ. ೧೦೨

೪೨. ಅಬ್ದುಲ್ ಸತ್ತಾರ್, ಪೂರ್ವೋಕ್ತ, ಪು.ಸಂ. ೨೦-೨೧

೪೩. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಪಾಳೆಯಗಾರರು, ಪು.ಸಂ. ೨೯, ೩೩

೪೪. ಸುಮತೀಂದ್ರ ನಾಡಿಗ್, ಸಂತೆಬೆನ್ನೂರು ನಾಯಕರು, ಪು.ಸಂ. ೩

೪೫. ಕೆಳದಿ ಗುಂಡಾ ಜೋಯಿಸ(ಅನು), ೧೯೯೯, ಲಿಂಗಣ್ಣ ಕವಿಯ ಕೆಳದಿ ನೃಪವಿಜಯ ಪು. ೧೨೩-೧೨೪

೪೬. ರೈಸ್ ಬಿ.ಎಲ್.(ಸಂ), ಎ.ಕ. ೧೧. ಬಾಗೂರು ಪು.ಸಂ. ೩೮೦

೪೭. ಅದೇ, ಪು.ಸಂ. ೩೬೪

೪೮. ರಾಜಾರಾಮ ಹೆಗಡೆ, ಅಶೋಕ್ ಶೆಟ್ಟರ್, ಪೂರ್ವೋಕ್ತ, ಪು.ಸಂ. ೨೫೩

೪೯. ಅಬ್ದುಲ್ ಸತ್ತಾರ್ ಪಿ, ಪೂರ್ವೋಕ್ತ, ಪು.ಸಂ. ೨೪

೫೦. ಅದೇ, ಪು.ಸಂ. ೨೫

೫೧. ರಾಜಾರಾಮ ಹೆಗಡೆ, ಪೂರ್ವೋಕ್ತ ಪು.ಸಂ. ೨೫೩

೫೨. ಅದೇ, ಪು.ಸಂ. ೨೫೩

೫೩. ಗಂಗಾನಾಯಕ(ಪ್ರ.ಸಂ), ಪಾಳೆಯಗಾರರ ಶಾಸನ ಸಂಪುಟ-೧, ಮೈಸೂರು ವಿ.ವಿ. ಪು.ಸ.೦ ೩೪

೫೪. ಸುಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೩೮

೫೫. ವಿಜಯನಗರ ಅಧ್ಯಯನ ಸಂ-೧೨, ಪು.ಸಂ. ೮೩

೫೬. ಗಂಗಾನಾಯಕ, ಪೂರ್ವೋಕ್ತ, ಪು.ಸಂ. ೩೪

೫೭. ಸುಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೩೮

೫೮. ರೈಸ್ ಬಿ.ಎಲ್., ಪೂರ್ವೋಕ್ತ, ತರೀಕೆರೆ ೨೪, ಪು.ಸಂ. ೪೨೩

೫೯. ಇತಿಹಾಸ ದರ್ಶನ, ಸಂಪುಟ-೧೬ ಪು.ಸಂ. ೮೪

೬೦. ವೆಂಕಣ್ಣ ರಾಮಣ್ಣ ಬಿ.(ಸಂ), ಶ್ರೀಮದ್ ಜಗದ್ಗುರು ಶ್ರೀಕೂಡ್ಲಿ ಶೃಂಗೇರಿ ಸಂಸ್ಥಾನದ ಪ್ರಾಚೀನ ಲೇಖನ ಸಂಗ್ರಹ, ೪೮, ಪು. ೪೩

೬೧. ರೈಸ್ ಬಿ.ಎಲ್.(ಸಂ), ಪೂರ್ವೋಕ್ತ, ಪು.ಸಂ. ೨೦೮

೬೨. ಸುಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೩೬

೬೩. ಗಂಗಾನಾಯಕ(ಸಂ), ಪೂರ್ವೋಕ್ತ, ಪು.ಸಂ. ೩೬

೬೪. ಅದೇ, ಪು.ಸಂ. ೩೬

೬೫. ಗಂಗಾನಾಯಕ, ಪೂರ್ವೋಕ್ತ, ಪು.ಸಂ. ೩೭

೬೬. ಕೆಳದಿ ಗುಂಡಾಜೋಯಿಸ(ಅನು), ಪೂರ್ವೋಕ್ತ, ಪು.ಸಂ. ೧೫೪-೧೫೫

೬೭. ಸುಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೩೭

೬೮. ಅಬ್ದುಲ್ ಸತ್ತಾರ್, ಪೂರ್ವೋಕ್ತ, ಪು.ಸಂ. ೫೨

೬೯. ಅದೇ, ಪು.ಸಂ. ೫೩

೭೦. ಅದೇ, ಪು.ಸಂ. ೩೯

೭೧. ಗಂಗಾನಾಯಕ್ ಕೆ.ಎನ್., ಪೂರ್ವೋಕ್ತ, ಪು.ಸಂ. ೮೯

೭೨. ಪೂರ್ವೋಕ್ತ ತರೀಕೆರೆ ಪಾಳೆಯಗಾರರು ಪು.ಸಂ. ೪೧–೪೨–(ಹೆಚ್ಚಿನ ವಿವರಕ್ಕೆ ನೋಡಿ: ತರಿಕೆರೆ ಪಾಳೆಯಗಾರರ ಕಥನಕಾವ್ಯ ಈ ಕೃತಿಯಲ್ಲಿ ಸರ್ಜಾಹನುಮಪ್ಪನಾಯಕನ ಬಗ್ಗೆ ಮೂರು ವಿಧವಾದ ಪ್ರಕರಣಗಳನ್ನು ಚರಿತ್ರೆ ಮತ್ತು ಜಾನಪದ ಕ್ಷೇತ್ರದ ಮಾಹಿತಿಯಿಂದ ಈ ಕುರಿತಂತೆ ವಿರೂಪಾಕ್ಷಿ ಪೂಜಾರಹಳ್ಳಿ ವಿಶ್ಲೇಷಿಸಿದ್ದಾರೆ. ಕಡೂರಿನ ನ್ಯಾಯಾಲಯ ಹಾಗೂ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಈ ಬಗ್ಗೆ ದಾಖಲೆಗಳಿರುವುದನ್ನು ಗಮನಿಸಬಹುದು.)

೭೩. ಅದೇ, ಪು.ಸಂ. ೪೨

೭೪. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು. ೩೬

೭೫. ರಾಜಬಿಚ್ಚುಗತ್ತಿ ಭರಮಣ್ಣನಾಯಕ, ಗಜಕೇಸರಿ ಪು.ಸ.೦ ೨೫

೭೬. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ನಾಯಕ ಅರಸರ ರಾಜಕೀಯ ಚರಿತ್ರೆ, ಪು.ಸಂ. ೪

೭೭. ವೆಂಕಟೇಶಯ್ಯ ಎಂ.ಜಿ., ಚಿತ್ರದುರ್ಗದ ಪಾಳೆಯಗಾರರು ಪು.ಸಂ. ೨೫

೭೮. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ ಪು.ಸಂ. ೩೭

೭೯. ಅದೇ, ಪು.ಸಂ. ೩೯

೮೦. ಅದೇ, ಪು.ಸಂ. ೪೦

೮೧. ಅದೇ, ಪು.ಸಂ. ೪೧

೮೨. ರಾಜಬಿಚ್ಚುಗತ್ತಿ ಭರಮಣ್ಣನಾಯಕ, ಪೂರ್ವೋಕ್ತ, ಪು.ಸಂ. ೮೧

೮೩. ಅದೇ, ಪು.ಸಂ. ೮೧

೮೪. ಅದೇ, ಪು.ಸಂ. ೮೨

೮೫. ಅದೇ, ಪು.ಸಂ. ೮೩

೮೬. ಕಲಬುರ್ಗಿ ಎಂ.ಎಂ., ಪೂರ್ವೋಕ್ತ, ಪು.ಸಂ. ೨೮

೮೭. ಅದೇ, ಪು.ಸಂ. ೨೯

೮೮. ಅದೇ. ಪು.ಸಂ. ೩೦

೮೯. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿಸಿರಿ, ಪು.ಸಂ. ೧೨೯

೯೦. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು. ಪು.ಸಂ. ೨೭

೯೧. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ ಪು.ಸ.೦ ೧೩೧

೯೨. ಕಲಬುರ್ಗಿ ಎಂ.ಎಂ., ಪೂರ್ವೋಕ್ತ ಪು.ಸಂ. ೩೧

೯೩. ಅದೇ. ಪು.ಸಂ, ೩೩-೩೪-(ಹೆಚ್ಚಿನ ವಿವರಕ್ಕೆ ನೋಡಿ: ಪಿ.ಬಿ.ಮಂಜಣ್ಣ ಇವರ ಕಣಕುಪ್ಪೆ ಪಾಳೆಯಗಾರರು ಎಂ.ಫಿಲ್. ಪ್ರಬಂಧ ಹಾಗೂ ಪುಸ್ತಕವನ್ನು ಗಮನಿಸಬಹುದು.)

೯೪. ಗಿರಿಜಾ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ ಪು.ಸಂ. ೬೪೯

೯೫. ಸೋಮಶೇಖರ್ ಎಸ್.ವೈ.(ಸಂ), ಜಗಲೂರು, ಪು.ಸಂ. ೮೧

೯೬. ಅದೇ, ಪು.ಸಂ. ೮೨

೯೭. ಅದೇ, ಪು.ಸಂ. ೮೨

೯೮. ಅದೇ, ಪು.ಸ. ೮೩

೯೯. ಕೊಟ್ರೇಶ್ ಎಂ., ೨೦೦೫, ಐತಿಹಾಸಿಕ ಧಾರ್ಮಿಕ ಕ್ಷೇತ್ರ ಉಚ್ಚಂಗಿದುರ್ಗ, ಪು.ಸಂ. ೩೫

೧೦೦. ಅದೇ, ಪು.ಸಂ. ೩೫

೧೦೧. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೩೨

# ಅಧ್ಯಾಯ ನಾಲ್ಕು

## ಪಾಳೆಯಗಾರರ ಕಾಲದ ಸಮಾಜೋ-ಆರ್ಥಿಕ ಸ್ಥಿತಿಗತಿ

೪.೧. ಆಡಳಿತ

೪.೨. ಸಾಮಾಜಿಕ ವ್ಯವಸ್ಥೆ

೪.೩. ಆರ್ಥಿಕ ವ್ಯವಸ್ಥೆ

೪.೪. ಶಿಕ್ಷಣ ಮತ್ತು ಸಾಹಿತ್ಯ

೪.೫. ಧಾರ್ಮಿಕ ವ್ಯವಸ್ಥೆ

# ಅಧ್ಯಾಯ ನಾಲ್ಕು

## ಪಾಳೆಯಗಾರರ ಕಾಲದ ಸಮಾಜೋ-ಆರ್ಥಿಕ ಸ್ಥಿತಿಗತಿ

ಪ್ರಾಚೀನ ಕಾಲದ ಆಡಳಿತ ವ್ಯವಸ್ಥೆಯನ್ನು ಗಮನಿಸಿದರೆ ಆ ವ್ಯವಸ್ಥೆಯನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಒಂದು ಕೇಂದ್ರಾಡಳಿತ ಮತ್ತೊಂದು ಸ್ಥಳೀಯ ಆಡಳಿತ. ಇಡೀ ರಾಜ್ಯವ್ಯವಸ್ಥೆಗೆ ರಾಜನು ಸಹಜವಾಗಿ ಆಡಳಿತದ ಕೇಂದ್ರಬಿಂದುವಾಗಿದ್ದನು. ರಾಜನು ತನ್ನ ಮಂತ್ರಿಗಳ, ಸಾಮಂತರ, ಅಧಿಕಾರಿಗಳ ಮೂಲಕ ರಾಜ್ಯಾಡಳಿತವನ್ನು ನಿರ್ವಹಿಸುತ್ತಿದ್ದನು. ಇನ್ನು ಗ್ರಾಮವಾರು, ಪಟ್ಟಣಗಳು ಸ್ವತಂತ್ರ ಸಣ್ಣ ಸಣ್ಣ ಘಟಕಗಳಂತೆ ಕಾರ್ಯ ನಿರ್ವಹಿಸಿರುವುದು ಕಂಡುಬಂದರೂ ಆಂತರಿಕ ರಚನೆಯಲ್ಲಿ ರಾಜನೇ ಪ್ರಮುಖ ಕೇಂದ್ರಬಿಂದುವಾಗಿದ್ದನು. ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿದ್ದು, ವಿಜಯನಗರ ಸಾಮ್ರಾಜ್ಯವು ತಾಳಿಕೋಟೆ ಯುದ್ಧದಲ್ಲಿ ಸೋತು ದುರ್ಬಲಗೊಂಡಾಗ ಪಾಳೆಯಗಾರರು ಸ್ವತಂತ್ರ ಆಡಳಿತವನ್ನು ನಿರ್ವಹಿಸಿದರು.

ವಿಜಯನಗರ ಕಾಲದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರು ಅಮರನಾಯಕತ್ವವನ್ನು ಪಡೆದುಕೊಂಡು ಚಕ್ರವರ್ತಿಗಳಿಗೆ ಅನೇಕ ರೀತಿಯ ಸೇವೆಗಳನ್ನು ಮಾಡುತ್ತಾ ಬಂದಿದ್ದರು. ಪ್ರಮುಖವಾಗಿ ಸೈನಿಕ ಸಹಾಯವನ್ನು ನೀಡುವುದು, ಅಗತ್ಯವಿದ್ದಾಗ ಯುದ್ಧಗಳಲ್ಲಿ ಭಾಗವಹಿಸುವುದು, ಅರಸರಿಗೆ ನಿಗದಿಯಾದ ಕಪ್ಪಕಾಣಿಕೆಗಳನ್ನು ಸಲ್ಲಿಸುವುದು, ಉಡುಗೊರೆಗಳನ್ನು ನೀಡುವುದು, ಸಭೆ-ಸಮಾರಂಭ, ಉತ್ಸವಗಳಲ್ಲಿ ಭಾಗವಹಿಸುವುದು ಇನ್ನೂ ಮುಂತಾದ ಅನೇಕ ಸೇವೆಗಳನ್ನು ಮಾಡಬೇಕಿತ್ತು. ಕೃಷ್ಣದೇವರಾಯನ ಆಳ್ವಿಕೆಯ ಸಂದರ್ಭದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಪೋರ್ಚುಗೀಸ್ ಪ್ರವಾಸಿಗ ನ್ಯೂನಿಜ್ ತನ್ನ ಪ್ರವಾಸಿ ಗ್ರಂಥದಲ್ಲಿ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. ವಿಜಯನಗರ ಸಾಮ್ರಾಜ್ಯದಲ್ಲಿ ಇಂತಹ ಅಮರನಾಯಕರ ಪಟ್ಟಿಯನ್ನು ಅವರ ಸಂಸ್ಥಾನದ ಉತ್ಪನ್ನವನ್ನು ಅವರು ಕೇಂದ್ರ ಸರ್ಕಾರಕ್ಕೆ ನೀಡಬೇಕಾಗಿದ್ದ ಕಪ್ಪಕಾಣಿಕೆಯ ಮೊತ್ತವನ್ನು ತಿಳಿಸಿದ್ದಾರೆ.[1] ಇಂತಹ ಅಮರನಾಯಕರನ್ನು ತನ್ನ ಗ್ರಂಥದಲ್ಲಿ 'ಕ್ಯಾಪ್ಟನ್ಸ್' ಎಂದು ಕರೆದಿದ್ದಾರೆ.[2] ಇಂತಹ ಕ್ಯಾಪ್ಟನ್ಸ್‌ಗಳು ವಿಜಯನಗರ ಸಾಮ್ರಾಜ್ಯದಲ್ಲಿ

ಸುಮಾರು ೨೦೦ಕ್ಕೂ ಹೆಚ್ಚು ಜನರು ಇದ್ದರು. ಇವರಲ್ಲಿ ಶ್ರೇಣೀಕೃತ ಪದ್ಧತಿ ಇತ್ತು. ಮಧುರಾ, ಜಿಂಜಿ, ತಂಜಾವೂರು ಮತ್ತು ಕೆಳದಿನಾಯಕರು ಮೊದಲನೇ ದರ್ಜೆ ಅಮರನಾಯಕರಾಗಿದ್ದರು. ಚಿತ್ರದುರ್ಗದಂತಹ ನಾಯಕರು ೨ನೇ ದರ್ಜೆ ಅಮರನಾಯಕರಾಗಿದ್ದರು. ಬಹುಶಃ ಸಂತೆಬೆನ್ನೂರು, ಹರಪನಹಳ್ಳಿ ಪಾಳೆಯಗಾರರು ಮೂರನೇ ದರ್ಜೆಯ ಪಾಳೆಯಗಾರರಾಗಿದ್ದರು ಎಂದು ಹೇಳಬಹುದು. ಮೂರನೇ ದರ್ಜೆಯ ನಾಯಕರು ಕೆಲವು ಹಳ್ಳಿಗಳಲ್ಲಿ ಮತ್ತು ಕಡಿಮೆ ಪ್ರದೇಶದಲ್ಲಿ ಸಾಮ್ರಾಜ್ಯವನ್ನು ವಿಸ್ತರಿಸಿದ್ದರು. ಇವರು ಚಕ್ರವರ್ತಿ ಅಥವಾ ಅಧೀನರಾಜರ ಹತೋಟಿಯಲ್ಲಿರುತ್ತಿದ್ದರು. ಅಮರನಾಯಕರ ಬಗ್ಗೆ ಪೇಯಸ್ ಹೀಗೆ ಅಭಿಪ್ರಾಯಪಡುತ್ತಾನೆ. ಸೈನ್ಯವನ್ನು ಸಿದ್ಧವಾಗಿಟ್ಟುಕೊಳ್ಳುವುದು ಅಮರನಾಯಕರ ಅತಿಮುಖ್ಯವಾದ ಕರ್ತವ್ಯವಾಗಿತ್ತು. ಅವರು ಪದಾತಿದಳದ ಸೈನಿಕರನ್ನು, ಕುದುರೆಗಳನ್ನು, ಆನೆಗಳನ್ನು ಸಾಕುತ್ತಿದ್ದರು. ಸೈನ್ಯವನ್ನು ಪಾಲಿಸುವುದರ ಜೊತೆಗೆ ಪ್ರತಿಯೊಬ್ಬ ನಾಯಕನು ರಾಜನಿಗೆ ಪ್ರತಿವರ್ಷವೂ ನಿರ್ದಿಷ್ಟ ಪ್ರಮಾಣದ ಹಣವನ್ನು ಪಾವತಿ ಮಾಡಬೇಕಿತ್ತು.[೩] ಅಮರನಾಯಕ ವ್ಯವಸ್ಥೆಯಿಂದ ಅನುಕೂಲಗಳು ಮತ್ತು ಅನನುಕೂಲಗಳೆರಡೂ ಇದ್ದವು. ಅನುಕೂಲಗಳೆಂದರೆ, ಅಮರನಾಯಕರ ಸಹಾಯದಿಂದ ವಿಜಯನಗರ ಸಾಮ್ರಾಜ್ಯ ಬೃಹತ್ತಾಗಿ ಬೆಳೆಯಲು ಸಾಧ್ಯವಾಯಿತು. ಬೃಹತ್ ಸಾಮ್ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆ ಸುಲಭ ಸಾಧ್ಯವಾಯಿತು. ಅತಿದೊಡ್ಡ ಪ್ರಮಾಣದ ಸೈನಿಕ ವ್ಯವಸ್ಥೆ ವಿಜಯನಗರ ಸಾಮ್ರಾಜ್ಯಕ್ಕೆ ಲಭ್ಯವಾಯಿತು. ಸಾಮಾನ್ಯ ಜನರು ಹಾಗೂ ಚಕ್ರವರ್ತಿಗಳ ನಡುವೆ ಅಮರನಾಯಕರು ಮಧ್ಯವರ್ತಿಗಳಾಗಿದ್ದರು. ಹೀಗೆ ಹಲವಾರು ಅನುಕೂಲಗಳು ಅಮರನಾಯಕರು ಅಥವಾ ಪಾಳೆಯಗಾರರ ಆಡಳಿತದಿಂದ ಸಾಧ್ಯವಾಯಿತು.

ಎಷ್ಟೇ ಅನುಕೂಲ ಇದ್ದರೂ ಕೆಲವು ಅನನುಕೂಲಗಳು ಕೂಡ ಇದ್ದವು. ಅವುಗಳೆಂದರೆ ಪ್ರಬಲ ರಾಜನು ನಾಯಕರನ್ನು ಹತೋಟಿಯಲ್ಲಿಟ್ಟುಕೊಳ್ಳುತ್ತಿದ್ದನು. ದುರ್ಬಲ ರಾಜನು ಅಧಿಕಾರಕ್ಕೆ ಬಂದರೆ ನಾಯಕರು ಸ್ವಾತಂತ್ರ್ಯವನ್ನು ಘೋಷಿಸಿಕೊಳ್ಳಲು ಪ್ರಯತ್ನ ಮಾಡುತ್ತಿದ್ದರು. ಚಕ್ರವರ್ತಿಗಳಿಗಿಂತ ಹೆಚ್ಚಾಗಿ ಅಮರನಾಯಕರಿಗೆ ಜನರ ಪ್ರೀತಿವಿಶ್ವಾಸ ಅಪಾರವಾಗಿ ಸಿಗುತ್ತಿತ್ತು. ಈ ವ್ಯವಸ್ಥೆ ತಾಳಿಕೋಟೆ ಯುದ್ಧದವರೆಗೆ ಮಾತ್ರ ಸಾಧ್ಯವಾಯಿತು. ತದನಂತರ ಪಾಳೆಯಗಾರರು ಸ್ವತಂತ್ರವಾಗಿ ಆಡಳಿತ ನಡೆಸಲು ಪ್ರಾರಂಭಿಸಿದರು. ಹೀಗೆ ಅಮರನಾಯಕರು ಹಾಗೂ ಪಾಳೆಯಗಾರರು ಸ್ವತಂತ್ರವನ್ನು ಪಡೆದುಕೊಂಡು ತಮ್ಮ ಪ್ರಾಂತ್ಯಗಳಲ್ಲಿ ಆಡಳಿತವನ್ನು ನಡೆಸಿ ಚರಿತ್ರೆಯಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ.

**೪.೧. ಹರಪನಹಳ್ಳಿ ಪಾಳೆಯಗಾರರ ಆಡಳಿತ**

ಹರಪನಹಳ್ಳಿ ಪಾಳೆಯಪಟ್ಟನ್ನು ಕ್ರಿ.ಶ. ೧೫೬೫ರಿಂದ ೧೭೯೯ರವರೆಗೆ ಅಂದರೆ ಸುಮಾರು ೨೩೩ ವರ್ಷಗಳ ಕಾಲ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಈ ಪಾಳೆಯಗಾರರಲ್ಲಿ ೧೫ ಜನ ಪುರುಷರು, ಒಬ್ಬ ಸ್ತ್ರೀ ಸೇರಿ ಒಟ್ಟು ೧೬ ಜನ ಆಳ್ವಿಕೆ ನಡೆಸಿದ್ದಾರೆ. ಮೊದಲ

ಅರಸ ದಾದಯ್ಯನಾಯಕನಿಂದ ಆರಂಭಗೊಂಡ ಈ ಪಾಳೆಯಪಟ್ಟು ಕೊನೆಯ ಅರಸ ೨ನೇ ಸೋಮಶೇಖರನಾಯಕನ ಅಂತ್ಯದೊಂದಿಗೆ ಈ ವಂಶದ ಆಳ್ವಿಕೆ ಕೊನೆಗೊಳ್ಳುತ್ತದೆ. ಈ ಎಲ್ಲಾ ಪಾಳೆಯಗಾರರಲ್ಲಿ ಸೋಮಶೇಖರನಾಯಕ ಅತ್ಯಂತ ಪರಾಕ್ರಮ ಹಾಗೂ ಶ್ರೇಷ್ಠ ಪಾಳೆಯಗಾರನಾಗಿದ್ದನು.

ಹರಪನಹಳ್ಳಿ ಪಾಳೆಯಗಾರರು ಹಾಗೂ ನಾಗತಿಯರು ಖಡ್ಗವಿದ್ಯೆ, ವ್ಯಾಯಾಮ, ಕುಸ್ತಿ ಕಸರತ್ತುಗಳಲ್ಲಿ ಪರಿಣತರಾಗಿದ್ದರು.[೮] ಇವರು ಬ್ರಾಹ್ಮಣರನ್ನು ಹೆಚ್ಚಾಗಿ ನೇಮಕ ಮಾಡಿಕೊಂಡು ದಿವಾನ, ರಾಯಸದವರು, ಪುರೋಹಿತರು, ವೈದ್ಯರು ಹೀಗೆ ಉನ್ನತವಾದ ಹುದ್ದೆಗಳನ್ನು ಅವರಿಗೆ ನೀಡಿದ್ದರು. ಈ ಎಲ್ಲಾ ಅಧಿಕಾರಿಗಳು ಶಾಸ್ತ್ರ, ಪುರಾಣ, ಆಡಳಿತ, ಅರ್ಥಶಾಸ್ತ್ರ ಮುಂತಾದ ಕ್ಷೇತ್ರಗಳಲ್ಲಿ ಪರಿಣತಿಯನ್ನು ಪಡೆದಿದ್ದರು. ರಾಜ್ಯದ ಆಡಳಿತದಲ್ಲಿ ಅರಸರಿಗೆ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡುತ್ತಿದ್ದರು.[೯] ನ್ಯಾಯಾಡಳಿತ ಹಾಗೂ ಸೈನಿಕಾಡಳಿತ ವ್ಯವಸ್ಥೆಯಲ್ಲಿ ಇವರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಅರಸರಿಗೆ ಯಾವಾಗಲೂ ಇವರು ಸಹಕಾರ ನೀಡುತ್ತಿದ್ದರು.

ಹರಪನಹಳ್ಳಿ ಪಾಳೆಯಗಾರರು ತಮ್ಮ ಆಡಳಿತಾವಧಿಯಲ್ಲಿ ವಿಜಯನಗರ ಸಾಮ್ರಾಜ್ಯದ ಸಂಸ್ಕೃತಿ, ಸಂಪ್ರದಾಯ, ಆಡಳಿತ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇವರು ತಮ್ಮ ಪಾಳೆಯಪಟ್ಟನ್ನು ವೇಂಟೆ, ಕಂಪಣ-ಮಾಗಣಿ, ಸೀಮೆ-ಮಂಡಲ, ನಾಡು-ಹೋಬಳಿ, ಗ್ರಾಮಗಳೆಂದು ವಿಭಜನೆ ಮಾಡಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಸುಬೇದಾರ, ಹವಾಲ್ದಾರ, ಗುರಿಕಾರ, ಮಜುಂದಾರ, ರಾಜಪುರೋಹಿತ, ಕಾರ್ಯಕರ್ತ, ಪಾರುಪತ್ತೆಗಾರ, ಗೌಡ, ಶಾನುಭೋಗ, ನಾಯಕ, ತಳವಾರ ಎಂಬಿತ್ಯಾದಿ ಅಧಿಕಾರಿಗಳನ್ನು ನೇಮಕ ಮಾಡಿಕೊಂಡಿದ್ದರು. ಈ ಅಧಿಕಾರಿಗಳು ಪಾಳೆಯಗಾರರ ಆಡಳಿತದಲ್ಲಿ ಅವರ ಸಹಾಯಕರಾಗಿದ್ದರು. ಇವರು ಸೂಕ್ತ ಸಲಹೆಯನ್ನು ನೀಡಿ ಪಾಳೆಯಗಾರರಿಗೆ ಮಾರ್ಗದರ್ಶನವನ್ನು ನೀಡುತ್ತಿದ್ದರು. ಇವರಲ್ಲದೆ ಕಾರಣಿಕರು, ಜೋಯಿಸರು, ಸುಂಕದ ಅಧಿಕಾರಿಗಳು, ರಾಯಭಾರಿಗಳು, ಭಂಡಾರಿಗಳು ಮುಂತಾದ ಸಣ್ಣಪುಟ್ಟ ಅಧಿಕಾರಿಗಳನ್ನು ನೇಮಕ ಮಾಡಿಕೊಂಡು ಆಡಳಿತವನ್ನು ನಿರ್ವಹಿಸುತ್ತಿದ್ದರು. ಈ ಅಧಿಕಾರಿಗಳು ನಾಯಕರಿಗೆ ಸಹಾಯ ಮಾಡುತ್ತಿದ್ದರು. ನಾಯಕರು ಇವರಿಗೆ ಹಣದ ರೂಪದಲ್ಲಿ ಸಂಬಳವನ್ನು ನೀಡುತ್ತಿದ್ದರು. ಹಾಗೆಯೇ ಕೆಲವು ಅಧಿಕಾರಿಗಳಿಗೆ ಇನಾಂ ಭೂಮಿಯನ್ನು ಜಹಗೀರು ರೀತಿಯಾಗಿ ಕೊಡುತ್ತಿದ್ದರು.

ವಿಜಯನಗರದ ಸಾಮ್ರಾಜ್ಯ ಅವನತಿಯಾದ ನಂತರದ ಹರಪನಹಳ್ಳಿ ಪಾಳೆಯಗಾರರ ವಿರುದ್ಧ ಹಲವರು ಶತ್ರುಗಳು ಹುಟ್ಟಿಕೊಂಡರು. ಅವುಗಳಲ್ಲಿ ಚಿತ್ರದುರ್ಗದ ನಾಯಕರು, ಹೈದರಾಲಿ, ಟಿಪ್ಪು, ಮರಾಠರು, ಬಿಜಾಪುರದ ಆದಿಲ್‌ಶಾಹಿಗಳು ಇನ್ನೂ ಮುಂತಾದ ಅನೇಕ

ಸಣ್ಣಪುಟ್ಟ ಅರಸರು ಇವರ ಮೇಲೆ ಯುದ್ಧ ಮಾಡುತ್ತಿದ್ದರು. ಇವರಿಂದ ತಮ್ಮ ಸಾಮ್ರಾಜ್ಯವನ್ನು ರಕ್ಷಿಸಿಕೊಳ್ಳಲು ಅಸ್ತಿತ್ವಕ್ಕಾಗಿ ಹಾಗೂ ಅಧಿಕಾರಕ್ಕಾಗಿ ಹೋರಾಟ ಮಾಡುವ ವ್ಯವಸ್ಥೆ ಹುಟ್ಟಿಕೊಂಡಿತು. ಆದುದರಿಂದ ತಮ್ಮ ರಕ್ಷಣೆಗಾಗಿ ದೊಡ್ಡ ಪ್ರಮಾಣದಲ್ಲಿ ಸೇನೆಯನ್ನು ಇಟ್ಟುಕೊಂಡಿದ್ದರು. ಸೈನ್ಯದಲ್ಲಿ ಕಾಲ್ದಳ, ಅಶ್ವದಳ, ಗಜದಳ ಮತ್ತು ಫಿರಂಗಿದಳ ಎಂಬ ನಾಲ್ಕು ವಿಭಾಗಗಳನ್ನು ಮಾಡಿಕೊಂಡಿದ್ದರು. ಕಾಲ್ದಳದಲ್ಲಿ ಖಡ್ಗಧಾರಿ, ಭಲ್ಲೇಕಾರ, ಧನುರ್ಧಾರಿ, ಬಂದೂಕುಧಾರಿಗಳೆಂಬ ಬೇರೆ ಬೇರೆ ರೀತಿಯ ಬಗೆಗಳಿದ್ದವು. ಯುದ್ಧದ ಸಂದರ್ಭದಲ್ಲಿ ಸ್ವತಃ ನಾಯಕರು ನೇತೃತ್ವ ವಹಿಸಿಕೊಂಡು ರಣರಂಗದಲ್ಲಿ ಹೋರಾಡುತ್ತಿದ್ದರು. ಪ್ರಾಂತ್ಯಪಾಲಕರು ಇವರಿಗೆ ಸಹಾಯಕರಾಗಿ ಒಂದೊಂದು ದಳದ ನೇತೃತ್ವವನ್ನು ವಹಿಸಿಕೊಂಡು ಅವರಿಗೆ ನೆರವು ನೀಡುತ್ತಿದ್ದರು. ಅದಕ್ಕಾಗಿ ಪಾಳೆಯಗಾರರು ಹಣವನ್ನು ಹೆಚ್ಚಾಗಿ ಖರ್ಚು ಮಾಡುತ್ತಿದ್ದರು. ಎಲ್ಲಾ ಗ್ರಾಮಗಳಲ್ಲಿ ಮನೆಗಳನ್ನು ಕಟ್ಟಿಸುತ್ತಿದ್ದರು. ದೇಹದಾರ್ಢ್ಯ ಇದ್ದವರಿಗೆ, ಕುಸ್ತಿ ಪಟುಗಳಿಗೆ ಹೆಚ್ಚಿನ ಪ್ರೋತ್ಸಾಹ ಹಾಗೂ ಗೌರವಗಳನ್ನು ನೀಡುತ್ತಿದ್ದರು. ಇದಕ್ಕೆ ಉದಾಹರಣೆ ಎಂಬಂತೆ ಪ್ರತಿವರ್ಷ ದೇಹದಾರ್ಢ್ಯ ಹಾಗೂ ಕುಸ್ತಿಪಂದ್ಯಗಳನ್ನು ಏರ್ಪಡಿಸಿ ಹೆಚ್ಚಿನ ಪ್ರೋತ್ಸಾಹ ಹಾಗೂ ಗೌರವವನ್ನು ನೀಡುತ್ತಿದ್ದರು.

ಪಾಳೆಯಗಾರರ ಕಾಲದಲ್ಲಿ ಕವಿಗಳಿಗೆ, ಸಾಹಿತಿಗಳಿಗೆ, ಪಂಡಿತರಿಗೆ, ಪುರೋಹಿತರಿಗೆ, ಕಲಾವಿದರಿಗೆ ರಾಜಾಶ್ರಯವಿತ್ತು. ನ್ಯಾಯವಿಚಾರದಲ್ಲಿ ನಾಯಕನೇ ಸರ್ವೋಚ್ಚ ನ್ಯಾಯಾಧೀಶನಾಗಿದ್ದನು. ಸಣ್ಣಪುಟ್ಟ ಜಗಳಗಳು ಗ್ರಾಮದ ಕಟ್ಟೆ ಮನೆಯಲ್ಲಿಯೇ ಹಿರಿಯರ ಸಮ್ಮುಖದಲ್ಲಿ ಚರ್ಚಿಸಿ ತೀರ್ಮಾನ ಆಗುತ್ತಿದ್ದವು. ಕಟ್ಟೆಮನೆಗೌಡರು ಮತ್ತು ಸದಸ್ಯರು ಆ ಗ್ರಾಮೀಣ ಪ್ರದೇಶದ ಮುಖ್ಯವಾದ ಕಟ್ಟೆಯ ಸ್ಥಳದಲ್ಲಿ ಕುಳಿತು ನ್ಯಾಯನಿರ್ಣಯ ಕೈಗೊಳ್ಳುತ್ತಿದ್ದರು.[6] ಕಟ್ಟೆಮನೆ ಎಂದರೆ ಜಾತಿಯ ಶ್ರೇಣಿ, ಸಂಘ-ಸಂಸ್ಥೆ, ಇಂದು ಕಟ್ಟೆಮನೆಯನ್ನು ಪಂಚಾಯಿತಿ ಕಟ್ಟೆ ಎಂದು ಕರೆಯುವುದು ಹೆಚ್ಚು ವಾಡಿಕೆ. ಇನ್ನೊಂದು ಅರ್ಥದಲ್ಲಿ ಕಟ್ಟೆಮನೆ ಎಂದರೆ ಗ್ರಾಮಾಧಿಕಾರಿಯ ಮನೆ. ಕಟ್ಟೆಮನೆಯ ಸ್ವರೂಪವು ಜನಾಂಗದ ಆಚಾರ-ವಿಚಾರ ರೂಢಿ ಮತ್ತು ಸಂಪ್ರದಾಯಗಳನ್ನು ಕೇಂದ್ರೀಕರಿಸಿಕೊಂಡಿರುತ್ತದೆ.

ಬೇಡರ ಕಟ್ಟೆಮನೆಗಳಲ್ಲಿ ಪಂಚಾಯಿತಿ ಮಾಡುವ ವಿಚಾರಗಳೆಲ್ಲವೂ ಆಯಾ ಹಟ್ಟಿಗಳು ಕಟ್ಟಿಕೊಳ್ಳುವ ಸಂಬಂಧವನ್ನೇ ಸಂಕೇತಿಸುತ್ತವೆ. ಸಾಮಾನ್ಯವಾಗಿ ಈ ಕಟ್ಟೆಮನೆಗಳು ವಿಜಯನಗರೋತ್ತರ ಕಾಲದಲ್ಲಿ ಸ್ಥಾಪನೆಯಾದವು. ನಾಯಕರು ಪಾಳೆಯಗಾರರಾಗಿ ಮುಂದುವರೆದಾಗ ಈ ಕಟ್ಟೆಮನೆಗಳು ಕಾರ್ಯ ನಿರ್ವಹಿಸುತ್ತಿದ್ದವು. ಕಂದಾಯದ ಪ್ರಮುಖ ಗ್ರಾಮಕ್ಕೆ ಒಂದು ಕಟ್ಟೆಮನೆ ಇರುತ್ತಿತ್ತು. ಗೌಡ, ಮಠದಸ್ವಾಮಿ, ಗ್ರಾಮದೇವರ ಪೂಜಾರಿ, ಶ್ಯಾನುಭೋಗ, ಕುಲಕರ್ಣಿ, ಬಣಕಾರ, ಶೆಟ್ಟಿ, ಹುಂಡೇಕಾರ, ತಳವಾರ ಹೀಗೆ ಸದಸ್ಯರು ಕಟ್ಟೆಮನೆಗಳಿಗೆ ಇರುತ್ತಿದ್ದರು. ಕಟ್ಟೆಮನೆಗಳಲ್ಲಿ ನ್ಯಾಯಾತೀರ್ಮಾನ ಆಗದ ಕಲಹಗಳು ಆಯಾ ಪ್ರದೇಶಕ್ಕೆ ಸಂಬಂಧಿಸಿದ ಸಾಮಂತ ಅರಸರ ಸಮ್ಮುಖದಲ್ಲಿ ತೀರ್ಮಾನ ಆಗುತ್ತಿದ್ದವು. ಅಲ್ಲಿಯೂ

ತೀರ್ಮಾನ ಆಗದ ವ್ಯಾಜ್ಯಗಳನ್ನು ಹರಪನಹಳ್ಳಿ ಪಾಳೆಯಗಾರರ ಸಮಿತಿಯಲ್ಲಿ ತೀರ್ಮಾನ ಆಗುತ್ತಿದ್ದವು. ಅರಸರ ಸಮಿತಿಗೆ ಒಂದು ಉದಾಹರಣೆ ಎಂದರೆ,

ಅಧ್ಯಕ್ಷ: ಅರಸ ಸೋಮಶೇಖರನಾಯಕ-೨

ಸದಸ್ಯರು: ಅಯ್ಯಪ್ಪ ಚಿಂತಾಮಣಿಯಪ್ಪ

ಶೂರ ಚಿಂತಮಣಿಯಪ್ಪ

ಓಲೇಕಾರ ಹಂಪರಸಪ್ಪ

ಬೊಕ್ಕಸದ ಭೀಮಯ್ಯ

ಈ ರೀತಿ ಸಮಿತಿಯನ್ನು ರಚಿಸಿ ಪ್ರಮುಖವಾದ ವ್ಯಾಜ್ಯಗಳನ್ನು ತೀರ್ಮಾನ ಮಾಡುತ್ತಿದ್ದರು.[2] ಅಪರಾಧಗಳಿಗೆ ಬೇರೆ ಬೇರೆ ರೀತಿಯ ಕಠಿಣ ಶಿಕ್ಷೆಗಳನ್ನು ನೀಡುತ್ತಿದ್ದರು. ಅವರ ಅಪರಾಧಕ್ಕೆ ತಕ್ಕಂತೆ ಶಿಕ್ಷೆಯನ್ನು ಕೊಡುತ್ತಿದ್ದರು. ಚಿಕ್ಕ ತಪ್ಪು ಮಾಡಿದವರಿಗೆ ಹಣದ ರೂಪದಲ್ಲಿ ದಂಡ ಹಾಕುತ್ತಿದ್ದರು. ದೊಡ್ಡ ತಪ್ಪು ಮಾಡಿದವರಿಗೆ, ವಿವಿಧ ರೀತಿಯ ಶಿಕ್ಷೆ ನೀಡುತ್ತಿದ್ದರು. ಕಳ್ಳತನ, ಪರಸ್ತ್ರೀಯರ ಮೇಲೆ ಅತ್ಯಾಚಾರ, ರಾಜಾಜ್ಞೆ ಮೀರಿದವರಿಗೆ, ಕೊಲೆ ಮಾಡಿದವನಿಗೆ, ಹೀಗೆ ವಿವಿಧ ರೀತಿಯ ಅಪರಾಧಗಳಿಗೆ ಅವುಗಳ ತಕ್ಕಂತೆ ಶಿಕ್ಷೆಯನ್ನು ನೀಡುತ್ತಿದ್ದರು.

ಹರಪನಹಳ್ಳಿ ಪಾಳೆಯಗಾರರು ಕೇವಲ ಅಪರಾಧಿಗಳಿಗೆ ಶಿಕ್ಷಿಸುವ ಗುಣವನ್ನೂ ಹೊಂದಿರದೆ ಕ್ಷಮಾಗುಣವನ್ನು ಹೊಂದಿದ್ದರು. ತಪ್ಪು ಮಾಡಿದವರು ತಪ್ಪು ಒಪ್ಪಿಕೊಂಡರೆ, ಶತ್ರುಗಳು ಕೊಡುವ ಶಿಕ್ಷೆಯನ್ನು ತಾಳಲಾರದೆ ರಕ್ಷಣೆಗಾಗಿ ಓಡಿಬಂದು ಅರಸನ ಮೊರೆ ಹೊಕ್ಕರೆ, ಅವರನ್ನು ರಕ್ಷಿಸುವ, ಅದಕ್ಕೆ ಉಂಟಾದ ಕಷ್ಟ ಕಾರ್ಪಣ್ಯಗಳನ್ನು ದೂರ ಮಾಡುವ ಕ್ಷಮಾಗುಣ ಹೊಂದಿದ್ದ ದಯಾಶೀಲ ಅರಸರಾಗಿದ್ದರು. ಇವರ ಶಾಸನಗಳಲ್ಲಿ ಭಾಷೆಗೆ ತಪ್ಪದ ನಾಯಕರ ಗಂಡ, ಮರೆ ಹೊಕ್ಕರೆ ಕಾಯುವ ಮರಾಂತಕ ಹೀಗೆ ತಮ್ಮನ್ನು ಬಿಂಬಿಸಿಕೊಂಡಿರುವುದನ್ನು ಗಮನಿಸಬಹುದು.

ಹೀಗೆ ಹರಪನಹಳ್ಳಿ ಪಾಳೆಯಗಾರರು ತಮ್ಮದೇ ನ್ಯಾಯ ತೀರ್ಮಾನ ವ್ಯವಸ್ಥೆಯನ್ನು ಹೊಂದಿದ್ದು ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆ ನೆಲೆಸುವಂತೆ ಮಾಡಿ ದಕ್ಷ, ಸಮರ್ಥ ಆಡಳಿತ ನಿರ್ವಹಣೆಗೆ ಹೆಸರಾಗಿದ್ದರು.

**ಸಂತೆಬೆನ್ನೂರು ಪಾಳೆಯಗಾರರ ಆಡಳಿತ**

ವಿಜಯನಗರ ಅರಸರ ಕಾಲದಲ್ಲಿ ಅಮರನಾಯಕತ್ವವನ್ನು ಪಡೆದುಕೊಂಡ ಸಂತೆಬೆನ್ನೂರು ನಾಯಕರು ವಿಜಯನಗರ ಅರಸರಿಗೆ ವಿಧೇಯರಾಗಿ ನಡೆದುಕೊಂಡು ಆಡಳಿತ ನಡೆಸಿದ್ದಾರೆ. ಈ ನಾಯಕರು ಅರಸರಿಂದ ಮಾಗಣೆಯಾಗಿ ಸೀಮೆ, ಪ್ರದೇಶಗಳನ್ನು ಪಡೆದುಕೊಂಡು ತಮ್ಮ ಪ್ರದೇಶಗಳಲ್ಲಿ ತೆರಿಗೆ ಸಂಗ್ರಹ, ಆಡಳಿತದಲ್ಲಿ ಸಹಾಯಕರನ್ನು ನೇಮಕ ಮಾಡಿಕೊಳ್ಳುವುದು

ಮುಂತಾದ ಕಾರ್ಯಗಳನ್ನು ಸ್ವತಂತ್ರವಾಗಿ ನಿರ್ವಹಿಸುತ್ತಿದ್ದರು.[೮] ತಾಳಿಕೋಟೆ ಯುದ್ಧದ ನಂತರ ಸುಮಾರು ವರ್ಷಗಳ ಕಾಲ ಸ್ವತಂತ್ರರಾಗಿ ಆಡಳಿತ ನಡೆಸಿದರು. ತದನಂತರ ಈ ನಾಯಕರು ಪರಿಸ್ಥಿತಿಗೆ ಅನುಗುಣವಾಗಿ ಬಿಜಾಪುರದ ಆದಿಲ್‌ಶಾಹಿಗಳ, ಮರಾಠರ, ಕೆಳದಿ, ಚಿತ್ರದುರ್ಗದ ಪಾಳೆಯಗಾರ, ಮೈಸೂರಿನ ಅರಸರ, ಹೈದರಾಲಿ ಟಿಪ್ಪುಸುಲ್ತಾನರ ಅಧೀನರಾಗಿ ಈ ಅರಸರಿಗೆ ಕಪ್ಪಕಾಣಿಕೆ ನೀಡಿ ಆಡಳಿತ ನಿರ್ವಹಿಸಿದರು.

ಇವರು ವಿಜಯನಗರ ಸಾಮ್ರಾಜ್ಯದ ಅರಸರ ಆಡಳಿತ ಪದ್ಧತಿಯನ್ನು ಮುಂದುವರಿಸಿಕೊಂಡು ಅಧಿಕಾರ ನಡೆಸಿದ್ದಾರೆ. ತಮ್ಮ ಪಾಳೆಯಪಟ್ಟನ್ನು ಶಾಸನಗಳಲ್ಲಿ ಉಲ್ಲೇಖವಾಗಿದ್ದಂತೆ ವೇಂಠೆ, ಮಾಗಣಿ, ಸೀಮೆ, ಮಂಡಲ, ಹೋಬಳಿ, ಗ್ರಾಮಗಳೆಂದು ವಿವಿಧ ಸ್ತರಗಳಾಗಿ ವಿಭಜಿಸಿ ಪ್ರಾಂತ್ಯಗಳಿಗೆ ತಮ್ಮ ಸಂಬಂಧಿಗಳನ್ನು ಮತ್ತು ಅರಸುಮನೆತನದ ಪ್ರಮುಖರನ್ನು ಮುಖ್ಯಸ್ಥರನ್ನಾಗಿ ನೇಮಕ ಮಾಡಿ ಆಡಳಿತ ನಿರ್ವಹಣೆ ಮಾಡುತ್ತಿದ್ದರು.

ಆಡಳಿತದ ವಿಭಾಗದಲ್ಲಿ ಪ್ರಧಾನಿ, ಮಂತ್ರಿ, ದಳವಾಯಿ, ಸುಭೇದಾರ, ಹವಾಲ್ದಾರ, ಗುರಿಕಾರ, ಮಜುಂದಾರ, ರಾಜಪುರೋಹಿತ, ಪಾರುಪತ್ತೆಗಾರ, ಗೌಡ, ಶಾನುಭೋಗ, ನಾಯಕ, ತಳವಾರ ಇನ್ನೂ ಮುಂತಾದ ಅನೇಕ ಅಧಿಕಾರಿಗಳನ್ನು ನೇಮಕ ಮಾಡಿಕೊಂಡಿದ್ದರು.[೯] ಈ ಅಧಿಕಾರಿಗಳಲ್ಲದೆ ಜೋಯಿಸರು, ಕಂದಾಯ ಅಧಿಕಾರಿಗಳು, ರಾಯಭಾರಿಗಳು, ಭಂಡಾರಿಗಳು, ಕಾರ್ಯಕರ್ತರು ಇತ್ಯಾದಿ ಸಿಬ್ಬಂದಿಗಳು ಆಡಳಿತದ ಸಹಾಯಕ್ಕೆ ಇರುತ್ತಿದ್ದರು.[೧೦] ಈ ಆಡಳಿತ ವ್ಯವಸ್ಥೆಯಲ್ಲಿ ರಾಜನೇ ಮುಖಂಡನಾಗಿದ್ದನು. ಆಳುವ ವರ್ಗದಲ್ಲಿ ಅವನದು ಎತ್ತರದ ಸ್ಥಾನವಾಗಿತ್ತು. ಆ ಸ್ಥಾನಕ್ಕೆ ತಕ್ಕಂತೆ ಘನತೆ ಗೌರವ ಕೂಡ ಇತ್ತು. ಸಮರ್ಥ ಆಡಳಿತ ವ್ಯವಸ್ಥೆಯಿಂದ ಅನೇಕ ಬಿರುದು ಬಾವಲಿಗಳನ್ನು ಈ ನಾಯಕರು ಪಡೆದುಕೊಂಡಿದ್ದರು. ಸಂತೆಬೆನ್ನೂರು ನಾಯಕರು ಜಾತಿಬೇಧವಿಲ್ಲದೆ ತಮ್ಮ ಆಡಳಿತಾವಧಿಯಲ್ಲಿ ಅನೇಕ ಜಾತಿಯವರಿಗೆ ಪ್ರಮುಖವಾದ ಹುದ್ದೆಗಳನ್ನು ನೀಡಿದ್ದರು. ಇದರಿಂದ ಆಡಳಿತ ನಡೆಸಲು ಯಾವ ಅಡ್ಡಿ ಆತಂಕಗಳು ಬರಲಿಲ್ಲ ಎಂದು ಹೇಳಬಹುದು.

ಸಂತೆಬೆನ್ನೂರು ನಾಯಕರ ಆಡಳಿತ ಸುಗಮವಾಗಿ ನಡೆಯಲು ಅವರ ನ್ಯಾಯದಾನ ಪದ್ಧತಿ ಕೂಡ ಪ್ರಮುಖವಾಗಿತ್ತು. ಇವರು ವಿಜಯನಗರ ಅರಸರ ನ್ಯಾಯದಾನ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದರು. ಇವರ ರಾಜಧಾನಿಗಳಾದ ಸಂತೆಬೆನ್ನೂರು, ಬಸವಾಪಟ್ಟಣ ಹಾಗೂ ತರೀಕೆರೆಯಲ್ಲಿ ವಾಸವಾಗಿದ್ದು ಮುಖ್ಯವಾದ ಘಟನೆಗಳ ಅಂತಿಮ ನ್ಯಾಯದಾನ ರಾಜರ ಸಮ್ಮುಖದಲ್ಲಿ ನಡೆಯುತ್ತಿತ್ತು. ರಾಜನ ತೀರ್ಮಾನವೇ ಅಂತಿಮ ತೀರ್ಮಾನವಾಗಿತ್ತು.

ನಾಯಕರು ಕಾಲಾನುಸಾರ ಕುಲಪದ್ಧತಿ, ಅಂದಿನ ಆಚಾರ ವಿಚಾರಗಳಿಗೆ ಅನುಗುಣವಾಗಿ ನ್ಯಾಯಾತೀರ್ಮಾನ ಕೊಡುತ್ತಿದ್ದರು. ರಾಜನಿಗೆ ಪ್ರಧಾನ ಮಂತ್ರಿಗಳು, ಗುರಿಕಾರರು ನ್ಯಾಯದಾನದಲ್ಲಿ

ಮಾರ್ಗದರ್ಶನ ಮಾಡುತ್ತಿದ್ದರು. ಗ್ರಾಮಮಟ್ಟದಲ್ಲಿ ಪಟೇಲರು, ದೇವಸ್ಥಾನದ ಪೂಜಾರಿಗಳು ನ್ಯಾಯಾಂಗದ ಕಾರ್ಯಭಾರ ನಡೆಸುತ್ತಿದ್ದರು. ನಾಯಕನು ಕಳ್ಳತನ, ದರೋಡೆ, ಕೊಲೆ, ಸುಲಿಗೆ, ಅತ್ಯಾಚಾರ ದೇಶದ್ರೋಹಿತನ, ಗೂಢಚರ್ಯೆ ಮುಂತಾದ ಪ್ರಮುಖವಾದ ವಿಷಯಗಳಿಗೆ ಮಾತ್ರ ತೀರ್ಪು ನೀಡುತ್ತಿದ್ದನು.[೧೧] ಬ್ರಾಹ್ಮಣರು ರಾಜನಿಗೆ ನ್ಯಾಯತೀರ್ಮಾನ ಮಾಡಲು ಸಹಾಯಕರಾಗುತ್ತಿದ್ದರು. ಕಂದಾಯ, ತೆರಿಗೆ ವಸೂಲಿ, ಭೂಮಿಗೆ ಸಂಬಂಧಿಸಿದ ಕಲಹ ಮುಂತಾದ ಅನೇಕ ಸಣ್ಣಪುಟ್ಟ ತಂಟೆಗಳಿಗೆ ತೀರ್ಮಾನಗಳು ಗ್ರಾಮಾಡಳಿತದಲ್ಲಿ ನಡೆಯುತ್ತಿದ್ದವು. ಅಪರಾಧಿಗಳನ್ನು ವಿವಿಧ ರೀತಿಯ ಪರೀಕ್ಷೆಗಳನ್ನು ಮಾಡಿ ಗುರುತಿಸುತ್ತಿದ್ದರು. ತದನಂತರ ಅಪರಾಧಿ ಎಂದು ತಿಳಿದುಬಂದಾಗ ಅಂತಹವರಿಗೆ ಅಪರಾಧಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸುತ್ತಿದ್ದರು. ಪ್ರಮುಖವಾಗಿ ಕುಲದಿಂದ ಹೊರಕ್ಕೆ ಹಾಕುವುದು, ಕೈ ಕತ್ತರಿಸುವುದು, ಗ್ರಾಮದಿಂದ ಹೊರಹಾಕುವುದು, ಗಂಡಸರಿಗೆ ಬಳೆ ತೊಡಿಸುವುದು, ತಲೆ ಬೋಳಿಸುವುದು, ದಂಡ ಹಾಕುವುದು, ಕತ್ತೆ ಮೇಲೆ ಮೆರವಣಿಗೆ ಮಾಡುವುದು, ಸೀರೆ ಉಡಿಸುವುದು ಮೀಸೆ ತೆಗೆಯುವುದು, ಹೀಗೆ ಅನೇಕ ರೀತಿಯ ಶಿಕ್ಷೆಗಳನ್ನು ಅಪರಾಧಿಗಳಿಗೆ ನೀಡುತ್ತಿದ್ದರು.

ಆಯಾ ಜಾತಿಯ ಮುಖ್ಯಸ್ಥನು ಆ ಜಾತಿಗೆ ಸಂಬಂಧಿಸಿದ ನ್ಯಾಯತೀರ್ಮಾನವನ್ನು ಕೈಗೊಂಡು ಶಿಕ್ಷೆ ನೀಡುವ ಅಧಿಕಾರ ಹೊಂದಿದ್ದನು. ತಮ್ಮ ಆಡಳಿತಾವಧಿಯಲ್ಲಿ ಬೇರೆ ಬೇರೆ ಜಾತಿಯ ಅನೇಕ ಅಧಿಕಾರಿಗಳನ್ನು ಸೈನಿಕರನ್ನು, ನೇಮಿಸಿಕೊಂಡಿದ್ದರು. ಮಠ ಮಂದಿರಗಳಿಗೆ ದಾನ-ದತ್ತಿಗಳನ್ನು ನೀಡುತ್ತಿದ್ದರು.

ಅರಸರಲ್ಲಿ ಬಹುಪತ್ನಿತ್ವ ಪದ್ಧತಿ ಇತ್ತು. ಅಂತರ್‌ಜಾತಿಯ ವಿವಾಹ, ವಿಧವಾವಿವಾಹಕ್ಕೆ ಅವಕಾಶವಿರಲಿಲ್ಲ. ನಾಯಕರು ವೈಷ್ಣವ ಸಂಪ್ರದಾಯದ ಪ್ರಕಾರ ವಿವಾಹ ಮಾಡಿಕೊಳ್ಳುತ್ತಿದ್ದರು.[೧೨] ನಾಗತಿಯರು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಹಲವಾರು ನಾಗತಿಯರು ದೇವಾಲಯ, ಕೆರೆ-ಕಟ್ಟೆ ಕಟ್ಟಿಸಿದ ಉದಾಹರಣೆಗಳಿವೆ. ಕೃಷಿ ಅಭಿವೃದ್ಧಿಗಾಗಿ ಅನೇಕ ಕೆರೆ ಕಟ್ಟೆಗಳನ್ನು ಕಟ್ಟಿಸಿದ್ದರು. ಅಳತೆ, ತೂಕ, ನ್ಯಾಯಪದ್ಧತಿಗಳಲ್ಲಿ ವಿಜಯನಗರ ಅರಸರ ಮಾದರಿಯನ್ನು ಅನುಸರಿಸಿದ್ದಾರೆ. ವರಹ ಇವರ ಕಾಲದ ಮುಖ್ಯ ನಾಣ್ಯವಾಗಿತ್ತು. ಅದಲ್ಲದೆ ಹೊನ್ನು, ಭರಣ, ಹಣ, ಮುಪ್ಪಾಗ, ಅಡ್ಡ, ಹಾಗ, ಬೆಳ್ಳಿ ವೀಸ, ಅರೇವೀಸ, ಮತ್ತು ಕಾಸು, ಇಳಿಕೆ ಕ್ರಮದಲ್ಲಿದ್ದ ನಾಣ್ಯಗಳು ಯುದ್ಧದ ನಂತರ ಶಾಂತಿ ಸಮಯದಲ್ಲಿ ಅನೇಕ ರೀತಿಯ ಸ್ಮಾರಕಗಳನ್ನು ನಿರ್ಮಿಸಿ ಕಲಾತ್ಮಕತೆಯನ್ನು ಮೆರೆದಿದ್ದಾರೆ.[೧೩]

ಹೀಗೆ ವಾಲ್ಮೀಕಿ ವಂಶಸ್ಥರು, ಬೇಡಕುಲದವರಾಗಿದ್ದ ಸಂತೆಬೆನ್ನೂರು ನಾಯಕರು ತಮ್ಮ ಅಧಿಕಾರ ಅವಧಿಯಲ್ಲಿ ಸುಗಮವಾದ ಆಡಳಿತವನ್ನು ನಿರ್ವಹಿಸಿದ್ದು ಕಂಡುಬರುತ್ತದೆ. ಹಲವು ಅರಸರು ನಾಯಕರಿಗೆ ತೊಂದರೆಯನ್ನುಂಟು ಮಾಡಿದ್ದರು. ಎಲ್ಲರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿ ಸುಗಮವಾಗಿ ಆಳ್ವಿಕೆ ನಡೆಸಿದ್ದಾರೆ.

ಹಾಗೆಯೇ ಈ ನಾಯಕರು ಸಂತೆಬೆನ್ನೂರಿನಿಂದ ಬಸವಾಪಟ್ಟಣ, ತರೀಕೆರೆಗೆ ಹೋಗಿ ಆಳ್ವಿಕೆ ನಡೆಸುವಾಗಲೂ ಇದೇ ರೀತಿಯ ಸುಗಮವಾದ ಆಡಳಿತ ನಿರ್ವಹಿಸಿದ್ದು ಗಮನಾರ್ಹ.

ಇವುಗಳಂತೆ ಜಿಳಿಚೋಡಿನ ವಂಶಸ್ಥರು ಕಣಕುಪ್ಪೆ ಪಾಳೆಯಗಾರರು, ಆಣಜಿ, ಉಚ್ಚಂಗಿದುರ್ಗ ಮುಂತಾದ ಅನೇಕ ಕಿರುಪಾಳೆಪಟ್ಟುಗಳು ಇದೆ ಅವಧಿಯಲ್ಲಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಈ ನಾಯಕರು ವಿಜಯನಗರ ಸಾಮ್ರಾಜ್ಯದ ಆಡಳಿತ ಪದ್ಧತಿ ಮತ್ತು ತಮ್ಮ ಮೇಲಿನ ಪ್ರಭುಗಳ ಮಾರ್ಗದರ್ಶನದಲ್ಲಿ ಆಡಳಿತ ನಿರ್ವಹಿಸಿರುವುದು ಕಂಡುಬರುತ್ತದೆ.

**೪.೨. ಪಾಳೆಯಗಾರರ ಕಾಲದ ಸಾಮಾಜಿಕ ಸ್ಥಿತಿಗತಿ**

ಪ್ರತಿಯೊಂದು ರಾಜ್ಯವು ತನ್ನದೆ ಆದ ಸಾಮಾಜಿಕ ನೀತಿಯನ್ನು ಅಳವಡಿಸಿಕೊಂಡಿರುತ್ತದೆ. ಬೇರೆ ಬೇರೆ ಜಾತಿ ಮತ ಪಂಥಗಳು ರಾಜಪ್ರಭುತ್ವವನ್ನು ಒಪ್ಪಿಕೊಳ್ಳಬೇಕಾದರೆ ಅರಸರು ಆ ಸಮುದಾಯಗಳಿಗೆ ಸರಿಹೊಂದುವ ರೀತಿಯಲ್ಲಿ ನೀತಿಗಳನ್ನು ಜಾರಿಗೊಳಿಸಬೇಕಾಗುತ್ತದೆ. ಸಮಾಜದಲ್ಲಿ ರಾಜ್ಯವು ತನ್ನದೇ ಆದ ಸಾಮಾಜಿಕ ಹಿಡಿತ ಸಾಧಿಸುವುದು ಅನಿವಾರ್ಯವಾಗಿರುತ್ತದೆ. ಈ ರೀತಿ ಹಿಡಿತ ಸಾಧಿಸಲು ದಾನ-ದತ್ತಿಗಳನ್ನು ನೀಡುತ್ತಿದ್ದರು. ಹೆಚ್ಚಾಗಿ ಬ್ರಾಹ್ಮಣರಿಗೆ ದಾನ-ದತ್ತಿ ನೀಡುತ್ತಿದ್ದು ಅವರಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ನೀಡಿದ್ದರು. ಬ್ರಾಹ್ಮಣರಿಗೆ ದಾನ ಕೊಡುವುದು ಭಾರತದಲ್ಲಿ ರಾಜಧರ್ಮದ ಒಂದು ಭಾಗವೇ ಆಗಿದ್ದು, ಅದನ್ನು ಪಾಳೆಯಗಾರರ ಕಾಲದಲ್ಲಿಯೂ ಕಾಣಬಹುದು. ಇಡೀ ಬ್ರಾಹ್ಮಣ ಸಮುದಾಯವನ್ನು ರಾಜಧರ್ಮದ ತೆಕ್ಕೆಗೆ ತರುವುದರ ಉದ್ದೇಶದಿಂದ ಅವರಲ್ಲಿದ್ದ ಆಪಸ್ಥಂಭ ಸೂತ್ರ, ಕೌಂಡಿನ್ಯಗೋತ್ರ, ಕಾಶಿಬ್ರಾಹ್ಮಣ, ಶ್ರೀವತ್ಸಗೋತ್ರ, ಭಾರಧ್ವಾಜಗೋತ್ರ, ಕಶ್ಯಪಗೋತ್ರ, ಹರಿತ ಸ್ವಗೋತ್ರಗಳಿಗೆ ಸೇರಿದವರಿಗೆ ದಾನ-ದತ್ತಿಗಳನ್ನು ನೀಡಿದ್ದರು.

ರೊನಾಲ್ಡ್ ಇಂಡೆನ್ ಅವರು "ಮಧ್ಯಕಾಲೀನ ಭಾರತದಲ್ಲಿ ರಾಜರು ನೈತಿಕ ತತ್ವಗಳ ರಕ್ಷಕರಾಗಿ ಧರ್ಮ ಪ್ರಚಾರದ ಸಾಧನವಾಗಿ ಕಾರ್ಯ ನಿರ್ವಹಿಸುತ್ತಿದ್ದರು ಹಾಗೂ ರಾಜತ್ವವೇ ದೈವವಾಗಿತ್ತು"[೧೪] ಎಂದು ಹೇಳಿದ ರೀತಿಯಲ್ಲಿ ಪಾಳೆಯಗಾರರ ಪ್ರಭುತ್ವಗಳು ದೈವತ್ವದ ರಾಜ್ಯಗಳಾಗಿದ್ದವು. ರಾಜಧರ್ಮದ ಸಿದ್ಧಾಂತವು ಆಸ್ತಿತ್ವದಲ್ಲಿದ್ದರೆ ಸಾಮಾಜಿಕ ನಂಬಿಕೆಗಳನ್ನು ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಜಾರಿ ಮಾಡುವುದಾಗಿರುತ್ತದೆ ಹಾಗೂ ನೈತಿಕ ಬಲದಿಂದಲೇ ಶ್ರೇಣೀಕೃತ ಸಮಾಜವನ್ನು ನಿಯಂತ್ರಿಸಬೇಕಾಗಿರುತ್ತದೆ. ಇದನ್ನು ಈ ಪಾಳೆಯಗಾರರು ದಾನದತ್ತಿಗಳನ್ನು ಕೊಡುವುದರ ಮೂಲಕ ಸಾಧಿಸಿದ್ದರು.

ದಕ್ಷಿಣ ಭಾರತದಲ್ಲಿ ಕ್ರಿ.ಶ. ೬ನೇ ಶತಮಾನದಿಂದ ೧೨ನೇ ಶತಮಾನದ ಮಧ್ಯದಲ್ಲಿ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳ ಸಮಾಗಮದಿಂದಾಗಿ ಒಂದು ಹೊಸದಾದ ಸಾಮಾಜಿಕ ವ್ಯವಸ್ಥೆ ಪ್ರಾರಂಭವಾಯಿತೆನ್ನಬಹುದು.[೧೫] ಸಮಾಜವನ್ನು ನಾಲ್ಕು ವರ್ಣಗಳಲ್ಲಿ ವಿಭಜಿಸಿದ್ದನ್ನು ನಾವು ಋಗ್ವೇದದ ಹತ್ತನೇ ಮಂಡಲವಾದ ಪುರುಷಸೂಕ್ತದಲ್ಲಿ ಕಾಣಬಹುದು.[೧೬] ಪ್ರಾರಂಭದಲ್ಲಿ ಈ ವ್ಯವಸ್ಥೆ ಅವರ ಕೆಲಸವನ್ನು ಅವಲಂಬಿಸಿ ಪರಿಗಣಿಸಲ್ಪಟ್ಟಿತ್ತು. ಆದರೆ ಕಾಲಾಂತರದಲ್ಲಿ

ಅಂದರೆ ಅಥರ್ವಣ ವೇದದಲ್ಲಿ ಜಾತಿ ರೂಪದಲ್ಲಿ ಬದಲಾವಣೆಗೊಂಡು ಕಠಿಣವಾಯಿತು. ಈ ಒಂದು ಕಠಿಣತೆ ಗ್ರಾಮಪ್ರದೇಶದಲ್ಲಿ ಇಂದಿಗೂ ನಡೆದುಕೊಂಡು ಬಂದಿರುವುದು ಒಂದು ವಿಪರ್ಯಾಸ. ಈ ವ್ಯವಸ್ಥೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಪ್ರಮುಖ ವರ್ಗಗಳಲ್ಲಿ ಇಡೀ ಭಾರತೀಯ ಸಮಾಜ ವಿಭಜನೆಗೊಂಡಿದೆ.[೨೭] ಇದಕ್ಕೆ ಪಾಳೆಯಗಾರರ ಅವಧಿಯು ಹೊರತಾಗಿಲ್ಲ ಎಂಬುದು ಸ್ಪಷ್ಟ

ಈ ಹಿನ್ನೆಲೆಯಲ್ಲಿ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗಳು ಸರಿಯಾದ ಕ್ರಮದಲ್ಲಿರಬೇಕಾದರೆ ಅದಕ್ಕೆ ಸಾಮಾಜಿಕ ವ್ಯವಸ್ಥೆ ಹಾಗೂ ಸಾಮಾಜಿಕ ಚಟುವಟಿಕೆಗಳು ಮುಖ್ಯವಾಗುತ್ತವೆ. ಸಾಮಾನ್ಯವಾಗಿ ಎಲ್ಲಾ ಕಾಲಗಳಲ್ಲಿಯೂ ಸಮಾಜದಲ್ಲಿ ಪ್ರಭುತ್ವ ಮತ್ತು ಶ್ರಮಿಕವರ್ಗ ಎಂಬ ಎರಡು ವರ್ಗಗಳಿದ್ದವು. ಪ್ರಭುತ್ವವರ್ಗಗಳಲ್ಲಿ ರಾಜನಿಗೆ ಸಹಾಯಕರಾದ ಪುರೋಹಿತರು, ಗೌಡರು, ದಿವಾನರು, ದಳವಾಯಿಗಳು ಮುಂತಾದವರಿದ್ದರು. ಪಾಳೆಯಗಾರರು ತಮ್ಮ ಸುಗಮ ಆಡಳಿತಕ್ಕಾಗಿ ಸಲಹೆ ಸೂಚನೆ ನೀಡಲು ಅನೇಕರನ್ನು ನೇಮಕ ಮಾಡಿಕೊಂಡಿದ್ದರು. ಅವರಲ್ಲಿ ಪುರೋಹಿತರು, ಜೋಯಿಸರು, ಗೌಡರು, ದಿವಾನರು, ದಳವಾಯಿಗಳು, ತಳವಾರರು ಪ್ರಮುಖರಾಗಿದ್ದಾರೆ. ಜೊತೆಗೆ ಇವರ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಧಾನ ವರ್ಗಗಳನ್ನು ಗುರುತಿಸಬಹುದು. ಅವುಗಳೆಂದರೆ, ೧. ಬ್ರಾಹ್ಮಣ, ೨. ಕ್ಷತ್ರಿಯ, ೩. ವೈಶ್ಯ, ೪. ಶೂದ್ರ ಈ ನಾಲ್ಕು ಚತುರ್ವರ್ಣಗಳಲ್ಲಿ ಸಮಾಜವನ್ನು ವಿಭಜಿಸಿದ್ದನ್ನು ಪ್ರಾಚೀನ ಕಾಲದಲ್ಲಿ ದಾಖಲೆಯಾದ ಪುರುಷಸೂಕ್ತದಲ್ಲಿ ಕಾಣಬಹುದು. ವೇದಕಾಲದಲ್ಲಿ ಸಮಾಜವನ್ನು ಹೀಗೆ ವಿಭಜಿಸಿದ್ದರೂ ಈ ವರ್ಣವ್ಯವಸ್ಥೆಯು ಬಿಗಿಯಾಗಿರದೆ ವೃತ್ತಿಯನ್ನು ಮಾತ್ರ ಅವಲಂಬಿಸಿ ವಿಭಜಿಸಲಾಗಿತ್ತು. ಆದರೆ ಕಾಲಾಂತರದಲ್ಲಿ ಈ ವ್ಯವಸ್ಥೆಯು ಬದಲಾವಣೆ ಹೊಂದುತ್ತಾ ಜಾತಿವ್ಯವಸ್ಥೆಯಾಗಿ ಮಾರ್ಪಾಡಾದ ವಿಷಯವು ವೇದೋಪನಿಷತ್‌ಗಳಿಂದ ತಿಳಿಯಬಹುದು.[೧೮]

ಬ್ರಾಹ್ಮಣವರ್ಗದಲ್ಲಿ ಪುರೋಹಿತರು, ಜೋಯಿಸರು, ಗೌಡರು, ದಿವಾನರು, ಬ್ರಾಹ್ಮಣರು ಪ್ರಮುಖವಾಗಿ ಬರುತ್ತವೆ. ಜಾನಪದ ವರ್ಗಕ್ಕೆ ಕರುಬರು, ನಾಯಿಂದರು, ದೇವಾಂಗದವರು ಹಾಗೂ ಇತರರು ಸೇರುತ್ತಾರೆ. ಶಿಷ್ಟವರ್ಗದವರು ಸಾಮಾನ್ಯವಾಗಿ ಕೋಟೆ, ಪೇಟೆ, ಊರು, ಪಟ್ಟಣಗಳಲ್ಲಿ ವಾಸ ಮಾಡುತ್ತಿದ್ದರು. ಪಾಳೆಯಪಟ್ಟಿನಲ್ಲಿ ಹಲವಾರು ಗ್ರಾಮಗಳು ಹಾಗೂ ಉಪಗ್ರಾಮಗಳು ಜಾನಪದ ವರ್ಗಗಳ ನೆಲೆಬೀಡಾಗಿದ್ದವು. ಊರು, ಗ್ರಾಮಗಳ ಹೊರಗೆ ಮುಖ್ಯವಾಗಿ ಕಾಡುಪ್ರದೇಶ ಬುಡಕಟ್ಟುಗಳ ವಾಸಸ್ಥಾನವಾಗಿತ್ತು.

**ಪುರೋಹಿತರು, ಜೋಯಿಸರು, ಬ್ರಾಹ್ಮಣರು**

ಕರ್ನಾಟಕದ ಶಾಸನಗಳಲ್ಲಿ ಮಹಾಜನರು, ವಿಪ್ರರು ಎಂದು ಉಲ್ಲೇಖಿಸಲ್ಪಟ್ಟ ಇವರು ನಾಲ್ಕು ವರ್ಣಗಳಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದರು. ಸಮಾಜದ ಎಲ್ಲಾ ರಂಗಗಳಲ್ಲಿಯೂ ಇವರು ಅಗ್ರಸ್ಥಾನ ಪಡೆದಿದ್ದು, ಇವರ ಮುಖ್ಯ ಕರ್ತವ್ಯಗಳೆಂದರೆ ಅಧ್ಯಯನ, ಅಧ್ಯಾಪನ,

ಜಪ, ಹೋಮ, ಯಜ್ಞ ಮತ್ತು ಉಪಾಸನೆ ಮುಂತಾದವುಗಳು. ಸುಶಿಕ್ಷಿತರಾದ ಇವರ ವಾಸಸ್ಥಾನ ಅಗ್ರಹಾರ, ಬ್ರಹ್ಮಪುರಿಗಳಾಗಿದ್ದವು. ಈ ಕೇಂದ್ರಗಳ ನಿರ್ವಹಣೆಗೆ ರಾಜರು ಮತ್ತು ಇತರರು ದಾನ-ದತ್ತಿಗಳನ್ನು ಭೂಮಿ ಮತ್ತು ಹಣದ ರೂಪದಲ್ಲಿ ಕೊಡುತ್ತಿದ್ದರು. ಯಜ್ಞದಲ್ಲಿ ಬಲಿ ಕೊಡುತ್ತಿದ್ದ ಪ್ರಾಣಿಗಳನ್ನು ಇವರು ತಿನ್ನುತ್ತಿದ್ದರು ಎಂದು ವಚನಕಾರರು ಹೇಳಿದ್ದಾರೆ.[೧೮] ಆದರೆ ಕಾಲಾನಂತರದಲ್ಲಿ ತಮ್ಮ ಜಾತಿಯ ಶ್ರೇಷ್ಠತೆಯನ್ನು ಉಳಿಸಿಕೊಳ್ಳಲು ಹಾಗೂ ಇತರರಿಗಿಂತ ತಾವು ಬೇರೆ ಎಂದು ತೋರಿಸಿಕೊಳ್ಳಲು ಮಾಂಸಾಹಾರವನ್ನು ತ್ಯಜಿಸಿದರೆಂದು ತಿಳಿದುಬರುತ್ತದೆ. ಇಂತಹ ಸನ್ಮಾರ್ಗದಲ್ಲಿ ನಡೆಯುತ್ತಿದ್ದ ಬ್ರಾಹ್ಮಣರ ಬಗ್ಗೆ ಅನೇಕ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.

ಇವರು ಸಮಾಜದಲ್ಲಿ ಉನ್ನತ ಸ್ಥಾನವನ್ನು ಪಡೆದುಕೊಂಡಿದ್ದರು. ಹಾಗಲವಾಡಿ, ಮಧುಗಿರಿ, ಚಿತ್ರದುರ್ಗ, ನಾಯಕನಹಟ್ಟಿ, ಹರತಿ, ಹರಪನಹಳ್ಳಿ, ಬಳ್ಳಾರಿ, ಗುಡೇಕೋಟೆ ಮುಂತಾದ ಪಾಳೆಯಪಟ್ಟುಗಳು ಬ್ರಾಹ್ಮಣರು ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ನೆಲೆಗೊಳ್ಳುವಂತೆ ಮಾಡಿದ್ದಾರೆ. ಈ ಅರಸರು ಸಾಕಷ್ಟು ದಾನ-ದತ್ತಿಗಳನ್ನು ನೀಡಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಇವರು ರಾಜಕೀಯದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡು ದಾನ-ದತ್ತಿಗಳನ್ನು ಪಡೆದ ವಿವರಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಹರಪನಹಳ್ಳಿ ಪಾಳೆಯಗಾರರು ಯುದ್ಧಕ್ಕೆ ಹೊರಡುವ ಸಂದರ್ಭದಲ್ಲಿ ಇವರು ಅನೇಕ ರೀತಿಯಲ್ಲಿ ಸಹಾಯಕರಾಗುತ್ತಿದ್ದರು. ಇವರು ದೇವರ ಪೂಜೆ ಮಾಡುತ್ತಾ ರಾಜನಿಗೆ ಜಯವಾಗಲೆಂದು ಪ್ರಾರ್ಥಿಸುತ್ತಿದ್ದರು. ಕೆಲವು ವೇಳೆ ಜಪ ಮಾಡಲೆಂದೇ ರಾಜರ ಹಿಂದೆ ಯುದ್ಧಕ್ಕೆ ತೆರಳುತ್ತಿದ್ದರು. ದಾದಯ್ಯನಾಯಕರ ಕಾಲದಲ್ಲಿ ಕಾಮಭಟ್ಟರೆಂಬ ಪುರೋಹಿತರು ನಾಯಕನಿಗೆ ಮಾರ್ಗದರ್ಶಕರಾಗಿದ್ದರು.

ದಾದಯ್ಯನಾಯಕ ಕಾಮಭಟ್ಟರಿಗೆ ಮೂವತ್ತಮೂರು ಹಳ್ಳಿಗಳ ಪೌರೋಹಿತ್ಯ ಕಾರ್ಯವನ್ನು ಹಾಗೂ ಹರಪನಹಳ್ಳಿ ಸಮೀಪದ ಕಾಮಭಟ್ಟರ ಹಳ್ಳಿಯನ್ನು ದಾನವಾಗಿ ನೀಡಿದ್ದರು.[೨೦] ಈ ಹಳ್ಳಿಯನ್ನು ಈಗ ಶಾಂಭಟ್ರಳ್ಳಿ ಎಂದು ಜನಸಾಮಾನ್ಯರು ಕರೆಯುತ್ತಾರೆ. ಈ ಹಳ್ಳಿ ಹರಪನಹಳ್ಳಿ ಕಂಚಿಕೇರಿ ಮಾರ್ಗದ ಬೆಂಡಿಗೇರಿ ಸಮೀಪದಲ್ಲಿದೆ. ಹರಪನಹಳ್ಳಿ ಪಾಳೆಯಗಾರರು ತಾವು ಯುದ್ಧಕ್ಕೆ ಹೊರಡುವ ಪೂರ್ವದಲ್ಲಿ ಜೋಯಿಸರನ್ನು ತಮ್ಮ ಪ್ರಯಾಣದಲ್ಲಿ ಜಯಾಪಜಯಗಳ ಬಗ್ಗೆ ಕೇಳುತ್ತಿದ್ದರು. ಆಗ ಅವರು ಕೈ ಮೇಲೆ ಬರೆದು ಅರಸರ ತೋಳಿಗೆ ಕಟ್ಟುತ್ತಿದ್ದರು.

ಬಾಗಳಿ ಬಸಪ್ಪನಾಯಕನು ಹೊಳಲು ಕೋಟೆಯ ಮುತ್ತಿಗೆಯ ಸಂದರ್ಭದಲ್ಲಿ ಜಪ ಮಾಡಿದ ಜೋಯಿಸರಿಗೆ ಭೂದಾನ ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ರಮಣಭಟ್ಟರು ಅರಸನಿಗೆ ಜಯವಾಗಲೆಂದು ಪ್ರಾರ್ಥನೆ ಮಾಡಿದ್ದರಿಂದ ಭಟ್ಟರಿಗೆ ದಣನಾಯಕನಕೆರೆ ಪಟ್ಟಡಿಗೆ[೨೧] ಬಾಗಳಿ ಹರಿಯಮ್ಮಾಜಿ ತಮ್ಮ ಪುರೋಹಿತ ಜೋಯಿಸರ

ದೇವೋತ್ತಮ ಭಟ್ಟರು, ಹನುಮಂತ ಭಟ್ಟರು, ಪದ್ಮನಾಭ ಭಟ್ಟರು ಹಾಗೂ ನರಸಿಂಹ ಭಟ್ಟರಿಗೆ ತಾವು ಕೊರೆಗಲ್ಲು ಕಾಲುವೆಯ ಕಟ್ಟೆಯನ್ನು ಕಟ್ಟಿಸಿ ಆ ಮಹೋತ್ಸವದ ಕಾರ್ಯದಲ್ಲಿ ಕೋಗಳಿ ಪೆಂಟಿಕೆ ಸಲ್ಲುವ ನಾರಾಯಣದೇವರಕೆರೆ ಪಟ್ಟಡಿಯ ಅನ್ವೇರಿ ಭೂಮಿಯೊಳಗೆ ಗದೆ ಬೀಜವರಿ ಎರಡು ಮಕ್ಕಳು ದಾನ ನೀಡಿದ ವಿಚಾರ ಕ್ರಿ.ಶ. ೧೭೧೦ ಕಾಲದ ಶಾಸನದಲ್ಲಿ ತಿಳಿದುಬರುತ್ತದೆ. ಇದೇ ರೀತಿ ಮುಮ್ಮಡಿ ಬಸಪ್ಪ ನಾಯಕ, ವೀರ ಬಸಪ್ಪನಾಯಕ, ಸೋಮಶೇಖರನಾಯಕರು ಅನೇಕ ಬ್ರಾಹ್ಮಣರಿಗೆ ದಾನ-ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ.

ಮುಮ್ಮಡಿ ಬಸಪ್ಪನಾಯಕನು ತನ್ನ ಜೋಯಿಸರು ಮತ್ತು ಪುರೋಹಿತರಾದ ಪಾರೆ ಓಬಳ ಭಟ್ಟರು, ತಿಪ್ಪಣ ಭಟ್ಟರುಗಳಿಗೆ ಕೋಗಳಿ ವೆಂಟಿಕೆ ಕೊಟ್ಟೂರು ಸೀಮೆಯೊಳಗಣ ಕೆಸರಳ್ಳಿ ಅಲಮರಸಿಕೆರೆ ಗ್ರಾಮಗಳಲ್ಲಿ ಭೂದಾನ ನೀಡಿದ್ದಾನೆ.[೨೨] ಮತ್ತೊಂದು ಶಾಸನದಲ್ಲಿ ಪುರೋಹಿತರಿಗೆ ಕೂಡ್ಲಿಗಿ ತಾಲ್ಲೂಕು ಜೋಳದಕೂಡ್ಲಿಗಿ ಹತ್ತಿರದ ಶೇಷಮ್ಮನ ಹಳ್ಳಿಯನ್ನು ಹುಗ್ಗಿ ಹೊಯ್ದು ಗ್ರಾಮಾಭಿವೃದ್ಧಿ ಮಾಡಿಕೊಳ್ಳುವಂತೆ ಆಜ್ಞೆಯಿಸಿದ್ದಾನೆ.[೨೩]

ದಾವಣಗೆರೆ ಜಿಲ್ಲೆಯ ಸಂತೆಬೆನ್ನೂರು, ಬಸವಾಪಟ್ಟಣ, ಹರಪನಹಳ್ಳಿ, ಜಗಲೂರು, ಬಿಳಿಚೋಡು, ಕಣಕುಪ್ಪೆ ಮುಂತಾದ ಅನೇಕ ಪಾಳೆಯಪಟ್ಟಿನಲ್ಲಿ ಬ್ರಾಹ್ಮಣರು ನೆಲೆಗೊಳ್ಳುವಂತೆ ಏರ್ಪಡಿಸಿ ಷಟ್ಕಾರ್ಯಗಳಲ್ಲಿ ನಿರತರಾಗಿರುವಂತೆ ಮಾಡಿ ಅವರಿಗೆ ಸಾಕಷ್ಟು ದಾನ-ದತ್ತಿಗಳನ್ನು ನೀಡಿ ಗೌರವಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಇವರು ರಾಜಕೀಯದಲ್ಲೂ ಪ್ರಮುಖ ಸ್ಥಾನವನ್ನು ಪಡೆದಿದ್ದರು. ಹರಪನಹಳ್ಳಿ ಪಾಳೆಯಗಾರನಾದ ದಾದಯ್ಯನಾಯಕನ ಕಾಲದಲ್ಲಿ ಅರಸೀಕೆರೆ ಮನೆತನಕ್ಕೆ ಸೇರಿದ ಬ್ರಾಹ್ಮಣ ಹಂಪರಸ ಎಂಬುವನು ಪ್ರಧಾನಿಯಾಗಿದ್ದನು. ಕೊನೆಯ ಮದಕರಿನಾಯಕನ ದಂಡಿನಲ್ಲಿ ಜೋಗಯ್ಯ ವಾಸುದೇವ, ನೀಲಕಂಠರಾವ್ ಹೀಗೆ ಅನೇಕ ಬ್ರಾಹ್ಮಣರು ಉನ್ನತ ಹುದ್ದೆಯಲ್ಲಿದ್ದ ದಂಡನಾಯಕರಾಗಿದ್ದರು. ಬಾಳಪ್ಪ ಸಾರ್ವಭೌಮರಾವ್ ಮುಂತಾದವರು ಅವನ ಆಸ್ಥಾನದಲ್ಲಿದ್ದರು. ಈ ಪ್ರದೇಶದಲ್ಲಿ ವೀರಶೈವರ ಸಂಖ್ಯೆ ಹೆಚ್ಚಾಗಿ ಇದ್ದಿತು. ಅಲ್ಲದೆ ಅವರು ಐಶ್ವರ್ಯವಂತರಾಗಿದ್ದರಿಂದ ಬಹಳ ಪ್ರಭಾವಶಾಲಿಗಳಾಗಿದ್ದರು. ಇವರು ಪಟ್ಟಣಗಳಲ್ಲೂ ಹಳ್ಳಿಗಳಲ್ಲೂ ವಾಸವಾಗಿದ್ದುದರಿಂದ ವ್ಯಾಪಾರ ಹಾಗೂ ವ್ಯವಸಾಯಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದರು. ಇವರಲ್ಲಿ ಕೂಡ ಅನೇಕ ಉಪಜಾತಿಗಳನ್ನು ಕಾಣಬಹುದು.

ಸಂತೆಬೆನ್ನೂರು ಪಾಳೆಯಗಾರರ ಕಾಲದಲ್ಲಿ ಸಾಮಾಜಿಕ ಸ್ಥಿತಿಯು ಭಿನ್ನವಾಗಿರಲಿಲ್ಲ. ಇವರಲ್ಲಿಯೂ ಬಹುಪತ್ನಿತ್ವ ಪದ್ಧತಿ ರೂಢಿಯಲ್ಲಿತ್ತು. ಹಾಗೆಯೇ ಸಹಗಮನ ಪದ್ಧತಿಯೂ ಇತ್ತು. ಆದರೆ, ಈ ವ್ಯವಸ್ಥೆ ಕಡ್ಡಾಯವಾಗಿರಲಿಲ್ಲ. ಇವರು ಮರಣ ಹೊಂದಿದಾಗ ವೈದಿಕ ಪದ್ಧತಿಯಂತೆ ಶವವನ್ನು ಸುಡುವ ಪದ್ಧತಿ ಇತ್ತು.

ಈ ಪಾಳೆಯಗಾರರು ಅಧಿಕಾರ ವಿಸ್ತರಣೆ ಮಾಡಿಕೊಂಡಂತೆ ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಉನ್ನತೀಕರಿಸಿಕೊಂಡಿದ್ದರು. ಟಿ.ವಿ. ಮಹಾಲಿಂಗಂ ಅವರು 'ಸೌತ್ ಇಂಡಿಯನ್

ಪಾಲಿಟ' ಎಂಬ ಕೃತಿಯಲ್ಲಿ ಈ ರೀತಿ ವಿಶ್ಲೇಷಿಸಿದ್ದಾರೆ. "ಮಾನವ ಆರಂಭದ ಹಂತದಲ್ಲಿ ಬುಡಕಟ್ಟುಗಳ ಸಮಾಜದಲ್ಲಿ ಅನೇಕ ಪಂಗಡಗಳಾಗಿ ವಿಭಜನೆಯಾಗಿ ಅವು ಪರಸ್ಪರ ಘರ್ಷಣೆಯಲ್ಲಿ ತೊಡಗಿರುತ್ತಿದ್ದವು. ಅಂತಹ ಸಂದರ್ಭದಲ್ಲಿ ಬುಡಕಟ್ಟನ್ನು ರಕ್ಷಿಸಲು ಒಬ್ಬ ವ್ಯಕ್ತಿಯ ನಾಯಕತ್ವ ಹೊರಹೊಮ್ಮಿತು. ಈ ರೀತಿ ಯುದ್ಧದಿಂದಲೇ ನಾಯಕತ್ವ ಬೆಳೆಯಿತು. ಇದೇ ಮುಂದಿನ ಪ್ರಕ್ರಿಯೆಯಲ್ಲಿ ರಾಜತ್ವವಾಗಿ ಪರಿವರ್ತನೆಯಾಯಿತು. ಪಶುಸಂಗೋಪನೆ ಮತ್ತು ಕೃಷಿ ಪ್ರದೇಶಗಳಲ್ಲಿ ಅವುಗಳನ್ನು ರಕ್ಷಿಸುವವನು ನಾಯಕನಾದನು. ಅಲ್ಲಿಂದ ಅದರ ಮುಂದಿನ ಹಂತ ರಾಜತ್ವವಾಯಿತು. ಅಂದರೆ ರಾಜತ್ವದ ಪ್ರಮುಖ ಕರ್ತವ್ಯ ತನ್ನ ಸಮಾಜವನ್ನು ರಕ್ಷಿಸುವುದು. ಹಿಂದು ರಾಜನೀತಿಜ್ಞರ ಪ್ರಕಾರ ರಾಜನ ಮತ್ತೊಂದು ಮೂಲಭೂತ ಕರ್ತವ್ಯವೆಂದರೆ ಅಸ್ತಿತ್ವದಲ್ಲಿರುವ ಸಾಮಾಜಿಕ ವ್ಯವಸ್ಥೆಯನ್ನು ರಕ್ಷಿಸುವುದಾಗಿತ್ತು. ಈ ವಿಷಯದಲ್ಲಿ ಧರ್ಮದ ರಕ್ಷಕನಾಗಿ ವರ್ತಿಸಬೇಕಾಗುತ್ತದೆ. ಭಾರತದಲ್ಲಿ ಧರ್ಮ ಮತ್ತು ಸಾಮಾಜಿಕ ಸಂಸ್ಥೆಗಳು ಜೊತೆ ಜೊತೆಗೆ ಇವೆ. ಆದುದರಿಂದ ಹಿಂದೂ ರಾಜರು ಪ್ರಜೆಗಳ ಧರ್ಮದ ರಕ್ಷಣೆ ಕರ್ತವ್ಯವೆಂದು ಭಾವಿಸಿದ್ದರು.[೨೪] ಇಲ್ಲಿ ರಾಜರಾಗಬೇಕಾದರೆ ಕ್ಷತ್ರಿಯರೆನಿಸಿಕೊಳ್ಳುವುದು ಅಗತ್ಯ. ಅಂದರೆ ಆಡಳಿತ ರೂಢವಂಶವನ್ನು ವಿಶಾಲವಾಗಿ ವಿಸ್ತರಿಸಿಕೊಂಡು ಹೊರಹೊಮ್ಮುವ ಪ್ರಕ್ರಿಯೆ ಕ್ಷತ್ರಿಯೀಕರಣವಾಗಿತ್ತು.[೨೫]

ಸಂತೇಬೆನ್ನೂರು ಪಾಳೆಯಗಾರರು ಮಠಗಳಿಗೆ ಅತ್ಯಂತ ನಿಷ್ಠಾವಂತ ಭಕ್ತರಾಗಿದ್ದರು. ಇವರು ರಾಜಗುರುಗಳಿಗೆ ಅನೇಕ ರೀತಿಯ ದಾನದತ್ತಿ ನೀಡುವುದರ ಮೂಲಕ ಪೋಷಣೆ ಮಾಡಿದ್ದರು. ಮಠಗಳಿಗೆ ಆರಂಭದಿಂದ ಕೊನೆಯವರೆಗೂ ದಾನದತ್ತಿಗಳನ್ನು ನೀಡಿದ್ದರು. ನರಸಿಂಹ ಭಾರತಿಗಳವರಿಗೆ ಸಂತೆಬೆನ್ನೂರು ಪಾಳೆಯಗಾರನಾದ ಹನುಮಪ್ಪನಾಯಕನು ಒಂದು ದೊಡ್ಡ ಮಠ ಹಾಗೂ ಶ್ರೀವಿದ್ಯಾಶಂಕರ ದೇವಾಲಯವನ್ನು ಕಟ್ಟಿಸಿಕೊಟ್ಟಿದ್ದನು. ಶ್ರೀಮಠದ ನಿತ್ಯ ಕಾರ್ಯಕ್ರಮಗಳಿಗೆ ಸಾಕಷ್ಟು ಭೂಮಿಯನ್ನು ದಾನವಾಗಿ ನೀಡಿರುವುದು ಕಂಡುಬರುತ್ತದೆ. ಅಲ್ಲದೆ ಮಠದ ಸಿಬ್ಬಂದಿಗಳಿಗೆ ವಾಸಕ್ಕಾಗಿ ಕೆಲವು ಮನೆಗಳನ್ನು ಕಟ್ಟಿಸಿ ಕೊಟ್ಟಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಹಾಗಾಗಿ ಶ್ರೀ ನರಸಿಂಹ ಭಾರತಿ ಸ್ವಾಮಿಗಳವರು ಶಾಲಿವಾಹನ ಶಕೆ ೧೪೯೧ನೇಯ ಧಾತೃ ಸಂವತ್ಸರದ ಕಾರ್ತಿಕ ಶುಕ್ಲಪಕ್ಷ ಬಲಿಪಾಡ್ಯಮಿ ಸೋಮವಾರ ಸುಮುಹೂರ್ತದಲ್ಲಿ ಕೂಡಲಿ ಕ್ಷೇತ್ರದಲ್ಲಿ ಅದ್ವೈತ ಸಿದ್ಧಾಂತದ ಜಗದ್ಗುರು ಪೀಠವನ್ನು ಸ್ಥಾಪಿಸಿ ಶ್ರೀಕೂಡಲ ಶೃಂಗೇರಿ ಮಹಾ ಸಂಸ್ಥಾನವನ್ನು ನೆಲೆಗೊಳಿಸಿದರು.[೨೬] ಸಂತೇಬೆನ್ನೂರು ಪಾಳೆಯಗಾರರಾದ ಹನುಮಪ್ಪನಾಯಕರು ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಲೆಂದು ಸರ್ಜಾಹನುಮಪ್ಪನಾಯಕರು ಮಠದ ಧರ್ಮಕ್ಕೆ ಕಾಲಂ ಪ್ರತಿಯಲ್ಲೂ ಚಾತುರ್ಮಾಸ್ಯ ಸಂಕಲ್ಪ ನಿಮಿತ್ಯ ಬ್ರಾಹ್ಮಣ ಸಂತರ್ಪಣೆಗೆ ಮುಟ್ಟುವ ವೆಚ್ಚಕ್ಕೆ ಎಂದೂ, ನಮ್ಮ ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ದೊರಕಲಿ ಎಂದು ಸರ್ಜಾ ರಂಗಪ್ಪನಾಯಕರು ಸಮಸ್ತ ಮಾತೃ-ಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿ ಆಗಬೇಕೆಂದು ಹೇಳಿಕೊಂಡು ದಾನ-ದತ್ತಿ ನೀಡುತ್ತಿದ್ದರು.

ವೀರಶೈವ ಮಠಗಳು ಸಮಾಜದಲ್ಲಿ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಪ್ರಭಾವಶಾಲಿಯಾಗಿ ಬೆಳೆಯುತ್ತಿದ್ದವು. ಆ ಕಾರಣದಿಂದಲೆ ಸಂತೆಬೆನ್ನೂರು ಪಾಳೆಯಗಾರರು ಮಠಗಳಿಗೆ ದಾನ-ದತ್ತಿಗಳನ್ನು ನೀಡುವುದರ ಮೂಲಕ ಪೋಷಿಸುತ್ತಿದ್ದರು.

ಒಟ್ಟಾರೆ ಬ್ರಾಹ್ಮಣರು ಪಾಳೆಯಗಾರರ ಕಾಲದಲ್ಲಿ ಸಾಮಾಜಿಕವಾಗಿ ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಅವರು ವಿದ್ಯಾಕ್ಷೇತ್ರದಲ್ಲಿ, ಆಡಳಿತದಲ್ಲಿ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ವಿಶೇಷ ಪ್ರಭಾವಶಾಲಿಗಳಾಗಿದ್ದರು. ಬ್ರಾಹ್ಮಣರು ಅಗ್ರಹಾರಗಳಲ್ಲಿ ವಾಸಿಸುತ್ತಿದ್ದರಿಂದ ಯಾವ ಆತಂಕ ಇಲ್ಲದೆ ವಿದ್ಯಾಭ್ಯಾಸವನ್ನು ಸತತವಾಗಿ ಮುಂದುವರಿಸಲು ಸಾಧ್ಯವಾಯಿತು. ಅನೇಕ ಶಾಸನಗಳು ಬ್ರಾಹ್ಮಣರನ್ನು ಕೀರ್ತಿಸಿರುವುದು ಕಂಡುಬರುತ್ತದೆ. ಸಾಮಾಜಿಕವಾಗಿ ಬ್ರಾಹ್ಮಣರಿಗೆ ಉತ್ತಮ ಸ್ಥಾನಮಾನಗಳಾಗಿದ್ದವು ಎಂದು ಹೇಳಬಹುದು.

**ಕ್ಷತ್ರಿಯರು**

ರಾಜಕೀಯ ಕ್ಷೇತ್ರದಲ್ಲಿ ಕ್ಷತ್ರಿಯರ ಪಾತ್ರ ತುಂಬಾ ಮಹತ್ವದ್ದಾಗಿತ್ತು. ಧೈರ್ಯ, ಸಾಹಸ, ಶೌರ್ಯ, ತೇಜಸ್ಸು ಮುಂತಾದ ಕ್ಷತ್ರಿಯರ ಸ್ವಾಭಾವಿಕ ಗುಣಧರ್ಮ ಇವರದಾಗಿತ್ತು. ಆಡಳಿತ ನಡೆಸಲು ಹಾಗೂ ಯುದ್ಧ ಮಾಡಲು ಇವರು ಸಮರ್ಥರಾಗಿದ್ದರು. ಆದುದರಿಂದ ಇವರು ಪ್ರಜೆಗಳಿಂದ ಮತ್ತು ವಿದ್ವಾಂಸರಿಂದ ಹಲವು ಬಿರುದುಗಳನ್ನು ಧರಿಸುತ್ತಿದ್ದರು.

ವರ್ಣವ್ಯವಸ್ಥೆಯಲ್ಲಿ ಹೆಚ್ಚಿನ ಅಧಿಕಾರ ಪಡೆದು ಇವರು ರಾಜ್ಯದ ಆಡಳಿತವನ್ನು ನಿರ್ವಹಿಸುತ್ತಿದ್ದರು. ಇವರನ್ನು ವೇದ ಕಾಲದಲ್ಲಿ ರಾಜನ್ ಎಂದೂ ಕರೆಯುತ್ತಿದ್ದರು. ಜೈನ ಮತ್ತು ಬೌದ್ಧ ಸಾಹಿತ್ಯದಲ್ಲಿ ಬ್ರಾಹ್ಮಣರಿಗಿಂತಲೂ ಕ್ಷತ್ರಿಯರು ಮೇಲು ಎಂದು ವಿವರಿಸಲಾಗಿದೆ.[೨೭] ಅಲ್ಬೆರೂನಿ ಹೇಳುವಂತೆ ಕ್ಷತ್ರಿಯರು ಮತ್ತು ಅವರ ಕುಟುಂಬದವರು ಮರಣದಂಡನೆಯಿಂದ ಮುಕ್ತರಾಗಿದ್ದರು ಎಂಬುದು ಗಮನಾರ್ಹ ಸಂಗತಿಯಾಗಿದೆ.[೨೮] ಇಲ್ಲಿ ಕ್ಷತ್ರಿಯರು ಸ್ವಾತಂತ್ರ್ಯ ಹೊಂದಿದ್ದರು. ಸಮಾಜದಲ್ಲಿ ಶ್ರೇಷ್ಠತೆ ಕಾಪಾಡಿಕೊಂಡಿದ್ದರು.

ಕ್ಷತ್ರಿಯರು ಎಂಬ ನಿರ್ದಿಷ್ಟವಾದ ಪದ ಬಳಕೆ ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಶಾಸನಗಳಲ್ಲಿ ಕಂಡುಬರುವುದಿಲ್ಲ. ಸಾಮಾನ್ಯವಾಗಿ ರಾಜರು, ಮಂಡಳೇಶ್ವರರು, ದಂಡಾಧಿಕಾರಿಗಳು ಸಾಮಂತರು, ಪ್ರಾಂತಾಧಿಕಾರಿಗಳು, ಸಾಮಂತರು, ಅಮರನಾಯಕರು ಇನ್ನೂ ಅನೇಕ ವರ್ಗದವರು ಈ ಗುಂಪಿಗೆ ಸೇರಿದವರಾಗಿರುತ್ತಾರೆ. ಏಕೆಂದರೆ ಮುಖ್ಯ ಹುದ್ದೆಯಲ್ಲಿದ್ದವರು ಅಧಿಕಾರಿಗಳು ಬ್ರಾಹ್ಮಣ ಮತ್ತು ಇತರೆ ವರ್ಗಕ್ಕೆ ಸೇರಿದವರಿದ್ದರೆಂಬುದನ್ನು ಹಲವಾರು ಶಾಸನಗಳು ಉಲ್ಲೇಖಿಸುತ್ತವೆ. ಕರ್ನಾಟಕವನ್ನು ಆಳಿದ ರಾಜಮನೆತನಗಳಲ್ಲಿ ಹೆಚ್ಚಿನವರು ಕ್ಷತ್ರಿಯರಾಗಿದ್ದಾರೆ. ಬಸಪ್ಪನಾಯಕನನ್ನು ವೇದಮಾರ್ಗ ಪ್ರತಿಷ್ಠಾಪನಾಚಾರ್ಯ, ದೃಷ್ಟ ನಿಗ್ರಹ, ಶಿಷ್ಟಪರಿಪಾಲಕ, ಪ್ರತಿವಾದಿ ಭಯಂಕರ, ಮಾಯಾವಾದಿ ಕೋಲಾಹಲ, ಮಂತ್ರವಾದಿ ಭಯಂಕರ, ಬ್ರಾಹ್ಮಣರನ್ನು ದೂಷಿಸುವವರ ಶಿರಚ್ಛೇದಕರು ಎಂದು ಹಲವಾರು ಪರಿಕರಗಳಿಂದ ವರ್ಣಿಸಿರುವುದನ್ನು ನಾವು ಶಾಸನಗಳಲ್ಲಿ ಕಾಣಬಹುದು.

ಹರಿಹರದ ಶಾಸನದಲ್ಲಿ[೨೯] ಸೋಮಣ್ಣ ದಂಡನಾಯಕನಿಗೂ ಮತ್ತು ಬೇಡರಿಗೂ ಕಂಚೀಕೆರೆಯಲ್ಲಿ ಯುದ್ಧ ನಡೆಯಿತು. ಇಲ್ಲಿ ಬೇಡರನ್ನು ಕೊಂದ ಬಗ್ಗೆ ಈ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಚಿಕ್ಕಣ್ಣನಾಯಕನ ಪಾರುಪತ್ಯಗಾರನಾದ ವೀರಣ್ಣನು ತನ್ನ ಹೆಂಡತಿಯಾದ ಸಿದ್ದವ್ವೆಯ ಹೆಸರಿನಲ್ಲಿ ಸಿದ್ದಾಪುರ ಗ್ರಾಮವನ್ನು ನಿರ್ಮಿಸಿದ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತದೆ.[೩೦] ದಂಡನಾಯಕನಾದ ಸುಲ್ತಾನ, ಮಹಮ್ಮದ್ ಸುಲ್ತಾನ ನಗರಿಯಲ್ಲಿ ಆಳುತ್ತಿರಲು ಬಾರಮಲೀಕ್ ಎಂಬ ಸಾಮಂತನು ವಾಲಿಸುರರು ಎಂಬ ಕೆರೆಯನ್ನು ನಿರ್ಮಿಸಿದರು.[೩೧]

ಈ ಮೇಲಿನ ಶಾಸನಗಳನ್ನು ಅವಲೋಕಿಸಿದಾಗ ಕ್ಷತ್ರಿಯವರ್ಗಕ್ಕೆ ಸೇರಿದ ಗುಂಪು ಯಾವುದೇ ಕಾರ್ಯವನ್ನು ಮಾಡಲು ಕೇಂದ್ರಬಿಂದುಗಳಾಗಿದ್ದರು. ಸಮಾಜದ ವಿವಿಧ ಸ್ತರಗಳಲ್ಲಿ ಇವರು ಹಲವಾರು ಕೆಲಸ ಕಾರ್ಯಗಳನ್ನು ಮಾಡಿರುವುದು ಕಂಡುಬರುತ್ತದೆ. ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರು ಕ್ಷತ್ರಿಯವರ್ಗಕ್ಕೆ ಸೇರಿರುವುದರಿಂದ ಅವರು ಆಡಳಿತ ನಿರ್ವಹಿಸಲು ಸಮರ್ಥರಾಗಿದ್ದಾರೆ. ಇವರು ಸಮಾಜದ ಒಂದು ಪ್ರಮುಖ ವರ್ಗವಾಗಿದ್ದರು ಎಂದು ಹೇಳಬಹುದು.

**ವೈಶ್ಯರು**

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಪ್ರಮುಖವಾದ ಮೂರನೇ ವರ್ಗವೆಂದರೆ ವೈಶ್ಯರು, ಹೆಸರೇ ಸೂಚಿಸುವಂತೆ ಇವರು ಪ್ರಮುಖವಾಗಿ ಉದ್ಯೋಗ, ವ್ಯಾಪಾರ ಮಾಡಿಕೊಂಡಿರುವವರು. ಅಲ್ಲದೇ ಕೃಷಿ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಕೂಡ ತೊಡಗಿಕೊಂಡಿದ್ದರು.

ದಾವಣಗೆರೆ ನಗರ ಪ್ರಸಿದ್ಧವಾದ ಪಟ್ಟಣವಾಗಿ ಬೆಳೆಯಲು ನಖ(ಕ)ರರು ಅಥವಾ ವ್ಯಾಪಾರಿಗಳು ಪ್ರಮುಖ ಕಾರಣೀಕರ್ತರಾಗಿದ್ದಾರೆ. ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ಇವರನ್ನು ಗಾತ್ರಿಗರು ಅಥವಾ ತೆಲ್ಲಿಗರು ಎಂಬ ಹೆಸರುಗಳಿಂದ ಉಲ್ಲೇಖಿಸಿದ್ದುದನ್ನು ನೋಡಬಹುದು.[೩೨] ಮನುಶಾಸ್ತ್ರದ ಪ್ರಕಾರ ವೈಶ್ಯರ ಕರ್ತವ್ಯ ಗೋವುಗಳನ್ನು ಸಾಕುವುದು.[೩೩]

ಕಾಲಾಂತರದಲ್ಲಿ ಇವರು ವ್ಯಾಪಾರ ಕ್ಷೇತ್ರಗಳಲ್ಲಿ ತೊಡಗಿಕೊಂಡರು. ಇವರು ಶ್ರೇಣಿ ಎಂಬ ಸಂಘವನ್ನು ಕಟ್ಟಿಕೊಂಡು ರಾಜನಿಗೂ ಕೂಡ ಗೌರವಾರ್ಹರಾಗಿದ್ದರು.[೩೪] ಆದರೆ ಮುಂದೆ ವೈಶ್ಯರ ಸ್ಥಾನಮಾನ ಕೆಳಗಿಳಿದು ಅವ್ಯವಸ್ಥೆಯಾಯಿತು. ಕೊನೆಗೆ ಇವರನ್ನು ಶೂದ್ರರೆಂದು ತಿಳಿಯಲಾಯಿತಲ್ಲದೆ, ಇವರು ಕೂಡ ವೇದಗಳನ್ನು ಅಭ್ಯಸಿಸುವ ಹಕ್ಕನ್ನು ಕಳೆದುಕೊಂಡರು.[೩೫] ದಾವಣಗೆರೆಯ ಹಲವಾರು ಶಾಸನಗಳಲ್ಲಿ ಇವರ ಹೆಸರು ಹೆಚ್ಚಾಗಿ ಉಲ್ಲೇಖಿಸಲ್ಪಟ್ಟಿದೆ. ಇವರಿಂದಲೆ ದಾವಣಗೆರೆ ಪ್ರದೇಶವು ಇಷ್ಟೊಂದು ಹೆಸರು ಪಡೆದಿತ್ತು. ಶೆಟ್ಟಿ ಬಣಜಿಗ, ಗಾಯತ್ರಿ ಇವೇ ಮುಂತಾದ ಹಲವಾರು ಹೆಸರುಗಳಿಂದ ಇವರನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ಮುರಿಗೆಸ್ವಾಮಿಮಠಶೆಟ್ಟಿ ಎಂಬ ವ್ಯಾಪಾರಿ ಮಲಪಮಠಕ್ಕೆ ಹೊಲವನ್ನು ದಾನ ಮಾಡಿದ ಉಲ್ಲೇಖ ಅಸಗೋಡಿನ ತಾಮ್ರಪಟ ಶಾಸನದಿಂದ ತಿಳಿದುಬರುತ್ತದೆ. ಇದರಿಂದ ವೈಶ್ಯರು

ಕೂಡ ವ್ಯಾಪಾರದ ಜೊತೆಗೆ ಸಾಮಾಜಿಕ ಕಾರ್ಯಕ್ರಮಗಳಲ್ಲಿಯೂ ಭಾಗವಹಿಸುತ್ತಿದ್ದಾರೆಂಬುದು ತಿಳಿದುಬರುತ್ತದೆ. ಅಲ್ಲದೆ ಈ ಪ್ರದೇಶದ ಶಾಸನಗಳಲ್ಲಿ ಮಾನಶೆಟ್ಟಿ ಎಮ್ಮಿ ಶೆಟ್ಟಿ, ಭಾಮಿಶೆಟ್ಟಿ, ಪಟ್ಟಣದ ಶೆಟ್ಟಿ ವೀರಣ್ಣ.[೬೬] ಹೀಗೆ ಪ್ರಮುಖ ವರ್ತಕರ ಹೆಸರುಗಳು ಉಲ್ಲೇಖಿಸಲ್ಪಟ್ಟಿವೆ. ಹೀಗೆ ದಾವಣಗೆರೆ ಪ್ರದೇಶದಲ್ಲಿ ಅನೇಕ ಶಾಸನಗಳಲ್ಲಿ ಈ ಶೆಟ್ಟಿಗಳ ಬಗ್ಗೆ ಉಲ್ಲೇಖಿಸಿರುವುದರಿಂದ ವೈಶ್ಯರು ನಾಡಿನ ಪ್ರಮುಖ ಸಾಮಾಜಿಕ ವರ್ಗವಾಗಿ ಪ್ರತಿಯೊಂದು ರಂಗದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು ಎಂಬುದನ್ನು ಈ ಮೇಲಿನ ಅಂಶಗಳಿಂದ ತಿಳಿದುಕೊಳ್ಳಬಹುದು. ಕ್ರಿ.ಶ. ೧೬ರಿಂದ ೧೮ನೇ ಶತಮಾನಗಳವರೆಗೆ ಸಾಮಾಜಿಕ ಸ್ಥಿತಿಗತಿಗಳು ಏಕಪ್ರಕಾರವಾಗಿರಲಿಲ್ಲ. ಏಕೆಂದರೆ ಈ ಅವಧಿಯಲ್ಲಿ ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಇಂಗ್ಲೀಷರು ಆಗಮಿಸಿದ್ದರು. ಹಾಗೆಯೇ ಮೊಗಲರು, ಬಿಜಾಪುರದ ಸುಲ್ತಾನರು, ಹೈದರಾಬಾದ್ ನಿಜಾಮ, ಶ್ರೀರಂಗಪಟ್ಟಣದ ನವಾಬ ಹೈದರಾಲಿ ಟಿಪ್ಪುಸುಲ್ತಾನ ಇವರಿಂದ ಹಿಂದೂ ಧರ್ಮಕ್ಕೆ ಸೇರಿದ ಪಾಳೆಯಗಾರರ ಆಳ್ವಿಕೆ, ವೀರಶೈವಮತ ಹಾಗೂ ಧರ್ಮದ ಪ್ರೇರೇಪಣೆಗೊಂಡಿದ್ದಿತು. ಸಾಮಾಜಿಕವಾಗಿ ಹಿಂದೂ, ಮುಸ್ಲಿಂ, ಕ್ರೈಸ್ತ ಮೊದಲಾದವರಿಂದ ವರ್ಣಾಶ್ರಮ ಚಾಲ್ತಿಯಲ್ಲಿತ್ತು.

**ಶೂದ್ರರು**

ಶೂದ್ರರು ಚಾತುರ್ವರ್ಣ ವ್ಯವಸ್ಥೆಯಲ್ಲಿ ಕೊನೆಯ ಗುಂಪಾಗಿದೆ. ಇವರು ಬಹುಸಂಖ್ಯೆಯಲ್ಲಿದ್ದರು. ಆರ್.ಎಸ್.ಶರ್ಮಾ ಅವರು ಅಭಿಪ್ರಾಯ ಪಡುವಂತೆ ಪಶುಗಳಿಗಾಗಿ ನಡೆದ ಹೋರಾಟ ಮುಂದೆ ಭೂಮಿಯ ಒಡೆತನಕ್ಕಾಗಿ ನಡೆಯಿತು. ಇದರಲ್ಲಿ ಯಾರು ಸೋತರೋ ಅವರನ್ನೇ ಮುಂದೆ ನಾಲ್ಕನೆಯ ವರ್ಗವೆಂದು ಕರೆಯಲಾಯಿತು.[೬೭] ಇಂತಹ ಶೂದ್ರರಲ್ಲಿಯೇ ಅನೇಕರು ಕೆಳಮಟ್ಟಕ್ಕೆ ತಳ್ಳಲ್ಪಟ್ಟರು. ಅವರೆ ಮುಂದೆ ಚಂಡಾಲರೆನಿಸಿಕೊಂಡರು. ಧರ್ಮಸೂತ್ರಗಳ ಪ್ರಕಾರ ಬ್ರಾಹ್ಮಣ ಹೆಂಗಸು, ಶೂದ್ರ ಗಂಡಸು ಇವರ ಸಮಾಗಮದಿಂದ ಹುಟ್ಟಿದವನೇ ಚಂಡಾಲ.[೬೮] ಒಂದು ದೃಷ್ಟಿಯಲ್ಲಿ ಬೇಡರು, ಗೊಲ್ಲರು, ನೃತ್ಯಗಾರರು, ಬೆಸ್ತರು, ಕಟ್ಟಿಗರು ಮುಂತಾದವರೆಲ್ಲರೂ ಶೂದ್ರರಾಗಿದ್ದರು. ಆದರೆ ಅದು ಬರುಬರುತ್ತಾ ಮಾದಿಗ, ಹೊಲೆಯ ದಾಸ ಇವರಿಗಷ್ಟೇ ಸೀಮಿತವಾಗಿ ಇನ್ನೂ ಕಷ್ಟಕರವಾಯಿತು. ಇವರಿಗೆ ವಸತಿಗಳು ರಚನೆಯಾದವು. ಅವುಗಳನ್ನು ಇಂದಿಗೂ ಹೊಲಗೇರಿಯೆಂದು ಕರೆಯುತ್ತಿರುವುದನ್ನು ಕಾಣುತ್ತೇವೆ. ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರಿಗೆ ಸಂಬಂಧಿಸಿದಂತೆ ಕೆಲವು ಶಾಸನಗಳಲ್ಲಿ ಶೂದ್ರರ ಬಗ್ಗೆ ಉಲ್ಲೇಖಿಸಿರುವುದನ್ನು ನಾವು ಗಮನಿಸಬಹುದು. ಬೆಳಚೋಡು ಶಾಸನದಲ್ಲಿ[೬೯] ಹೊಲೆಯ ಮಾದಿಗ ಎಂಬ ಕುಲದ(ಜನಾಂಗ) ಉಲ್ಲೇಖವಿದೆ. ಇವರು ಅಂದು ಸಮಾಜದಲ್ಲಿ ಮೂರು ವರ್ಗಗಳ ಸೇವೆ ಮಾಡುತ್ತಿದ್ದರು ಎಂಬುದನ್ನು ನೋಡಬಹುದು. ಅದೇ ರೀತಿ ಕಲ್ಲೇನಹಳ್ಳಿ ಶಾಸನದಲ್ಲಿ(ಶಾಸನತ್ರುಟಿತ)[೭೦] ಗೊಲ್ಲರ ಎಂಬ ಜನಾಂಗದ(ಜಾತಿ) ಬಗ್ಗೆ ಉಲ್ಲೇಖವಿದೆ. ಇವರು ಅಂದಿನ ಸಮಾಜದಲ್ಲಿ ಗೋವುಗಳನ್ನು ಕಾಯುತ್ತಿದ್ದ ಶೂದ್ರರಲ್ಲಿಯ ಒಂದು ಜಾತಿ ಎಂದೂ ಊಹಿಸಬಹುದಾಗಿದೆ. ನೀಲಗುಂದ ಶಾಸನದಲ್ಲಿ ಕೂಡ ತಳ್ಳಿಗನ್ನೆ ಪತ್ತೊಕ್ಕಲು ಎಂಬ

ಉಲ್ಲೇಖವಿರುವುದರಿಂದ ಈ ತೆಲ್ಲಿಗರು ತಮ್ಮ ವೃತ್ತಿಯ ಜೊತೆಗೆ ಸಂಘವನ್ನು ಕಟ್ಟಿಕೊಂಡಿದ್ದರು ಎಂಬುದು ತಿಳಿದುಬರುತ್ತದೆ. ಗಾಣ, ಗಾಣದ ಎಣ್ಣೆ, ಕೈಗಾಣ, ಗಾಣದರೆ ಮುಂತಾದ ಉಲ್ಲೇಖಗಳಿರುವುದರಿಂದ ಈ ವೃತ್ತಿಯ ಜನಾಂಗದವರು ಈ ಪ್ರದೇಶದಲ್ಲಿ ಹೆಚ್ಚಾಗಿದ್ದರೆಂದು ಮೇಲಿನ ಅಂಶಗಳಿಂದ ತಿಳಿದುಬರುತ್ತದೆ.

**ರಾಯಸದವರು**

ಅರಸರಿಗೆ ಮತ್ತು ಗೌಡರಿಗೆ ಪತ್ರಗಳನ್ನು ಬರೆಯುವವರನ್ನು ರಾಯಸದವರು ಎಂದು ಕರೆಯಲಾಗಿದೆ. ಆದೇಶಗಳನ್ನು ಬರೆದು ಅವುಗಳಿಗೆ ಅರಸರ ಸಹಿ ಮತ್ತು ಮೊಹರು ಹಾಕಿ ಕಳುಹಿಸುವುದು ರಾಯಸದವರ ಪ್ರಮುಖ ಕೆಲಸವಾಗಿತ್ತು. ಈ ರೀತಿಯ ವ್ಯವಸ್ಥೆ ವಿಜಯನಗರ ಕಾಲದಿಂದಲೂ ನಡೆಯುತ್ತಾ ಬಂದಿದೆ. ಅದೇ ರೀತಿಯ ವ್ಯವಸ್ಥೆಯನ್ನು ಅನುಸರಿಸಿಕೊಂಡು, ಹರಪನಹಳ್ಳಿ, ಸಂತೆಬೆನ್ನೂರು, ಬಸವಾಪಟ್ಟಣ, ಕಣಕುಪ್ಪೆ ಪಾಳೆಯಗಾರರು, ರಾಯಸದವರನ್ನು ನೇಮಕ ಮಾಡಿಕೊಂಡಿದ್ದರು. ರಾಯಸದರ ತಿಮ್ಮಪ್ಪ, ರಾಯಸದ ಶ್ರೀನಿವಾಸ, ರಾಯಸದ ಉಪೇಂದ್ರರಾವ್ ಇವರ ಸೋದರ ಸಂಬಂಧಿಗಳು ಈಗಲೂ ಹರಪನಹಳ್ಳಿ ನಗರದಲ್ಲಿ ಇದ್ದಾರೆ, ಇವರಿಗೆ ಸಂಬಂಧಿಸಿದಂತೆ ಸುಮಾರು ೪೦ ಮನೆಗಳು ಹರಪನಹಳ್ಳಿಯಲ್ಲಿ ಕಂಡುಬರುತ್ತವೆ.

ಕೆಲವು ಸಂದರ್ಭದಲ್ಲಿ ರಾಯಸದವರು ಅರಸರಿಗೆ ಸೂಕ್ತ ಮಾರ್ಗದರ್ಶನವನ್ನು ಕೊಟ್ಟಿರುವುದಾಗಿಯೂ ತಿಳಿದುಬಂದಿದೆ. ಟಿಪ್ಪು ಸುಲ್ತಾನ್, ಬಸಪ್ಪನಾಯಕ ಮತ್ತು ಅವನ ಸರದಾರರನ್ನು ಕರೆತರಲು ತನ್ನ ಸೈನಿಕರನ್ನು ಹರಪನಹಳ್ಳಿಗೆ ಕಳುಹಿಸಿದಾಗ ಅಲ್ಲಿಗೆ ಹೋಗುವುದು ಬೇಡವೆಂದು ತಿಮ್ಮಪ್ಪನವರು ಕಿವಿ ಮಾತು ಹೇಳಿದರು ಎಂದು ತಿಳಿದುಬಂದಿದೆ.[೪೧]

ಹೀಗೆ ರಾಯಸದವರು ತಮ್ಮ ತಮ್ಮ ಕಾರ್ಯಗಳನ್ನು ನಿಷ್ಠೆಯಿಂದ ಮಾಡುವುದರ ಮೂಲಕ ಪಾಳೆಯಗಾರರಿಗೆ ತುಂಬ ಹತ್ತಿರವಾದ ಸಂಬಂಧವನ್ನು ಇಟ್ಟುಕೊಂಡಿದ್ದರು.

**ದಿವಾನರು**

ಪ್ರಾಚೀನ ಕಾಲದಲ್ಲಿ ಮುಖ್ಯಮಂತ್ರಿಗಳಿಗೆ ದಿವಾನರೆಂದು ಕರೆಯುತ್ತಿದ್ದರು. ಇವರು ರಾಜರ ಆಡಳಿತದಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತಿದ್ದರು. ಈ ರೀತಿಯ ಪರಂಪರೆ ಪಾಳೆಯಗಾರರಲ್ಲೂ ಕೂಡ ಮುಂದುವರೆದಿತ್ತು. ಇವರು ಆಡಳಿತದಲ್ಲಿ ಹೆಚ್ಚು ಸಮರ್ಥರಾಗಿದ್ದರು. ಹೆಚ್ಚಾಗಿ ಬ್ರಾಹ್ಮಣ ಮನೆತನದವರು ದಿವಾನ ಹುದ್ದೆಗೆ ಆಯ್ಕೆಯಾಗುತ್ತಿದ್ದರು. ಹರಪನಹಳ್ಳಿ ಪಾಳೆಯಪಟ್ಟಿನಲ್ಲಿ ಕಂಡುಬರುವ ಪ್ರಮುಖ ದಿವಾನರೆಂದರೆ ಹಂಪರಸರಾವ್, ೨ನೇ ಹಂಪರಸರಾವ್ ಮತ್ತು ವಿರೂಪಾಕ್ಷಪ್ಪ. ಈ ದಿವಾನ ಪದ್ಧತಿ ವಂಶಪಾರಂಪರ್ಯವಾಗಿತ್ತು. ಈ ರೀತಿಯ ಪದ್ಧತಿ ಸಂತೆಬೆನ್ನೂರು ಪಾಳೆಯಗಾರರಲ್ಲಿ ಕೂಡ ಇದ್ದಿತು. ಕೂಡ್ಲಿ ಶೃಂಗೇರಿ ಮಠದ ದಾಖಲೆಯಲ್ಲಿ ಸಂತೆಬೆನ್ನೂರು ಸೀತಾರಾಮಪ್ಪನಾಯಕರ ಕಾಲದ ಭಾಗಾನಗರದ ದಿವಾನನಾಗಿದ್ದ ಮಹಾದಾಜಿ ಪಂಡಿತನ ಉಲ್ಲೇಖವಿದೆ.

### ಗೌಡರು

ಪಾಳೆಯಗಾರ ಕಾಲದಲ್ಲಿ ಗೌಡರ ಪದ್ಧತಿ ಜಾರಿಯಲ್ಲಿತ್ತು. ರಾಯಸದವರು ಮತ್ತು ದಿವಾನರ ನಂತರ ಗೌಡರಿಗೆ ಸಿಗುತ್ತಿತ್ತು. ಇವರು ಅರಸರಿಗೆ ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು. ನೀಲಗುಂದ ಗ್ರಾಮದ ಸೋಮನಗೌಡರು ದಾದಯ್ಯನಾಯಕರಿಗೆ ಪಾಳೆಯಪಟ್ಟು ಸ್ಥಾಪಿಸುವ ಸಂದರ್ಭದಲ್ಲಿ ಸೂಕ್ತ ಸಲಹೆ ಸೂಚನೆಗಳನ್ನು ನೀಡಿದ್ದರೆಂದು ತಿಳಿದುಬರುತ್ತದೆ.

೨ನೇ ಸೋಮಶೇಖರನಾಯಕರ ಕಾಲದಲ್ಲಿ ಹರಪನಹಳ್ಳಿಯಲ್ಲಿ ಮಲ್ಲನಗೌಡ ಗೌಡಕಿ ಕೆಲಸ ಮಾಡುತ್ತಿದ್ದ. ಅರಸನಿಗೆ ವಿವಾಹ ವಿಚಾರ ಮಾಡುವ ಸಂದರ್ಭದಲ್ಲಿ ಇವರಿಬ್ಬರಿಗೂ ವಿವಾದ ಉಂಟಾಯಿತು. ಕೋಪಗೊಂಡ ಅರಸ ಮಲ್ಲನಗೌಡನ ಮೇಲೆ ವಡ್ಡಿ ಕೇಸು ಹಾಕಿ ಗೌಡಕಿಯಿಂದ ವಜಾ ಮಾಡಿರುವುದು ಕಂಡುಬರುತ್ತದೆ.[೬೨] ನಂತರ ಮುಂದೆ ಕೊಟ್ರಗೌಡನನ್ನು ಗೌಡಕಿ ಕೆಲಸಕ್ಕೆ ನೇಮಿಸಿದರು. ಇವನ ಮರಣದ ನಂತರ ಬಸಪ್ಪ ಗೌಡನಾದ. ಈ ಮನೆತನದವರು ಈಗಲೂ ಹರಪನಹಳ್ಳಿಯಲ್ಲಿ ವಾಸಿಸುತ್ತಿದ್ದಾರೆ. ಇವರಿಗೆ ಅರಸರು ಸಾಕಷ್ಟು ದಾನದತ್ತಿಗಳನ್ನು ನೀಡಿದ್ದರು. ಇವರನ್ನು ಬೆಟ್ಟನಗೌಡರ ಮನೆಯವರೆಂದು ಕರೆಯುತ್ತಾರೆ. ಶ್ರೀ ವೀರಭದ್ರ ದೇವರಿಗೆ ಈ ಮನೆತನದವರೇ ವಂಶಪಾರುಪತ್ಯಧಾರಣ ಧರ್ಮದರ್ಶಿಗಳಾಗಿರುತ್ತಾರೆ. ಗೌರಿ ಹುಣ್ಣಿಮೆಯಲ್ಲಿ ಪ್ರತಿವರ್ಷ ಈ ದೇವರ ರಥೋತ್ಸವ ನಡೆಯುತ್ತದೆ. ಮಲ್ಲನಗೌಡರ ಸಂತತಿಯವರು ಈಗಲೂ ಹರಪನಹಳ್ಳಿಯಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ.

ಕುಂದೂರಿನ ಶಾಸನದಲ್ಲಿ ಉಪಸಾವ ಪಟ್ಟಣದ ಗೌಡ ವೀರಣ್ಣ ಮಲೆಬೆನ್ನೂರು ಗೌಡಭರಮಣ್ಣ, ತೆವಣಿಗೆಯ ಆಯಗಾರನಾದ ಬಡಿಗೇರ ಲಿಂಗಣ್ಣ ಮುಂತಾದ ಗೌಡರು ಸಂತೆಬೆನ್ನೂರಿನ ಪಾಳೆಯಗಾರರನಾದ ಕೆಂಗಪ್ಪ ನಾಯಕನ ಕಾಲದ ಅಧಿಕಾರಿಗಳ ಹೆಸರು ಉಲ್ಲೇಖಗೊಂಡಿವೆ.

### ದಳವಾಯಿಗಳು

ಸಂತೆಬೆನ್ನೂರು, ಹರಪನಹಳ್ಳಿ, ಕಣಕುಪ್ಪೆ ಪಾಳೆಯಗಾರರಲ್ಲಿ ದಳವಾಯಿಗಳು ಪ್ರಮುಖ ಪಾತ್ರ ವಹಿಸುತ್ತಿದ್ದರು. ದಳವಾಯಿಗಳು ಅರಸರ ಅಂಗರಕ್ಷಕ ಪಡೆಯ ಮುಖ್ಯಸ್ಥರಾಗಿದ್ದರು. ಹರಪನಹಳ್ಳಿ ಪಾಳೆಯಗಾರರಲ್ಲಿ ಸಂಜೀವನಾಯಕ ಒಬ್ಬ ಪರಾಕ್ರಮಿ ದಳವಾಯಿಯಾಗಿದ್ದನು. ಸೋಮಶೇಖರನಾಯಕನ ಕಾಲದಲ್ಲಿ ಸಂಜೀವ ನಾಯಕ ಅಂಗರಕ್ಷಕ ಪಡೆಯ ಮುಖ್ಯಸ್ಥನಾಗಿದ್ದನು. ಅನೇಕ ಸಂದರ್ಭದಲ್ಲಿ ಯುದ್ಧಗಳಲ್ಲಿ ಭಾಗವಹಿಸಿ ನಾಯಕರಿಗೆ ಜಯ ತಂದುಕೊಟ್ಟಿರುವ ನಿದರ್ಶನಗಳು ಕಂಡುಬರುತ್ತವೆ.

ಈ ದಳವಾಯಿಗಳು ಯುದ್ಧದಲ್ಲಿ ವಿಶೇಷ ಕೌಶಲ್ಯಗಳನ್ನು ಕರಗತ ಮಾಡಿಕೊಂಡಿದ್ದರು. ಇವರು ಶತ್ರುಗಳ ಮೇಲೆ ಸರಪಳಿಯಿಂದ ದಾಳಿ ಮಾಡುತ್ತಿದ್ದರು. ಸಂಜೀವನಾಯಕ ಈ ರೀತಿಯ ದಾಳಿ ಮಾಡುತ್ತಿದ್ದರಿಂದ ಇವನಿಗೆ ಸರಪಳಿನಾಯಕ ಎಂದು ಕರೆಯುತ್ತಿದ್ದರು.[೬೩]

ದಳವಾಯಿಗಳು ತಮ್ಮ ಪಾಳೆಯಪಟ್ಟಾಗಿ ಸದಾ ಶ್ರಮಿಸುತ್ತಿದ್ದರು. ಕೆಂಚನಾಯಕ, ಸಂಜೀವನಾಯಕ ಮೊದಲಾದ ಅನೇಕ ದಳವಾಯಿಗಳು ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಇದ್ದರು. ಈ ದಳವಾಯಿಗಳು ಸೈನಿಕ ಪಡೆಯ ಪ್ರಮುಖ ಅಂಗವಾಗಿತ್ತು. ಇವರ ಕಾರ್ಯ ವೈಖರಿಗಳನ್ನು ಕಂಡು ಪಾಳೆಯಗಾರರು ಅನೇಕ ರೀತಿಯ ಸೌಲಭ್ಯಗಳನ್ನು ನೀಡುತ್ತಿದ್ದರು.

ಸೋಮಶೇಖರನಾಯಕ ಒಂದು ದಿನ ಬೇಟೆಗಾಗಿ ನೀಲಗುಂದ ಅರಣ್ಯಕ್ಕೆ ಹೋಗಿದ್ದಾಗ ನೀಲಗುಂದ ಗ್ರಾಮದ ಒಬ್ಬ ಬಡ ಕುಟುಂಬದ ಬೇಡ ಜನಾಂಗಕ್ಕೆ ಸೇರಿದ ಕೆಂಚಪ್ಪ ಎನ್ನುವ ಬಾಲಕ ಮೊಲವೊಂದಕ್ಕೆ ಗುರಿಯಿಟ್ಟು ಬಾಣ ಹೊಡೆದಿದ್ದನ್ನು ಕಂಡು ನಾಯಕ ಊರ ಗೌಡರನ್ನು ಕರೆಯಿಸಿ ಹುಡುಗನ ತಂದೆಯೊಂದಿಗೆ ಮಾತುಕತೆ ನಡೆಸಿ ಅವನ ಅನುಮತಿಯೊಂದಿಗೆ ಆ ಹುಡುಗನನ್ನು ತನ್ನ ಸೈನ್ಯಕ್ಕೆ ಸೇರಿಸಿಕೊಂಡನು. ಇವನು ಅತ್ಯಂತ ಪರಾಕ್ರಮಿ ಮತ್ತು ನಿಷ್ಠಾವಂತ ದಳವಾಯಿಯಾಗಿದ್ದನು. ಹಾಲಘಟ್ಟ ಯುದ್ಧದಲ್ಲಿ ತೋರಿದ ಪರಾಕ್ರಮ ಹಾಗೂ ಸ್ವಾಮಿನಿಷ್ಠೆಗಾಗಿ ಪ್ರಾಣತ್ಯಾಗ ಮಾಡಿದ ಈ ಕೆಂಚಪ್ಪ ಹರಪನಹಳ್ಳಿ ಪಾಳೆಯಗಾರರಲ್ಲಿ ಹೆಸರಾಗಿದ್ದಾನೆ. ಚಿತ್ರದುರ್ಗ ನಾಯಕರ ಕಾಲದಲ್ಲಿ ಬಿಳಿಚೋಡು ಜಗಲೂರು, ಕಣಕುಪ್ಪೆ ಪ್ರದೇಶದಲ್ಲಿ ಅನೇಕ ಅಧಿಕಾರಿಗಳ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಕ್ರಿ.ಶ. ೧೫೭೬ರ ರೆಡ್ಡಿಹಳ್ಳಿ ಶಿಲಾಶಾಸನದಲ್ಲಿ[೪೪] ಭರಮಪ್ಪ ಎಂಬ ದಳವಾಯಿಯ ಉಲ್ಲೇಖವಿದೆ. ಕಸ್ತೂರಿರಂಗಪ್ಪ ನಾಯಕ ದಳವಾಯಿಯಾದ ಭರಮಪ್ಪನು ಜಗಲೂರು ಪ್ರದೇಶದಲ್ಲಿರುವ ವೀರಶೈವ ಮಠಕ್ಕೆ ಗ್ರಾಮವನ್ನು ದತ್ತಿ ನೀಡಿರುವುದು ಈ ಶಾಸನದಲ್ಲಿ ಉಲ್ಲೇಖವಿದೆ. ಈ ಶಾಸನದಿಂದ ನಮಗೆ ತಿಳಿದುಬರುವುದೇನೆಂದರೆ ಚಿತ್ರದುರ್ಗ ನಾಯಕರ ಆಳ್ವಿಕೆಯಲ್ಲಿ ಇತರೆ ಸಣ್ಣಪುಟ್ಟ ಪಾಳೆಯಪಟ್ಟನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಅವರ ಅಧೀನದಲ್ಲಿರುವ ಅಧಿಕಾರಿಗಳು ದಾನ ಧರ್ಮ ಮಾಡುವ ಸ್ವಾತಂತ್ರ್ಯವನ್ನು ಪಡೆದಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೬೦೬ರ ಕೊಗುಂಡಿಯ ಶಾಸನದಲ್ಲಿ[೪೫] ಚಿಕ್ಕಣ್ಣನಾಯಕ ಆಳ್ವಿಕೆ ಮಾಡುವ ಸಂದರ್ಭದಲ್ಲಿ ಪಾರುಪತ್ಯಗಾರನಾಗಿದ್ದ ಮಲ್ಲಿಶೆಟ್ಟಿಯು ಬಿಳಿಚೋಡ ಸೀಮೆಯನ್ನು ನೋಡಿಕೊಳ್ಳುವ ಜವಾಬ್ದಾರಿ ಹೊತ್ತಿರುವ ದಾಖಲೆಯನ್ನು ಕಾಣಬಹುದು. ಅದೇ ರೀತಿ ಕ್ರಿ.ಶ. ೧೬೦೯ರ ಇಮ್ಮಡಿ ಮದಕರಿ ನಾಯಕನ ಹುಲ್ಲೂರಿನ ಶಾಸನದಲ್ಲಿ[೪೬] ಮಲ್ಲಪ್ಪ ಎಂಬ ದಳವಾಯಿಯ ಉಲ್ಲೇಖವಿದೆ. ಮಲ್ಲಪ್ಪ ಎಂಬ ದಳವಾಯಿಗೆ ೨ನೇ ಮದಕರಿನಾಯಕರ ಹುಲ್ಲೀರು ಗ್ರಾಮದ ವೀರಭದ್ರ ದೇವರ ಮಹೋತ್ಸವದ ಉಸ್ತುವಾರಿಯನ್ನು ನೋಡಿಕೊಳ್ಳಲು ವಹಿಸಿರುವುದು ಕಂಡುಬರುತ್ತದೆ.

ಕ್ರಿ.ಶ. ೧೬೫೫ರ ಮೆದಕರಿಪುರದ ಶಾಸನದಲ್ಲಿ[೪೭] ಇಮ್ಮಡಿ ಮದಕರಿನಾಯಕನ ಕಾಲದ ಕಣಕುಪ್ಪೆಯ ದಳವಾಯಿಯಾದ ಚಿನ್ನಯ್ಯ, ಪಾರುಪತ್ಯಗಾರ ತಿಮ್ಮಪ್ಪ ಮತ್ತು ಬೊಮ್ಮಯ್ಯರ ಉಲ್ಲೇಖಗೊಂಡಿರುವುದನ್ನು ಕಾಣಬಹುದು. ಕ್ರಿ.ಶ. ೧೬೭೨ರ ಭರಮಸಮುದ್ರದ ಶಾಸನದಲ್ಲಿ[೪೮] ಮದಕರಿನಾಯಕರು ಭರಮಸಮುದ್ರದ ಕೋಟೆಯನ್ನು ಕಟ್ಟಿಸಿ ಈ ಕೋಟೆಯ ಅಧಿಕಾರವನ್ನು

ನೋಡಿಕೊಳ್ಳಲು ಗಳ್ಳೇಲೋರ ಚೆಂದಲಯ್ಯನಿಗೆ ನೇಮಿಸಿದ ವಿವರಗಳು ಈ ಶಾಸನದಲ್ಲಿ ಉಲ್ಲೇಖಗೊಂಡಿರುವುದನ್ನು ಕಾಣಬಹುದು. ಹೀಗೆ ದಳವಾಯಿಗಳು ಪಾಳೆಯಗಾರರ ಇತಿಹಾಸದಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡುವುದರ ಮೂಲಕ ಚರಿತ್ರೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದ್ದಾರೆ. ರಾಜನು ಸೈನ್ಯದ ನೇತೃತ್ವ ವಹಿಸಿದಂತೆ ದಳವಾಯಿಗಳು ರಾಜನ ನೇತೃತ್ವ ವಹಿಸುತ್ತಿದ್ದದ್ದು ಕಂಡುಬರುತ್ತದೆ. ಇವರಲ್ಲದೆ ವ್ಯಾಪಾರಿಗಳು, ಕೃಷಿಕರು, ಕುಶಲಕರ್ಮಿಗಳು ಜನಸಾಮಾನ್ಯರು ಸಮಾಜದ ಭಾಗವಾಗಿದ್ದು ವಿಜಯನಗರ ಸಾಮ್ರಾಜ್ಯ ನಂತರದ ಸಾಮಾಜಿಕ ಬೆಳವಣಿಗೆಯಲ್ಲಿ ನಾಡಿನ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಅಕ್ಕಸಾಲಿಗ, ಬಡಗಿ, ಕಮ್ಮಾರ, ಕುಂಬಾರ, ಶಿಲ್ಪಿ, ಕಂಚುಗಾರ, ಅಗಸ, ಉಪ್ಪಾರ, ಮಾದಿಗ, ಕೆಲಸಿಗ, ಮುಂತಾದವರು ಪಾಳೆಯಗಾರರ ಕಾಲಕ್ಕೆ ಸೇರುತ್ತಾರೆ. ಅಕ್ಕಸಾಲಿಗರು ವಿಶೇಷವಾಗಿ ಚಿನ್ನದ ಕೆಲಸದ ಜೊತೆಗೆ ಶಿಲಾಶಾಸನ, ತಾಮ್ರಶಾಸನಗಳನ್ನು ಕೆತ್ತುವುದು, ನಾಣ್ಯಗಳನ್ನು ತಯಾರಿಸುವ ಕೆಲಸಗಳನ್ನು ಮಾಡುತ್ತಿದ್ದರು. ಈ ಹಿಂದೆ ಹೇಳಿದ ಹಾಗೆ ಬಿಳಿಚೋಡಿನಲ್ಲಿ ಭರಮಣ್ಣನಾಯಕ ಕಟ್ಟಿಸಿದ ಚಿನ್ನದ ಮನೆಯಲ್ಲಿ ಅಕ್ಕಸಾಲಿಗರು ನಾಣ್ಯಗಳನ್ನು ತಯಾರಿಸುತ್ತಿದ್ದರು ಎಂದು ಹೇಳಬಹುದು. ಕಂಚುಗಾರರು ಕಂಚು ಮತ್ತು ಹಿತ್ತಾಳೆಯಿಂದ ಪಾತ್ರೆಗಳು ಸಾಮಾನುಗಳನ್ನು ತಯಾರಿಸುತ್ತಿದ್ದರು. ಇದರ ಜೊತೆಗೆ ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಕೂಡ ಲಿಪಿಕಾರರಾಗಿ, ಮಂತ್ರಿಗಳಾಗಿ, ಶಾನುಭೋಗರಾಗಿ ಕಾರ್ಯ ನಿರ್ವಹಿಸುತ್ತಾ ಹಲವು ಜವಾಬ್ದಾರಿಗಳನ್ನು ಹೊತ್ತಿದ್ದರು. ವ್ಯಾಪಾರಿಗಳು ರಾಜರಿಗೆ ಬ್ಯಾಂಕರುಗಳಾಗಿ ಇರುತ್ತಿದ್ದರು. ರಾಜರು ತಮ್ಮ ಬೊಕ್ಕಸವನ್ನು ಬಲಪಡಿಸಲು ವ್ಯಾಪಾರ, ವಾಣಿಜ್ಯ ಉದ್ದಿಮೆಗಳನ್ನು ಪ್ರೋತ್ಸಾಹಿಸುವುದು ಅಗತ್ಯ ಎಂಬುದನ್ನು ಪಾಳೆಯಗಾರರು ಮನಗಂಡಿದ್ದರು. ಆದುದರಿಂದ ಇವರು ವ್ಯಾಪಾರವನ್ನು ಕೂಡ ಬೆಂಬಲಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಈ ಮೇಲಿನ ಶ್ರಮಿಕ ವರ್ಗದವರು ಗ್ರಾಮ ಮತ್ತು ನಗರಪ್ರದೇಶಗಳಲ್ಲಿ ಬೇರೆ ಬೇರೆ ಬೀದಿಗಳಲ್ಲಿ ವಾಸ ಮಾಡುತ್ತಿದ್ದರು. ಅವರ ಹೆಸರನ್ನು ಆ ಬೀದಿಗಳಿಗೆ ಇಡಲಾಗುತ್ತಿತ್ತು. ಉದಾಹರಣೆಗೆ ಒಕ್ಕಲಿಗರ ಬೀದಿ, ಬ್ರಾಹ್ಮಣರ ಬೀದಿ, ಉಪ್ಪಾರ ಬೀದಿ, ಅಕ್ಕಸಾಲಿಗರ ಬೀದಿ, ಕುಂಬಾರರ ಬೀದಿ ಮುಂತಾದವು. ನಾಯಕರ ಕಾಲದಲ್ಲಿ ಒಂದೊಂದು ಜಾತಿಗೆ ಒಂದೋ ಎರಡೋ ವೃತ್ತಿ ಪರಿಣತಿ ಇರುತ್ತಿದ್ದಿತು. ಆದುದರಿಂದ ಈ ಸಮಾಜವ್ಯವಸ್ಥೆಯು ವಿಸ್ತಾರವಾದ ಶ್ರಮದ ಹಂಚಿಕೆಯ ಆಧಾರದ ಮೇಲೆ ರೂಪುಗೊಂಡಿತ್ತು. ಅರಸನು ದಾನ ದತ್ತಿ ಜನೋಪಯೋಗವಾಗುವಂತಹ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸುವ ಮೂಲಕ ಪುಣ್ಯ ಗಳಿಸುವುದು ಅರಸನ ಮುಖ್ಯ ಕರ್ತವ್ಯವಾಗಿತ್ತು. ಈ ಶ್ರಮಿಕ ವರ್ಗದವರು ತಮ್ಮದೇ ಆದ ಬೀದಿಗಳನ್ನು ನಿರ್ಮಾಣ ಮಾಡಿಕೊಂಡಿರುವುದು ನ್ಯಾಮತಿ ಶಾಸನದಲ್ಲಿ ಕಂಡುಬರುತ್ತದೆ.

ಈ ಮೇಲಿನ ಶ್ರಮಜೀವಿಗಳು ವಂಶಪಾರಂಪರ್ಯವಾಗಿ ಬಂದ ವೃತ್ತಿವೈಶಿಷ್ಟ್ಯವನ್ನು ಉಳಿಸಿಕೊಳ್ಳುವ ಭಿನ್ನತೆಯು ಜಾತಿವ್ಯವಸ್ಥೆಗೆ ದಾರಿ ಮಾಡಿಕೊಟ್ಟಿತು. ವೃತ್ತಿನಿರತ ಜಾತಿಗಳಿಗೆ ಫಣಗಳೆಂದು ಕರೆಯುತ್ತಿದ್ದರು.[೨೯] ಕೃಷಿ, ವ್ಯಾಪಾರ, ಹಾಗೂ ಕರಕುಶಲ ಕಲೆಗೆ ಸೇರಿದ ವೃತ್ತಿಪರ ಜಾತಿಗಳು ಇವುಗಳಲ್ಲಿ ಸೇರಿದ್ದವು. ಜಾತಿಪದ್ಧತಿಯ ಪ್ರಕಾರ ಒಬ್ಬ ಸದಸ್ಯನು ಆನುವಂಶಿಕವಾಗಿ ಒಂದು ವೃತ್ತಿಗೆ ಅಥವಾ ಕಸುಬಿಗೆ ಬದ್ಧನಾಗಿದ್ದನು. ಜಾತಿಗೂ ನಿರ್ದಿಷ್ಟ ವೃತ್ತಿ ಅಥವಾ ಕಸುಬಿಗೂ ಸ್ಪಷ್ಟ ಸಂಬಂಧವಿತ್ತು.

ಈ ಕಾಲದಲ್ಲಿ ಸಾಮಾಜಿಕ ಸಂಬಂಧಗಳು ಸಾಮರಸ್ಯದಿಂದ ಕೂಡಿದ ಸಹಬಾಳ್ವೆಯ ಸಂಬಂಧಗಳಾಗಿದ್ದವೆಂದು ನಂಬಲು ಸಾಧ್ಯವಿಲ್ಲ. ತಾತ್ವಿಕ ಮಟ್ಟದಲ್ಲಿ ಮೌಲ್ಯವ್ಯವಸ್ಥೆಗಳ ಬಗೆಗೆ ಘರ್ಷಣೆಗಳಾಗುತ್ತಿದ್ದದು ಮಾತ್ರವಲ್ಲ ಅಸಮಾನತೆಗಳಿಂದಾಗಿ ಘರ್ಷಣೆಯ ಬಿಗುವಿನ ಪರಿಸ್ಥಿತಿ ಕಂಡುಬರುತ್ತಿತ್ತು. ಆದರೆ ಅವು ರಾಜ್ಯಕ್ಕೆ ಅಪಾಯವನ್ನುಂಟು ಮಾಡುವ ಮಟ್ಟದಲ್ಲಿಲ್ಲ. ಏಕೆಂದರೆ ರಾಜನಿಗೆ, ಬ್ರಾಹ್ಮಣನಿಗೆ, ನಿಷ್ಠೆ ಭಕ್ತಿ ತೋರಿಸಬೇಕು ಎಂಬ ಭಾವನೆ ಜನರ ಮನಸ್ಸಿನಲ್ಲಿ ಬೇರೂರಿತ್ತು. ಆದ್ದರಿಂದ ಈ ಸಮಾಜದಲ್ಲಿ ಸಂಘರ್ಷವೂ ಜನಾಭಿಪ್ರಾಯದಷ್ಟೆ ಮುಖ್ಯವಾಗಿದ್ದಿತ್ತು. ಈ ದೃಷ್ಟಿಯಿಂದ ಪ್ರಭುತ್ವ ಮತ್ತು ಪರಾಧೀನತೆಗಳು ಸಾಮಾಜಿಕ ಬೆಸುಗೆಗೆ ಮುಖ್ಯ ಅಂಶಗಳಾಗಿದ್ದವು.[೩೦]

ಶ್ರಮಿಕ ವರ್ಗದವರು ಸೇರಿಕೊಂಡು ಒಂದು ಸಂಘವನ್ನು ಕಟ್ಟಿಕೊಂಡಿದ್ದರು. ಈ ಸಂಘ ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಎಂಟುಹಿಟ್ಟು ಎಂದು ಉಲ್ಲೇಖವಾಗಿದೆ. ಈ ಸಂಘದಲ್ಲಿ ಮೂವರು ಗ್ರಾಮಾಧಿಕಾರಿಗಳು, ಗೌಡ, ಶಾನುಭೋಗ, ತಳವಾರ ಹಾಗೂ ಐವರು ಗ್ರಾಮದ ಪಂಚಮ, ಪ್ರತಿನಿಧಿಗಳು ಅಂದರೆ ಮೇಲ್ವರ್ಗದವರು ಸದಸ್ಯರಾಗಿರುತ್ತಾರೆ. ಈ ಸಂಘದವರು ಸಾರ್ವಜನಿಕ ಕಾರ್ಯಗಳಲ್ಲಿಯೂ ಭಾಗವಹಿಸುತ್ತಿದ್ದರು. ಯುದ್ಧದಲ್ಲಿ ದಾನದತ್ತಿ ನೀಡುವ ಸಮಯದಲ್ಲಿ ಉಪಸ್ಥಿತರಿರುತ್ತಿದ್ದರು. ದಾನ ಸ್ವೀಕರಿಸುವುದು ಮತ್ತು ಶಾಸನ ಕಂಡರಿಸುವುದನ್ನು ಸಹ ಮಾಡುತ್ತಿದ್ದರು. ಶಾಸನಗಳಲ್ಲಿ ಇವರೆಲ್ಲರ ಉಲ್ಲೇಖವನ್ನು ಕಾಣಬಹುದು.

ಬೇಲಿ ಮಲ್ಲೂರು ಶಾಸನೋಕ್ತ[೩೧] ಅಕ್ಕಸಾಲಿಗನೊಬ್ಬನು ಯುದ್ಧದಲ್ಲಿ ಹೋರಾಡಿ ಮಡಿದ ಉಲ್ಲೇಖವಿರುವುದನ್ನು ನೋಡಿದರೆ ಇವರು ತಮ್ಮ ವೃತ್ತಿಯ ಜೊತೆಗೆ ಇತರ ಕೆಲಸ ಮಾಡುತ್ತಿದ್ದುದು ತಿಳಿದುಬರುತ್ತದೆ. ಕ್ರಿ.ಶ. ೧೫೫೭ರ ಮುತ್ತಗಿಯ ಶಾಸನದಲ್ಲಿ[೩೨] ಗೋಬಳಿಬಾವಿಯ ಶಾನುಭೋಗ ಶಾಸನ ಬರೆದಿದ್ದಾನೆ ಹಾಗೂ ಅದನ್ನು ಕಾಣಾಚಿಯ ಬಡಗಿ ದೇವೋಜನು ಖಂಡಿಸಿದನು ಎಂದಿದೆ. ಬಲ್ಲೇಶ್ವರನ ಶಾಸನದಲ್ಲಿ[೩೩] ಅಕ್ಕಸಾಲಿ ಹೊನ್ನಮ್ಮನ ಮಗ ಲಿಂಗಣ್ಣನಿಗೆ ನೀಡಿದ ಉಂಬಳಿಯನ್ನು ತಿಳಿಸುತ್ತದೆ. ಕಾಮಗೇತಿ ಅರಸ ಸಿದ್ಧಲಿಂಗ ದೇವರಿಗೆ ಭೂದತ್ತಿ ನೀಡುವ ಸಮಯದಲ್ಲಿ ಶಾನುಭೋಗ, ಬಡಗಿ, ನಾಗೋಜ, ಅಕ್ಕಸಾಲಿ ತಿಪಂಣ, ಮಡಿವಾಳರು ಇದ್ದರೆಂದು

ತಿಳಿದುಬರುತ್ತದೆ. ಈ ಮೇಲಿನ ಶಾಸನವನ್ನು ಅವಲೋಕಿಸಿದಾಗ ಶ್ರಮಿಕ ವರ್ಗವೂ ಕೂಡ ಅಂದಿನ ಸಮಾಜದಲ್ಲಿ ಎಷ್ಟೊಂದು ಅನಿವಾರ್ಯವಾಗಿತ್ತೆಂದು ತಿಳಿಯುತ್ತದೆ. ಅಂಬಿಗ, ಗೊಲ್ಲರು ಮುಂತಾದವರು ಸಹ ಅಂದಿನ ಸಮಾಜದಲ್ಲಿ ಶ್ರಮಜೀವಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು ಎಂಬುದನ್ನು ದಾವಣಗೆರೆ ಪ್ರದೇಶದ ಶಾಸನಗಳು ಉಲ್ಲೇಖಿಸುತ್ತವೆ.

ಬಡಿಗರ ಪದುಮರ, ಬಡಿಗ ನಾಗೋಜಿ, ಬಡಿಗ ಲಿಂಗಣ್ಣ[೫೪] ಎಂಬ ಹೆಸರುಗಳು ಉಲ್ಲೇಖಗಳಿರುವುದರಿಂದ ಈ ಪ್ರದೇಶದಲ್ಲಿ ಬಡಿಗರು ಇದ್ದರೆಂದು ತಿಳಿದುಬರುತ್ತದೆ.

ಕುರುಬರು ಕೂಡ ಪಾಳೆಯಗಾರರ ಕಾಲದಲ್ಲಿ ಇದ್ದರು. ಇವರು ಪ್ರಾಣಿಗಳನ್ನು ಸಾಕುತ್ತಿದ್ದರು. ಹೆಚ್ಚಾಗಿ ಕುರಿಗಳನ್ನು ಸಾಕುತ್ತಿದ್ದರಿಂದ ಇವರಿಗೆ ಕುರುಬರು ಎಂಬ ಹೆಸರು ಬರಲು ಕಾರಣವಾಯಿತು. ದಮ್ಮನಾಯಕನೆಂಬುವನು ಬಿಳಿಚೋಡ ಸೀಮೆಯಲ್ಲಿ ಚಿನಸಾಯಕೂರಿನ ಬಳಿ ಕುರುಬರಿಗೆ ಕುರಿದೆರಿಗೆಯನ್ನು ದಾನ ಮಾಡಿದ ಎಂಬುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಕೃಷ್ಣಪ್ಪನಾಯಕನು ಮುತ್ತಿಗೆಯ ಪ್ರಜೆಗಳಿಗೆ ಕುರಿ ಸಾಕುವವರಿಗಾಗಿ ತೆರಿಗೆ ನಿರ್ದಿಷ್ಟ ಪಡಿಸಿರುವುದನ್ನು ಮುತ್ತಿಗೆಯ ಶಾಸನದಲ್ಲಿ ಉಲ್ಲೇಖಗೊಂಡಿದೆ.[೫೫] ಬಾಗಳಿ ಶಾಸನದಲ್ಲಿ ಕುರಿದೆರಿಗೆ ಎಂಬ ಉಲ್ಲೇಖವಿದೆ. ಆದುದರಿಂದ ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರ ಕಾಲದಲ್ಲಿ ಕುರುಬ ಜಾತಿಯವರು ಕುರಿ ಕಾಯುವ ವೃತ್ತಿಯಲ್ಲಿ ಇದ್ದರೆಂದು ಈ ಮೇಲಿನ ಆಧಾರಗಳಿಂದ ತಿಳಿದುಕೊಳ್ಳಬಹುದು.

ಕಮ್ಮಾರರು ಈ ಪ್ರದೇಶದಲ್ಲಿ ಕಂಡುಬರುತ್ತಾರೆ. ಇವರ ಮೂಲಪುರುಷ ವಿಶ್ವಕರ್ಮರೆಂದು ಹೇಳಿಕೊಂಡಿದ್ದಾರೆ.[೫೬] ಇವರು ರೈತರಿಗೆ ಕೃಷಿಗೆ, ಸಂಬಂಧಿಸಿದ ಸಾಧನಗಳನ್ನು ತಯಾರಿಸುತ್ತಿದ್ದರು. ಇವರು ತಮ್ಮದೇ ಆದ ಕೇರಿಗಳಲ್ಲಿ ವಾಸಿಸುತ್ತಿದ್ದರು. ಆನಗೋಡು ಶಾಸನದಲ್ಲಿ ಕಮ್ಮಾರ ಮಲ್ಲಯ್ಯ ಎಂಬ ಹೆಸರು ಉಲ್ಲೇಖಗೊಂಡಿದೆ. ನ್ಯಾಮತಿ ಶಾಸನದಲ್ಲಿ ಕಮ್ಮಾರ ಬೀದಿ ಎಂಬ ಹೆಸರುಗಳು ದಾಖಲೆಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.

**ಸ್ತ್ರೀಯರ ಸ್ಥಾನಮಾನ**

ಭಾರತದಲ್ಲಿ ಸ್ತ್ರೀಯರ ಸ್ಥಾನಮಾನ ಕುರಿತಂತೆ ಚರ್ಚೆಗಳು ಪ್ರಾಚೀನ ಕಾಲದಿಂದಲೂ ಈವರೆಗೂ ನಡೆಯುತ್ತಾ ಬಂದಿವೆ. ಸ್ತ್ರೀಯರು ಎಲ್ಲಿ ಪೂಜ್ಯರೊ ಅಲ್ಲಿ ದೇವತೆಗಳು ಸಂತೃಪ್ತರು ಎಂದು ಅರೇಬಿಯಾ ದೇಶದ ನಾಣ್ಣುಡಿಯೊಂದು ಹೇಳುತ್ತದೆ. ಸಿಂಧೂ ಸಂಸ್ಕೃತಿ, ವೇದಕಾಲದ ಸಂಸ್ಕೃತಿಯಲ್ಲಿ ಸ್ತ್ರೀಯರ ಸ್ಥಾನಮಾನ ಊರ್ಜಿತಗೊಂಡಿದ್ದವು. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿದ್ದ ಸ್ಥಿತಿ ಕಾಲಾಂತರದಲ್ಲಿ ಪಿತೃಪ್ರಧಾನ ಕುಟುಂಬ ಜಾರಿಯಲ್ಲಿ ಬಂದಿತು.

ಬೌದ್ಧಧರ್ಮ ಸಾಹಿತ್ಯ ಕಾಲದಲ್ಲಿ, ಪಾಣಿನಿಯ ಅಷ್ಟಾಧ್ಯಾಯಿ ಪತಂಜಲಿಯ ಮಹಾಭಾಷ್ಯಗಳಲ್ಲಿ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ, ಮೆಗಾಸ್ತಾನಿಸನ ಬರವಣಿಗೆಯಲ್ಲಿ ಸ್ತ್ರೀಯರ ಸ್ಥಾನಮಾನ, ಉದ್ಯೋಗಾವಕಾಶಗಳು, ಸಾಮಾಜಿಕ ಜೀವನ ಮುಂತಾದ ಅಂಶಗಳು ಕಂಡುಬರುತ್ತವೆ.

ಕ್ರಿ.ಶ. ೫ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಸಾಮಾಜಿಕ, ರಾಜಕೀಯ, ಧಾರ್ಮಿಕ ಸಂಘರ್ಷಗಳಿಂದ ಮಹಿಳೆಯರ ಸ್ಥಾನಮಾನ ಕುಗ್ಗಿತು. ಈ ರೀತಿಯ ಅಂಧಃಪತನ ೧೮ನೇ ಶತಮಾನದವರೆಗೆ ಮುಂದುವರಿಯಿತು. ದಕ್ಷಿಣ ಭಾರತದಲ್ಲಿ ೧೨ನೇ ಶತಮಾನದಿಂದ ೧೫ನೇ ಶತಮಾನದವರೆಗೆ ಕಲೆ, ಸಾಹಿತ್ಯ, ಆಡಳಿತ ಮತ್ತು ಯುದ್ಧಗಳಲ್ಲಿ ಮಿಂಚಿದ ಅನೇಕ ಮಹಿಳೆಯರ ಕುರಿತು ಕೆ.ಎಂ.ಫಣಿಕ್ಕರ್ ಅವರು 'ಭಾರತದ ಮಹಿಳೆಯರು' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

ಪಾಳೆಯಗಾರರ ಸಂದರ್ಭದಲ್ಲಿ ನಾಗತಿಯರು ರಾಜಕೀಯ, ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಕೆಲಸ ಮಾಡಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಕೆಲವು ನಾಗತಿಯರು ತಮ್ಮ ಕೆಲಸ ಕಾರ್ಯಗಳಿಂದ, ಧೈರ್ಯದಿಂದ, ಶೌರ್ಯದಿಂದ, ಮುತ್ಸದ್ಧಿತನದಿಂದ ಉತ್ತಮ ಸ್ಥಾನಮಾನವನ್ನು ಗಳಿಸಿಕೊಂಡಿದ್ದರು. ಬಹುಪತ್ನಿತ್ವ, ವೇಶ್ಯೆಯರು, ಸಹಗಮನ ಪದ್ಧತಿ, ಸಂಪ್ರದಾಯ, ನಂಬಿಕೆಗಳು ಮುಂತಾದ ಆಯಾಮಗಳಲ್ಲಿ ನಾಗತಿಯರು, ಸ್ತ್ರೀಯರು ತಮ್ಮ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ತಮ್ಮ ಅಭಿವೃದ್ಧಿ ಕೆಲಸದಲ್ಲಿ ತೊಡಗಿಕೊಂಡು ದೇವಸ್ಥಾನಗಳಿಗೆ ದಾನದತ್ತಿಗಳನ್ನು ನೀಡುವುದು, ಗ್ರಾಮಗಳಿಗೆ ತೆರಿಗೆಳನ್ನು ಬಿಟ್ಟುಕೊಡುವುದು, ಶಾಸನಗಳನ್ನು ಕಂಡರಿಸುವುದು ಮುಂತಾದ ಜನಪರ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಆದುದರಿಂದ ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರ ನಾಗತಿಯರಿಗೆ ಸಂಬಂಧಿಸಿದಂತೆ ಹಲವು ಮಾಸ್ತಿಗಲ್ಲುಗಳನ್ನು ನಾವು ಕಾಣಬಹುದು.

ಸಾಹಸದಿಂದ ಹೋರಾಡಿ ಪ್ರಾಣವನ್ನೇ ಮುಡುಪಾಗಿಟ್ಟು, ಗೋವುಗಳನ್ನು ಕಳ್ಳರಿಂದ ದರೋಡೆಕೋರರಿಂದ, ಶತ್ರುಗಳಿಂದ ರಕ್ಷಿಸುವಾಗ ಪ್ರಾಣ ಬಿಟ್ಟ ಅನೇಕ ನಾಗತಿಯರ ಸ್ತ್ರೀಯರ ನೆನಪಿಗಾಗಿ ವೀರಗಲ್ಲುಗಳು, ಮಾಸ್ತಿಗಲ್ಲುಗಳನ್ನು ನೆಡುತ್ತಿದ್ದರು. ಇವುಗಳಲ್ಲದೆ ಸಾರ್ವಜನಿಕ ಚಟುವಟಿಕೆ, ಮನರಂಜನೆಗಳಲ್ಲಿ ಭಾಗವಹಿಸುತ್ತಿದ್ದರೂ ಸ್ತ್ರೀ ಶಿಕ್ಷಣ ಅಷ್ಟೊಂದು ಪರಿಣಾಮಕಾರಿಯಾಗಿರಲಿಲ್ಲ.

ಒಟ್ಟಾರೆ ಸಾಮಾಜಿಕ ವ್ಯವಸ್ಥೆಯು ಪಾಳೆಯಗಾರರ ಕಾಲದಲ್ಲಿ ಉತ್ತಮವಾಗಿತ್ತು ಎಂದು ಹೇಳಬಹುದು. ಈ ಮೇಲಿನ ಅಂಶಗಳನ್ನು ಚರ್ಚೆ ಮಾಡಿದಾಗ ಪಾಳೆಯಗಾರರು ಸಮಾಜದ ಎಲ್ಲಾ ವರ್ಗಗಳಿಗೆ ತಮ್ಮದೇ ಆದ ಪ್ರಾಮುಖ್ಯತೆ ನೀಡಿರುವುದು ಕಂಡುಬರುತ್ತದೆ.

**೪.೩. ಆರ್ಥಿಕ ವ್ಯವಸ್ಥೆ**

ಒಂದು ಸಾಮ್ರಾಜ್ಯದ ಸಾಂಸ್ಕೃತಿಕ ಅಭಿವೃದ್ಧಿಗೆ ಆರ್ಥಿಕ ವ್ಯವಸ್ಥೆ ಬಹು ಮುಖ್ಯವಾದುದು. ಆ ಸಾಮ್ರಾಜ್ಯದ ಅಭಿವೃದ್ಧಿಯು ಆರ್ಥಿಕ ಸದೃಢತೆಯ ಮೇಲೆ ಅವಲಂಬಿತವಾಗಿರುತ್ತದೆ. ಐತಿಹಾಸಿಕವಾಗಿ ರೂಪಿತವಾದ ಸಪ್ತಾಂಗವೂ ಮಾನವನ ಆರ್ಥಿಕ ಅಭಿವೃದ್ಧಿಯ ವ್ಯವಸ್ಥೆಯನ್ನು ಸಮತೋಲನದಲ್ಲಿ ಮುನ್ನಡೆಸುತ್ತದೆ. ಇದರ ಮೂಲಕ ಒಂದು ಸಾಮ್ರಾಜ್ಯದ ಆರ್ಥಿಕಾಭಿವೃದ್ಧಿಯನ್ನು

ಸಮತೋಲನದಲ್ಲಿಡಲು ಸಾಧ್ಯವಾಗುತ್ತದೆ. ಆ ಸಾಮ್ರಾಜ್ಯದಲ್ಲಿ ಫಲವತ್ತಾದ ಭೂಮಿ ಇದ್ದು ಕೃಷಿ ಚಟುವಟಿಕೆಗಳು ನಿರಂತರವಾಗಿ ಸಾಗುತ್ತಿರಬೇಕು ಹಾಗೂ ರಾಜ್ಯಾದಾಯ ನಿರಂತರವಾಗಿ ಬರುತ್ತಿರಬೇಕು. ಈ ರಾಜ್ಯದಾಯ ತೆರಿಗೆಗಳ ಮೂಲಕ, ಕಾಣಿಕೆಗಳ ಮೂಲಕ, ಶುಲ್ಕಗಳ ಮೂಲಕ ಅರಮನೆಯ ಬೊಕ್ಕಸಕ್ಕೆ ಸಂದಾಯವಾಗುತ್ತಿರಬೇಕು. ಹೀಗೆ ಸಂಗ್ರಹವಾಗುತ್ತಿದ್ದ ಆದಾಯದ ಬಹುಭಾಗವು ಸಾಮ್ರಾಜ್ಯದ ವಿವಿಧ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗವಾಗುತ್ತಿತ್ತು.

ಒಂದು ಸಾಮ್ರಾಜ್ಯದ ರಕ್ಷಣೆಯು ಸೈನ್ಯವನ್ನು ಅವಲಂಬಿಸಿದಂತೆ, ರಾಜ್ಯದ ಸ್ಥಿತಿಗತಿ ಆರ್ಥಿಕತೆಯನ್ನು ಅವಲಂಬಿಸಿತ್ತು. ಇದರಲ್ಲಿ ನೈಸರ್ಗಿಕ ಸಂಪನ್ಮೂಲ, ಕೃಷಿ, ಅನೇಕ ವೃತ್ತಿಗಳ ಉತ್ಪಾದನೆಯನ್ನು ಒಳಗೊಂಡಿದೆ. ಸಂಪನ್ಮೂಲಗಳ ಬಳಕೆ ಉತ್ಪಾದನಾ ಸಾಮರ್ಥ್ಯವನ್ನು ಅವಲಂಬಿಸಿತ್ತು. ರಾಜಕೀಯ ಒಗ್ಗಟ್ಟು, ಸ್ಥಾನಮಾನ ಮತ್ತು ಸಾರ್ವಜನಿಕ ಚಟುವಟಿಕೆಗಳು ಸಹ ಸಂಗ್ರಹಿಸುವ ತೆರಿಗೆಯ ಮೇಲೆ ನಿಂತಿತ್ತು. ಆರ್ಥಿಕತೆ ಗಟ್ಟಿಯಾಗಿ ಬೆಳವಣಿಗೆಯಾಗುವುದಕ್ಕೆ ಅಂದಿನ ತೆರಿಗೆಪದ್ಧತಿ ಮೂಲಕಾರಣವಾಗಿತ್ತು.

ಪ್ರಾಚೀನ ತೆರಿಗೆಪದ್ಧತಿಗಳೆಂದರೆ ಮನೆದರೆ, ಗಾಣದೆರೆ, ಎಣ್ಣೆದೆರೆ, ಬಣವಿದೆರೆ, ಸಂತೆದೆರೆ ಇನ್ನೂ ಹಲವಾರು ತೆರಿಗೆಳಿದ್ದವು. ನೀರಾವರಿ ಭೂಮಿಗೆ, ಒಣಬೇಸಾಯಕ್ಕೆ ತೋಟಗಳಿಗೆ ಇನ್ನೂ ಬೇರೆ ಬೇರೆ ರೀತಿಯ ವಿವಿಧ ತೆರಿಗೆಗಳನ್ನು ಸಂಗ್ರಹಿಸಲಾಗುತ್ತಿತ್ತು. ಇವುಗಳ ಅದಾಯ ಒಂದೆಡೆಯಾದರೆ ಯುದ್ಧಗಳ ಸಂದರ್ಭಗಳಲ್ಲಿ ಸಂಗ್ರಹವಾದ ಆದಾಯ ಸಂಪತ್ತು ಕೂಡ ರಾಜ್ಯದ ಬೊಕ್ಕಸಕ್ಕೆ ಸೇರುತ್ತಿತ್ತು.[೫೭]

ಮಾನವನು ನಾಗರಿಕತೆಯತ್ತ ದಾಪುಗಾಲು ಹಾಕುತ್ತಿದ್ದ ಅವಧಿಯಲ್ಲಿ ನೈಸರ್ಗಿಕ ಸಂಪತ್ತುಗಳಲ್ಲಿ ಪ್ರಮುಖವಾಗಿರುವ ಭೂಸಂಪತ್ತನ್ನು ಸರಿಯಾದ ಕ್ರಮದಲ್ಲಿ ಬಳಸಲು ಆರಂಭಿಸಿದನು. ಕೃಷಿ ಮತ್ತು ಗಣಿಗಾರಿಕೆ ಪ್ರಮುಖವಾಗಿ ಆಯಾ ರಾಜ್ಯದ ಆದಾಯವನ್ನು ಆಶ್ರಯಿಸಿದವು. ನಿಸರ್ಗದಲ್ಲಿ ದೊರೆಯುವ ಮಣ್ಣು, ನೀರು, ಖನಿಜ ಮತ್ತು ಅರಣ್ಯಸಂಪತ್ತುಗಳು ಭೂಮಿಯಲ್ಲಿ ಸಮಾವೇಶಗೊಳ್ಳುತ್ತವೆ. ಇದರಿಂದ ಮಾನವ ಬದುಕಿನ ಮೂಲ ಅಂಗ ಕೃಷಿ ಹಾಗೂ ಸಂಪನ್ಮೂಲವೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಬೆಟ್ಟ ಗುಡ್ಡ, ಖನಿಜ, ಅರಣ್ಯ ಮತ್ತು ವಿವಿಧ ಸ್ವರೂಪಗಳನ್ನೊಳಗೊಂಡ ಭೂಮಿಯನ್ನು ಸಾಮಾನ್ಯವಾಗಿ ಕೆಯಿ ಎಂದೂ ಉಲ್ಲೇಖಿಸಲಾಗಿದೆ.[೫೮] ಇವುಗಳಲ್ಲಿ ಭೂಮಿಯನ್ನು ಬೇರೆ ಬೇರೆ ಭಾಗಗಳಾಗಿ ವಿಂಗಡಿಸಿ, ಆ ಭೂಮಿಯ ಗುಣಮಟ್ಟದ ಆಧಾರದ ಮೇಲೆ ತೆರಿಗೆಯನ್ನು ನಿರ್ಧರಿಸುತ್ತಿದ್ದರು. ಪ್ರಾಚೀನ ಗ್ರಂಥ ಅರ್ಥಶಾಸ್ತ್ರದ ಪ್ರಕಾರ "ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಆ ರಾಜ್ಯದಲ್ಲಿ ನಡೆಯುವ ಅಭಿವೃದ್ಧಿ ಕಾರ್ಯಗಳು ಪ್ರಮುಖವಾಗಿ ಕಾರಣವಾಗುತ್ತದೆ."[೫೯] ಪ್ರಾಗೈತಿಹಾಸ ಕಾಲದಿಂದಲೂ ಮಾನವನು ಒಂದು ಕಡೆ ನೆಲೆ ನಿಂತು ಜೀವನ ನಡೆಸಲು ಪ್ರಾರಂಭಿಸಿದನು. ತನ್ನ ಜೀವನವನ್ನು ಸಾಗಿಸಲು ಅಂದರೆ ನಿರ್ವಹಣೆಗೆ ತನ್ನ ಸುತ್ತಮುತ್ತಲಿನ ಪ್ರದೇಶವನ್ನು ಕೃಷಿಗಾಗಿ ಬಳಸಿಕೊಂಡನು. ಅಲ್ಲದೆ ನದಿ, ಹಳ್ಳ, ಬಾವಿಗಳ ನೀರನ್ನು ಕೃಷಿಗೆ ಬಳಸಿಕೊಂಡನು. ಇದರಲ್ಲಿ ಮಳೆಯನ್ನು

ಅವಲಂಬಿಸಿ ಸಾಗುವಳಿ ಮಾಡುವ ಭೂಮಿಗೆ ದೇವಮಾತೃಕ ಎಂದು ಕರೆಯಲಾಗುತ್ತಿತ್ತು. ಹಾಗೆ ಬಾವಿ ಮತ್ತು ಕೃತಕ ಜಲಾಶಯಗಳನ್ನು ಅವಲಂಬಿಸಿದ ನೀರಾವರಿ ಭೂಮಿಯನ್ನು ನದಿ ಮಾತೃಕವೆಂದು ವಿಂಗಡಿಸಲಾಗಿದೆ.[೬೦] ದೇವ ಮಾತೃಕ ಹೊಲಗದ್ದೆಗಳು ನದಿಮಾತೃಕಗಳಲ್ಲಿ ಸೇರ್ಪಡೆಗೊಳ್ಳುತ್ತವೆ. ಗೋಮಾಳ ಭೂಮಿಯು ರಾಜರ ವಶದಲ್ಲಿತ್ತು. ಪಾಳೆಯಗಾರರು ಸ್ವತಂತ್ರವಾಗಿ ರಾಜ್ಯವನ್ನು ಆಳಲು ಪ್ರಾರಂಭಿಸಿದ ಕಾಲದಿಂದಲೂ ರಾಜ್ಯದ ಆರ್ಥಿಕ ಪರಿಸ್ಥಿತಿಯ ಮೇಲೆ ತೀವ್ರ ನಿಗಾ ಇಟ್ಟಿದ್ದರು. ಏಕೆಂದರೆ ಹಣಬಲ ಇದ್ದಾಗ ಮಾತ್ರ ಮಿಕ್ಕೆಲ್ಲಾ ಬಲಗಳನ್ನು ಅಭಿವೃದ್ಧಿಪಡಿಸಲು ಸಾಧ್ಯವಾಗುತ್ತದೆ. ಹಣ ಸಂಗ್ರಹಣೆಗೆ ಪೂರಕವಾದಂತೆ ಕೃಷಿಪದ್ಧತಿಯ ಮೇಲೆ ಹೆಚ್ಚಿನ ಅವಲಂಬನೆ ಇತ್ತು. ಪಾಳೆಯಗಾರರು ಪ್ರತಿ ೮–೧೬ ಹಳ್ಳಿಗಳಿಗೆ ಒಂದು ಸೀಮೆಯನ್ನು ಮಾಡಿಕೊಂಡಿದ್ದರು.

ಈ ಸೀಮೆಗಳ ಆಡಳಿತವನ್ನು ನೋಡಿಕೊಳ್ಳಲು ಪಾರುಪತ್ಯಗಾರ, ನಾಡಗೌಡ, ನಾಯಕ, ದಳವಾಯಿ, ಗೌಡ, ಶಾನುಭೋಗರು ಮುಂತಾದವರು ಇರುತ್ತಿದ್ದರು. ಗ್ರಾಮದ ಕಂದಾಯ ವಸೂಲಿ ಗೌಡನ ಜವಾಬ್ದಾರಿಯಾಗಿತ್ತು. ಲೆಕ್ಕಪತ್ರಗಳನ್ನು ಶಾನುಭೋಗರು ನೋಡಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಸುಗ್ಗಿಯ ಕಾಲದಲ್ಲಿ ಕಂದಾಯ ವಸೂಲಿ ಮಾಡುವ ಪರಂಪರೆ ಪಾಳೆಯಗಾರರಲ್ಲಿರುತ್ತಿತ್ತು. ಪ್ರತಿಯೊಂದು ವ್ಯವಸ್ಥೆಗೆ ಇಂತಿಷ್ಟು ತೆರಿಗೆ ನಿಗದಿಯಾಗಿತ್ತು. ಇವುಗಳಿಂದ ಸಂಗ್ರಹವಾಗುತ್ತಿದ್ದ ತೆರಿಗೆಯನ್ನು ಗ್ರಾಮದ ಸೀಮೆಯ ರಾಜ್ಯದ ಅಭಿವೃದ್ಧಿಗೆ ಖರ್ಚು ಮಾಡಲಾಗುತ್ತಿತ್ತು. ಒಂದು ಭಾಗ ಮಾತ್ರ ಅರಮನೆಯ ಬೊಕ್ಕಸಕ್ಕೆ ಹೋಗುತ್ತಿತ್ತು.

ಪಾಳೆಯಗಾರರ ದಾನಶಾಸನಗಳನ್ನು ನೋಡಿದರೆ ಹೆಚ್ಚಾಗಿ ದೇವಾಲಯಗಳಿಗೆ ಹಾಗೂ ಬ್ರಾಹ್ಮಣರಿಗೆ ಹೆಚ್ಚು ಕಂದಾಯ ಮೀಸಲಿಡಲಾಗುತ್ತಿತ್ತು. ಸಾಮಾನ್ಯವಾಗಿ ತೆರಿಗೆಗಳನ್ನು ೨ ವಿಧವಾಗಿ ವಿಗಂಡಿಸಲಾಗಿತ್ತು. ಒಂದು ಕೃಷಿ ಸಂಬಂಧಿತ ತೆರಿಗೆಗಳು ಇನ್ನೊಂದು ವಾಣಿಜ್ಯ ವ್ಯವಹಾರಕ್ಕೆ ಸಂಬಂಧಿಸಿದ ತೆರಿಗೆಗಳು. ಕೃಷಿ ಸಂಬಂಧಿತ ತೆರಿಗೆಗಳನ್ನು ಸುಗ್ಗಿಯ ಕಾಲದಲ್ಲಿ ಮಾತ್ರ ಸಂಗ್ರಹ ಮಾಡಲಾಗುತ್ತಿತ್ತು. ಆದರೆ ವಾಣಿಜ್ಯ ತೆರಿಗೆಗಳನ್ನು ನಿರಂತರವಾಗಿ ಸಂಗ್ರಹ ಮಾಡಲಾಗುತ್ತಿತ್ತು. ವಾಣಿಜ್ಯ ತೆರಿಗೆಗಳಲ್ಲಿ ತಂಬಾಕು, ಅಬಕಾರಿ, ಎಲೆಮನೆ, ಉಪ್ಪು, ಗಾಣ, ಬಟ್ಟೆ, ನೂಲು ಮಾರ್ಗದ ಸುಂಕ, ಸಂತೆಯ ಸುಂಕ ಹೀಗೆ ಹಲವಾರು ವಿಧದ ಕಂದಾಯಗಳ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ.[೬೧] ಈ ಮೇಲಿನ ತೆರಿಗೆಗಳನ್ನು ಗಮನಿಸಿದರೆ ಪಾಳೆಯಗಾರರ ಕಾಲದಲ್ಲಿ ಸಾಕಷ್ಟು ಆದಾಯ ಸಂಗ್ರಹವಾಗುತ್ತಿತ್ತು ಎಂಬ ಅಂಶ ಕಂಡುಬರುತ್ತದೆ. ನಾಯಕರ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದ ಹಣ ವರಹಗಳೇ ಚಾಲ್ತಿಯಲ್ಲಿದ್ದವು. ದುರ್ಗಿ, ವರಹ, ಪಗೋಡ, ಕಾಸು, ಹೀಗೆ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳು ಬದಲಾವಣೆಯಲ್ಲಿದ್ದವು. ಜೊತೆಗೆ ಅನೇಕ ವೃತ್ತಿಗಳ ಮೇಲೆ ಕೂಡ ತೆರಿಗೆಗಳು ಸಂಗ್ರಹವಾಗುತ್ತಿತ್ತು. ಹೀಗೆ ಸಂಗ್ರಹವಾದ ತೆರಿಗೆಯ ಹಣ ರಾಜಭಂಡಾರಕ್ಕೆ ಸೇರುತಿತ್ತು.[೬೨] ಹೀಗೆ ಹಲವಾರು ರೀತಿಯ ತೆರಿಗೆಗಳು ಸಂಗ್ರಹವಾಗುತ್ತಿದ್ದು ಅವುಗಳನ್ನು ಒಂದೊಂದಾಗಿ ಚರ್ಚಿಸಬಹುದು.

## ಕೃಷಿ

ಆರ್ಥಿಕ ವ್ಯವಸ್ಥೆಯಲ್ಲಿ ಅನೇಕ ವೃತ್ತಿಗಳಂತೆ ಕೃಷಿ ಅಥವಾ ವ್ಯವಸಾಯ ಪ್ರಮುಖವಾಗಿದೆ. ಇದು ಉಳಿದ ಎಲ್ಲಾ ಆದಾಯಕ್ಕೆ ಮೂಲವಾಗಿತ್ತು. ಹರಪನಹಳ್ಳಿ, ಸಂತೆಬೆನ್ನೂರು, ಜಗಳೂರು, ಜಿಳಿಚೋಡು ಮುಂತಾದ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ಅಧೀನರಾಗಿದ್ದರಿಂದ ಅವರ ಕಂದಾಯವ್ಯವಸ್ಥೆಯನ್ನು ಅನುಸರಿಸಿ ನಂತರದ ಕಾಲದಲ್ಲಿ ಕೆಲವು ಸಣ್ಣಪುಟ್ಟ ಬದಲಾವಣೆಯೊಂದಿಗೆ ಕಂದಾಯವನ್ನು ನಿಗದಿ ಮಾಡುತ್ತಿದ್ದರು. ಭೂಮಿಯ ಫಲವತ್ತತೆ ಹಾಗೂ ಉತ್ಪನ್ನಗಳ ಆಧಾರದ ಮೇಲೆ ಕಂದಾಯವನ್ನು ವಸೂಲಿ ಮಾಡುತ್ತಿದ್ದರು. ಶಾಸನಗಳಲ್ಲಿ ತಿಳಿಸಿರುವಂತೆ ವ್ಯವಸಾಯ ಅಥವಾ ಕೃಷಿಯನ್ನು ನಾಲ್ಕು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಕಾಡಾರಂಬ(ಒಣಬೇಸಾಯ), ನಿರಾರಂಭ(ಗದ್ದೆ ಬೇಸಾಯ), ತೋಟಾರಂಭ (ತೋಟಗಳ ಬೇಸಾಯ), ಕುಮುರಿ(ಸ್ಥಳವರ್ಗಾಯಿಸುವ ಬೇಸಾಯ) ಎಂದು ವಿಭಾಗಿಸಿ ಅವುಗಳ ಉತ್ಪನ್ನದ ಆಧಾರದ ಮೇಲೆ ತೆರಿಗೆಯನ್ನು ಸಂಗ್ರಹಿಸುತ್ತಿದ್ದರು. ಈ ತರಹದ ಕೃಷಿ ಭೂಮಿಗಳು ಪಾಳೆಯಗಾರರ ಕಾಲದಲ್ಲಿ ಇದ್ದಿದ್ದವು.

ದಾವಣಗೆರೆ ಜಿಲ್ಲೆಯ ಪಾಳೆಯಗಾರರು ಕೃಷಿ ಭೂಮಿಯನ್ನು ಮಣ್ಣಿನ ಗುಣಲಕ್ಷಣ, ನೀರಾವರಿ ಸೌಲಭ್ಯ, ಮಳೆ ಬೆಳೆಯ ತೆರಿಗೆ ಇವುಗಳ ಆಧಾರದ ಮೇಲೆ ನಿರ್ಧರಿಸುತ್ತಿದ್ದರು.[೬೩] ಕೆಂಪು ಕಪ್ಪು, ಇತರೆ ಭೂಮಿಗಳ ಆಧಾರದ ಮೇಲೆ ಭೂಮಿಯನ್ನು ಉತ್ತಮ ಮಧ್ಯಮ, ಕನಿಷ್ಠ ಎಂದು ವಿಭಾಗ ಮಾಡಲಾಗಿತ್ತು.[೬೪] ಅರಸರು ಅಧಿಕಾರಿಗಳು ಗ್ರಾಮಸ್ಥರು ದೇವರಿಗೆ ಇಲ್ಲವೆ ವ್ಯಕ್ತಿಗಳಿಗೆ ದಾನ ನೀಡಿದಾಗ ಎರೆಯ ಹೊಲ, ಕುಳದ ಎರೆಹೊಲ, ವಕ್ಕುಳ ಎರೆಹೊಲ, ವಕ್ಕುಳ ಎರೆಯ ಮತ್ತರು, ಖಂಡುಗ ಎರೆಹೊಲ ಬೆದ್ದಲ ಕೆಂಗಾಡು ಎಂದು ಉಲ್ಲೇಖಿಸಲಾಗಿದೆ.

ನೀರಾವರಿ ಆಶ್ರಯದಲ್ಲಿದ್ದ ಭೂಮಿಯನ್ನು ಗದ್ದೆಗಳು ಎಂದು ಕರೆಯುತ್ತಿದ್ದರು. ಆ ಗದ್ದೆಗಳು ಕೆರೆಗಳ ಆಶ್ರಯದಲ್ಲಿದ್ದವು. ಮಳೆಯನ್ನು ಆಶ್ರಯ ಮಾಡಿಕೊಂಡಿರುವ ಭೂಮಿಯನ್ನೇ ಬೆದ್ದಲು ಎಂದು ಕರೆಯುತ್ತಿದ್ದರು. ಇವುಗಳನ್ನು ಕಾಡಾರಂಬವೆಂತಲೂ ಕರೆಯುತ್ತಿದ್ದರು. ಕೆರೆ ಮತ್ತು ಜಲಾಶಯಗಳನ್ನು ಆಧರಿಸಿ ನಡೆಯುತ್ತಿದ್ದ ವ್ಯವಸಾಯ ಪದ್ಧತಿಗೆ ನೀರಾರಂಭ ಎಂದು ಕರೆಯುತ್ತಿದ್ದರು. ಈ ಭಾಗದಲ್ಲಿ ವಾಣಿಜ್ಯಬೆಳೆಗಳು ಪ್ರಮುಖವಾಗಿದ್ದವು. ಈ ಪ್ರದೇಶದ ಮಣ್ಣು ತೋಟಗಾರಿಕೆಗೆ ಹೆಚ್ಚು ಅನುಕೂಲವಿತ್ತು.

ಕ್ರಿ.ಶ. ೧೮೦೦ರ ವೇಳೆಗೆ ಈ ಪ್ರದೇಶವನ್ನು ಸಂದರ್ಶಿಸಿದ ಫ್ರಾನ್ಸಿಸ್ ಬುಕಾನನ್ ಇಲ್ಲಿನ ಮಣ್ಣಿನ ಗುಣಲಕ್ಷಣವನ್ನು ವರ್ಣಿಸುತ್ತಾನೆ ಹಾಗೂ ಇದರ ಒಳ್ಳೆಯ ಗುಣ-ಲಕ್ಷಣವನ್ನು ತನ್ನ ಕೃತಿಯಲ್ಲಿ ಹೊಗಳಿದ್ದಾನೆ.[೬೫] ಅವನ ಪ್ರಕಾರ ಕೆರೆ ಆಶ್ರಿತ ಭೂಮಿ ಬೆಳೆ ಬೆಳೆಯುವುದಕ್ಕೆ ಯೋಗ್ಯವಾಗಿತ್ತು. ಏಕೆಂದರೆ ಇಲ್ಲಿನ ಮಣ್ಣು ಕೋಟು ಪದರು ನೀರನ್ನು ಹಿಡಿದಿಟ್ಟುಕೊಳ್ಳುವ ಶಕ್ತಿಯನ್ನು ಹೊಂದಿತ್ತು. ಹರಪನಹಳ್ಳಿ ತಾಲ್ಲೂಕಿನಲ್ಲಿ ಮರಳು ಕೆಂಪುಮಿಶ್ರಿತ ಜೇಡಿಮಣ್ಣು ಮತ್ತು ಕಪ್ಪು ಜೇಡಿಮಣ್ಣು ಇದೆ.

ಕ್ರಿ.ಶ. ೧೩೩೬ರಲ್ಲಿ ಆತ್ಮರಾಮ ಸ್ವಾಮಿಗಳಿಗೆ ಮತ್ತು ಅನಂತರ ನಿಧಿ ಸ್ವಾಮಿಗಳಗೆ ಬಾಗಳಿಯ ಕಲಿದೇವರ ಮುಂದೆ ತೋಟ, ಗದ್ದೆ ಎರೆಯ ಮತ್ತರು ಮೂರು ವಿಧದ ಭೂಮಿಯನ್ನು ದಾನ ನೀಡಿದ ವಿವರಗಳು ಶಾಸನವೊಂದರಲ್ಲಿ ಉಲ್ಲೇಖಿಸಲಾಗಿದೆ.[೬೬] ವಿಜಯನಗರದಲ್ಲಿ ವೆಂಕಟಪತಿ ಆಳ್ವಿಕೆ ನಡೆಸಿದ ಸಂದರ್ಭದಲ್ಲಿ ಕಸವನಹಳ್ಳಿಯ ಪುರ ವರ್ಗವನ್ನು ಜೀರ್ಣೋದ್ಧಾರ ಮಾಡಿದ ತಿರುಕಪ್ಪನಿಗೆ ಕುಳದ ಎರೆ ಭೂಮಿಯನ್ನು ನೀಡಿದ ಬಗ್ಗೆ ತಿಳಿದುಬಂದಿದೆ.[೬೭] ಕ್ರಿ.ಶ. ೧೭೧೨ರಲ್ಲಿ ಬಾಗಳಿ ಬಸಪ್ಪ ನಾಯಕರಾದ ಸೋಮಶೇಖರ ನಾಯಕನು ಅಶ್ವಲಾಯನ ಸೂತ್ರದ ಭಾರಧ್ವಾಜಗೋತ್ರದ ವಿಠಲಯ್ಯನಿಗೆ ಅಗ್ರಹಾರದ ಮೈಸೂರು ಗ್ರಾಮದ ಅರಮನೆಗೆ ನಡೆದುಬರುವ ದಾರಿಯಲ್ಲಿ ಎರೆಹೊಲ ಬೀಜವರಿ ಹುತ್ತು ಗಿದನ್ನಕ್ಕೆ ಪಡಲಿ ನಲವತ್ತು ಪಾಡಿ ಹೊಲವನ್ನು ಸರ್ವಮಾನ್ಯವಾಗಿ ನೀಡಿದನು.[೬೮] ಬಾಗಳಿ ಹಿರಿಯಮ್ಮಾಜಿಯು ಜೋಯಿಸರ ಪ್ರಸನ್ನ ಭಟ್ಟರು ಪ್ರತಿಷ್ಠಾಪನೆ ಮಾಡಿದ ವಿರೂಪಾಕ್ಷ ದೇವರ ಅಮೃತ ಪಡಿಗೆ ಬಂದು ಮಕ್ಕಳ ಗದ್ದೆಯನ್ನು ಬಾಗಳಿಯಲ್ಲಿ ನೀಡಿದರು.[೬೯] ಈ ಮೇಲಿನ ಅಂಶಗಳಿಂದ ಪಾಳೆಯ ಆಶ್ರಯದಿಂದ ಭೂಮಿ, ಹೊಲ, ಬೆದ್ದಲು ನೀರಿನ ಅನುಕೂಲವಿರುವ ಭೂಮಿಯಲ್ಲಿ ತೋಟಗಳಿದ್ದವೆಂದು ತಿಳಿಯಬಹುದು. ಹೊಸದಾಗಿ ಉಳುಮೆಗೆ ಕೆಂಗಾಡಿನಂತ ಭೂಮಿಗಳು ಒಳಪಡುತಿತ್ತು. ಸಾಗುವಳಿಗೆ ಒಳಪಟ್ಟ ಭೂಮಿಯನ್ನು ಕುಳದ ಭೂಮಿ, ನೀರಾವರಿ ಭೂಮಿ, ಮಕ್ಕಳ ಭೂಮಿಯೆಂದು ಕರೆಯಲಾಗುತಿತ್ತು ಎಂದು ಶಾಸನಗಳಿಂದ ತಿಳಿದುಬರುತ್ತದೆ.[೭೦] ಹರಪನಹಳ್ಳಿ ನಾಯಕರು ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ಅನೇಕ ಕೆರೆ ಬಾವಿಗಳನ್ನು ನಿರ್ಮಿಸುವುದರ ಜೊತಗೆ ಕೃಷಿಗೆ ಸಾಕಷ್ಟು ಪ್ರೋತ್ಸಾಹ ನೀಡಿದರು.

ಕ್ರಿ.ಶ. ೧೩೮೭ರಲ್ಲಿ ಬಾಗಳಿಯ ಐವತ್ತು ಮಹಾಜನರು ದೋಸವಾದ ಹಿರಿಯ ಕೆರೆಯ ಕೆಳಗೆ ಬಿಟ್ಟ ಕೆಂಗಾಡು ಮತ್ತರು ಭೂಮಿಯನ್ನು ಕೆರೆಗೆ ಮಾನ್ಯವಾಗಿ ಬಿಟ್ಟವಿಚಾರ ಶಾಸನದಿಂದ ತಿಳಿದುಬರುತ್ತದೆ.[೭೧] ಬಾಗಳಿಯ ಮಹಾನಾಯಕಚಾರ್ಯ ಬಸವನಾಯಕನು ಮೈಸೂರಿನಲ್ಲಿ ಬಾವಿಯನ್ನು ಕಟ್ಟಿಸಿದನು.[೭೨] ಹೀರೆಮೇಗಳಗೆರೆಯನ್ನು ಬಸವಂತರಾಯರ ಕಾರ್ಯಕರ್ತನಾದ ಬಾಬಾನಾಯಕನು ಸಿದ್ದನ ಬಾವಿಯನ್ನು ನಿರ್ಮಿಸಿದನು.[೭೩] ಈ ಮೇಲಿನ ಬಾವಿಗಳಲ್ಲದೆ ಬಾಗಳಿ, ಅಲಗಿಲವಾಡ, ಹರಪನಹಳ್ಳಿ, ನೀಲಗುಂದ, ಅರಸಿಕೆರೆ ಮುಂತಾದ ಪ್ರದೇಶಗಳಲ್ಲಿ ಬಾವಿ, ಕೆರೆಗಳನ್ನು ಹರಪನಹಳ್ಳಿ ಪಾಳೆಯಗಾರರು ನಿರ್ಮಿಸಿರುವುದು ಕಂಡುಬರುತ್ತದೆ. ಹೀಗೆ ಕೆರೆ ಬಾವಿಗಳನ್ನು ನಿರ್ಮಿಸಿಕೊಡುವುದರ ಮೂಲಕ ಕೃಷಿ ಚಟುವಟಿಕೆಗಳಿಗೆ ಸಾಕಷ್ಟು ಪ್ರೋತ್ಸಾಹ ಕೊಡುತ್ತಿದ್ದರು ಎಂಬುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ನದಿ ಕೆರೆ ಹಳ್ಳ ಬಾವಿಗಳು ಇರುವಲ್ಲಿ ತೋಟ, ಗದ್ದೆಗಳು ಸಾಮಾನ್ಯವಾಗಿ ಇರುತ್ತಿದ್ದವು. ಗದ್ದೆಯಲ್ಲಿ ಭತ್ತವನ್ನು ಬೆಳೆದರೆ ತೋಟಗಳಲ್ಲಿ ವಾಣಿಜ್ಯಬೆಳೆಗಳು ಬೆಳೆಯಲಾಗುತ್ತಿತ್ತು. ಮಳೆಯಾಶ್ರಿತ ಭೂಮಿಗಳಲ್ಲಿ ರಾಗಿ, ಜೋಳ, ದ್ವಿದಳಧಾನ್ಯ, ಎಣ್ಣೆಬೀಜಗಳನ್ನು ಬೆಳೆಯುತ್ತಿದ್ದರು. ವಿಭಿನ್ನ ರೀತಿಯ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡಿರುವುದನ್ನು ನಾವು ತಿಳಿದುಕೊಳ್ಳಬಹುದು.

ಸಂತೇಬೆನ್ನೂರು ನಾಯಕರ ಕಾಲದಲ್ಲಿ ಪರಿಸ್ಥಿತಿ ಭಿನ್ನವಿರಲಿಲ್ಲ. ಇವರ ಆಳ್ವಿಕೆಯ ಸಂದರ್ಭದಲ್ಲಿ ಈ ಪಾಳೆಯಪಟ್ಟನಲ್ಲಿ ಸೇರಿರುವ ಜನರು ಹೆಚ್ಚಾಗಿ ವ್ಯವಸಾಯವನ್ನೇ ಅವಲಂಬಿಸಿದ್ದರು. ಆದುದರಿಂದ ಸರ್ಕಾರಕ್ಕೆ ಹೆಚ್ಚಿನ ಆದಾಯ ಕೂಡ ಸಿಗುತ್ತಿತ್ತು. ಹೀಗೆ ಕೃಷಿಯಿಂದ ಹೆಚ್ಚೆಚ್ಚು ಆದಾಯ ಸಿಗುತ್ತಿದ್ದರಿಂದ ಅರಸರು ಮತ್ತು ಅಧಿಕಾರಿಗಳು ತಮ್ಮ ಪ್ರದೇಶದಲ್ಲಿರುವ ಕಾಡುಗಳನ್ನು ಕಡಿದು ಆ ಪ್ರದೇಶದಲ್ಲಿ ಕೆರೆಗಳನ್ನು ದೇವಾಲಯಗಳನ್ನು ನಿರ್ಮಿಸಿ ಕೃಷಿ ಚಟುವಟಿಕೆಯನ್ನು ವಿಸ್ತರಿಸಿದರು.

ಕ್ರಿ.ಶ. ೧೫೭೦ರಲ್ಲಿ ಹನುಮಪ್ಪನಾಯಕನ ಮಗ ರಾಮನಾಯಕ ಮತ್ತು ಕೆಂಚಳ ನಾಯಕರ ಹೆಸರಿನಲ್ಲಿ ರಾಮೇಹಳ್ಳಿ ಮತ್ತು ಕೆಂಚಾಪುರ ಎಂಬ ಗ್ರಾಮವನ್ನು ನಿರ್ಮಿಸಿದರು. ಈ ಹಳ್ಳಿಗಳ ಪಕ್ಕದಲ್ಲಿ ಹರಿಯುತ್ತಿದ್ದ ಹಳ್ಳಕ್ಕೆ ಒಡ್ಡು ಕಟ್ಟಿಸಿ ದೊಡ್ಡ ಕೆರೆಯನ್ನು ನಿರ್ಮಿಸಿದನು.[೭೪] ಹೀಗೆ ಈ ನಾಯಕರು ಹೊಸಗ್ರಾಮವನ್ನು ಕಟ್ಟಿಸುವುದರ ಜೊತೆಗೆ ಅಲ್ಲಿ ಕೆರೆ ಬಾವಿಗಳನ್ನು ನಿರ್ಮಿಸಿ ಕೃಷಿಯನ್ನು ಅಭಿವೃದ್ಧಿಪಡಿಸಿರುವುದು ಕಂಡುಬರುತ್ತದೆ.

ಈ ನಾಯಕರ ಕಾಲದಲ್ಲಿ ಭೂಮಿಯನ್ನು ಹೊಲಗೆದ್ದೆ, ಬೆದ್ದಲು ಎಂದು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಹೊಲ ಮತ್ತು ಬೆದ್ದಲು ಮಳೆಯಾಶ್ರಿತ ಭೂಮಿಯಾಗಿದೆ.[೭೫] ೧೫೬೩ರಲ್ಲಿ ವಿಜಯನಗರದಲ್ಲಿ ಸದಾಶಿವರಾಯ ಆಳುತ್ತಿದ್ದಾಗ ದುಮ್ಮಿಯ ಮೂಲಕ ಒಡೆಯನು ಜನರಿಗೆ ಕಿರುಕುಳ ಉಂಟುಮಾಡಿದನು. ಈ ಉಪಟಳವನ್ನು ಅಡಗಿಸಲು ಸಂತೆಬೆನ್ನೂರು ಪಿಲ್ಲಪ್ಪನಾಯಕನು ಚಿಕ್ಕಗಂಗೂರು ಗೌಡನನ್ನು ಕಳುಹಿಸಿದಾಗ ಮಲುಕ ಒಡೆಯನು ಇವನನ್ನು ಕೊಂದು ಹಾಕಿದಕ್ಕೆ ನೆತ್ತರುಕೊಡುಗೆಯಾಗಿ ಅವನ ಮಗನಿಗೆ ಎರೆಹೊಲ ಎಂಬತ್ತೆರಡು ಮನಜಿನಹೊಲ ಎಂಬತ್ಮೂರು ಒಟ್ಟು ನೂರಾ ಅರವತ್ತೈದು ಎಕರೆ ಭೂಮಿಯನ್ನು ನೀಡಿದರು.[೭೬] ಸಂತೆಬೆನ್ನೂರು ಹನುಮಪ್ಪನಾಯಕರು ಪುಟ್ಟರಸ್ಯನಿಗೆ ಲಿಂಗಾಪುರವನ್ನು ಹಾಕಿಕೊಟ್ಟ ಗ್ರಾಮಗಳಲ್ಲಿರುವ ಹೊಲಗಳು, ದರಿ, ಬೆದ್ದಲು, ಸಹವಾಗಿ ನುಡಿಯುವಂತೆ ಅಪ್ಪಣೆ ಕೊಟ್ಟನು.[೭೭] ಸಂತೆಬೆನ್ನೂರು ನಾಯಕರ ಆಡಳಿತ ಸಂದರ್ಭದಲ್ಲಿ ಗದ್ದೆ ಮತ್ತು ತೋಟಗಳು ನೀರಿನ ಆಶ್ರಯದಲ್ಲಿದ್ದವು. ಇವುಗಳು ಹೆಚ್ಚಾಗಿ ಕೆರೆಯ ಹತ್ತಿರ ಅಥವಾ ನೀರು ಎಲ್ಲಿ ಲಭ್ಯವಿರುತ್ತದೆಯೋ ಅಲ್ಲಿ ಈ ರೀತಿಯ ಗದ್ದೆ ಮತ್ತು ತೋಟಗಳು ಇರುತ್ತಿದ್ದವು. ಗದ್ದೆಯಲ್ಲಿ ಭತ್ತವನ್ನು ಬೆಳೆಯುತ್ತಿದ್ದರೆ ತೋಟಗಳಲ್ಲಿ ತೆಂಗು, ಬಾಳೆ, ವೀಳ್ಯದೆಲೆ ಅಡಿಕೆ ಮುಂತಾದ ವಾಣಿಜ್ಯಬೆಳೆಗಳು ಬೆಳೆಯುತ್ತಿದ್ದರು. ಮಳೆಯ ಆಶ್ರಯದಲ್ಲಿರುವ ಭೂಮಿಗಳಲ್ಲಿ ರಾಗಿ, ಜೋಳ, ದ್ವಿದಳಧಾನ್ಯಗಳು ಎಣ್ಣೆಕಾಳುಗಳು ತರಕಾರಿ ಮುಂತಾದ ಸಾಮಾನ್ಯ ಬೆಳೆಗಳು ಭೂಮಿಗಳಲ್ಲಿ ಬೆಳೆಯುತ್ತಿದ್ದರು.

ಹರಪನಹಳ್ಳಿ ಪಾಳೆಯಗಾರರು ಹಾಗೂ ಸಂತೆಬೆನ್ನೂರು ನಾಯಕರ ಕಾಲದ ಕೃಷಿ ಆಧಾರಿತ ಹಳ್ಳಿಗಳು ಸಾಕಷ್ಟು ಅಭಿವೃದ್ಧಿ ಹೊಂದಿದ್ದವು. ಇವುಗಳನ್ನು ರಾಜರು, ಅಧಿಕಾರಿಗಳು, ಬ್ರಾಹ್ಮಣವರ್ಗದ ನೆರವಿನಿಂದ ಕೃಷಿಯನ್ನು ಅಭಿವೃದ್ಧಿಪಡಿಸಲು ಸಾಧ್ಯವಾಯಿತು ಎಂದು ಹೇಳಬಹುದು. ಈ ನಾಯಕರ ಕೃಷಿಯ ಜೊತೆಗೆ ವ್ಯಾಪಾರಕ್ಕೂ ಹೆಚ್ಚಾಗಿ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ.

ಕೃಷಿಯ ವಿಸ್ತರಣೆಯಲ್ಲಿ ಕೆರೆ, ಕೆರೆಗಳ ನಿರ್ಮಾಣ ಮತ್ತು ಅಲ್ಲಿಯೇ ದೇವಾಲಯಗಳ ನಿರ್ಮಾಣ ಕುರಿತು ಬಂದಿದ್ದು, ಜೊತೆಗೆ ಪೂರಕವಾಗಿ ಅವುಗಳ ನಿರ್ವಹಣೆ ಹಾಗೂ ಅಲ್ಲಿಂದ ನೆಲೆ ನಿಂತ ಜನರಿಗೆ ಕೃಷಿ ಚಟುವಟಿಕೆಗಳಲ್ಲಿ ತೊಡಗಲು ಉಚಿತವಾಗಿ ಭೂಮಿಯನ್ನು ನೀಡುತ್ತಿದ್ದರು ಎಂಬುದು ಕ್ರಿ.ಶ. ೧೬೫೩ರ ಚನ್ನಗಿರಿ ಶಾಸನದಿಂದ ತಿಳಿದುಬರುತ್ತದೆ.[೭೮]

ಕೃಷಿಯಲ್ಲಿ ಮಣ್ಣಿನ ಪಾತ್ರ ಮುಖ್ಯವಾಗಿತ್ತು. ಕೃಷಿ ಭೂಮಿಯ ಫಲವತ್ತತೆಯ ಆಧಾರದ ಮೇಲೆ ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದರು. ಮಳೆ ಆಧಾರಿತ ಕೃಷಿ ಚಟುವಟಿಕೆಗಳು ಈ ಪಾಳೆಯಪಟ್ಟಿನಲ್ಲಿ ಸಾಮಾನ್ಯವಾಗಿತ್ತು. ದಾನವಾಗಿ ನೀಡುವಾಗ ನೀರಾವರಿ ಸೌಲಭ್ಯವಿರುವ ಕೆರೆಯ ಹಿಂದಿನ ಭೂಮಿಯನ್ನು ಹೆಚ್ಚಾಗಿ ನೀಡಲಾಗುತ್ತಿತ್ತು. ಕೃಷಿಯ ಉತ್ಪಾದನೆಯಲ್ಲಿ ಕೃಷಿ ಉಪಕರಣಗಳು ಕೂಡ ಸಾಕಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದವು. ಇವುಗಳ ಪ್ರಾಮುಖ್ಯತೆಯನ್ನು ಜನಪದೀಯ ಆಕರಗಳು ಎತ್ತಿ ಹಿಡಿಯುತ್ತವೆ.[೭೯]

ಕೃಷಿ ಭೂಮಿಯನ್ನು ಈ ನಾಯಕರು ವರ್ಗೀಕರಣ ಮಾಡಿಕೊಂಡಿದ್ದರು. ಈ ರೀತಿಯ ವಿಭಜನೆಯಿಂದ ಸರ್ಕಾರಕ್ಕೆ ಹೆಚ್ಚಿನ ಆದಾಯ ಸಿಗುತಿತ್ತು. ಜೊತೆಗೆ ಜನರ ಆರ್ಥಿಕ ಮೌಲ್ಯವನ್ನು ಅರಿಯಲು ಸಹಾಯಕವಾಗುತ್ತಿತ್ತು. ಕೆಲವು ಬೆಳೆಗಳ ಮೇಲೆ ತೆರಿಗೆ ವಿನಾಯಿತಿ ನೀಡುತ್ತಿದ್ದರು. ಜೊತೆಗೆ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸಿಕೊಡುವುದರ ಜೊತೆಗೆ ಕೃಷಿಯನ್ನು ಅಭಿವೃದ್ಧಿ ಮಾಡಿರುವುದು ಕಂಡುಬರುತ್ತದೆ. ಕೃಷಿ ಚಟುವಟಿಕೆಗಳಿಗೆ ಸರ್ಕಾರ ಸಹಕಾರ ನೀಡಿತ್ತು. ಈ ನಾಯಕರು ಹಿಂದೆ ವಿಜಯನಗರ ಅರಸರು ಕೃಷಿಪದ್ಧತಿಯನ್ನು ಅನುಸರಿಸಿಕೊಂಡು ಆಡಳಿತ ನಡೆಸಿದ್ದಾರೆ.

ಒಟ್ಟಾರೆ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಹರಪನಹಳ್ಳಿ, ಸಂತೆಬೆನ್ನೂರು, ಕಣಕುಪ್ಪೆ, ಬಿಳಿಚೋಡು, ಬಸವಾಪಟ್ಟಣ ಮುಂತಾದ ಪಾಳೆಯಗಾರರು ಅದಕ್ಕೆ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಅವರು ಆಡಳಿತ ನಡೆಸಿದ ಪ್ರದೇಶಗಳಲ್ಲಿ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸಿ ಕೃಷಿಕರಿಗೆ ಪ್ರೋತ್ಸಾಹ ನೀಡುವುದರ ಜೊತೆಗೆ ಅನೇಕ ದಾನ–ದತ್ತಿಗಳನ್ನು ನೀಡಿ ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿದ್ದರು.

ಕೃಷಿಪ್ರಧಾನ ವ್ಯವಸ್ಥೆಯಲ್ಲಿ ನೀರಾವರಿ ಪದ್ಧತಿ ಅತ್ಯಾವಶ್ಯಕವಾಗಿದ್ದಿತು. ಆರ್ಥಿಕ ಸ್ಥಿತಿ ಬಲಗೊಳಿಸಲು ಕೃಷಿಯ ಜೊತೆಗೆ ನೀರಾವರಿ ಕಡೆಗೆ ಹೆಚ್ಚು ಗಮನ ನೀಡುತ್ತಿದ್ದರು. ಕೃಷಿ ಕ್ಷೇತ್ರವಿಸ್ತರಣೆ ಹಾಗೂ ಈಗಾಗಲೆ ಇರುವ ಕೃಷಿ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಿಕೊಡುವುದು ಪಾಳೆಯಗಾರರ ಪ್ರಮುಖ ಕಾರ್ಯವಾಗಿತ್ತು. ನೀರಾವರಿ ವ್ಯವಸ್ಥೆಯಿಂದ ಕೃಷಿಯ ಉತ್ಪನ್ನದಲ್ಲಿ ಕುಸಿತ ತಡೆಗಟ್ಟಿ ಸ್ಥಿರತೆಯನ್ನು ಕಾಪಾಡಿಕೊಳ್ಳುತ್ತಿದ್ದರು.

ನಾಯಕರ ಕಾಲದಲ್ಲಿ ಜಲಮೂಲಗಳನ್ನು ಶಾಸನಗಳಲ್ಲಿ ಹಾಗೂ ಹಲವು ಕೃತಿಗಳಲ್ಲಿ ಉಲ್ಲೇಖವಾಗಿದೆ. ಅವುಗಳಲ್ಲಿ ಕೆರೆ, ಕಾಲುವೆ, ತೋರೆ, ಸರೋವರ, ಹಳ್ಳ, ಹೊಳೆ, ನದಿ ಎರಿ, ತೂಬು, ಕಾಡಾರಂಭ, ನಿರಾರಂಭ ಮುಂತಾದ ಜಲಮೂಲಗಳನ್ನು ಕಾಣಬಹುದು.

ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಮಾಡಿದ ಫ್ರಾನ್ಸಿಸ್ ಬುಕಾನನ್ ತನ್ನ ಪ್ರವಾಸ ಕಥನದಲ್ಲಿ ಸಣ್ಣಪ್ರಮಾಣದ ಜಲಾಶಯಗಳನ್ನು ಕಟ್ಟೆಗಳು ಎಂದು ಕರೆದಿದ್ದಾನೆ. ಹಾಗೆಯೇ ದೊಡ್ಡ ಪ್ರಮಾಣದ ಜಲಾಶಯಗಳನ್ನು ಕೆರೆಗಳು ಎಂದು ತಿಳಿಸಿದ್ದಾನೆ. ಆದರೆ ಈ ಎರಡರ ನಡುವೆ ಇರುವ ವ್ಯತ್ಯಾಸವನ್ನು ತಿಳಿಸಿಲ್ಲ. ಜಲ ಶೇಖರಣೆ ಮಾಡುವ ವ್ಯವಸ್ಥೆಯನ್ನು ಕುಂಟೆ ಎಂದು ಕರೆದಿದ್ದಾನೆ. ಸಾಮಾನ್ಯವಾಗಿ ಈ ಕಟ್ಟೆ, ಕುಂಟೆಗಳು ಪ್ರಾಣಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆಯಾಗಿತ್ತು ಎಂದು ಹೇಳಬಹುದು.[೮೦] ಹರಪನಹಳ್ಳಿ, ಸಂತೆಬೆನ್ನೂರು, ಬಿಳಿಚೋಡು, ಜಗಲೂರು ಪಾಳೆಯಗಾರರು ತಮ್ಮ ಆಳ್ವಿಕೆ ವ್ಯಾಪ್ತಿಯಲ್ಲಿ ಅನೇಕ ಕೆರೆಗಳನ್ನು ಕಟ್ಟಿಸಿದ್ದಾರೆ. ಜೊತೆಗೆ ನಾಗತಿಯರು, ದಳವಾಯಿಗಳು, ಅಧಿಕಾರಿಗಳು ಕೂಡ ಕೆರೆಗಳನ್ನು ನಿರ್ಮಿಸಿ ರಾಜ್ಯದ ಅಭಿವೃದ್ಧಿಗೆ ಪಾತ್ರರಾಗಿದ್ದಾರೆ.

ಚಿತ್ರದುರ್ಗದ ನಾಯಕರು ಹಾಗೂ ನಾಗತಿಯರು, ಅಧಿಕಾರಿಗಳು ದಾವಣಗೆರೆ ಜಿಲ್ಲೆಯ ವ್ಯಾಪ್ತಿಯಲ್ಲಿ ಅನೇಕ ಕೆರೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಅಣಜಿ ಕೆರೆ, ಜಂಪಳ ನಾಯಕನ ತೋಟಕೆರೆ, ಚಿಕ್ಕಸಿದ್ಧವ್ವ ನಾಗತಿಹಳ್ಳಿಕೆರೆ, ಅನ್ನೆಹಾಳು ಗ್ರಾಮದ ಚಿಕ್ಕಸಿದ್ಧವ್ವ ನಾಗತಿ ಕೆರೆ, ಹುಚ್ಚವ್ವ ನಾಗತಿಕೆರೆ, ಹುಚ್ಚವ್ವನ ಹಳ್ಳಿಕೆರೆ, ಜಗಲೂರು ಸೀಮೆಯ ಭರಮಸಮುದ್ರ ಕೆರೆ, ಮಾಯಕೊಂಡ ಸೀಮೆಯ ಭರಮಸಾಗರ ಕೆರೆ, ಕುರುಬರಹಳ್ಳಿ ಗ್ರಾಮದ ಬಳಿಯ ಚಿಕ್ಕಪಾಲವ್ವನ ಕೆರೆ, ದ್ಯಾಮವ್ವನ ಕೆರೆ, ಇವುಗಳಲ್ಲದೆ ಅನೇಕ ಹೊಂಡಗಳನ್ನು ನಿರ್ಮಿಸಿದ್ದಾರೆ.

ಇದರಂತೆ ಹರಪನಹಳ್ಳಿ ಪಾಳೆಯಗಾರರಲ್ಲಿ ಅನೇಕ ನಾಯಕರು ಕೆರೆಗಳನ್ನು ನಿರ್ಮಿಸಿ ನೀರಾವರಿಗೆ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಹರಪನಹಳ್ಳಿಯ ಮೊದಲು ಅರಸನಾದ ದಾದಯ್ಯನಾಯಕನ ದಿವಾನನಾದ ಹಂಪರಸಪ್ಪನು ಹರಪನಹಳ್ಳಿ ಪಟ್ಟಣದ ಹೊರಗಡೆ ನಾಲ್ಕು ದಿಕ್ಕಿನಲ್ಲಿ ನಾಲ್ಕು ಪಾವಟಿಗಳ ಬಾವಿಗಳನ್ನು ನಿರ್ಮಿಸಲು ಸಲಹೆ ನೀಡಿದನು. ಅವನ ಸಲಹೆಯ ಪ್ರಕಾರ ಬಾವಿಗಳನ್ನು ನಿರ್ಮಿಸಿದರು. ಈ ಬಾವಿಗಳಿಗೆ ಹಂಪರಸಪ್ಪನ ಬಾವಿಗಳೆಂದು ಕರೆಯುತ್ತಾರೆ.[೮೧] ಹರಪನಹಳ್ಳಿ ಬಸವಪ್ಪನಾಯಕನು ತಳವಾರನೊಬ್ಬ ಹೊಲದಲ್ಲಿ ಬಾವಿ ತೆಗೆದುದಕ್ಕೆ ಭೂದಾನ ನೀಡಿದ್ದರು.[೮೨] ಬಾವಿಹಾಳ ಹನುಮವೆಂಕಟಪ್ಪನ ಮಗ ಬಯಿರಣ್ಣನು ಚಂಚೋಜ ಎಂಬುವನಿಂದ ಬಾವಿಯನ್ನು ತೆಗೆಸಿ ಅವನಿಗೆ ಭೂಮಿಯನ್ನು ನೀಡಲಾಗಿತ್ತು.[೮೩] ಇವರಿಂದ ಚಂಚೋಜನು ಬಾವಿಗಳ ನಿರ್ಮಾಣ ಕಾರ್ಯದಲ್ಲಿ ಪರಿಣತಿ ಹೊಂದಿದ್ದನೆಂದು ತಿಳಿದುಬರುತ್ತದೆ. ದಾದಯ್ಯನಾಯಕನ ಪುತ್ರನಾದ ರಂಗನಾಯಕನ ಅಧಿಕಾರಿ ಡಣ್ಣಾನಾಯಕ ಮುದ್ದಣ್ಣನೆಂಬುವನು ಹಿರೇಕೆರೆ ಮತ್ತು ನಾಯಕನ ಕೆರೆಯನ್ನು ನಿರ್ಮಿಸಿದನು. ಹಿರೇಕೆರೆಯನ್ನು ಏಳು ಕಲ್ಲುಗಳ ಸಾಲಿನಿಂದ ಕಟ್ಟಲಾಗಿದೆ.[೮೪] ಈ ಕೆರೆಯು ಇಂದಿಗೂ ಸುಸ್ಥಿತಿಯಲ್ಲಿದೆ. ಮೊದಲ ಬಸವಂತನಾಯಕನ ಸಾಮಂತನಾದ ಶಿವಪ್ಪನಾಯಕನು ಚಿಗಟೇರಿಯಲ್ಲಿ ಆಡಳಿತ ನಡೆಸುತ್ತಿದ್ದನು. ಇವನು ಗುಡ್ಡದ ಪಕ್ಕದಲ್ಲಿ ಒಂದು ಕೆರೆ ಹಾಗೂ ಒಂದು ಬಾವಿಯನ್ನು ನಿರ್ಮಿಸಿದನು.[೮೫]

ಎರಡನೇ ಬಸವಂತನಾಯಕನು ಪ್ರಯಾಣಿಕರ ಅನುಕೂಲಕ್ಕಾಗಿ ಹರಪನಹಳ್ಳಿಯಲ್ಲಿ ಅರವಟ್ಟಿಗೆಗಳನ್ನು ನಿರ್ಮಿಸಿದನು.[೮೬] ಕ್ರಿ.ಶ. ೧೭೪೬–೧೭೪೭ರಲ್ಲಿ ಆಡಳಿತ ನಡೆಸಿದ ಮೊದಲ ವೀರಬಸಪ್ಪ ನಾಯಕನು ಹರಪನಹಳ್ಳಿ ಪಟ್ಟಣದಲ್ಲಿ ಪಾವಟಿಗೆಗಳ ಒಂದು ಬಾವಿಯನ್ನು ನಿರ್ಮಿಸಿದನು.[೮೭] ಈ ಬಾವಿ ಇಂದಿಗೂ ಕಂಬಾರಕೇರಿಯಲ್ಲಿ ನೋಡಬಹುದು. ಎರಡನೇ ವೀರಬಸಪ್ಪನಾಯಕನು ನಾರಾಯಣದೇವರಕೆರೆ ಹರಪನಹಳ್ಳಿ ಜೋಯಿಸರಾದ ನರಸಿಂಹ ಭಟ್ಟರಿಗೆ ಹಾಗೂ ನಾರಾಯಣದೇವರಕೆರೆಯ ಜೋಯಿಸ ಮಧ್ವಾಚಾರ್ಯರಿಗೂ ತಮ್ಮ ಪುತ್ರೋತ್ಸವ ಸಂದರ್ಭದಲ್ಲಿ ತಲಾ ಒಬ್ಬೊಬ್ಬರಿಗೆ ನಾರಾಯಣದೇವರಕೆರೆಯ ಹಿಂದಿನ ಐದು ಬೀಜವರಿ ಭೂಮಿಯನ್ನು ಉಂಬಳಿ ಹಾಕಿಕೊಟ್ಟಿದ್ದಾನೆ.[೮೮] ಬಾಗಳಿ ಹಿರಿಯಮ್ಮಾಜಿ ರಾಜ ಪುರೋಹಿತನಾದ ನಾಗದೇವ ಭಟ್ಟನಿಗೆ ಅಲಗಿಲವಾಡದಲ್ಲಿ ಗದ್ದೆ ಬೀಜವರಿ ಒಂದು ವಕ್ಕಳ ಗದ್ದೆಯನ್ನು[೮೯] ಪ್ರಸನ್ನಭಟ್ಟನಿಗೆ ಬಾಗಳಿಯಲ್ಲಿ ನೀಡಿದಳು.[೯೦] ಹಿರೇಮೇಗಳಗೆರೆ ಬಸವಂತರಾಯರ ಕಾರ್ಯಾಕರ್ತನಾದ ಮೇಗಣಗೆರೆಯ ಸ್ಥಾನಿಕ ಬಾಬಾನಾಯಕನು ಕಲ್ಲೇಶ್ವರ ದೇವಾಲಯದ ಪಕ್ಕದಲ್ಲಿ ಬಾವಿಯನ್ನು ಕಟ್ಟಿಸಿದನು.[೯೧] ಓಬಯ್ಯ ದೇವನಾಯಕರ ಕುಮಾರ ಮಹಾನಾಯಕಾಚಾರ್ಯ ಬಸವಯ್ಯನ ಕಾಲದಲ್ಲಿ ಯಾತಬಾವಿ ಮತ್ತು ಕಲ್ಲುದೊಣೆ ಮಾಡಿಸಿದನು.[೯೨] ಹೀಗೆ ಅನೇಕ ಕೆರೆಗಳನ್ನು ಕಟ್ಟಿಸಿ ಭೂಮಿಯನ್ನು ದಾನ-ದತ್ತಿ ನೀಡುವುದರ ಮೂಲಕ ಹರಪನಹಳ್ಳಿ ಪಾಳೆಯಗಾರರು ತಮ್ಮ ಪಾಳೆಯಪಟ್ಟನಲ್ಲಿ ನೀರಾವರಿ ವ್ಯವಸ್ಥೆಗೆ ಹೆಚ್ಚಿನ ಮಹತ್ವ ನೀಡಿರುವುದು ಕಂಡುಬರುತ್ತದೆ. ಈ ಮೇಲಿನ ಕೆರೆಗಳಲ್ಲದೆ ಇನ್ನೂ ಅನೇಕ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ.

ಇವರಲ್ಲದೆ ಸಂತೆಬೆನ್ನೂರು ನಾಯಕರು ಕೂಡ ಸಂತೆಬೆನ್ನೂರು, ಬಸವಾಪಟ್ಟಣ, ತರೀಕೆರೆಗಳಲ್ಲಿ ಅನೇಕ ಕೆರೆ, ಬಾವಿ, ಕಾಲುವೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಇವರು ತಮ್ಮ ಆಡಳಿತಾವಧಿಯಲ್ಲಿ ಅನೇಕ ನೀರಾವರಿ ಕಾರ್ಯ ಚಟುವಟಿಕೆಗಳನ್ನು ಕೈಗೊಂಡಿದ್ದರು. ಧೂಮರಾಜನಿಂದ ಸ್ಥಾಪಿತವಾದ ಈ ರಾಜ್ಯ ಕೆಂಗಪ್ಪನಾಯಕನ ಕಾಲದಲ್ಲಿ ಶಾಂತಿ ಸುಭದ್ರತೆಯಿಂದ ಕೂಡಿತ್ತು.

ಕೆಂಗಪ್ಪನಾಯಕ ರಾಮತೀರ್ಥ ಎಂಬ ಸರೋವರವನ್ನು ಕ್ರಿ.ಶ. ೧೫೫೮ರಲ್ಲಿ ಕಟ್ಟಿಸಿದನು.[೯೩] ಈ ಸರೋವರವನ್ನು ಕೆಂಪು ಗ್ರಾನೈಟ್‌ನಿಂದ ನಿರ್ಮಿಸಲಾಗಿದ್ದು, ಸುತ್ತಲೂ ಇಳಿಯಲು ಮೆಟ್ಟಿಲುಗಳಿವೆ. ಸಾಕಷ್ಟು ವಿಶಾಲವಾದ ಈ ಸರೋವರದ ಮಧ್ಯದಲ್ಲಿ ವಸಂತ ಮಂಟಪವಿದೆ. ಇಂದಿಗೂ ಸಹ ಈ ಕೊಳದಲ್ಲಿ ನೀರಿರುವುದನ್ನು ನೋಡಬಹುದು. ಹಾಗೇ ಈ ಕೆಂಗಪ್ಪ ನಾಯಕನು ಯಲೋರಕಟ್ಟೆ ಗ್ರಾಮದ ಕೆರೆ, ಗೋಣಿಕಟ್ಟೆ ಗ್ರಾಮದ ಕೆರೆಗಳನ್ನು ನಿರ್ಮಿಸಿದನೆಂದು ಈ ಗ್ರಾಮದ ಹಿರಿಯರು ಹೇಳುತ್ತಾರೆ.

ಇವನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ಕೆಂಗಪ್ಪನಾಯಕನು ಹಿರೇಕೋಗಲೂರು, ಸಂತೆಬೆನ್ನೂರು, ಮದಿಕೆರೆ, ತಣಿಗೆರೆ ಸಿದ್ಧನಮಠ ಗ್ರಾಮಗಳಲ್ಲಿ ಕೆರೆಗಳನ್ನು ಕಟ್ಟಿಸಿದನು.[೯೪] ಇಮ್ಮಡಿ ಕೆಂಗಪ್ಪನಾಯಕನು ತನ್ನ ಅಧಿಕಾರಿಗಳಾದ ಹವಾಲೆವೀರ ನಾಯಕ ಮತ್ತು ಹವಾಲೆ ಬಾಲಾನಾಯಕರನ್ನು ತನ್ನ ಪಾಳೆಪಟ್ಟಿನಲ್ಲಿ ಕೆರೆಗಳನ್ನು ನಿರ್ಮಿಸಲು ನೇಮಿಸಿದನು. ಹವಾಲೆ ವೀರನಾಯಕನು ಸಾಸುವೆ ಹಳ್ಳದಲ್ಲಿ ನಿರ್ಮಿಸಿದ ಹವಾಲೆ ಬಾಲಾನಾಯಕನು ಹೊದಿಗೆರೆಯಲ್ಲಿ ಕೆರೆಯನ್ನು ನಿರ್ಮಿಸಿದನು.[೯೫] ಇಂದಿಗೂ ಸಹ ಈ ಕೆರೆಗಳಿಗೆ ವೀರನಾಯಕನ ಕೆರೆ ಹಾಗೂ ಬಾಲನಾಯಕನ ಕೆರೆ ಎಂದು ಕರೆಯುತ್ತಾರೆ. ಪ್ರಸ್ತುತ ಈ ಕೆರೆಗಳು ಸುಸ್ಥಿತಿಯಲ್ಲಿವೆ. ನಂತರ ನಿಚ್ಚಮದುವಣಿಗ ಕೆಂಗಹನುಮಪ್ಪನಾಯಕನು ಬೆಳ್ಳಿಗನೂಡು ಹಾಗೂ ಕುಳೆನೂರು ಗ್ರಾಮದ ಕೆರೆಯನ್ನು ಕಟ್ಟಿಸಿದನು. ಈ ಕೆರೆಗಳು ಇಂದಿಗೂ ಸುಸ್ಥಿತಿಯಲ್ಲಿದ್ದು ಸುಮಾರು ಹೆಕ್ಟೇರ್ ಪ್ರದೇಶದ ನೀರಾವರಿ ಭೂಮಿಗೆ ನೀರನ್ನು ಒದಗಿಸುತ್ತಿದೆ.

ಸಂತೆಬೆನ್ನೂರು ಹನುಮಪ್ಪನಾಯಕನ ಹೆಂಡತಿ ಗಿರಿಯವ್ವ ನಾಗತಿ ಕಂಚುಗಾರ ಹಳ್ಳಿಯಲ್ಲಿ ಕೆರೆಯನ್ನು ಕಟ್ಟಿಸಿದಳೆಂದು ಸಾಸುವೆಹಳ್ಳಿ ಕೈಫಿಯತ್ತು ತಿಳಿಸುತ್ತದೆ.[೯೬] ಕೆರೆಯ ಸಾಮರ್ಥ್ಯ ಅವುಗಳ ನೀರಿನ ಸಂಗ್ರಹದ ಮೇಲೆ ಅವಲಂಬಿಸಿರುತ್ತದೆ. ಕೆರೆಯು ವಿಸ್ತೀರ್ಣವನ್ನು ಅವುಗಳ ಹೆಸರಿನಿಂದ ಅಂದಾಜು ಮಾಡಬಹುದಾಗಿದೆ. ಚಿಕ್ಕಕೆರೆ, ಹಿರಿಯಕೆರೆ, ಹರಿಕೆರೆ, ಮಹಾ ತಟಾಕ, ಸರೋವರ, ಸಮುದ್ರ ಮುಂತಾದ ಹೆಸರುಗಳಿಂದ ತಿಳಿದುಕೊಳ್ಳಬಹುದು.

ಹೀಗೆ ಸಂತೆಬೆನ್ನೂರು ಪಾಳೆಯಗಾರರು ತಮ್ಮ ಅಧಿಕಾರದ ಅವಧಿಯಲ್ಲಿ ಅನೇಕ ಕೆರೆಗಳನ್ನು ಕಟ್ಟಿಸುವುದರ ಜೊತೆಗೆ ಕೆಲವು ಕೆರೆಗಳನ್ನು ಜೀರ್ಣೋದ್ಧಾರ ಮಾಡಿ ನೀರಾವರಿ ವ್ಯವಸ್ಥೆಗೆ ಮಹತ್ವ ನೀಡಿರುವುದು ಕಂಡುಬರುತ್ತದೆ.

ಫ್ರಾನ್ಸಿಸ್ ಬುಕಾನನ್ ಶಿವಮೊಗ್ಗ, ಸಾಸ್ವೆಹಳ್ಳಿ, ಹರಿಹರ, ದಾವಣಗೆರೆ, ಪ್ರದೇಶಗಳಿಗೆ ಭೇಟಿ ನೀಡಿ ಈ ಭಾಗದ ಕೆರೆಗಳ ಬಗ್ಗೆ ತನ್ನ ವರದಿಯಲ್ಲಿ ಹೀಗೆ ಬರೆಯುತ್ತಾನೆ. ಈ ಭಾಗದ ಕೆರೆಗಳು ಮಳೆಗಾಲದಲ್ಲಿ ನೀರು ಸಂಗ್ರಹವಾಗುತ್ತದೆ ಹಾಗೂ ಬೇಸಿಗೆ ಕಾಲದಲ್ಲಿ ಒಣಗಿ ಹೋಗುತ್ತದೆ ಎಂದು ತಿಳಿಸುತ್ತದೆ.[೯೭]

೧೭೪೨ರಲ್ಲಿ ಸೂಳೆಕೆರೆ ಬಾವಿ ಮಳೆಯಿಂದ ಕೋಡಿ ಹರಿದುಹೋಗಿತ್ತು. ಬಸವಣ್ಣ ದಣ್ಣಾಯಕರು ಪ್ರಜೆಗಳ ಕಷ್ಟಗಳನ್ನು ವಿಚಾರಿಸುತ್ತಾ ಸೂಳೆಕೆರೆಯ ಕೋಡಿಯ ಹೊಸ ತೂಬನ್ನು ನಿರ್ಮಿಸಿ ನೀರಾವರಿಗೆ ಅನುಕೂಲ ಮಾಡಿಕೊಟ್ಟ ವಿವರ ಶಾಸನಗಳಿಂದ ತಿಳಿದುಬರುತ್ತದೆ. ಈ ಕೆರೆಯ ಕಟ್ಟೆಯು ಮಣ್ಣಿನದಾಗಿದ್ದು ಇನ್ನೂರು ಅಡಿಯ ಕೋಡಿಯನ್ನು ಹೊಂದಿತ್ತು. ಈ ಕೆರೆಯ ನೀರು ೧೦ ಚದುರ ಮೈಲು ಹಬ್ಬಿದ್ದು ಇಂದಿಗೂ ಪ್ರವಾಹಗಳನ್ನು ತಡೆದುಕೊಂಡು ಉತ್ತಮ ಸ್ಥಿತಿಯಲ್ಲಿವೆ.

ಸಂತೆಬೆನ್ನೂರು ನಾಯಕರು ತಮ್ಮ ಆಡಳಿತ ಕೇಂದ್ರವನ್ನು ಸಂತೆಬೆನ್ನೂರುನಿಂದ ತರೀಕೆರೆಗೆ ವರ್ಗಾಯಿಸಿದಾಗ ಸಂತೆಬೆನ್ನೂರು ಸುತ್ತಮುತ್ತಲಿನ ಪ್ರದೇಶಗಳು ಚಿತ್ರದುರ್ಗ ನಾಯಕರ ಆಡಳಿತಕ್ಕೆ ಒಳಪಟ್ಟವು.[೯೮] ಪಕ್ಕದ ಹೊದಿಗೆರೆ ಗ್ರಾಮದಲ್ಲಿ ಸಂತೆಬೆನ್ನೂರು ನಾಯಕರ ವಂಶಸ್ಥರು ಕೆರೆಯನ್ನು ನಿರ್ಮಿಸಿದ್ದರು.

ಬಿಜಾಪುರ ಮಹಮದ್ ಷಾನ್ ಅಧಿಕಾರಿಯಾಗಿದ್ದ ಮಲ್ಲಿಕ್ ಇವ್ನೆ ಅವಿರನ್ ಎಂಬುವನು ಬಸವಾಪಟ್ಟಣದಲ್ಲಿ ಕೆರೆ ಕಟ್ಟಿಸಿ ಶಾಸನ ಬರೆಸಿದ ಉದ್ದೇಶವನ್ನು ತಿಳಿಸುತ್ತಾನೆ. ಕೆರೆಯನ್ನು ಹಿಂದೂವಾಗಲಿ ಮುಸಲ್ಮಾನನಾಗಲಿ ಚೆನ್ನಾಗಿ ನೋಡಿಕೊಂಡು ಬಂದರೆ ಆ ಧನ ಕನಕ, ಕಟ್ಟಿ ಬರಲಿ ಎಂದು ಈ ಮಾತಿಗೆ ತಪ್ಪಿ ನಡೆದರೆ ಹಿಂದುವಾದರೆ ಕಾಶಿಯಲ್ಲಿ ಗೋವು ಕೊಂದ ಪಾಪ ಬರಲಿ, ಮುಸಲ್ಮಾನನಾದರೆ ಮಸೀದಿಯಲ್ಲಿ ಹಂದಿ ಕೊಂದ ಪಾಪ ಬರಲಿ ಎಂದು ಹೇಳಿ ಹಿಂದೂವು ನಡೆಸಲು ಕಾಶಿಗೆ ಹೋಗಿ ಬಂದ ಫಲ ಪರಮಾಯುಷ್ಯವು ಲಭಿಸಲಿ ಎಂದು ಮತ್ತು ಮುಸಲ್ಮಾನ ನಡೆಸಲು ಮೆಕ್ಕಾಗೆ ಹೋದ ಫಲವು ಬರಲಿ ಎಂದು ಹಾರೈಸಲಾಗಿದೆ.[೯೯] ಈ ಕೆರೆಯು ಪ್ರಸ್ತುತ ಇಲ್ಲದಿದ್ದರೂ ಈ ಶಾಸನದಿಂದ ನಮಗೆ ಮಾಹಿತಿ ತಿಳಿದುಬರುತ್ತದೆ.

ಹೀಗೆ ಅನೇಕ ಕೆರೆಗಳು, ಬಾವಿಗಳು, ಕಾಲುವೆಗಳು, ಸರೋವರಗಳು ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರು ನಿರ್ಮಿಸಿದ್ದಾರೆ. ಕೆರೆಗಳಲ್ಲಿ ಮಳೆ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಬೆಟ್ಟಗುಡ್ಡಗಳ ಇಳಿಜಾರು ಪ್ರದೇಶದಲ್ಲಿ ಅಡ್ಡಲಾಗಿ ಕೆರೆ-ಕಟ್ಟೆಗಳು ನಿರ್ಮಾಣ ಆಗುತ್ತಿದ್ದವು ಪ್ರತಿಯೊಂದು ಕೆರೆಗಳಿಗೆ ಹೆಸರುಗಳನ್ನು ಇಡುತ್ತಿದ್ದರು. ಆಯಾ ಪ್ರದೇಶದಲ್ಲಿ ಕೆರೆ ಕಟ್ಟುವ ಅನುಭವಿ ಕುಶಲ ಕಸುಬುದಾರರಿದ್ದರು. ನೀರಾವರಿ ಕಾಮಗಾರಿಗಳು ಹೆಚ್ಚು ನಿರ್ಮಾಣ ಗೊಳ್ಳಬೇಕೆನ್ನುವ ಉದ್ದೇಶದಿಂದ ಕೆರೆಗಳನ್ನು ನಿರ್ಮಿಸುವವರಿಗೆ ಭೂದಾನಗಳು ನೀಡುತ್ತಿದ್ದರು. ಅವರಿಗೆ ತೆರಿಗೆಯಿಂದ ಸಂಪೂರ್ಣ ವಿನಾಯಿತಿ ಸಿಗುತ್ತಿತ್ತು. ಒಂದೊಂದು ಕೆರೆಗೂ ಜಲಾಶಯನ ಪ್ರದೇಶ ಇರುತ್ತಿತ್ತು. ನೀರು ಒಳ ಹರಿವುದಕ್ಕೆ ಹಾಗೂ ಹೆಚ್ಚುವರಿ ನೀರು ಹೊರಹೊಗುವುದಕ್ಕೆ ತೂಬುಗಳನ್ನು ನಿರ್ಮಿಸಿದ್ದರು.

ಕೆರೆ ಕಾಲುವೆ ನಿರ್ಮಾಣದ ಜೊತೆಗೆ ಅವುಗಳ ನಿರ್ವಹಣೆ ಅತ್ಯಂತ ಮುಖ್ಯವಾದುದು. ಅದರ ನಿರ್ವಹಣೆ, ದುರಸ್ತಿ ಸಂರಕ್ಷಣೆ ಪಾಳೆಯಗಾರರ ಪ್ರಮುಖ ಕಾರ್ಯವಾಗಿತ್ತು. ಕೆರೆಯ ನಿರ್ವಹಣಾ ಕಾರ್ಯದಲ್ಲಿ ತೊಡಗಿದವರಿಗೆ ತೆರಿಗೆಯಲ್ಲಿ ಅವರಿಗೆ ವಿನಾಯಿತಿ ಸಿಗುತ್ತಿತ್ತು. ಹಾಗೂ ವಿವಿಧ ರೂಪದ ಕೊಡುಗೆಗಳು ಸಿಗುತ್ತಿತ್ತು ಎಂದು ಹೇಳಬಹುದು. ಕೆರೆಗಳನ್ನು ನಿರ್ಮಿಸಿ ಅವುಗಳ ಪಕ್ಕದಲ್ಲಿ ಅಥವಾ ಹತ್ತಿರದಲ್ಲಿ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ಹಾಗೆ ಆ ದೇವಾಲಯದ ನಿರ್ವಹಣೆಗಾಗಿ ವಿವಿಧ ರೀತಿಯ ಕೊಡುಗೆಗಳನ್ನು ನೀಡುತ್ತಿದ್ದರು.

ಹಾಗೆಯೇ ಅನೇಕ ರೀತಿಯ ಬಾವಿಗಳು, ಕಾಲುವೆಗಳನ್ನು ನಿರ್ಮಿಸುತ್ತಿದ್ದರು. ಇವು ನೀರಾವರಿ ಹಾಗೂ ಮನೆಬಳಕೆಯ ಉದ್ದೇಶದಿಂದ ನಿರ್ಮಾಣಗೊಳ್ಳುತ್ತಿದ್ದವು. ಈ ಬಾವಿಗಳನ್ನು ಊರಿನಿಂದ ಹೊರಗಡೆಯ ಪ್ರದೇಶದಲ್ಲಿ ಹೊಲ ತೋಟ, ಗದ್ದೆಗಳಲ್ಲಿ ನಿರ್ಮಾಣ ಮಾಡುತ್ತಿದ್ದರು.

ದಾವಣಗೆರೆ ತಾಲೂಕು ಹಳೇ ಬಾತಿಯಲ್ಲಿ ಷಾವಳಿ ಚೆಸ್ಟಿಯುವರು ವ್ಯವಸಾಯಕ್ಕಾಗಿ ಮತ್ತು ಕುಡಿಯುವ ನೀರಿಗಾಗಿ ಬಾವಿಯನ್ನು ೧೭೮೨ರಲ್ಲಿ ನಿರ್ಮಾಣ ಮಾಡಿದರು. ಈ ಬಾವಿನಿರ್ಮಾಣ ಇಸ್ಲಾಮಿಕ್ ಶೈಲಿಯಲ್ಲಿದೆ. ಜನವಸತಿ ಪ್ರದೇಶದಲ್ಲಿ ಮತ್ತು ದೇವಾಲಯದ ಪಕ್ಕದಲ್ಲಿ ಬಾವಿಗಳನ್ನು ನಿರ್ಮಿಸುತ್ತಿದ್ದರು. ಈ ಬಾವಿಗಳಿಗೆ ಇಳಿದು ಹತ್ತಲು ಮೆಟ್ಟಿಲುವ್ಯವಸ್ಥೆ ಇರುತ್ತಿದ್ದವು.

ಹರಪನಹಳ್ಳಿಯ ದಾದಯ್ಯನಾಯಕನ ಹೆಂಡತಿ ಹೊನ್ನಮ್ಮನಾಗತಿ ಮರಣ ಹೊಂದಿದಾಗ ಈಕೆಯ ಹೆಸರಿನಲ್ಲಿ ಉಚ್ಚಂಗಿದುರ್ಗದ ಬೆಟ್ಟದ ಮೇಲೆ ಹೊನ್ನಹೊಂಡವನ್ನು ನಿರ್ಮಿಸಿದನು. ಇದನ್ನು ಹೊನ್ನಹುಡೆವು ಎಂದು ಕರೆಯುತ್ತಾರೆ.[೧೦೦] ಈ ಬಾವಿ ಇಂದಿಗೂ ಸುಸ್ಥಿತಿಯಲ್ಲಿರುವುದನ್ನು ನಾವು ನೋಡಬಹುದು. ಮಳೆಗಾಲದಲ್ಲಿ ಈ ಬಾವಿಯಲ್ಲಿ ಇಂದಿಗೂ ನೀರು ಸಂಗ್ರಹವಾಗುತ್ತದೆ. ಹೀಗೆ ಅನೇಕ ರೀತಿಯ ಬಾವಿಗಳನ್ನು ಪಾಳೆಯಗಾರರು ಕಟ್ಟಿಸುತ್ತಿದ್ದರು. ಬಾವಿಗಳಿಂದ ಅನೇಕ ರೀತಿಯ ಉಪಯೋಗಗಳು ಜನರಿಗೆ ಸಿಗುತ್ತಿತ್ತು. ಕುಡಿಯುವ ನೀರಿಗಾಗಿ, ಏತ ನೀರಾವರಿ ವ್ಯವಸ್ಥೆ ಮುಂತಾದ ಅನೇಕ ಕಾರ್ಯಚಟುವಟಿಕೆಗಳು ನಡೆಯುತ್ತಿದ್ದವು.

**ಪಾಳೆಯಗಾರರ ಕಾಲದ ಕೃಷಿ ಉತ್ಪನ್ನಗಳು**

ಪ್ರಾಚೀನ ಕಾಲದಿಂದಲೂ ವ್ಯವಸಾಯ ತನ್ನದೇ ಆದ ಮಹತ್ವನ್ನು ಪಡೆದುಕೊಂಡಿದೆ. ಅದರಂತೆ ಪಾಳೆಯಗಾರರ ಕಾಲದಲ್ಲಿ ಈ ಪದ್ಧತಿ ಬಹುಮುಖ್ಯ ಪ್ರಾಧಾನ್ಯತೆಯನ್ನು ಪಡೆದುಕೊಂಡಿತು. ಪ್ರಮುಖವಾಗಿ ಪಾಳೆಯಗಾರರು ವಿವಿಧ ರೀತಿಯ ಬೆಳೆಗಳನ್ನು ಬೆಳೆಯುತ್ತಿದ್ದರು. ಪಾಳೆಯಗಾರರ ಕಾಲದ ಪ್ರಮುಖ ಬೆಳೆಗಳೆಂದರೆ ಆಹಾರಬೆಳೆಗಳು, ವಾಣಿಜ್ಯಬೆಳೆಗಳು ತೋಟದ ಬೆಳೆಗಳು ಇತ್ಯಾದಿ ಬೆಳೆಯುತ್ತಿದ್ದರು.

ಆಹಾರಬೆಳೆಗಳೆಂದರೆ ಭತ್ತ, ರಾಗಿ, ಜೋಳ, ಗೋಧಿ, ನವಣೆ, ಮುಸುಕಿನ ಜೋಳ, ಹತ್ತಿ, ಬೇಳೆಕಾಳುಗಳು, ಎಣ್ಣೆಬೀಜಗಳು, ಮೆಣಸಿನಕಾಯಿ, ವಿವಿಧ ರೀತಿಯ ಸೊಪ್ಪುಗಳು ಗೆಡ್ಡೆ ಗೆಣಸುಗಳು ಪಾಳೆಯಗಾರರ ಕಾಲದಲ್ಲಿ ಬೆಳೆಯುತ್ತಿದ್ದರು. ಫ್ರಾನ್ಸಿಸ್ ಬುಕಾನನ್ ತನ್ನ ಪ್ರವಾಸ ಕಥನದಲ್ಲಿ ವಿವಿಧ ರೀತಿಯ ಬೆಳೆಗಳನ್ನು ಹೆಸರಿಸಿದ್ದಾನೆ.

ತುಂಗಭದ್ರಾ ನದಿಯು ದಾವಣಗೆರೆ ಜಿಲ್ಲೆಯ ಹೊನ್ನಾಳಿ, ಹರಿಹರ, ಹರಪನಹಳ್ಳಿ ತಾಲೂಕುಗಳ ಮೂಲಕ ಹರಿಯುವುದರಿಂದ ಆ ನದಿಗೆ ಅಲ್ಲಲ್ಲಿ ಉಪನದಿಗಳು ಹುಟ್ಟಿ ಹಳ್ಳ ಕೊಳ್ಳಗಳಾಗಿ ಹರಿದು ನೀರಾವರಿ ವ್ಯವಸ್ಥೆಗೆ ಅನುಕೂಲ ಮಾಡಿಕೊಟ್ಟಿದೆ. ಈ ನದಿಯಿಂದ ಈ ಭಾಗದ ಭೂಮಿ ಗದ್ದೆಗಳಾಗಿ ಪರಿವರ್ತನೆ ಹೊಂದಿ ಭತ್ತವನ್ನು ಬೆಳೆಯಲು ಅನುಕೂಲ ಮಾಡಿಕೊಟ್ಟಿದೆ. ಅದರ ಜೊತೆಗೆ ಕೆರೆ, ಕೋಡಿ, ಹಳ್ಳ ತೊರೆಗಳ ಪಕ್ಕದಲ್ಲಿ ಭತ್ತವನ್ನು ಬೆಳೆಯುತ್ತಿದ್ದರು. ಆದುದರಿಂದ ಪಾಳೆಯಗಾರರ ಕಾಲದಲ್ಲಿ ಭತ್ತ ಸಾಮಾನ್ಯ ಬೆಳೆಯಾಗಿತ್ತು. ಜೋಳ ಕೂಡ ಅವರ ಕಾಲದಲ್ಲಿ ಪ್ರಮುಖ ಆಹಾರ ಬೆಳೆಯಾಗಿತ್ತು. ಆದರೆ ಗೋಧಿ ಹೆಚ್ಚಾಗಿ ಬೆಳೆಯುತ್ತಿರಲಿಲ್ಲ. ಅಲ್ಪ ಪ್ರಮಾಣದಲ್ಲಿ ಬೆಳೆಯುತ್ತಿದ್ದರು ಎಂದು ಶಾಸನದಲ್ಲಿ ಉಲ್ಲೇಖಗೊಂಡಿದೆ.

ಸಂತೆಬೆನ್ನೂರು ನಾಯಕರ ಕಾಲಕ್ಕೆ ಸೇರಿದ ಹೊನ್ನಾಳಿ ತಾಲೂಕು ಕುಂದೂರು ತಾಮ್ರಶಾಸನದಲ್ಲಿ ರಾಗಿಯ ಉಲ್ಲೇಖವಿದೆ.[೧೦೧] ಈ ಶಾಸನದ ಉಲ್ಲೇಖದಂತೆ ಪಾಳೆಯಗಾರರ ಕಾಲದಲ್ಲಿ ರಾಗಿಯೂ ಪ್ರಮುಖ ಆಹಾರದ ಬೆಳೆಯಾಗಿತ್ತು.

ಕೃಷಿಕರು ನೀರಾವರಿ ವ್ಯವಸ್ಥೆಯಿಂದ ವರ್ಷದಲ್ಲಿ ಎರಡು ಬೆಳೆಗಳನ್ನು ಬೆಳೆಯಲಾರಂಭಿಸಿದರು. ಇದರಿಂದಾಗಿ ಆಹಾರಧಾನ್ಯಗಳ ಉತ್ಪಾದನಾ ಮಟ್ಟ ಅಧಿಕಗೊಂಡು ತಮ್ಮ ದಿನನಿತ್ಯದ ಅವಶ್ಯಕತೆಗಿಂತ ಹೆಚ್ಚಾಗಿ ಆಹಾರಧಾನ್ಯಗಳನ್ನು ಬೆಳೆಯಲು ಪ್ರಾರಂಭಿಸಿದರು. ಈ ರೀತಿಯ ಉತ್ಪಾದನೆ ಅಂದಿನ ಸಾಮಾಜಿಕ ಮತ್ತು ಆರ್ಥಿಕ ಜೀವನದ ಮೇಲೆ ಗಾಢ ಪ್ರಭಾವ ಬೀರಿತು ಎಂದು ಹೇಳಬಹುದು.

ಇನ್ನು ವಾಣಿಜ್ಯಬೆಳೆಗಳಿಗೆ ಸಂಬಂಧಿಸಿದಂತೆ ತುಂಗಭದ್ರ ನದಿ ಜೊತೆಗೆ ಅನೇಕ ಕೆರೆ-ಕಾಲುವೆಗಳ ಉಪಯೋಗ ಪಡೆದುಕೊಂಡ ರೈತರು ಕಬ್ಬು, ಭತ್ತ, ಹತ್ತಿಗಳನ್ನು ಬೆಳೆಯುತ್ತಿದ್ದರು. ಕಬ್ಬಿನ ಬೆಳೆಗೂ ಸುಂಕವನ್ನು ವಿಧಿಸಲಾಗಿತ್ತೆಂದು ಮಲೆಬೆನ್ನೂರಿನ ಕ್ರಿ.ಶ. ೧೫೨೮ರ ಶಾಸನ ತಿಳಿಸುತ್ತದೆ. ಆದಪ್ಪನಾಯಕನು ಮಲೆಬೆನ್ನೂರಿನ ಸೆಟ್ಟಿ ಪಟ್ಟಣಸ್ವಾಮಿ ಗೌಡರಿಗೆ ಅವರು ಮಾಡಿದ ಒಳ್ಳೆಯ ಕೆಲಸಗಳಿಗಾಗಿ ಮಲೆಬೆನ್ನೂರು ಸೀಮೆಯ ಕಬ್ಬಿನ ಸುಂಕವನ್ನು ರದ್ದು ಮಾಡಿದರೆಂದು ತಿಳಿಯುತ್ತದೆ.[೧೦೨] ಈ ವಾಣಿಜ್ಯ ಬೆಳೆಗಳನ್ನು ಹೆಚ್ಚಾಗಿ ನೀರಾವರಿ ಆಶ್ರಯವಿರುವ ರೈತರು, ಜಮೀನ್ದಾರರು ಬೆಳೆಯುತ್ತಿದ್ದರು. ಈ ಬೆಳೆಗಳು ಹೆಚ್ಚು ಲಾಭದಾಯಕ ಬೆಳೆಗಳಾಗಿದ್ದವು.

ನೀರಾವರಿ ಕೃಷಿಯಲ್ಲಿ ಹೆಚ್ಚಾಗಿ ಮಾವಿನ ತೋಟ, ಬಾಳೆತೋಟ, ಹೂವಿನತೋಟ, ತೆಂಗಿನ ತೋಟ, ಅಡಿಕೆ ತೋಟಗಳನ್ನು ವರ್ಗೀಕರಿಸುವುದು ಕಂಡುಬರುತ್ತದೆ.[೧೦೩] ಕ್ರಿ.ಶ. ೧೬೭೮ರಲ್ಲಿ ಭರಮಣ್ಣ ನಾಯಕನು ನೀರ್ಥಡಿಯ ಶ್ರೀರಂಗನಾಥ ಸ್ವಾಮಿಯ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ಆ ದೇವರಿಗೆ ಎರಡು ಸಮಸ್ತ ತೋಟವನ್ನು ದತ್ತಿ ನೀಡಿದ ವಿವರಗಳು ಸಿಗುತ್ತವೆ.[೧೦೪] ದಾವಣಗೆರೆ ಪ್ರದೇಶದ ಭೂಮಿಯ ಫಲವತ್ತತೆಯನ್ನು ಗಮನಿಸಿ ಎರೆಭೂಮಿ ಕೆಂಪುಭೂಮಿ, ಮರಳುಭೂಮಿ, ಕಲ್ಲಚ್ಚು ಭೂಮಿ ಮುಂತಾದ ಭೂಮಿಗಳು ಈ ಪ್ರದೇಶದಲ್ಲಿ ಇದ್ದವು. ಹರಪನಹಳ್ಳಿ ನಾಯಕ ಅರಸರ ಕಾಲದಲ್ಲಿ ಕೃಷಿ ಭೂಮಿಯನ್ನು ಗದ್ದೆ, ಬೆದ್ದಲು, ತೋಟಗಳೆಂದು ಕರೆಯುತ್ತಿದ್ದರು. ತೋಟಗಳಲ್ಲಿ ತೆಂಗು, ಅಡಿಕೆ, ಬಾಳೆ, ವೀಳ್ಯದೆಲೆ, ಹಣ್ಣುಗಳು, ತರಕಾರಿಗಳನ್ನು ಬೆಳೆಯಲಾಗುತ್ತಿತ್ತು. ಮಳೆಯ ಆಶ್ರಯದಲ್ಲಿರುವ ಬೆದ್ದಲು ಭೂಮಿಗಳಲ್ಲಿ ರಾಗಿ, ಜೋಳ, ದ್ವಿದಳಧಾನ್ಯ, ಎಣ್ಣೆಬೀಜಗಳು ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು.

ಸಂತೆಬೆನ್ನೂರು ನಾಯಕರ ಕಾಲದಲ್ಲಿ ಗದ್ದೆ, ಬೆದ್ದಲು, ತೋಟ ಎಂದು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಹೊಲ ಮತ್ತು ಬೆದ್ದಲು ಮಳೆ ಆಶ್ರಿತ ಭೂಮಿಯಾಗಿದೆ. ಗದ್ದೆಯಲ್ಲಿ ಭತ್ತವನ್ನು ಬೆಳೆಯುತ್ತಿದ್ದರು. ತೋಟಗಳಲ್ಲಿ ತೆಂಗು ಬಾಳೆ, ವೀಳ್ಯದೆಲೆ, ಅಡಿಕೆ, ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು.[೧೦೫] ಮಳೆಯಾಶ್ರಿತ ಭೂಮಿಯಲ್ಲಿ ರಾಗಿ, ಜೋಳ, ಜೋಳಕಾಳು ಎಣ್ಣೆಕಾಳು, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು.

ಒಟ್ಟಾರೆ ಪಾಳೆಯಗಾರರ ಆಳ್ವಿಕೆಯಲ್ಲಿ ಯೋಗ್ಯವಾದ ಭೂಮಿ, ಉತ್ತಮ ಹವಾಗುಣ ಹೊಂದಿದ್ದು ಇದಕ್ಕೆ ತಕ್ಕಂತೆ(ಮಳೆ-ಬೆಳೆ) ಫಸಲನ್ನು ಪಡೆಯುತ್ತಿದ್ದರು.

ರೈತರು ಬೆಳೆದ ವಸ್ತುಗಳನ್ನು ತಮ್ಮ ಜೀವನಕ್ಕೆ ಬೇಕಾಗುವಷ್ಟು ಇಟ್ಟುಕೊಂಡು ಉಳಿದುದನ್ನು ಹತ್ತಿರದ ಸಂತೆ ಇಲ್ಲವೇ ಮಾರುಕಟ್ಟೆಗಳಲ್ಲಿ ಮಾರಾಟ ಮಾಡುತ್ತಿದ್ದರು. ಶೆಟ್ಟರು, ಬಣಜಿಗರು, ಮುಮ್ಮರಿದಂಡಗಳೆಂಬ ವ್ಯಾಪಾರಿಗಳು ಪಾಳೆಯಗಾರರ ಕಾಲದಲ್ಲಿ ಇದ್ದರು. ಈ ಪಾಳೆಯಗಾರರು ಆರಂಭದಲ್ಲಿ ವಿಜಯನಗರ ಅರಸರ ನಾಣ್ಯಗಳನ್ನೇ ಉಪಯೋಗಿಸುತ್ತಿದ್ದರು. ಕಾಲಾನಂತರದಲ್ಲಿ ಈ ಪಾಳೆಯಗಾರರು ಸ್ವಂತ ಟಂಕಸಾಲೆಗಳನ್ನು ಸ್ಥಾಪಿಸಿ ತಮ್ಮ ಸ್ವಂತ ಹೆಸರಿನ ನಾಣ್ಯಗಳನ್ನು ಟಂಕಿಸುತ್ತಿದ್ದರು. ಪಾಳೆಯಗಾರರು ಹಲವಾರು ಕೋಟೆಗಳನ್ನು ನಿರ್ಮಿಸಿದ್ದರು. ಈ ಕೋಟೆಗಳಲ್ಲಿ ಸಾಮಂತ ಅರಸರನ್ನು ನಾಯಕನಾಗಿ ಮಾಡಿಕೊಂಡಿದ್ದರು. ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರಗಳನ್ನು ರಕ್ಷಿಸುವಲ್ಲಿ ಇವರ ಪಾತ್ರ ಮುಖ್ಯವಾದುದು.

ಸಂತೆಬೆನ್ನೂರು ನಾಯಕ ಅರಸರ ಆಡಳಿತ ಪ್ರದೇಶ ಬಹುಭಾಗ ಮಲೆನಾಡು ಮತ್ತು ಬಯಲುಪ್ರದೇಶಗಳಿಂದ ಕೂಡಿತ್ತು. ಇವರ ಕಾಲದ ಪ್ರಮುಖ ಪಟ್ಟಣಗಳೆಂದರೆ ಆನಂದಪುರ, ಇಕ್ಕೇರಿ, ಸೊರಬ, ಸಾಗರ, ಶಿಕಾರಿಪುರ, ಕುಂಸಿ, ಹಾರನಹಳ್ಳಿ, ಹರಿಹರ, ಚನ್ನಗಿರಿ, ಬಸವಾಪಟ್ಟಣ, ತರೀಕೆರೆ, ಅಜ್ಜಂಪುರ, ದನವಾಸ, ಬಾಳೆಹೊನ್ನೂರು ಕವಲೆದುರ್ಗ ಇನ್ನು ಮುಂತಾದ ಪ್ರದೇಶಗಳು ಪಾಳೆಯಗಾರರ ವ್ಯಾಪಾರಕೇಂದ್ರಗಳಾಗಿದ್ದವು. ಈ ಪಾಳೆಯಗಾರರು ವ್ಯಾಪಾರ ವಹಿವಾಟುಗಳಲ್ಲಿ ಬಹುತೇಕ ಚಿತ್ರದುರ್ಗ ಪಾಳೆಯಗಾರರ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದರು. ರೈತರು ಜನಸಾಮಾನ್ಯರು ವರ್ತಕರು ತಮ್ಮ ವ್ಯಾಪಾರ ವಹಿವಾಟುಗಳಲ್ಲಿ ಹೆಚ್ಚಾಗಿ ತೊಡಗಿ ಸಮಾಜದ ಮೇಲೆ ಪ್ರಭಾವ ಬೀರಿದರು. ಸಣ್ಣಪುಟ್ಟ ಪಟ್ಟಣಗಳೂ ಕೂಡ ವ್ಯಾಪಾರ ಕೇಂದ್ರಗಳಾಗಿ ಬದಲಾವಣೆಯಾದವು. ಜೊತೆಗೆ ಆರ್ಥಿಕ ಸಂಪನ್ಮೂಲ ಮತ್ತು ಭೌಗೋಳಿಕ ಪರಿಸರವೂ ಕೂಡ ಮಹತ್ತರ ಪರಿಣಾಮ ಬೀರತೊಡಗಿತು.

ಒಟ್ಟಾರೆ ಈ ವ್ಯಾಪಾರ ವಹಿವಾಟನ್ನು ಕುರಿತು ಸಮಕಾಲೀನ ದಾಖಲೆಗಳು ಪ್ರವಾಸ ವರದಿಗಳು ಹೆಚ್ಚಾಗಿ ಪ್ರಸ್ತಾಪಿಸುತ್ತವೆ. ಗ್ರಾಮಗಳು ಪಟ್ಟಣಗಳಾಗಿ, ಪಟ್ಟಣಗಳು ನಗರಗಳಾಗಿ ಪರಿವರ್ತನೆಯಾಗಲು ಹಲವು ಅಂಶಗಳು ಕಾರಣೀಭೂತವಾಗತೊಡಗಿದವು. ಇವುಗಳ ಹಿಂದೆ ಧಾರ್ಮಿಕ, ಆರ್ಥಿಕ, ರಾಜಕೀಯ ಆಯಾಮಗಳು ಪ್ರಭಾವ ಬೀರಿರುವುದನ್ನು ನಾವು ಕಾಣಬಹುದು.

**ತೆರಿಗೆಪದ್ಧತಿ**

ಒಂದು ರಾಜ್ಯದ ಆಡಳಿತ ಸರಾಗವಾಗಿ ನಡೆದುಕೊಂಡು ಹೋಗಬೇಕಾದರೆ ಅರಸನಾದವನು ಜನರ ಆದಾಯದಲ್ಲಿನ ಅಲ್ಪಸ್ವಲ್ಪ ಪ್ರಮಾಣದ ತೆರಿಗೆ ಅಥವಾ ಸುಂಕವನ್ನು ಪಡೆಯಬೇಕಾಗುತ್ತದೆ. ಈ ವ್ಯವಸ್ಥೆ ಇಂದಿಗೂ ನಡೆದುಕೊಂಡು ಬರುತ್ತಿದೆ. ಈ ರೀತಿ ಬಂದಂತಹ ರಾಜ್ಯಾದಾಯವನ್ನು ಜನಪರ ಕಾರ್ಯಗಳಿಗೆ ಹಾಗೂ ರಕ್ಷಣೆಗಾಗಿ ಅರಸನಾದವನು ಬಳಸಿಕೊಳ್ಳಬೇಕು.

ಕೌಟಿಲ್ಯನು ತನ್ನ ಮೇರುಕೃತಿಯಾದ ಅರ್ಥಶಾಸ್ತ್ರದಲ್ಲಿ ತೆರಿಗೆಯ ಬಗ್ಗೆ ವಿವರಿಸುತ್ತಾನೆ. ಹೂವಿಗೆ ಯಾವುದೇ ತೊಂದರೆಯಾಗದಂತೆ ಅಲ್ಲಿಯ ಮಕರಂದವನ್ನು ಜೇನು ಹೀರಿಕೊಂಡು, ಜೇನುತುಪ್ಪವನ್ನು ಹೇಗೆ ತಯಾರಿಸುತ್ತದೆಯೋ ಹಾಗೆ ರಾಜನಾದವನು ಜನ ಸಾಮಾನ್ಯರಿಗೆ ತೊಂದರೆಯಾಗದಂತೆ ತೆರಿಗೆಯನ್ನು ಪಡೆಯಬೇಕು ಎಂದಿದ್ದಾನೆ.

ವಿಜಯನಗರ ಸಾಮ್ರಾಜ್ಯವು ಅವನತಿಯಾದ ನಂತರ ಆಡಳಿತ ವಿಕೇಂದ್ರೀಕರಣವಾಗಿ ಹಲವು ಸಾಮಂತ ಪಾಳೆಯಗಾರರು ರಾಜಮನೆತನಗಳು ಸ್ಥಾಪನೆಯಾದವು. ಹೀಗೆ ಸ್ಥಾಪನೆಯಾದ ರಾಜರು, ಪಾಳೆಯಗಾರರು, ಸಾಮಂತ ಅರಸರು ವಿಜಯನಗರ ಅರಸರು ಹುಟ್ಟುಹಾಕಿದ ತೆರಿಗೆಪದ್ಧತಿಯನ್ನು ಭಾಗಶಃ ಮುಂದುವರಿಸಿಕೊಂಡು ಬಂದರು.

ಪ್ರಸ್ತುತ ಅಧ್ಯಯನದಲ್ಲಿ ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಕಾಲದ ತೆರಿಗೆವ್ಯವಸ್ಥೆ ಭೂಕಂದಾಯ, ಕೃಷಿ, ಮೂಲದ ತೆರಿಗೆ, ಕೃಷಿಯೇತರ ತೆರಿಗೆ ಮುಂತಾದ ಅಂಶಗಳನ್ನು ಸೋದಾಹರಣವಾಗಿ ವಿವರಿಸಲಾಗಿದೆ.

ಪಾಳೆಯಗಾರರ ಕಾಲದಲ್ಲಿ ಸಾಮ್ರಾಜ್ಯವನ್ನು ಗ್ರಾಮ, ನಾಡು ಅಥವಾ ಸೀಮೆ, ವೆಂಠಿ, ಮುಂತಾದ ಆಡಳಿತ ವಿಭಾಗಗಳಿದ್ದವು. ಪಾಳೆಯಗಾರರ ಆಡಳಿತ ಸಂದರ್ಭದಲ್ಲಿ ಪ್ರತಿ ಎಂಟು ಅಥವಾ ಹದಿನಾರು ಹಳ್ಳಿಗಳಿಗೆ ಒಂದು ಸೀಮೆ ಸ್ಥಾಪನೆಯಾಗಿತ್ತು. ಈ ಸೀಮೆಯ ಆಡಳಿತ ಕೇಂದ್ರವಲ್ಲದೆ ಕಂದಾಯ ಸಂಗ್ರಹಣೆಯ ಘಟಕ ಕೂಡ ಆಗಿತ್ತು. ನಾಯಕರ ಕಾಲದಲ್ಲಿ ಗ್ರಾಮವು ಅತ್ಯಂತ ಚಿಕ್ಕ ಘಟಕವಾಗಿತ್ತು. ಪ್ರತಿಯೊಂದು ಸೀಮೆ ಅಥವಾ ಗ್ರಾಮಗಳ ಆಡಳಿತವನ್ನು ಪಾರುಪತ್ತೆಗಾರ, ನಾಡಗೌಡ, ನಾಯಕ, ದಳವಾಯಿ, ಗೌಡ, ಶಾನುಭೋಗ ಮುಂತಾದ ಅಧಿಕಾರಿಗಳು ನೋಡಿಕೊಳ್ಳುತ್ತಿದ್ದರು.

ಪಾಳೆಯಗಾರರು ಭೂಮಿಯ ಫಲವತ್ತತೆಯ ಆಧಾರದ ಮೇಲೆ ಕಂದಾಯ ವಸೂಲಿ ಮಾಡುತ್ತಿದ್ದರು. ಶಾಸನಗಳಲ್ಲಿ ಹೊಲ, ಎರೆಹೊಲ, ಬೀಜವರಿಗದ್ದೆ, ಇಕ್ಕಳಗದ್ದೆ, ಮಕ್ಕಳಗದ್ದೆ, ತೋಟ ಮುಂತಾದ ಅಂಶಗಳು ಉಲ್ಲೇಖವಾಗಿರುವುದರಿಂದ ಭೂಮಿಯ ವಿವಿಧ ಗುಣ, ಫಲವತ್ತತೆ, ನೀರಾವರಿ ಅನುಕೂಲಕ್ಕೆ ಅನುಗುಣವಾಗಿ ತೆರಿಗೆ ವಿಧಿಸುತ್ತಿದ್ದರು.

ಹರಪನಹಳ್ಳಿಯ ಮೊದಲ ಪಾಳೆಯಗಾರರ ದಾದಯ್ಯನಾಯಕ ಕೊಟ್ಟೂರು ಸೀಮೆಯ ಕುರುಬ ಕುಲದ ಸಿದ್ದಪ್ಪ ಒಡೆಯ ಮೊದಲಾದವರಿಗೆ ಶ್ರೀ ಬಾಗಳಿಯ ಕಲ್ಲಿನಾಥ ದೇವರ ಸನ್ನಿಧಿಯಲ್ಲಿ ಕುರಿತೆರಿಗೆಯನ್ನು ತೆಗೆದುಹಾಕಿದ್ದು ಶಾಸನದಲ್ಲಿ ಉಲ್ಲೇಖಗೊಂಡಿದೆ.[೧೦೬] ಹರಪನಹಳ್ಳಿ ಪಾಳೆಯಗಾರರ ಆಡಳಿತ ಪ್ರದೇಶದಲ್ಲಿ ಹಲವಾರು ವೃತ್ತಿಯ ಜನರು ನೆಲೆಸಿದ್ದರು. ಅವುಗಳಲ್ಲಿ ತಳವಾರ, ಅಗಸ, ಅಕ್ಕಸಾಲಿ, ಶಿಲ್ಪಿ, ನಾಯಿಕದ, ಕಂಚುಗಾರ, ಬಡಿಗ ಮುಂತಾದವರು ನೆಲೆಸಿದ್ದರು.[೧೦೭] ತೆರಿಗೆಗಳನ್ನು ವಸೂಲಿ ಮಾಡಲು ಅನೇಕ ಅಧಿಕಾರಿಗಳನ್ನು ಪಾಳೆಯಗಾರರು ನೇಮಿಸಿಕೊಂಡಿದ್ದರು. ಅವುಗಳಲ್ಲಿ ಸುಬೇದಾರ ರಂಗಪ್ಪ, ರಾವತ ಬಸವಯ್ಯ, ಸುಂಕದ

ಚನ್ನವೀರಪ್ಪ, ಗೌಡ, ಶಾನುಭೋಗ, ಪುರೋಹಿತ ಮುಂತಾದವರನ್ನು ಹರಪನಹಳ್ಳಿ ಪಾಳೆಯಗಾರರು ನೇಮಿಸಿಕೊಂಡಿದ್ದರು.[೧೦೮]

ಕ್ರಿ.ಶ. ೧೭೧೦ರಲ್ಲಿ ಬಾಗಳಿ ಸೋಮಶೇಖರ ನಾಯಕರು ಕೊಟ್ಟೂರು ಸೀಮೆಯೊಳಗಣ ಮುತ್ತಿಗೆ, ಪಟ್ಟಡಿಯೊಳಗಣ ಸಿಲುವಂಜಿ ಗ್ರಾಮವನ್ನು ಪುರೋಹಿತರಾದ ಆಪಸ್ತಂಭ ಸೂತ್ರದ ಕೌಂಡಿಣ್ಯಗೋತ್ರದ ಬ್ಯಾವಣಿ ದೀಕ್ಷಿತರ ಮಕ್ಕಳಿಗೆ ನೀಡಿದರು. ಈ ದಾನವನ್ನು ನೀಡುವಾಗ ಉಂಟಾದ ನಿಧಿ, ನಿಕ್ಷೇಪ, ಜಲ, ತರು, ಪಾಷಣ, ಅಕ್ಷಿಣಿ, ಆಗಮಸಿದ್ಧ ಸಾಧ್ಯಂಗಳು ಎಂಬ ಅಷ್ಟ ಭೋಗದ ಜೊತೆಗೆ ದೇಶಾಯಿಕ, ನಾಡದಳವಾಯಿಕ, ಸಾಮಾನ್ಯ ವರ್ತನೆ, ಅರೇರ ಪಟ್ಟಿ, ಮಗಲಪಟ್ಟಿ, ಇಪ್ಪಣಪಟ್ಟಿ ಶಾಹನಪಟ್ಟಿ, ಜೇಡಿಕೆ ಕಣಜ, ದವಸ ಮುಂತಾದ ಸಕಲವನ್ನು ಪಾಲಿಸಿದ್ದೇವೆ.[೧೦೯] ಕ್ರಿ.ಶ. ೧೭೪೯ರಲ್ಲಿ ಬಾಗಳಿಬಸಪ್ಪನಾಯಕನ ಸುಬೇದಾರ ರಂಗಪ್ಪನಿಗೆ ರಾಜ್ಯಕ್ಕೆ ಆದಾಯ ಬರುವ ಹಾಗೆ ಮಾಡಿದ್ದರಿಂದ ಇವನಿಗೆ ಗಡಿ ನಿಚ್ಚಾಪುರ ಗ್ರಾಮವನ್ನು ದಾನವಾಗಿ ಶಿವಾರ್ಚಿತವಾಗಿ ಕೊಟ್ಟಿದ್ದಾನೆ. ಈ ಗ್ರಾಮದಲ್ಲಿ ಉಂಟಾದ ನಿಧಿ ನಿಕ್ಷೇಪ ಜಲ ಪಾಷಣ, ಅಕ್ಷಿಣಿ, ಅಗಾಮಿ ಸಿದ್ಧಿ ಸಾಧ್ಯಂಗಗಳೆಂಬ ಅಷ್ಟ ಭೋಗ ತೇಜೋಪಾಯರ್ಜನೆಯ ಆಗ ಮಾಡಿಕೊಂಡು ಅಚಂದ್ರಾರ್ಕ ಸ್ಥಾಯಿಗಳಾಗಿ ಸುಖದಲ್ಲಿ ಇರವುದು, ಇದಲ್ಲದೆ ಈ ಗ್ರಾಮದ ಸ್ಥಾನಮಾನ್ಯ ದೇಶಾಯಿಕ, ನಾಡತಳವಾರಿಕೆ, ಸಾಮಾನ್ಯ ವರ್ತನೆ, ಅರೆರವಳಿ, ಮೊಗಲರಹಳ್ಳಿ, ಭಮಾದಳಿ, ಧರಣದ ಪಳಿ, ಬೆಟಕೆ, ದವಸ, ಕಣಜ ಮುಂತಾದ ಸಕಲ ಹೊನ್ನನ್ನು ಪಾಲಿಸಿ ಕೊಟ್ಟಿದ್ದೇವೆ.[೧೧೦] ಈ ಮೇಲಿನ ಶಾಸನಗಳಿಂದ ತಿಳಿದುಬರುವುದೇನೆಂದರೆ ತೆರಿಗೆ ಸಂಗ್ರಹದಲ್ಲಿ ಮುಂಚೂಣಿಯಲ್ಲಿರುವ ಅಧಿಕಾರಿಗಳಿಗೆ ಪಾಳೆಯಗಾರರು ತಮಗೆ ನೀಡಿದ ದಾನ ದತ್ತಿಗಳ ವಿವರಣೆಯನ್ನು ನೋಡಬಹುದು.

ಹರಪನಹಳ್ಳಿ ಪಾಳೆಯಗಾರರು ವಿವಿಧ ರೀತಿಯ ತೆರಿಗೆಯನ್ನು ಪ್ರಜೆಗಳ ಮೇಲೆ ಹಾಕುತ್ತಿದ್ದರು. ಭೂಕಂದಾಯಕ್ಕೆ ಸಂಬಂಧಿಸಿದಂತೆ ಒಂದು ಎಕರೆಗೆ ಒಂದು ವರ್ಷಕ್ಕೆ ಒಂದು ಹೊನ್ನು ತೆರಿಗೆ ಕೊಡಬೇಕಾಗಿತ್ತು. ಅಲ್ಲದೆ ಎತ್ತು. ಎಮ್ಮೆ, ಆಕಳು, ಕುರಿ, ಮೇಕೆಗಳಿಗೂ ತೆರಿಗೆಯನ್ನು ನೀಡಬೇಕಾಗಿತ್ತು.[೧೧೧] ಹೊಲವನ್ನು ಅಳೆಯಲು ಅಳತೆ ಕೋಲುಗಳನ್ನು ತಯಾರಿಸಿಕೊಂಡಿದ್ದರು. ಈ ಹೊಲಗಳನ್ನು ಅಳತೆ ಮಾಡಲು ಅಧಿಕಾರಿಗಳನ್ನು ನೇಮಿಸಿಕೊಂಡಿದ್ದರು. ಸಾಮಾನ್ಯವಾಗಿ ಈ ತೆರಿಗೆಗಳನ್ನು ಸುಗ್ಗಿಯ ಸಂದರ್ಭದಲ್ಲಿ ಸಂಗ್ರಹಣೆ ಮಾಡುತ್ತಿದ್ದರು. ರೈತರಿಂದ ತೆರಿಗೆ ಸಂಗ್ರಹಿಸಿ ಅವರಿಗೆ ರಸೀದಿಯನ್ನು ಕೊಡುವ ಪದ್ಧತಿ ವ್ಯವಸ್ಥೆ ಹರಪನಹಳ್ಳಿ ಪಾಳೆಯಗಾರರಲ್ಲಿ ಇದ್ದಿತು.

ಬೇರೆ ಬೇರೆ ರಾಜರಿಗೆ ಹರಪನಹಳ್ಳಿ ಪಾಳೆಯಗಾರರು ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು. ಈ ಪಾಳೆಯಗಾರರಿಗೆ ಸುಮಾರು ೮೦೦೦೦೦ ಲಕ್ಷದಷ್ಟು ಪಗೊಡ ತೆರಿಗೆ ಸಂಗ್ರಹವಾಗುತಿತ್ತು. ಅವುಗಳಲ್ಲಿ ಸುಮಾರು ೧೨.೦೦೦ ಪಗೋಡಗಳು ಪ್ರತಿವರ್ಷ ಕಪ್ಪಕಾಣಿಕೆ ರೂಪದಲ್ಲಿ ಖರ್ಚಾಗುತ್ತಿತ್ತು.

ಇನ್ನುಳಿದ ಹಣವು ರಾಜ್ಯದ ಅಭಿವೃದ್ಧಿ ಕಾರ್ಯಗಳಿಗೆ, ಅರಮನೆಗೆ ಹಾಗೂ ದೇವಾಲಯಗಳಿಗೆ ಖರ್ಚಾಗುತ್ತಿತ್ತು.

ಹರಪನಹಳ್ಳಿ ಪಾಳೆಯಗಾರರು ಅಧಿಕ ಪ್ರಮಾಣದ ಕಂದಾಯವನ್ನು ವಸೂಲಿ ಮಾಡುತ್ತಿದ್ದರು ಎಂದು ನಮಗೆ ಶಾಸನಗಳಿಂದ ತಿಳಿದುಬರುತ್ತದೆ. ಆದುದರಿಂದ ಪಾಳೆಯಗಾರರ ವಿರುದ್ಧ ಅಲ್ಪ ಸ್ವಲ್ಪ ವಿರೋಧಗಳು ವ್ಯಕ್ತವಾಗುತ್ತಿದ್ದವು.

ಸಂತೆಬೆನ್ನೂರು ಪಾಳೆಯಗಾರರಿಗೆ ಅನೇಕ ಮೂಲಗಳಿಂದ ತೆರಿಗೆ ಸಂಗ್ರಹವಾಗುತ್ತಿತ್ತು. ಭೂಮಿ, ಮನೆ, ವೃತ್ತಿ, ಉದ್ದಿಮೆ, ಆಚರಣೆಗಳ ಮೇಲಿನ ತೆರಿಗೆ ಹೀಗೆ ಅನೇಕ ತೆರಿಗೆಗಳನ್ನು ಸಂಗ್ರಹ ಮಾಡುತ್ತಿದ್ದರು. ಈ ಕಂದಾಯವನ್ನು ಸಂಗ್ರಹಿಸಲು ಅನೇಕ ಅಧಿಕಾರಿಗಳನ್ನು ನೇಮಕ ಮಾಡಿಕೊಂಡಿದ್ದರು. ತೆರಿಗೆ ಸಂಗ್ರಹಣೆಯು ಈ ಪಾಳೆಯಗಾರರ ಪ್ರಮುಖ ಆದಾಯದ ಮೂಲವಾಗಿತ್ತು. ಇವರ ಕಾಲದಲ್ಲಿ ಭೂಕಂದಾಯ ದೊಡ್ಡ ಮೊತ್ತದಾಯಕವಾಗಿತ್ತು. ಭೂಮಿಯನ್ನು ಪ್ರತ್ಯೇಕಿಸಿ ಫಲವತ್ತತೆಯ ಆಧಾರದ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು.

ಶಾಸನಗಳಲ್ಲಿ ಹೊಲ, ಎರೆಹೊಲ, ಮನಜಿನಹೊಲ, ತೋಟ, ಎರೆಬಯಲಗದ್ದೆ, ಕೆರೆಯ ಗದ್ದೆ, ಬೆದ್ದಲು, ವರಹಾ, ಭೂಮಿ, ಕಾಡಾರಂಭ, ನೀರಾರಂಭ ಎಂದು ಪ್ರತ್ಯೇಕವಾಗಿ ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಪ್ರತ್ಯೇಕ ತೆರಿಗೆ ವಿಧಿಸುತ್ತಿದ್ದರು.[೧೧೨] ಭೂಕಂದಾಯದೊಂದಿಗೆ ಬಿರಾಡ, ವರ್ತನೆ, ದಾಸೋಹ, ಕಾಣಿಕೆ, ದೇವಸ್ಥಾನ, ಇತ್ಯಾದಿ ತೆರಿಗೆಗಳು ಸಾಮಾನ್ಯವಾಗಿ ಜಾರಿಯಲ್ಲಿದ್ದವು ಶಿವಮೊಗ್ಗ ಜಿಲ್ಲೆಯ ಆನಂದಪುರಂನಲ್ಲಿ ಶ್ರೀಮುರಘಾ ಮಠಕ್ಕೆ ಸೇರಿದ ಬೆಕ್ಕಿನ ಕಲ್ಮಠವನ್ನು ಸಂತೆಬೆನ್ನೂರು ನಾಯಕರು ಕ್ರಿ.ಶ. ೧೬೭೦ರಲ್ಲಿ ಕಟ್ಟಿಸಿಕೊಟ್ಟರು. ಈ ಸೀಮೆಯಲ್ಲಿನ ಲಿಂಗಾಯತರು ಮನೆ ಒಂದಕ್ಕೆ ಕಾಲಂ ಪ್ರತಿಯಲ್ಲಿ ದೀಪಾರಾಧನೆಗೆ ಒಂದು ಹಣ ದಾಹ ಕೊಡತಕ್ಕದ್ದು, ವೀರಶೈವ, ಮಠಸ್ಥರು ಲಿಂಗಾಧಾರಣ, ದೇವತಾ ಪ್ರತಿಷ್ಠೆ, ಲಗ್ನದೀಕ್ಷಕ್ಕೆ ಒಂದು ಹೊನ್ನನ್ನು ನೀಡತಕ್ಕದ್ದು, ಇವರಲ್ಲದೆ ಸುಡುಗಾಡು ಸಿದ್ಧರು, ಕಾಡುಪಾತಗೊಬ್ಬರು, ಮಚ್ಚುಗಾರ ಸಿದ್ದರು, ಒಕ್ಕಲಾದ ಕುರುಬರು, ಗಂಗೆ ಮಕ್ಕಳು ಸಹ ಕೊಡತಕ್ಕದ್ದು.[೧೧೩] ಈ ಶಾಸನದಿಂದ ಸಮಾಜದ ಎಲ್ಲಾ ವರ್ಗದವರು ನಾಯಕರಿಗೆ ತೆರಿಗೆಯನ್ನು ಕಟ್ಟುತ್ತಿದ್ದರು ಎಂದು ತಿಳಿದುಬರುತ್ತದೆ.

ನಾಯಕರ ಆಡಳಿತಾವಧಿಯಲ್ಲಿ ತಪ್ಪು ಮಾಡಿದವರಿಗೂ ಕೂಡ ತೆರಿಗೆ ಹಾಕುತ್ತಿದ್ದರು ಈ ಶುಲ್ಕ ಸರ್ಕಾರಕ್ಕೆ ಆದಾಯದ ಮೂಲವಾಗಿತ್ತು. ಕೆಂಗಪ್ಪನಾಯಕರು, ತ್ಯಾವಣಗಿ, ಗೌಡ, ಸಿದ್ದಪ್ಪನಾಯಕ ಮತ್ತು ಹೊನ್ನೆ ನಾಯಕರನ್ನು ಕರಸಿ ಬಂಕಾಪುರಕ್ಕೆ ಯುದ್ಧ ಮಾಡಲು ಕಳುಹಿಸಿದರು ಅವರು ಯುದ್ಧದಲ್ಲಿ ಸೋತು ಹಿಂದಿರುಗಿದಾಗ ಅವರಿಗೆ ೯ ಸಾವಿರ ವರಹವನ್ನು ದಂಡ ಹಾಕಿದ್ದನು. ಗೌಡರು ತಮ್ಮ ಹೊಲ, ದನಗಳನ್ನು ಮಾರಿ ವಿಧಿಸಿದ್ದ ದಂಡವನ್ನು ಕೊಟ್ಟನೆಂದು ಕುಂದೂರು ದೇವಾಲಯ ತಾಮ್ರಶಾಸನ ತಿಳಿಸುತ್ತದೆ.[೧೧೪] ಕುಶಲಕರ್ಮಿಗಳ ಮೇಲಿನ ತೆರಿಗೆ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯ ಸಿಗುತ್ತಿತ್ತು. ಶಾಸನದಲ್ಲಿ ಉಲ್ಲೇಖವಾಗಿರುವಂತೆ

ಆಯಗಾರರು, ಕೈವಾಡದವರು, ಬಡಿಗೇರ ಲಿಂಗಣ್ಣ, ಕಮ್ಮಾರ, ಎಜ್ಜಪ್ಪ, ಪೂಜಾರಿ ಲಿಂಗಣ್ಣ ಅಗಸರ ವೀರಣ್ಣ, ಕಾಯಕದ ನೂಲಯ್ಯ, ತಳವಾರ ಹನುಮಂತ, ಡೊಂಬರ ಕೆಂಗಪ್ಪ[೧೧೫] ಇವರು ವಿವಿಧ ವೃತ್ತಿಯವರಾಗಿದ್ದು ತಮ್ಮ ವೃತ್ತಿಯ ಮೇಲಿನ ತೆರಿಗೆಯನ್ನು ನಾಯಕರಿಗೆ ನೀಡುತ್ತಿದ್ದರು.

ಸಂತೆಬೆನ್ನೂರು ನಾಯಕರು ಕಂದಾಯ ವಸೂಲಿ ಮಾಡಲು ವಿವಿಧ ಅಧಿಕಾರಿಗಳನ್ನು ನೇಮಕ ಮಾಡಿಕೊಂಡಿದ್ದರು. ಮಾಯಕೊಂಡದ ಮೀಯಪ್ಪ ನಾಯಕ[೧೧೬] ದಾದಾಜಿರಾಯ[೧೧೭] ಅಡಗೆರೆ ಮಲ್ಲಣ್ಣ[೧೧೮] ಇವರು ಗ್ರಾಮ ಮಟ್ಟಕ್ಕಿಂತ ಮೇಲಿನ ಅಧಿಕಾರಿಗಳಾಗಿದ್ದರು.

ಶಾನಭೋಗ ಲಿಂಗಣ್ಣ,[೧೧೯] ಸೇನಭೋವ ಮಲ್ಲರಸಯ್ಯ, ಸೇನಬೋಗ ಪುಟ್ಟಣ್ಣ,[೧೨೦] ಚಿಕ್ಕಗಂಗೂರ ಗೌಡ, ಹೊಸಹಳ್ಳಿಯ ಚಿಕ್ಕಣ್ಣಗೌಡ, ತ್ಯಾವರಾಗಿಯ ಗೌಡ, ಸಿದ್ದಪ್ಪನಾಯಕ ಮತ್ತು ಹೊನ್ನೆನಾಯಕ, ಬಸವಾಪಟ್ಟಣದ ಗೌಡ, ಕುಂದೂರು ಕೂಲಂಬಿಗೌಡ, ಕತ್ತಲಗೆರೆ ಗೌಡ, ಮಲೆಬೆನ್ನೂರು ಗೌಡ, ಇವರು ಗ್ರಾಮಮಟ್ಟದ ಅಧಿಕಾರಿಗಳಾಗಿದ್ದರು.[೧೨೧] ಹೀಗೆ ಈ ನಾಯಕರು ತಮ್ಮ ಆಡಳಿತ ಅನುಕೂಲಕ್ಕಾಗಿ ವಿವಿಧ ಅಧಿಕಾರಿಗಳನ್ನು ನೇಮಕ ಮಾಡಿ ಕಂದಾಯ ವಸೂಲಿ ಮಾಡುತ್ತಿದ್ದರು. ಈ ತೆರಿಗೆಯಿಂದ ಸಂಗ್ರಹವಾದ ಹಣದಿಂದ ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿ ವಿವಿಧ ರೀತಿಯ ಅಭಿವೃದ್ಧಿಕಾರ್ಯಗಳನ್ನು ಮಾಡುವುದರ ಮೂಲಕ ಜನರಿಗೆ ತುಂಬಾ ಹತ್ತಿರದ ಸಂಬಂಧಗಳನ್ನಿಟ್ಟುಕೊಂಡಿದ್ದರು. ಈ ರೀತಿಯ ತೆರಿಗೆ ಆಡಳಿತಾತ್ಮಕ ದೃಷ್ಟಿಯಿಂದ ಅನಿವಾರ್ಯವಾಗಿತ್ತು.

ಒಟ್ಟಾರೆ ಸಂತೆಬೆನ್ನೂರು ನಾಯಕರ ಆಡಳಿತದಲ್ಲಿ ಎಲ್ಲಾ ವರ್ಗದ ಜನರು ಒಂದಲ್ಲ ಒಂದು ರೀತಿಯ ತೆರಿಗೆಯನ್ನು ಕಟ್ಟುತ್ತಿದ್ದರು. ಹಾಗೆಯೇ ಸಮಾಜದ ಕೆಳಜಾತಿಗಳು ರಾಜ್ಯಕ್ಕೆ ಬಿಟ್ಟಿ ಸೇವೆ ಸಲ್ಲಿಸುವ ಪದ್ಧತಿ ಇತ್ತು. ಜನಸಾಮಾನ್ಯರು ತೆರಿಗೆಯ ವಿರುದ್ಧ ಸಿಡಿದೆಳಲು ಅವಕಾಶವಿರಲಿಲ್ಲ. ಏಕೆಂದರೆ ನಾಯಕರು ಕೆಲವು ಸಂದರ್ಭದಲ್ಲಿ ತೆರಿಗೆಯಲ್ಲಿ ರಿಯಾಯಿತಿ ನೀಡುತ್ತಿದ್ದರು ಎಂಬ ಹಲವು ನಿದರ್ಶನಗಳು ಕಂಡುಬರುತ್ತವೆ.

ಒಟ್ಟಿನಲ್ಲಿ ಈ ಅಪರಿಮಿತ ಆರ್ಥಿಕ ಚಟುವಟಿಕೆಗಳು ದಾವಣಗೆರೆ ಜಿಲ್ಲೆಯ ಪಾಳೆಯಗಾರರಲ್ಲಿ ನಡೆಯುತ್ತಾ ಬಂದುದು ಇಲ್ಲಿನ ಶಾಸನಗಳಿಂದ, ಹಸ್ತಪ್ರತಿಗಳಿಂದ, ಕೈಫಿಯತ್ತುಗಳಿಂದ ನಮಗೆ ತಿಳಿದುಬರುತ್ತದೆ. ನವಶಿಲಾಯುಗದಿಂದ ಬಂದಿರುವ ಈ ಚಟುವಟಿಕೆ ನಿರಂತರವಾಗಿ ನಡೆದುಕೊಂಡು ಬಂದಿದೆ. ಇದರಿಂದ ಬಂದಂತಹ ಆದಾಯ, ಆದಾಯದ ಮೇಲಿನ ತೆರಿಗೆ, ವಸ್ತುವಿಗೆ ನಿರ್ದಿಷ್ಟವಾದ ಬೆಲೆ ಕಟ್ಟಲು ನಾಣ್ಯ ಅಲ್ಲದೆ ಪ್ರಮಾಣಬದ್ಧಗೊಳಿಸಲು ಮಾಪನ, ಅಳತೆಗಳು ರಾಜನು ಖರ್ಚು ಮಾಡುವ ವೆಚ್ಚಗಳು, ಕೃಷಿ ಉತ್ಪನ್ನಗಳು, ತೆರಿಗೆಗಳು, ಇನ್ನು ಹಲವಾರು ಚಟುವಟಿಕೆಗಳು ಈ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದನ್ನು ನಾವು ತಿಳಿಯಬಹುದು.

### ೪.೪. ಶಿಕ್ಷಣ ಮತ್ತು ಸಾಹಿತ್ಯ

ಪ್ರಾಚೀನ ಭಾರತದಲ್ಲಿ ಶಿಕ್ಷಣಕ್ಕೆ ಪ್ರಮುಖವಾದ ಸ್ಥಾನವನ್ನು ನೀಡಲಾಗಿತ್ತು. ಪ್ರಾಚೀನ ವಿದ್ಯಾಭ್ಯಾಸ ಪದ್ಧತಿ ಹೆಚ್ಚಾಗಿ ಧಾರ್ಮಿಕ ಮೂಲದ್ದಾದ್ದರಿಂದ ಅದು ಪ್ರಾರಂಭದ ಕಾಲದಿಂದಲೂ ಧರ್ಮಗಳ ಆಸರೆಯಲ್ಲಿಯೇ ಬೆಳೆದುಬಂದಿದೆ. ಭಾರತೀಯ ಇತಿಹಾಸ, ಸಂಸ್ಕೃತಿ, ಪರಂಪರೆಯನ್ನು ಅವಲೋಕಿಸಿದಾಗ ಇಲ್ಲಿ ಶಿಕ್ಷಣವ್ಯವಸ್ಥೆಗೆ ಸುದೀರ್ಘವಾದ ಇತಿಹಾಸವಿದೆ. ತಕ್ಷಶಿಲೆ ವಿಶ್ವದ ಅತ್ಯಂತ ಪ್ರಾಚೀನ ವಿಶ್ವವಿದ್ಯಾಲಯವಾಗಿತ್ತು. ನಳಂದ, ಉಜ್ಜಯನಿ, ದಂತಪುರಿ, ಕಾಶಿ, ತಕ್ಷಶಿಲೆ ಮುಂತಾದವುಗಳು ಇತಿಹಾಸಪ್ರಸಿದ್ಧ ಶಿಕ್ಷಣಕೇಂದ್ರಗಳಾಗಿದ್ದವು..

ವೇದಗಳ ಕಾಲದಲ್ಲಿ ವೇದಮಂತ್ರಗಳನ್ನು ಬಾಯಿಪಾಠ ಮಾಡುತ್ತಿದ್ದರು. ಋಗ್ವೇದ ಕಾಲದಲ್ಲಿ ಅದನ್ನು ಬಾಯಿಂದ ಬಾಯಿಗೆ ಕಲಿಯುತ್ತಾ ಬಂದ ರೀತಿಯೇ ವಿದ್ಯಾಭ್ಯಾಸದ ಮೊದಲ ಘಟ್ಟ ಎನ್ನಬಹುದು. ಈ ವಿದ್ಯಾಭ್ಯಾಸದ ಕ್ರಮವು ಉಪನಿಷತ್‌ಗಳ ಕಾಲಕ್ಕಾಗಲೆ ಒಂದು ಮಟ್ಟಕ್ಕೆ ತಲುಪಿತ್ತೆಂದು ಹೇಳಬಹುದು. ಆದುದರಿಂದ ಭಾರತೀಯರಲ್ಲಿ ಶಿಕ್ಷಣದ ಬಗ್ಗೆ ಅತ್ಯಂತ ಪೂಜ್ಯಭಾವನೆಯನ್ನು ಬಹು ಹಿಂದಿನಿಂದಲೂ ಇಟ್ಟುಕೊಂಡು ಬರಲಾಗಿದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಶಿಕ್ಷಣವು ಪ್ರಮುಖವಾಗಿ ದೇವಾಲಯ, ಮಠಗಳು, ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳಲ್ಲಿ ನಡೆಯುತ್ತಿತ್ತು. ಇವು ಪ್ರಮುಖ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು. ರಾಜರ ಅಧಿಕಾರಿಗಳು ಮತ್ತು ಶ್ರೀಮಂತರು ದಾನದತ್ತಿಗಳು ನೀಡುವುದರ ಮೂಲಕ ಪಂಡಿತರಿಗೆ ವಿದ್ವಾಂಸರಿಗೆ ಆಶ್ರಯವನ್ನು ನೀಡುತ್ತಿದ್ದರು. ಇಲ್ಲಿ ವೈದಿಕ ಕಾಲದ ರೀತಿಯ ಗುರುಕುಲ ಪದ್ಧತಿಯ ಶಿಕ್ಷಣವನ್ನು ಬೆಂಬಲಿಸುತ್ತಿದ್ದರು. ಈ ಕಾಲದಲ್ಲಿ ವ್ಯಕ್ತಿತ್ವದ ವಿಕಾಸ ಮತ್ತು ಸಾಮಾಜಿಕ ಜವಾಬ್ದಾರಿ ಈ ಎರಡು ವಿಷಯಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಲಾಗಿತ್ತು.

ಕರ್ನಾಟಕ ಸಂಸ್ಕೃತಿ ಮತ್ತು ಕನ್ನಡ ಸಾಹಿತ್ಯ ಉತ್ತುಂಗದ ವೈಭವವನ್ನು ಕನ್ನಡದ ಅನೇಕ ಅರಸರ ರಾಜಾಶ್ರಯದಲ್ಲಿ ನಡೆಯಿತು. ಇವರು ಶಿಕ್ಷಣ ಮತ್ತು ಸಾಹಿತ್ಯಕ್ಕೆ ಸಾಕಷ್ಟು ಪ್ರೋತ್ಸಾಹ ನೀಡಿದರು. ಈ ಅರಸರ ಕಾಲದಲ್ಲಿ ಸಾಹಿತ್ಯಕ್ಷೇತ್ರ ಶ್ರೀಮಂತಿಕೆಯನ್ನು ಪಡೆದುಕೊಂಡಿದೆ. ಪ್ರಾಚೀನ ಕಾಲದಿಂದ ಹಿಡಿದು ಒಡೆಯರ ಕಾಲದವರೆಗೂ ಇಂತಹ ಪರಂಪರೆ ಬೆಳೆದುಕೊಂಡು ಬಂದಿದೆ. ಆದುದರಿಂದ ಪ್ರಾಚೀನ ಕಾಲದಿಂದ ಮೈಸೂರು ಒಡೆಯರ ಕಾಲವನ್ನು ಸಂಸ್ಕೃತಿ ಮತ್ತು ಸಾಹಿತ್ಯ ಪೋಷಣೆಯ ಕಾಲವೆಂದು ತಿಳಿಯಲಾಗಿದೆ.

ಕರ್ನಾಟಕದಲ್ಲಿ ಕದಂಬ, ಚಾಲುಕ್ಯ, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯದ ಅರಸರು ಶಿಕ್ಷಣ ಮತ್ತು ಸಾಹಿತ್ಯಕ್ಕೆ ಅಪಾರ ಪ್ರೋತ್ಸಾಹ ನೀಡಿದ್ದರು. ಕನ್ನಡದ ಪ್ರಥಮ ಶಾಸನ ಹಲ್ಮಿಡಿ, ಕನ್ನಡದ ಪ್ರಥಮ ಕೃತಿ ಕವಿರಾಜಮಾರ್ಗ, ಕನ್ನಡದ ಪ್ರಥಮ ತ್ರಿಪದಿ ಕಪ್ಪೆ ಅರಭಟ್ಟನ ಶಾಸನ ಇತ್ಯಾದಿ ರಚನೆಗೊಂಡವು.

ಪ್ರಾಚೀನ ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಕೆಲವು ಕವಿಗಳು ಐತಿಹಾಸಿಕ ಕೃತಿಗಳು, ಕಾವ್ಯಗಳು, ಸಾಹಿತ್ಯ ಪ್ರಕಾರಗಳನ್ನು ರಚನೆ ಮಾಡಿರುವುದು ಕಂಡುಬರುತ್ತದೆ. ಯಾವ ರಾಜ ತನ್ನ ಆಸ್ಥಾನದಲ್ಲಿ ಆಶ್ರಯ ನೀಡಿರುತ್ತಾನೆಯೇ ಅಂತಹ ರಾಜರ ಋಣವನ್ನು ತೀರಿಸುವ ಸಲುವಾಗಿ ಕವಿಗಳು ರಾಜರನ್ನು ಗುಣಗಾನ ಮಾಡಿ ಕೃತಿಗಳನ್ನು ರಚಿಸುವ ಪರಂಪರೆ ನಮ್ಮ ನಾಡಿನಲ್ಲಿ ಬೆಳೆದಿತ್ತು. ಹೀಗೆ ಅನೇಕ ಕನ್ನಡದ ಅರಸುಮನೆತನಗಳು ಸಾಹಿತ್ಯ ಪೋಷಣೆಗೆ ರಾಜಾಶ್ರಯ ನೀಡಿರುವುದನ್ನು ಹಾಗೂ ಸಾಹಿತ್ಯ ಬೆಳೆದು ಬಂದಿರುವುದನ್ನು ತಿಳಿಸುತ್ತದೆ.

ಕರ್ನಾಟಕದಲ್ಲಿ ಪಾಳೆಯಗಾರರು ಸಾಮಂತರು, ಸಂಸ್ಥಾನಿಕರು ಸಾಹಿತ್ಯರಚನೆಗೆ ರಾಜಾಶ್ರಯ ನೀಡಿರುವುದಲ್ಲದೆ ಸ್ವತಃ ಅರಸರು ಮತ್ತು ಪಟ್ಟದರಸಿಯರು ಸಾಹಿತ್ಯರಚನೆಯಲ್ಲಿ ತೊಡಗಿರುವುದನ್ನು ಗಮನಿಸಬಹುದು. ಅದರಂತೆ ಸಾಹಿತ್ಯರಚನೆ ಮತ್ತು ಬೆಳವಣಿಗೆಯಲ್ಲಿ ಪಾಳೆಯಗಾರರೂ ಸಹ ಮಹತ್ವದ ಪಾತ್ರ ವಹಿಸಿರುವುದನ್ನೂ ಕಾಣಬಹುದು.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಶಿಕ್ಷಣ ಮತ್ತು ಸಾಹಿತ್ಯ ಕೃತಿಗಳು ಸಮೃದ್ಧವಾಗಿ ರಚನೆಯಾದವು. ೧೫೬೫ರ ತಾಳಿಕೋಟೆಯ ಯುದ್ಧದ ನಂತರ ವಿಜಯನಗರ ಸಾಮ್ರಾಜ್ಯ ದುರ್ಬಲಗೊಂಡಾಗ ನಂತರ ಅಸ್ತಿತ್ವಕ್ಕೆ ಬಂದ ಸಣ್ಣಪುಟ್ಟ ರಾಜಮನೆತನಗಳೂ ಸಹ ಈ ಪರಂಪರೆಯನ್ನು ಇತಿಮಿತಿಯಲ್ಲಿ ಮುಂದುವರಿಸಿಕೊಂಡು ಬಂದಿರುವುದನ್ನು ನಾವು ಕಾಣಹುದು. ಈ ನಿಟ್ಟಿನಲ್ಲಿ ಲಿಂಗಣ್ಣ ಕವಿಯ ಕೆಳದಿ ನೃಪವಿಜಯಂ, ೬ನೇ ಚಾಮರಾಜ ಒಡೆಯರ ಆಸ್ಥಾನ ಕವಿಯ ಅಶ್ವಶಾಸ್ತ್ರ, ಚಿಕ್ಕ ದೇವರಾಜ ಒಡೆಯರ ಆಸ್ಥಾನಕವಿ ತಿರುಮಲಾರ್ಯನ ಚಿಕ್ಕದೇವರಾಜ ಭಿನ್ನಪಂ ಹಾಗೂ ಮಹಿಳಾ ವಿದ್ವನ್ಮಣಿಗಳಾದ ಸಂಚಿಹೊನ್ನಮ್ಮನ ಹದಿಬದೆಯ ಧರ್ಮ, ಶೃಂಗಾರಮ್ಮನ ಪದ್ಮಿನಿ ಕಲ್ಯಾಣ ಮುಂತಾದ ಕೃತಿಗಳನ್ನು ಹೆಸರಿಸಬಹುದು. ಕ್ರಿ.ಶ. ೧೫೦೦ರಿಂದ ೧೮೦೦ರ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರು ಸಂತೆಬೆನ್ನೂರು ಪಾಳೆಯಗಾರರು, ಬಸವಾಪಟ್ಟಣ ಪಾಳೆಯಗಾರರು, ತರೀಕೆರೆ ಪಾಳೆಯಗಾರರೂ ನಾಡಿನ ಶಿಕ್ಷಣ ಸಾಹಿತ್ಯ, ಸಂಗೀತ ಮುಂತಾದ ಸಾಂಸ್ಕೃತಿಕ ಪರಂಪರೆಗೆ ಆದ್ಯತೆ ನೀಡಿದ್ದರು. ಈ ಪಾಳೆಯಗಾರರ ಕಾಲದಲ್ಲಿ ಶಿಕ್ಷಣ ಮತ್ತು ಸಾಹಿತ್ಯದ ಪೋಷಣಾ ಕೇಂದ್ರವಾಗಿತ್ತೆಂದು ಹೇಳಬಹುದು.

ಲಿಂಗಣ್ಣ ಕವಿ ರಚಿಸಿದ ಕೆಳದಿ ನೃಪವಿಜಯಂ ಕೃತಿಯಲ್ಲಿ ಹರಪನಹಳ್ಳಿ ಪಾಳೆಯಗಾರರನ್ನು ಕುರಿತು ಬರೆದಿದ್ದಾನೆ. ಕೆಳದಿಯನ್ನಾಳಿದ ಇಮ್ಮಡಿ ಸೋಮಶೇಖರನಾಯಕನ ಕಾಲದಲ್ಲಿ ಹರಪನಹಳ್ಳಿ ಪಾಳೆಯಗಾರನ ಸಂಗತಿಯಿಂದ ಆರಂಭಗೊಂಡು ಇಮ್ಮಡಿ ಬಸಪ್ಪನಾಯಕನ ಕಾಲದವರೆಗೆ ಹಾಸುಹೊಕ್ಕಾಗಿ ಪ್ರಸ್ತಾಪಿಸಿದ್ದಾನೆ.

ಧುರಧೀರಂ ಚಿಂತನ ಕ
ಲ್ಲೇರೆಯಂ ಬಿಳಿಚೋಡಿ ಬರಮನಾಯನಕನ ಸೇವಾ
ಹರಪುರದಸನ ಸುಪರಿ
ಸ್ತರಣಗಳಂ ಕೊಂಡು ದಾಳಿಡಿಲತಿಚಲದಿಂ

ಎಂದು ಪ್ರಸ್ತಾಪಿಸಲಾಗಿದೆ.[೧೨೨] ಚಿಂತನಕಲ್ಲಿನ ಬಿಳಿಚೋಡಿನ ಬರಮನಾಯಕನು ಹರಪುರ ಅರಸನ ಕೋಟೆಯನ್ನು ಹಿಡಿದು ಛಲದಿಂದ ಯುದ್ಧ ಮಾಡಿದನು.

ಹಿಂದೆ ಚಿತ್ರದುರ್ಗವನ್ನು ಕಸ್ತೂರಿತಿಮ್ಮಪ್ಪನಾಯಕ, ಸರ್ಜಪ್ಪನಾಯಕ, ಹಿರಿಯ ಚಿಕ್ಕಣ್ಣನಾಯಕ, ಮದಕರಿನಾಯಕ, ಚಿಕ್ಕಣ್ಣನಾಯಕ, ರಂಗಪ್ಪನಾಯಕ, ರಘುವಪ್ಪನಾಯಕ ಎಂಬುವರು ಆಳ್ವಿಕೆ ಮಾಡಿದ್ದಾರೆ. ಆ ಬಳಿಕ ದುರ್ಗವನ್ನು ಬಿಳಿಚೋಡಿನ ಬರಮನಾಯಕನು ಗರ್ವದಿಂದ ಆಳಿದನು. ಹರಪನಹಳ್ಳಿಯಲ್ಲಿ ದಾದಯ್ಯನಾಯಕ, ರಂಗರಾಜ್ಯ ಹಿರಿಯ ಬಸಂತರಾಯ, ಇಮ್ಮಡಿ ಬಸವಪ್ಪನಾಯಕ, ಕೊಟ್ಟರಪ್ಪನಾಯಕ ಎಂಬುವರು ಆಳುತ್ತಿದ್ದರು. ಅನಂತರ ಬಸವಪ್ಪನಾಯಕನು ಅಲ್ಲಿಗೆ ದೊರೆಯಾಗಿದ್ದನು. ಮುಂಚೆ ಹೇಳಿದ ಭರಮಣ್ಣ ನಾಯಕನು ಹರಪನಹಳ್ಳಿಯ ಬಸವಪ್ಪ ನಾಯಕನ ರಾಜ್ಯ, ಕೋಟೆಯನ್ನು ಅಕ್ರಮಿಸಿ ಗರ್ವದಿಂದ ವರ್ತಿಸಿದನು. ಇವನ ತೊಂದರೆ ಸಹಿಸದ ಹರಪನಹಳ್ಳಿಯ ಬಾಗಳಿ ಬಸವಪ್ಪನಾಯಕನು ಸೈನ್ಯಸಹಾಯವನ್ನು ಪ್ರಾರ್ಥಿಸಿದ ಮೇರೆಗೆ ಕೆಳದಿ ಸೋಮಶೇಖರನಾಯಕನು ಹರಪನಹಳ್ಳಿಯ ಸಂಸ್ಥಾನವನ್ನು ಉದ್ಧಾರಮಾಡಲು ಗುರುವಪ್ಪ ಮಂತ್ರಿಯೊಡನೆ ಸೈನ್ಯವನ್ನು ಕಳುಹಿಸಿ ಬರಮನಾಯಕನ ಸೊಕ್ಕು ಮುರಿದನು. ಕೋಟೆಯನ್ನು ವಶಪಡಿಸಿಕೊಂಡು ಬಸಪ್ಪನಾಯಕನಿಗೆ ಹಿಂತಿರುಗಿಸಿ ಕೊಟ್ಟು ಖ್ಯಾತಿ ಪಡೆದನು ಎಂಬ ಅಂಶ ಕೆಳದಿ ನೃಪವಿಜಯಂ ಕೃತಿಯಲ್ಲಿ ದಾಖಲಾಗಿದೆ.[೧೨೩]

ಮಗನಂ ಪೆಸರಿಟ್ಟುರೆ ಪದ
ಯುಗ ದರ್ಶನ ಗೈದ ಹರಿಪುರಾದೀಶ್ವರಗಂ
ದಗಣಿತ ಪೊನ್ನುಡುಗೊರೆ ತೊಡ
ವುಗಳನವನಿತ್ತು ಪೆರ್ಮೆಯಿಂ ಮನ್ನಿಸಿದಂ[೧೨೪]

ಮಗನಿಗೆ ಹೆಸರಿಟ್ಟು ಆ ಸಂದರ್ಭದಲ್ಲಿ ಚರಣದರ್ಶನಕ್ಕಾಗಿ ಬಂದ ಹರಪನಹಳ್ಳಿಯ ರಾಜನಿಗೆ ಲೆಕ್ಕವಿಲ್ಲದಷ್ಟು ಚಿನ್ನದ ಉಡುಗೊರೆ ಹಾಗೂ ಆಭರಣಗಳನ್ನು ಕೊಟ್ಟು ಅತ್ಯಧಿಕವಾಗಿ ಮನ್ನಿಸಿದನು. ಈ ರೀತಿ ಮನ್ನಿಸಿದ ನಂತರ ಹರಪನಹಳ್ಳಿಯ ಸಂಸ್ಥಾನಕ್ಕೆ ಒದಗಿದ ಹೇರಳ ಸಾಲವನ್ನು ತೀರಿಸಿದನು. ಈ ಸಮಾಚಾರವನ್ನು ಕೇಳಿದ ಗುಂತಗೊಳದ ಹನುಮಂತನಾಯಕನು ಸೇನಾಸಮೂಹಗಳೊಡನೆ ಬರಲು, ಅವನನ್ನು ಕೆಳದಿ ಅರಸನು ಗಗನ ಮಹಲ್ ಚಾವಡಿ ಎಂಬಲ್ಲಿ ಭೇಟಿ ಮಾಡಿ ಸನ್ಮಾನಿಸಿ ಕಳುಹಿಸಿಕೊಟ್ಟನು. ಈ ಘಟನೆಯು ಕೆಳದಿ ರಾಜ್ಯವನ್ನಾಳಿದ ಎರಡನೇ ಸೋಮಶೇಖರ ಕಾಲದಲ್ಲಿ ನಡೆದಿದ್ದನ್ನಲಾಗಿದೆ.

ಕಂ॥ ಮದಕೆರೆ ನಾಯಕನು ರವಣೆ
ಹಿದಿ ರಾಂ ಪೊಡಶಕ್ಯಮಾಗಿ ಹರಪ್ಪರದರಸಂ
ಸದಯಬಸವುರ್ಮಿ ಪಂಗೀ
ಹದನಂ ಬಿನ್ನೈಸಿ ಕಳುಪಿ ಮೆರೆವುಗಲಾಗ[೧೨೫]

ಹೀಗೆ ಆರ್. ಶಾಮಶಾಸ್ತ್ರಿ ಸಂಪಾದಿಸಿರುವ ಲಿಂಗಣ್ಣ ಕವಿ ರಚಿಸಿದ ಕೆಳದಿ ನೃಪ ವಿಜಯಂ ಕೃತಿಯಲ್ಲಿ ಹರಪನಹಳ್ಳಿ ಪಾಳೆಯಗಾರರ ಬಗ್ಗೆ ಉಲ್ಲೇಖವಿದೆ.

ಹರಪನಹಳ್ಳಿ ಪಾಳೆಯಪಟ್ಟನ್ನು ೧೫ ಜನ ಪುರುಷರು ಹಾಗೂ ಒಬ್ಬ ಮಹಿಳೆ ಸೇರಿದಂತೆ ಒಟ್ಟು ೧೬ ಜನ ಆಳ್ವಿಕೆ ನಡೆಸಿದ್ದು ಇವರು ಕೆಳದಿ ಸಂಸ್ಥಾನದೊಂದಿಗೆ ಸ್ನೇಹದಿಂದ ನಡೆದುಕೊಂಡು ಬಂದಿದ್ದರೆನ್ನಲಾಗಿದೆ. ಹರಪನಹಳ್ಳಿ ಪಾಳೆಯಗಾರರಿಗೆ ಕೆಳದಿಯವರು ಕಷ್ಟಕಾಲದ ಸಂದರ್ಭದಲ್ಲಿ ವಿಶೇಷ ಸಹಾಯ ಮಾಡಿರುವುದನ್ನು ಉಲ್ಲೇಖಿಸಲಾಗಿದೆ.

ಡ್ಯೂಕ್ ಆಫ್ ವೆಲ್ಲಿಂಗ್ಟನ್ ಪತ್ರಾಗಾರದಲ್ಲಿ ಹರಪನಹಳ್ಳಿ ಪಾಳೆಯಗಾರರ ಪ್ರಸ್ತಾಪವಿರುವುದು ಕಂಡುಬರುತ್ತದೆ. ಶ್ರೀರಂಗಪಟ್ಟಣದ ಮೊಕ್ಕಂನಿಂದ ಅರ್ಥರ್ ವೆಲ್ಲೆಸ್ಲಿಯ ಪತ್ರ ಸಾರಾಂಶ ಮುಂತಾದ ಸಂಗತಿಗಳು ಈ ಪತ್ರದಲ್ಲಿ ಪ್ರಸ್ತಾಪಿಸಲ್ಪಟ್ಟಿವೆ.[೧೨೬]

ಹರಪನಹಳ್ಳಿ ಪಾಳೆಯಗಾರ ಕಾಲದಲ್ಲಿ ಹರಪನಹಳ್ಳಿ, ನೀಲಗುಂದ, ಬಾಗಳಿ, ನಂದಿಬೇವೂರು, ಉಚ್ಚಂಗಿದುರ್ಗ, ಮುತ್ತಿಗಿ, ನಾರಾಯಣದೇವರಕೆರೆ ಮುಂತಾದವು ಪ್ರಮುಖ ಶಿಕ್ಷಣ ಕೇಂದ್ರಗಳಾಗಿದ್ದವು. ಶಿಕ್ಷಣ ಪ್ರಸಾರದಲ್ಲಿ ದೇವಾಲಯ, ಮಠ ಅಗ್ರಹಾರಗಳು ಬಹುಮುಖ್ಯ ಪಾತ್ರ ವಹಿಸಿರುವುದು ಕಂಡುಬರುತ್ತದೆ. ಬ್ರಾಹ್ಮಣರು ಶಿಕ್ಷಣ ಮತ್ತು ಸಾಹಿತ್ಯದಲ್ಲಿ ಹೆಚ್ಚು ಮುಂಚೂಣಿಯಲ್ಲಿದ್ದರು. ಈ ವಿದ್ವಜ್ಜನರು ಪಾಳೆಯಗಾರರಿಂದ ಹಲವಾರು ದಾನ-ದತ್ತಿಗಳನ್ನು ಪಡೆದಿದ್ದಾರೆ ಎಂಬ ಅಂಶ ನಮಗೆ ಶಾಸನಗಳ ಆಧಾರದಿಂದ ತಿಳಿದುಬರುತ್ತದೆ. ಆದುದರಿಂದ ಈ ಶಾಸನಗಳನ್ನು ಅವಲೋಕಿಸಿದಾಗ ಪಾಳೆಯಗಾರರ ಕಾಲದಲ್ಲಿ ಸಾಹಿತ್ಯ ಕೃಷಿ ಸಮೃದ್ಧಿಗೊಂಡಿರುವುದು ಕಂಡುಬರುತ್ತದೆ.

ದಾದಯ್ಯನಾಯಕನ ಕಾಲದಲ್ಲಿದ್ದ ದೇವಕವಿ ಮರುಳಸಿದ್ಧನ ಕಾವ್ಯ ಎಂಬ ಕೃತಿಯನ್ನು ರಚಿಸಿದ್ದಾರೆ. ಹಾಗೆ ಬಸವಲಿಂಗ ಶರಣರು ಗುರುಕರಣ ತ್ರಿವಿಧಿ, ಮಲ್ಲಿಕಾರ್ಜುನ ಪಂಡಿತನ ಶಂಕರ ದಾಸಿಮಯ್ಯ ಪುರಾಣ, ಮಲ್ಲಿನಾಥ ಪಂಡಿತನ ಎಮ್ಮೆಬಸವನ ಕಾಲಜ್ಞಾನ ಮುಂತಾದ ಕೃತಿಗಳು ರಚನೆಯಾಗಿರುವುದು ಕಂಡುಬರುತ್ತದೆ.

ಮುದಿಬಸಪ್ಪ ನಾಯಕ ೧೬೬೪ರಲ್ಲಿ ಅನಂತಭಟ್ಟ ಜೋಯಿಸರು ಹಿರಿಯರಿಗೆ ವಿದ್ಯಾಪಾರಿತೋಷಕ ಎಂಬ ಗೌರವವನ್ನು ಮತ್ತು ಅವರಿಗೆ ಅರಮನೆಯಿಂದ ವರ್ಷಕ್ಕೊಮ್ಮೆ ೧೬ ವರಹ ನೀಡುವ ವ್ಯವಸ್ಥೆ ಮಾಡಿದ್ದನು.[೧೨೭] ಕ್ರಿ.ಶ. ೧೬೬೧ರ ಬಾಗಳಿ ಬಸಪ್ಪನಾಯಕನ ಶಾಸನವು ಮುರಗಿಯ ಶಾಂತವೀರ ಸ್ವಾಮಿಗಳಿಗೆ ವಿದ್ಯಾದಾನಕ್ಕೆ ಕೊಟ್ಟ ಉಡುಗೊರೆಗಳ ಬಗ್ಗೆ ಉಲ್ಲೇಖಿಸುತ್ತದೆ.

ಮಹಲಿಂಗರಂಗ ಹಾಗೂ ಹಿರಿಯಣ್ಣ ಕವಿ ಈ ಪಾಳೆಯಗಾರರ ಕಾಲದ ಸಾಹಿತ್ಯದಲ್ಲಿ ಹೆಸರು ಗಳಿಸಿದ್ದ ಪಂಡಿತರಾಗಿದ್ದಾರೆ. ಮಹಲಿಂಗರಂಗ ಎಂಬ ಕವಿ ಅನುಭವಾಮೃತ ಎಂಬ

ಕೃತಿಯನ್ನು ರಚಿಸಿದ್ದಾನೆ. ಈತನು ಉಚ್ಚಂಗಿದುರ್ಗದವನೆಂದು, ಇವನ ಸ್ಥಳ ಜಗಳೂರು ತಾಲೂಕಿನ ಕೊಣಚುಗಲ್ಲಿ ರಂಗನಾಥಸ್ವಾಮಿ ಗುಡ್ಡ ಆಗಿತ್ತು ಎಂದು ನಂಬಲಾಗಿದೆ. ಜೊತೆಗೆ ಈತನ ಸಮಾಧಿ ಉಚ್ಚಂಗಿದುರ್ಗದಲ್ಲಿದೆ ಎಂದು ಹೇಳಲಾಗುತ್ತಿದೆ. ದಾವಣಗೆರೆ ನಗರದಲ್ಲಿ ಈತನ ಸ್ಮಾರಕವಿರುವುದು ಕಂಡುಬರುತ್ತದೆ. ಹರಪನಹಳ್ಳಿ ಭಾಗದಲ್ಲಿ ಇಂದು ಸಾಹಿತ್ಯದಲ್ಲಿ ಸಾಧನೆ ಮಾಡಿದವರಿಗೆ ಮಹಲಿಂಗರಂಗ ಎಂಬ ಪ್ರಶಸ್ತಿಯನ್ನು ನೀಡಲಾಗುತ್ತಿದೆ.

ಹರಪನಹಳ್ಳಿ ಪಾಳೆಯಗಾರರ ಕಾಲದ ಇನ್ನೊಬ್ಬ ಪಂಡಿತನೆಂದರೆ ಹಿರಿಯಣ್ಣ ಕವಿ. ಈತನು ಬಾಗಳಿ ಬಸಪ್ಪನಾಯಕನ ಆಶ್ರಯದಲ್ಲಿ ಇದ್ದನು. ಈತನ ಕೃತಿ ಹಯರತ್ನ ಶ್ರೇಣಿ. ಪ್ರಾಚೀನ ಹಸ್ತಪ್ರತಿಯನ್ನು ಸಂಶೋಧಿಸಿ ಡಾ. ಎಫ್.ಟಿ.ಹಳ್ಳಿಕೇರಿಯವರು ಹಿರಿಯಣ್ಣ ಕವಿಯ ಹಯರತ್ನ ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯು ಪಾಳೆಯಗಾರರ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಕುದುರೆಗಳ ಆರೈಕೆ ಲಾಲನೆ-ಪಾಲನೆ ಉಪಯೋಗ, ಅಶ್ವದಳ ಇತ್ಯಾದಿ ಕುರಿತು ವೈಜ್ಞಾನಿಕ ವಿವರಣೆ ನೀಡುತ್ತದೆ.

ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ ೭ ಸಂಧಿ ೧೪೨ ಪದ್ಯಗಳನ್ನು ಒಳಗೊಂಡ ಒಂದು ಕೃತಿಯಾಗಿದೆ. ೧ರಿಂದ ೫ ಸಂಧಿಗಳು ಭಾಮಿನಿ ಷಟ್ಪದಿಯಲ್ಲಿ ಆರು ಮತ್ತು ಏಳು ಸಂಧಿಗಳು ವಾರ್ಧಕ ಷಟ್ಪದಿಯಲ್ಲಿವೆ.

ಧರೆ ಗಧಿಕವು ತ್ಯಂಗಿ ಗಿರಿಯಲಿ
ಮೆರೆವ ದುರ್ಗಾಂದಿಕೆಯ ಸಿರಿಪದ
ಸರಸಿಜ ಭೃವುರಾಯಮಾನ ಕವೀಂದ್ರ ಹಿರಿಯಣ್ಣ
ವಿರಚಿಸಿದ ಹಯರತ್ನ ಶ್ರೇಣಿಯ ಮೊರದ ಎಂದು ಕವಿಯ[೧೨]

ಹಾಗೆ ಕೃತಿಯ ಕೊನೆಯ ಪದ್ಯದಲ್ಲಿ ತನ್ನ ಆಶ್ರಯದಾತನು ಕೃತಿ ರಚನೆ ಮಾಡಿದ ಕಾಲ ತಿಳಿಸಿರುವನು.

ಶಾಲಿವಾಹನ ಶಕವು ಸಂದೊಂದು ಸಾವಿರದ
ಏಳು ನೂರು ವರುಷಕ್ಕೆ ವಿಳಂಬ ಸಂವತ್ಸರ ದವನ
ಮೇಲೆ ಹೆಸರಾಂತ ಮಾಸ ಶುಕ್ಲ ಪಂಚಮಿಯ ಭೃಗವಾಗಿರಲಿ ಕ್ಷಿತಿಯೊಳ್
ಲೀಲೆವಿಗೆ ಹರಪುರ ವನಾಲ್ವ ಬಾಗುಳಿಯ ಭೂ
ಪಾಲಮಣಿ ಬಸವೇಂದ್ರ ನೃಪಾಲ ಪುರೋಹಿತಂ
ಹೇಳಿದ ಹಯರತ್ನ ಶ್ರೇಣಿಯೆಂಬ ತುರುಗ ಲಕ್ಷಣನರ್ಥಿಯಿಂದ[೧೩]

ಜೊತೆಗೆ ೧೬೯೦–೧೭೦೯ರ ಅವಧಿಯಲ್ಲಿ ಆಳ್ವಿಕೆ ಮಾಡಿದ ಬಾಗಳಿ ಬಸಪ್ಪನಾಯಕನ ಕಾಲದಲ್ಲಿ ಹಿರಿಯಣ್ಣ ಕವಿ ಪುರೋಹಿತ ಕಾರ್ಯ ನಡೆಸುತ್ತಿದ್ದನು. ಈ ಕವಿ ಕ್ರಿ.ಶ. ೧೭೭೮ರಲ್ಲಿ ಕುದುರೆ ಲಕ್ಷಣ ಸ್ವರೂಪ ಉಂಟಾಗುವ ಕಾಯಿಲೆ ಔಷಧಿ ಮುಂತಾದ ವಿಷಯಗಳನ್ನು ತಿಳಿಸಿದ್ದಾನೆ.

ಇಂಗಳದ ಮೇಣ ನುಗ್ಗಿಯ ತಾಡೆ ಬಜೆವಾಯಿದ

ಳಂಗ ಹಿಪ್ಪಲಿಯ ಮೂಲ ಹೊನ್ನಾವರಿಕೆಯ ಪು

ಷ್ಪಂಗಳ ಜಿವಾನ ಕಾಡಿರಯ ಗಡ್ಡೆಕರಿಲಕ್ಕಿಯ ಮುಗಳ ಸೈಂಧಲವಣಾ

ಮುಗಲಿಯ ಮಾಗಿವರಗಡ್ಡೆ ಭೋನಗಾರಿಯ ಕಾಯಿ

ಭಂಗಿ ಬಳೊಳ್ಳಿ ಹೆಜ್ಜೇವಿನ ಮುಗುಳ್ ತ್ರಿಕುಟು

ಕಂಗಳ ಹದಿನೆಂಟು ಬಿಸಿ ನೀರು ಮಧುವಿನೋಳ್

ಎಂದು ಎಂಟು ಪ್ರಕಾರ ಜ್ವರ, ಹದಿನೆಂಟು ರೀತಿಯ ಶೂಲಿ, ಏಳು ಬಗೆಯ ವಾಯುಗಳನ್ನು ನಿವಾರಿಸಬೇಕಾದರೆ ನೆಲ, ಬೇವು, ಇಂದ್ರ, ಊರುಣಿ, ಬ್ರಹ್ಮಿ, ಹೆಗ್ಗುಳ ನೆಲದವರಿಕೆ ಸಮಾಲ ಚವೆ, ಇಂಗು, ತ್ರಿಕುಟ ಮುಂತಾದ ನಾಲ್ವತ್ತು ಗಿಡಮೂಲಿಕೆಗಳಿಂದ ಸಿದ್ಧಪಡಿಸಿದ ಔಷಧಿಯನ್ನು ಕುಡಿಸಲು ಸಲಹೆ ಸೂಚಿಸಲಾಗಿದೆ.[೧೩೦]

ಮಳೆ–ಬೆಳೆ ವಿಚಾರದ ರಟ್ಟಮತ, ಸಂಗೀತಶಾಸ್ತ್ರ, ಮಲ್ಲವಿದ್ಯೆ, ಧನುರ್ವಿದ್ಯೆ, ಕತ್ತಿವರಸೆ ಕಾಮಶಾಸ್ತ್ರ, ಸೂಪಶಾಸ್ತ್ರ, ಗಜಶಾಸ್ತ್ರ, ಅಶ್ವಶಾಸ್ತ್ರ ಮುಂತಾದ ಅನೇಕ ಪ್ರಾಚೀನಕಾಲದ ಶಾಸ್ತ್ರಗಳನ್ನು ಕವಿಗಳು, ಪಂಡಿತರು ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ರಚಿಸಿದ್ದಾರೆ. ಇಂತಹ ಪ್ರಯತ್ನವನ್ನು ಹಿರಿಯಣ್ಣ ಕವಿ ಮಾಡಿದ್ದು ಒಂದು ಮಹತ್ವದ ಅಂಶವಾಗಿದೆ.

ಪಾಳೆಯಗಾರರ ಕಾಲದಲ್ಲಿ ವಿವಿಧ ವಿಷಯಗಳಲ್ಲಿ ಶಿಕ್ಷಣವನ್ನು ಕೊಡುತ್ತಿದ್ದರು. ಕಾವ್ಯ ಪುರಾಣ, ರಾಮಾಯಣ, ಮಹಾಭಾರತ, ಪುಣ್ಯಪುರುಷರ ಕಥೆಗಳು, ಸೋಮಶೇಖರಶತಕ ನಿಜಲಿಂಗಶತಕ, ಶಿವಭಕ್ತಿಸಾರ, ಹರಿಶ್ಚಂದ್ರಕಾವ್ಯ, ಓದು–ಬರಹ ಲೆಕ್ಕ ಮುಂತಾದ ವಿಷಯಗಳನ್ನು ಮಕ್ಕಳಿಗೆ ಬೋಧಿಸುತ್ತಿದ್ದರು.

ಈ ಕಾಲದಲ್ಲಿ ಶಿಕ್ಷಣವನ್ನು ದೇವಾಲಯ ಮಠಮನೆಗಳಲ್ಲಿ ಮೊದಲಾದೆಡೆ ಕೊಡುತ್ತಿದ್ದರು. ಬ್ರಾಹ್ಮಣರು, ಪುರೋಹಿತರು, ವೀರಶೈವ ಗುರುಗಳು ಮಕ್ಕಳಿಗೆ ಈ ಮೇಲಿನ ವಿಷಯಗಳನ್ನು ಕ್ರಮಬದ್ಧವಾಗಿ ಬೋಧಿಸುತ್ತಿದ್ದರು.

ಸಂತೆಬೆನ್ನೂರು ನಾಯಕರು ವಿಜಯನಗರ ಅರಸರ ಅಧೀನರಾಗಿದ್ದರು. ವಿಜಯನಗರದ ಪತನದ ನಂತರ ಸ್ವತಂತ್ರವಾಗಿ ಆಡಳಿತ ನಡೆಸಲು ಪ್ರಾರಂಭಿಸಿದರು. ಆದರೆ ಶಿಕ್ಷಣ, ಸಾಹಿತ್ಯ, ವಾಸ್ತುಶಿಲ್ಪಕಲೆ ವಿಜಯನಗರ ಅರಸರ ಪರಂಪರೆಯಿಂದ ಬಂದಿದ್ದನ್ನು ಇವರು ಮುಂದುವರಿಸಿಕೊಂಡು ಹೋದರು. ಹಾಗಾಗಿ ವಿಜಯನಗರ ಪ್ರಭಾವವನ್ನು ಗುರುತಿಸಬಹುದು.

ಶಿಕ್ಷಣ ಮತ್ತು ಸಾಹಿತ್ಯಕ್ಕೆ ಸಾಕಷ್ಟು ಮಹತ್ವ ನೀಡಿದ ಈ ನಾಯಕರು ಕನ್ನಡ ಮತ್ತು ಸಂಸ್ಕೃತ ಭಾಷೆ ಪಂಡಿತರಿಗೆ ರಾಜಾಶ್ರಯ ನೀಡಿದ್ದರು. ಈ ನಾಯಕರು ವಿದ್ಯಾಪಕ್ಷಪಾತಿಗಳು ಹಾಗೂ ಕಾವ್ಯಪೋಷಕರು, ಧರ್ಮಪ್ರಸಾರಕರು, ಅನುಭವಿಗಳು, ದಾರ್ಶನಿಕರು, ಜಾನಪದರು ಆಗಿದ್ದರು. ಆ ಕಾಲದ ಅನೇಕ ಕವಿಗಳಿಗೆ ರಾಜಾಶ್ರಯ ನೀಡಿ ಪ್ರೋತ್ಸಾಹ ನೀಡಿದ್ದಾರೆ.[೧೩೧] ಕೃಷ್ಣಶರ್ಮ ಎಂಬ ಕವಿ ಸಂತೆಬೆನ್ನೂರು ನಾಯಕರ ಆಸ್ಥಾನದಲ್ಲಿ ಕವಿಯಾಗಿದ್ದನು. ಈತನು ಪ್ರಾಚೀನ ಕನ್ನಡ ಸಾಹಿತ್ಯದಿಂದ ಪ್ರೇರಿತನಾಗಿ ೨ನೇ ಸರ್ಜಾಹನುಮಪ್ಪನಾಯಕನನ್ನು ಕುರಿತು ಸರ್ಜಾ ಹನುಮೇಂದ್ರ ಯಶೋವಿಲಾಸಂ ಎಂಬ ಐತಿಹಾಸಿಕ ವಿಷಯಗಳನ್ನೊಳಗೊಂಡ ಕಾವ್ಯವನ್ನು ರಚಿಸಿದ್ದಾನೆ.[೧೩೨] ಇವನು ಬ್ರಾಹ್ಮಣಕವಿ. ಭಾರದ್ವಾಜ ಗೋತ್ರದವನು. ತಂದೆ ತಿರುಮಲಾರ್ಯ ತಾಯಿ ತಿರುಮಲಾಂಬೆ. ಮಧುರೆ ಮೀನಾಕ್ಷಿಯ ಭಕ್ತನಾದ ಈತ ತನ್ನ ನಾಯಕ ವಂಶವನ್ನು ಕುರಿತು ಹಾಡಿಹೊಗಳಿದ್ದಾನೆ.

ಅಚ್ಚಕನ್ನಡದ ಈ ಕಾವ್ಯ, ಕಂದ, ವೃತ್ತ, ಷಟ್ಪದಿ, ಗದ್ಯಗಳಿಂದ ಕೂಡಿದೆ. ಚಂಪೂ ಶೈಲಿಯ ಕಾವ್ಯದಲ್ಲಿ ಒಟ್ಟು ಐದು ಆಶ್ವಾಸಗಳಿದ್ದು, ಅಂದರೆ ೫ ಅಧ್ಯಾಯಗಳಿದ್ದು ಸಂತೆಬೆನ್ನೂರು, ತರೀಕೆರೆ, ಬಸವಾಪಟ್ಟಣ ನಾಯಕರನ್ನು ಕುರಿತು ಐತಿಹಾಸಿಕ ಮಾಹಿತಿಯನ್ನು ಒಳಗೊಂಡಿದೆ. ಈ ಕಾವ್ಯದಲ್ಲಿ ಈ ಮನೆತನಕ್ಕೆ ಸಂಬಂಧಿಸಿದ ಮಾಹಿತಿಗಳು ಕಡಿಮೆ ಪ್ರಮಾಣದಲ್ಲಿದ್ದು, ಈ ಮನೆತನದ ವಂಶಾವಳಿ, ನಾಗತಿಯರ ಹೆಸರುಗಳು, ಬೇಡ ನಾಯಕರ ಬೇಟೆ, ಮಲ್ಲಿಕಾರ್ಜುನ ದೇವಾಲಯದ ಮಾಹಿತಿ, ಹನುಮಂತ ದೇವರ ಗುಡಿಯ ವೈಭವ, ಅರಸ ಅರಸಿಯರ, ರಾಜಕುಮಾರ–ರಾಜಕುಮಾರಿಯರ ವೇಷಭೂಷಣ, ಉಡುಗೆತೊಡುಗೆ ಆ ಕಾಲದ ನಾಯಕರ ಕುಟುಂಬ, ವೇಶ್ಯಾವಾಟಿಕೆ ಪದ್ಧತಿಯ ಚಿತ್ರಣವನ್ನು ಕುರಿತಂತೆ ಮಾಹಿತಿ ಒದಗಿಸುತ್ತದೆ. ಈ ಕಾವ್ಯವು ನಾಯಕರ ವಿವರಗಳನ್ನು ತಿಳಿಸುವುದರಿಂದ ಒಂದು ಮಹತ್ವದ ಕೃತಿಯಾಗಿದೆ ಎಂದು ಹೇಳಬಹುದು.

ಸಂತೆಬೆನ್ನೂರು ನಾಯಕರು ಜನಪದ ಸಾಹಿತ್ಯಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿದ್ದರು. ಈ ನಾಯಕರ ಬಗ್ಗೆ ಅನೇಕ ಲಾವಣಿಗಳು ಪ್ರಚಾರದಲ್ಲಿವೆ. ಇವರ ಕಾಲದಲ್ಲಿ ವೀರಶೈವ, ಬ್ರಾಹ್ಮಣ ಕವಿಗಳು ಸಾಹಿತ್ಯವನ್ನು ರಚಿಸಿದ್ದಾರೆ. ಬೇರೆ ಬೇರೆ ರೀತಿಯ ವಿಚಾರ ಕುರಿತು ಸಾಹಿತ್ಯವನ್ನು ರಚಿಸಿದ್ದಾರೆ. ಅನೇಕ ಕನ್ನಡ, ಸಂಸ್ಕೃತ ತಾಮ್ರಶಾಸನ ಬರೆದು ಕೊಟ್ಟಿರುವುದು ಕಂಡುಬರುತ್ತದೆ. ಅವುಗಳ ರಚನೆಕಾರರಾದ ಕವಿಗಳು ಉತ್ತಮ ರಚನೆಕಾರರಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಈ ನಾಯಕರ ಆಡಳಿತ ಅವಧಿಯಲ್ಲಿ ಮುಸ್ಲಿಂ ಪ್ರಭಾವ ಹೆಚ್ಚು ಬೀರಿರುವುದು ಕಂಡುಬರುತ್ತದೆ. ಆದುದರಿಂದ ಕೆಲವು ಪಾರ್ಸಿ ಲಿಪಿಯ ಲೇಖನಗಳು ರಚನೆಯಾಗಿರುವುದು ತಿಳಿದುಬಂದಿವೆ.[೧೩೩] ಕೃಷ್ಣಶರ್ಮ ಎಂಬ ಕವಿ ತನ್ನ ಕಣ್ಣಳತೆಗೆ ನಿಲುಕದ ಅನುಭವಗಳನ್ನು, ಈ ನಾಯಕರ

ಆಡಳಿತ ಕೊಡುಗೆಗಳನ್ನು, ಅಲ್ಲದೆ ದೇವಾಲಯಗಳ ಕುರಿತು ಬಹು ಮನೋಜ್ಞವಾಗಿ ದಾಖಲಿಸಿದ್ದಾನೆ. ಈತನು ಸರ್ಜಾಹನುಮಪ್ಪನಾಯಕನ ಆಸ್ಥಾನದ ಕವಿಯಾಗಿದ್ದನು.

ಈ ನಾಯಕನ ಕುರಿತು ಫ್ರಾನ್ಸಿಸ್ ಬುಕಾನನ್‌ನ ಬರಹಗಳು, ಕರ್ನಲ್ ಮೆಕಂಜಿಯವರ ಕೈಫಿಯತ್ತುಗಳು, ಬಿ.ಎಲ್.ರೈಸ್ ಅವರು ದಾಖಲಿಸಿರುವ ಶಾಸನಗಳು ಪಾಳೆಯಗಾರರ ಸಾಹಿತ್ಯವನ್ನು ಕುರಿತು ಹೆಚ್ಚಿನ ವಿವರಗಳನ್ನು ತಿಳಿಸುತ್ತವೆ.

ಸಿದ್ಧಲಿಂಗ ಚರಿತ್ರೆ ಎಂಬ ಕೃತಿಯಲ್ಲಿ ಮಹಾಪುರುಷನಾದ ಮರುಳಸಿದ್ಧನ ಧೀಮಂತ ವ್ಯಕ್ತಿತ್ವವನ್ನು ವಾರ್ಧಕ ಷಟ್ಪದಿಯಲ್ಲಿ ವಿವರಿಸಲಾಗಿದೆ. ಇದೊಂದು ವೀರಶೈವ ಪುರಾಣವಾಗಿದ್ದು, ಹಲವು ಐತಿಹಾಸಿಕ ಅಂಶಗಳನ್ನು ಈ ಕೃತಿಯಲ್ಲಿ ಅನಾವರಣಗೊಳಿಸಲಾಗಿದೆ.[೧೩೪] ನಾಗಭೂಷಣನು ಮರುಳಸಿದ್ಧೇಶ್ವರ ಸಾಂಗತ್ಯವನ್ನು ರಚಿಸಿದ್ದಾನೆ. ಈ ಕೃತಿಯಲ್ಲಿ ಮರುಳಸಿದ್ಧನು ದೀನದಲಿತರ ಉದ್ಧಾರಕ್ಕಾಗಿ ಮಾಡಿದ ಹೋರಾಟದ ವಿವರಗಳನ್ನೊಳನ್ನು ನೀಡಿದ್ದಾನೆ.

ನಾಯಕರು ಪುವ್ವಲ ಎಂಬ ಬೆಡಗಿಗೆ ಸೇರಿದ್ದು, ಪುವ್ವಲ ಎಂದರೆ ಸೂರ್ಯ ಮತ್ತು ಸುಂದರ ಎಂಬ ಎರಡೂ ಅರ್ಥಗಳಿವೆ. ಇವರು ಸೂರ್ಯವಂಶದವರು. ಸರ್ಜಾಹನುಮೇಂದ್ರ ಯಶೋವಿಲಾಸ ಕಾವ್ಯದಲ್ಲಿ ತಿಳಿಸಲಾಗಿದೆ. ಇದು "ರಾಜಭಕ್ತಿ ಪ್ರತೀಕವಾಗಿ ಈ ರೀತಿ ಬರೆದಿರುವ ಸಾಧ್ಯತೆ" ಇದೆ ಎಂದೂ ಈ ಕೃತಿ ಸಂಪಾದಿಸಿರುವ ವೈ.ಸಿ.ಭಾನುಮತಿ ಅಭಿಪ್ರಾಯ ಪಡುತ್ತಾರೆ. ಈ ನಾಯಕರು ಬರೆಸಿದ ಎಲ್ಲಾ ಶಾಸನಗಳು ಕನ್ನಡದಲ್ಲಿ ದೊರೆತಿವೆ.

ಸಂತೆಬೆನ್ನೂರು ನಾಯಕರ ಕಾಲದ ಸಾಹಿತ್ಯದಿಂದ ಅವರ ಸಾಹಸ, ಧೈರ್ಯ ಕೆಚ್ಚನ್ನು ಪ್ರತಿಬಿಂಬಿಸುತ್ತದೆ. ಜೊತೆಗೆ ಈ ನಾಯಕರ ಕಾಲದ ಆಡಳಿತ, ರಾಜರ ಹೆಸರುಗಳು, ನಾಗತಿಯರು, ಕೃಷಿಪದ್ಧತಿ, ವಾಣಿಜ್ಯ ವ್ಯವಹಾರ, ಧಾರ್ಮಿಕ ಜೀವನ, ಸಾಹಿತ್ಯ ಕಲೆ, ಜಾನಪದ ಇತ್ಯಾದಿ ವಿಷಯಗಳು ತಿಳಿದುಬರುತ್ತವೆ.

ಚೌಡಿಕೆ ಕಾವ್ಯಗಳಲ್ಲಿ ತರೀಕೆರೆಯ ಕೊನೆಯ ಪಾಳೆಯಗಾರರ ಸರ್ಜಪ್ಪನಾಯಕನ ಶೌರ್ಯ, ಧೈರ್ಯಗಳ ಕುರಿತು ವಿವರಿಸಲಾಗಿದೆ. ಇವನ ತಂದೆ ರಂಗಪ್ಪನಾಯಕನು ಬ್ರಿಟಿಷರ ವಿರುದ್ಧ ಹೋರಾಡಿ ಕೊನೆಗೆ ಸೆರೆಮನೆ ಸೇರಿದನು. ತಂದೆಯಂತೆ ಮಗನು ಕೂಡ ಬ್ರಿಟಿಷ್ ಸೈನ್ಯಕ್ಕೆ ಕಿರುಕುಳ ಕೊಡುತ್ತಿದ್ದನು. ಯುದ್ಧದಲ್ಲಿ ಅವನನ್ನು ಗೆಲ್ಲುವುದು ಸಾಧ್ಯವಿಲ್ಲವೆಂದರಿತ ಬ್ರಿಟಿಷ್ ರಾಣಿ ಮೋಸದಿಂದ ಸೂಳೆಯ ಮುಖಾಂತರ ಹಿಡಿಸಿ ಕೊಲ್ಲಿಸುತ್ತಾಳೆ. ಇದು ಈ ಕಾವ್ಯದಲ್ಲಿ ಬಿಂಬಿಸಲಾಗಿರುವ ಐತಿಹಾಸಿಕ ಕಥೆಯಾಗಿದೆ.[೧೩೫] ಹಾಗೆ ಈ ಪಾಳೆಯಗಾರರನ್ನು ಕುರಿತು ಹಲವು ಜಾನಪದ ಗೀತೆಗಳು ಇನ್ನೂ ಜೀವಂತವಾಗಿವೆ. ಪಾಳೆಯಗಾರರ ಕೋಲು ಪದಗಳು, ಪಾಳೆಯಗಾರರ ಜನಪದ ಗೀತೆಗಳು, ಮಾಯಕೊಂಡದ ಲಡಾಯಿ, ಮಾಯಕೊಂಡದ ಮುತ್ತಿಗೆ, ರಣಧೀರ ಹಿರೇ ಮದಕರಿನಾಯಕ ಏನು ಹೇಳಲೋ ನಿನ್ನ ಬಿರುದಾ, ನಾಯಕನ ರಥವ ಕುರಿತು ಹಾಡುವ ಪದಗಳು, ಕಾಳಗದ ಪದ, ಜಂಪಣ್ಣನ ಸಾವು ಮದಕರಿ, ಭೂಪ,

ಮದಕರಿನಾಯಕರ ಪದಗಳು, ರಥವನ್ನು ನೋಡಾನು ಬನ್ನಿರೋ, ವಾಲಸಂಜೀವ ಮುಂತಾದ ಜನಪದಗಳು ಹಾಗೂ ಕೋಲುಪದಗಳನ್ನು ಬೆಳಕಿಗೆ ತಂದಿದ್ದಾರೆ.

ಬಿಳಿಚೋಡಿನ ಮತ್ತಿವಂಶದ ಬಿಚ್ಚುಗತ್ತಿ ಭರಮಪ್ಪನಾಯಕನು ವಿಶಾಲ ಮಠ ನಿರ್ಮಿಸಿ ಕೊಡುವುದರ ಮೂಲಕ ಶೂನ್ಯಪೀಠದ ಪರಂಪರೆಯ ಬೃಹನ್ಮಠವು ವೀರಶೈವ ಧರ್ಮದ ಧಾರ್ಮಿಕ ಸಂಸ್ಥೆಯಾಗಿ ರೂಪುಗೊಂಡಿತು. ಚರಮೂರ್ತಿಗಳಾದ ಮುರುಘಾ ಶಾಂತವೀರ ಸ್ವಾಮಿಗಳು ಉಭಯ ಭಾಷಾ ಪಂಡಿತರು ಹಾಗೂ ಮುರುಘಾ ಮಠದ ಕರ್ತೃಗಳು, ಇವರು ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ ಹಲವು ಗ್ರಂಥಗಳನ್ನು ರಚಿಸಿದ್ದಾರೆ.

ವಿಶಂತಿ ಪ್ರಬಂಧ, ಪ್ರಭುಲಿಂಗ ಕಂದ, ವೈರಾಗ್ಯ ಷಟ್ಪದಿ, ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಕಟ್ಟಿಗೆಹಳ್ಳ ಸ್ವಾಮಿಗಳ ತಾರಾವಳಿ, ನೀಲಾಂಬಿಕೆ ಲಲಿತ ಸೂತ್ರ, ಪಾರಿಜಾತ, ಮುರಿಗಾ ಸ್ವಾಮಿಗಳ ಮುಕ್ತಿ, ಪ್ರದೀಪಿಕೆ, ಸ್ವಾಮಿಗಳ ವಚನ, ರಾಜೇಂದ್ರ ವಿಜಯ, ಲಿಂಗ ಸಾವಧಾನ ಪ್ರಣವ ಸಂಬಂಧ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.[೧೩೬]

ವೀರಶೈವ ಮತಾವಲಂಬಿಯಾದ ಲಾಳಸಿಂಗ ಸೋಮಣ್ಣನವರು, ಶಾಪವಿಮೋಚನೆ, ಚಂದ್ರಹಾಸ, ರುಕ್ಮಾಂಗದ ಚರಿತ್ರೆ ಮತ್ತು ಹಗಲು ಕಗ್ಗೊಲೆಯ ಕಾವ್ಯ ಮುಂತಾದ ಬಯಲಾಟಗಳನ್ನು ರಚಿಸಿದ್ದಾರೆ.

ಈ ಮೇಲಿನ ಎಲ್ಲಾ ಸಾಹಿತ್ಯ ಕೃತಿಗಳನ್ನು ಅವಲೋಕಿಸಿದರೆ ಪಾಳೆಯಗಾರರ ಕಾಲದಲ್ಲಿ ವೀರಶೈವ ಸಾಹಿತ್ಯ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಜೊತೆಗೆ ಅಲ್ಪಸ್ವಲ್ಪ ಜೈನ ಸಾಹಿತ್ಯ ಕಂಡುಬರುತ್ತದೆ. ಇದಕ್ಕೆ ಕಾರಣ ಪಾಳೆಯಗಾರರು ವೀರಶೈವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ಹಾಗೂ ವೀರಶೈವ ಧರ್ಮದ ಗುರುಗಳಿಗೆ ರಾಜಾಶ್ರಯ ನೀಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

ಕವಿಗಳು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಸಾಹಿತ್ಯವನ್ನು ರಚಿಸಿದ್ದಾರೆ. ವೀರಶೈವರಲ್ಲೂ ಸಂಸ್ಕೃತ ಪಂಡಿತರು ಇದ್ದರು ಎಂದು ಈ ಮೇಲಿನ ಕೃತಿಗಳಿಂದ ತಿಳಿದುಬರುತ್ತದೆ. ಪಾಳೆಯಗಾರರ ಕಾಲದ ವೀರಶೈವ ಪಂಡಿತರು ವೇದ, ಪುರಾಣ, ಆಗಮಗಳ ಅಧ್ಯಯನ ಮಾಡಿದ್ದಾರೆ. ಸಾಮಾನ್ಯ ಜನರಿಗೆ ಅರ್ಥವಾಗುವಂತೆ ಗದ್ಯದಲ್ಲಿ ಹೆಚ್ಚಾಗಿ ಕೃತಿಗಳನ್ನು ರಚಿಸಿದ್ದಾರೆ. ಪಾಳೆಯಗಾರರ ಕಾಲದಲ್ಲಿ ಸ್ತ್ರೀಯರು ಕೂಡ ಕೆಲವು ಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ.

**೪.೫. ಧಾರ್ಮಿಕ ಸ್ಥಿತಿಗತಿ**

ಭಾರತ ದೇಶವು ಅನೇಕ ಧರ್ಮ ಮತ್ತು ವಿಭಿನ್ನ ಆಚರಣೆ ಸಂಪ್ರದಾಯಗಳ ತವರೂರು. ಪ್ರಾಚೀನ ಕಾಲದಿಂದಲೂ ಅನೇಕ ರಾಜಮನೆತನಗಳು ಹಲವು ಧರ್ಮಗಳಿಗೆ ರಾಜಾಶ್ರಯವನ್ನು ನೀಡಿವೆ. ಇಲ್ಲಿನ ಜನರು ಪ್ರಾಚೀನ ಕಾಲದಿಂದಲೂ ಆಚರಣೆ, ನಂಬಿಕೆ, ಸಂಪ್ರದಾಯಗಳನ್ನು

ರೂಢಿಸಿಕೊಂಡು ಬಂದಿದ್ದಾರೆ. ಇಂತಹ ಆಚರಣೆಗಳಿಗೆ ನಂತರದ ದಿನಗಳಲ್ಲಿ ಒಂದು ಚೌಕಟ್ಟು ದೊರೆತು ತತ್ವ ಸಿದ್ಧಾಂತದ ಹಿನ್ನೆಲೆಯಲ್ಲಿ ಬೇರೆ ಬೇರೆ ಧರ್ಮಗಳ ಹುಟ್ಟಿಗೆ ಕಾರಣವಾಯಿತು.

ಪ್ರಾಚೀನ ಕಾಲದಲ್ಲಿ ಭಾರತವು ವೈದಿಕ ಸಂಸ್ಕೃತಿಗೆ ಒಳಗಾಗಿತ್ತು. ಇದರಿಂದ ಜಾತಿಗಳು ಹುಟ್ಟಿಕೊಂಡವು. ನಂತರ ಬೌದ್ಧ, ಜೈನ, ಧರ್ಮಗಳು ಉಗಮಗೊಂಡವು. ಇದಕ್ಕೆ ಕಾರಣ ವೈದಿಕ ಸಂಸ್ಕೃತಿಯಲ್ಲಿ ಹುಟ್ಟಿಕೊಂಡ ಜಾತಿಪದ್ಧತಿ.

ಧರ್ಮ ಎಂಬುದು ಮಾನವನ ಸುಸಂಸ್ಕೃತ ಜೀವನಕ್ಕೆ ನಿರ್ಣಾಯಕ ಶಕ್ತಿಯಾಗಿದೆ. ಧರ್ಮರಹಿತ ಸಂಸ್ಕೃತಿಯನ್ನು ಇತಿಹಾಸ ಎಂದೆಂದೂ ಕಂಡಿಲ್ಲ. ಧರ್ಮ ಸಮಾಜದ ಅವಿಭಾಜ್ಯ ಅಂಗವಾಗಿದೆ. ಈ ವ್ಯವಸ್ಥೆ ಎಲ್ಲಾ ರಂಗಗಳಲ್ಲಿ ಪ್ರವೇಶಿಸಿದೆ. ಪ್ರಾರಂಭ ಕಾಲದಿಂದಲೂ ಭಾರತವು ಧರ್ಮವನ್ನು ತನ್ನ ಜೀವನದ ಸರ್ವಸ್ವವನ್ನಾಗಿ ಸ್ವೀಕರಿಸಿತು. ಭಾರತೀಯ ಸಂಸ್ಕೃತಿಯು ಎಲ್ಲಾ ವೇದಗಳನ್ನು ಮೈಗೂಡಿಸಿಕೊಂಡು ಬೆಳೆದುಬಂದಿರುವ ಕರ್ನಾಟಕವೂ ಸರ್ವಧರ್ಮಗಳ ಸಮನ್ವಯ ಭೂಮಿಗಾಗಿ ಇತಿಹಾಸದಲ್ಲಿ ತನ್ನ ಹಿರಿಮೆಯನ್ನು ಹೆಚ್ಚಿಸಿಕೊಂಡು ಮೆರೆದಿದೆ.

ಪ್ರಾಚೀನ ಕಾಲದಿಂದಲೂ ಕನ್ನಡ ನಾಡು ಸಹಬಾಳ್ವೆಗೆ ಸಾಮರಸ್ಯಕ್ಕೆ ಮತ್ತು ಧಾರ್ಮಿಕ ಸಹಿಷ್ಣುತೆಗೆ ಪ್ರಸಿದ್ಧವಾದ ನಾಡಾಗಿದೆ. ಆ ಕಾಲದಲ್ಲಿ ಪ್ರಮುಖ ಧರ್ಮಗಳೆಲ್ಲವೂ ಒಂದೇ ಊರಿನಲ್ಲಿ ಒಂದೇ ಪ್ರಾಂತ್ಯದಲ್ಲಿ ಅತ್ಯಂತ ಸಹಜವಾಗಿ ಸಾಮರಸ್ಯದಿಂದ ಇದ್ದುದಕ್ಕೆ ಶಾಸನಗಳಲ್ಲಿ ಸಾಕಷ್ಟು ಆಧಾರಗಳು ದೊರಕುತ್ತವೆ.

ಧರ್ಮ ಇಡೀ ನಾಡಿನ ಬದುಕಿನಲ್ಲಿ ಬಹುಮುಖ್ಯ ಸ್ಥಾನವನ್ನು ಪಡೆದುಕೊಂಡಿದೆ. ಕನ್ನಡ ನಾಡು ಕೆಲವು ಧರ್ಮಗಳಿಗೆ ಜನ್ಮಭೂಮಿಯೂ ಕರ್ಮ ಭೂಮಿಯೂ ಹೌದು. ಎಲ್ಲಾ ಧರ್ಮಗಳು ಏಳುಬೀಳುಗಳನ್ನು ಕಂಡಿವೆ. ಇದುವರೆಗೂ ಬಿಡಿ ಬಿಡಿಯಾಗಿ ಒಂದೊಂದು ಧರ್ಮವನ್ನು ಅಧ್ಯಯನ ಮಾಡಿದಾಗ ಆಯಾ ಧರ್ಮಗಳು ಮಾಡಿಕೊಂಡ ಹೊಂದಾಣಿಕೆ ಪರಿಸ್ಥಿತಿಗಳನ್ನು ಗಮನಿಸಲಾಗಿದೆ. ಇದು ಎಲ್ಲಾ ಸಾಮಾಜಿಕ ವರ್ಗದ ಭಿನ್ನ ಮನೋಧರ್ಮದ ಜನರ ಒಂದು ಧಾರ್ಮಿಕ ಸಂಘಟನೆಯಾಗಿರುತ್ತದೆ. ಅದು ಸಮನ್ವಯದ ಸಮತೂಕವನ್ನು ತಪ್ಪಿದಾಗ ಕೆಲವೊಮ್ಮೆ ಸಂಘರ್ಷದ ಹಾದಿಯನ್ನು ಹಿಡಿದಿರುವುದು ಕಾಣುತ್ತೇವೆ.[೧೩೭] ಕರ್ನಾಟಕದಲ್ಲಿ ಹಲವಾರು ಶಾಸನಗಳಲ್ಲಿ ಚತುಸ್ಸಮಯಗಳ ಉಲ್ಲೇಖ ಕಂಡುಬರುತ್ತದೆ. ಇಲ್ಲಿ ಚತುಸ್ಸಮಗಳೆಂದರೆ, ಬೌದ್ಧ, ಜೈನ, ವೈಷ್ಣವ, ಶೈವ, ಧರ್ಮಗಳನ್ನು ವಿದ್ವಾಂಸರ ಅಭಿಪ್ರಾಯವಾಗಿದೆ.

ಬೇರೆ ಬೇರೆ ಮತ ಧರ್ಮಗಳು ಸಮಾಜವನ್ನು ಪೋಷಿಸುತ್ತಾ ಮತ್ತು ಸಮಾಜದಿಂದ ಪೋಷಿಸಲ್ಪಡುತ್ತಾ ಎಲ್ಲಾ ಕಡೆ ಬೆಳೆದು ಬಂದಂತೆ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರ ರಾಜ್ಯಾಡಳಿತದಲ್ಲೂ ಕಾಣಬಹುದು. ಈ ಪಾಳೆಯಗಾರರು ಧಾರ್ಮಿಕ ಕ್ಷೇತ್ರದಲ್ಲಿ ಹೆಚ್ಚಾಗಿ ಬದಲಾವಣೆಯನ್ನು ತರಲಿಲ್ಲ, ವಿಜಯನಗರ ಅರಸರ ಧಾರ್ಮಿಕ ಪರಂಪರೆಯನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ವಿಜಯನಗರ ಸಾಮ್ರಾಜ್ಯದ ಧಾರ್ಮಿಕ ಪರಂಪರೆಯನ್ನು

ಅವರ ಅಧೀನ ಪ್ರಭುಗಳಾದವರು ಆಳವಡಿಸಿಕೊಂಡಿದ್ದರು. ಈ ಪ್ರದೇಶದಲ್ಲಿ ಏಕತೆಗಿಂತ ವೈವಿಧ್ಯತೆ ಇತ್ತೆಂದು ಆಧಾರಗಳಿಂದ ತಿಳಿದುಬರುತ್ತದೆ. ಶಿಷ್ಟ ಮತ್ತು ಧಾರ್ಮಿಕ ಪರಂಪರೆಯೊಂದಿಗೆ ಜಾನಪದ ಬುಡಕಟ್ಟು ಪರಂಪರೆಯು ಬೆಳೆದುಬಂದಿರುವುದನ್ನು ಕಾಣಬಹುದು.

ಯಾವುದೇ ರಾಜಕೀಯ ವ್ಯವಸ್ಥೆಯ ಅಧಿಕಾರ ವಲಯದಲ್ಲಿ ಮುಖ್ಯವಾದ ಸಾಧನವೆಂದರೆ ಧರ್ಮ. ಪಾಳೆಯಗಾರರ ಕಾಲದಲ್ಲಿ ಪ್ರಚಲಿತವಾದ ಧಾರ್ಮಿಕ ಸಂಪ್ರದಾಯಗಳನ್ನು ಸ್ವೀಕರಿಸುವುದು ಪಾಲಿಸುವುದು ಮತ್ತು ಆಶ್ರಯ ಕೊಟ್ಟು ಪೋಷಿಸುವುದು ಪ್ರಮುಖ ಕರ್ತವ್ಯವಾಗಿತ್ತು. ಈ ದೃಷ್ಟಿಯಿಂದ ಹರಪನಹಳ್ಳಿ ಪಾಳೆಯಗಾರರ ಧಾರ್ಮಿಕ ನೀತಿಯನ್ನು ಅವಲೋಕಿಸಿದರೆ ಅವರು ಎಲ್ಲಾ ಧರ್ಮಗಳಿಗೆ ಆಶ್ರಯ ನೀಡಿದ ಅಂಶ ಕಂಡುಬರುತ್ತದೆ.

ಹರಪನಹಳ್ಳಿ ಪಾಳೆಯಗಾರರು ಪ್ರಮುಖವಾಗಿ ಉಚ್ಚಂಗೆಮ್ಮ ಮತ್ತು ಆಂಜನೇಯ ಸ್ವಾಮಿಯನ್ನು ಕುಲದೇವರನ್ನಾಗಿ ಆರಾಧಿಸುತ್ತಿದ್ದರು. ಆದರೆ ಇವರು ಶಿವಭಕ್ತರಾಗಿದ್ದರು ಎಂದು ಕೆಲವು ಮಾಹಿತಿಗಳಿಂದ ತಿಳಿದುಬರುತ್ತದೆ. ಮೊದಲ ದೊರೆ ದಾದಯ್ಯನಾಯಕನಿಗೆ ಚಂದುಲಾ ಪರಮೇಶ್ವರಿಯ ಪರಮಾನುಗ್ರಹವಿದ್ದು ದೇವರಲ್ಲಿ ಭಕ್ತಿಯನ್ನಿಟ್ಟು ಪ್ರಜಾವಾತ್ಸಲ್ಯದಿಂದ ರಾಜ್ಯಭಾರ ಮಾಡುತ್ತಿದ್ದನು.

ದಾದಯ್ಯನಾಯಕ ಒಮ್ಮೆ ಬೇಟೆಯಾಡುತ್ತಿದ್ದಾಗ ನಾಯಿಯನ್ನು ಹೆದರಿಸಿದ ಒಂದು ಮೊಲಕ್ಕೆ ಬೆನ್ನು ಹತ್ತಲು ಅದು ಹುತ್ತದಲ್ಲಿ ಅಡಗಿತು. ಆಗ ಹುತ್ತವನ್ನು ಬಗೆಯಲು ಅಲ್ಲಿ ಒಂದು ಮೂರ್ತಿಶಿಲ್ಪ ಗೋಚರಿಸಿತು. ಈ ಮೂರ್ತಿ ಶಿಲ್ಪವೇ ಈಗಿನ ಕೋಟೆ ಹನುಮಂತ ದೇವರು.[೧೩೮] ದಾದಯ್ಯನಾಯಕನು ಬಾಗಳಿಯ ಕಲ್ಲಿನಾಥ ದೇವರ ಸನ್ನಿಧಿಯಲ್ಲಿ ಗುರು ಸ್ವಾಮಿಗೂ ಮಾತಾಪಿತೃಗಳಿಗೂ ಪುಣ್ಯವಾಗಲೆಂದು ಹಾಗೂ ಸಮಸ್ತ ಪ್ರಜೆಗಳಿಗೂ ಸುಖ ಪ್ರಾಪ್ತಿಯಾಗಬೇಕೆಂದು ಕುರುಬರ ಮೇಲಿನ ಕುರಿತೆರಿಗೆಯನ್ನು ಮನ್ನಾಮಾಡಿ ದಾನ-ಧರ್ಮ ಮಾಡಿದನೆಂದು ಕೊಟ್ಟೂರು ಪಟ್ಟಣದ ಶಿಲಾಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ ಹರನ ಕೃಪೆಯಿಂದ ಬಾಗಳಿ ಮತ್ತು ನೀಲಗುಂದಗಳ ಒಡೆಯನಾದನೆಂದು ತಿಳಿದುಬರುವುದರಿಂದ ಸಹಜವಾಗಿ ಶಿವನಲ್ಲಿ ಅನನ್ಯ ಭಕ್ತಿಯನ್ನು ಹೊಂದಿದ್ದನು. ಜೊತೆಗೆ ಮತ್ತೊಂದು ಐತಿಹ್ಯ ಇದಕ್ಕೆ ಪ್ರೇರಣೆ ಕೂಡ ನೀಡುತ್ತದೆ.

ಒಂದು ದಿನ ದಾದಯ್ಯನಾಯಕನ ಕನಸಿನಲ್ಲಿ ಪರಮೇಶ್ವರನು ಬಂದು, ಕುಮಾರ ತುಂಗಭದ್ರಾ ನದಿಯನ್ನು ದಾಟಿ ಬಾಗಳಿ ಎಂಬ ಪುಣ್ಯಕ್ಷೇತ್ರಕ್ಕೆ ಹೋಗಿ ನನ್ನಲ್ಲಿ ವಿಶ್ವಾಸವಿಟ್ಟು ನನ್ನ ಆಜ್ಞೆಯ ಮೇರೆಗೆ ನನ್ನ ಹೆಸರಿನಿಂದ ಮತ್ತೊಂದು ಪಟ್ಟಣವನ್ನು ಕಟ್ಟಿಕೊಂಡು ಐಶ್ವರ್ಯವಂತರಾಗಿ ಬಾಳಿರಿ ಎಂದು ತಿಳಿಸಿದನಂತೆ. ಹಾಗಾಗಿ ದಾದಯ್ಯನಾಯಕ ಆಡಳಿತ ನಡೆಸುವ ಕೇಂದ್ರಕ್ಕೆ ಹರಪುರ, ಹರಪುರಿ ಎಂದು ಕರೆಯಲಾಯಿತಂತೆ. ನಂತರ ಇದು ಹರನ ಹರಕೆಯಿಂದ ಹಳ್ಳಿಯಾದ್ದರಿಂದ ಹರಪನಹಳ್ಳಿ ಎಂದು ಹೆಸರಾಗಿ ದಿನದಿನಕ್ಕೆ ರಾಜಧಾನಿಯಾಗಿ

ಬೆಳೆಯಿತೆಂದು ತಿಳಿದುಬರುತ್ತದೆ. ನಂತರದ ದಿನಗಳಲ್ಲಿ ತಮ್ಮ ಕುಲಸ್ವಾಮಿ ಬಲಭೀಮನು ದಾದಯ್ಯನಾಯಕನೊಂದಿಲ್ಲದೆ ಧೈರ್ಯವಾಗುವುದಿಲ್ಲವೆಂದು ಪ್ರತಿದಿನ ಶ್ರೀ ಮಂದಲಗಟ್ಟೆ ಪ್ರಾಣೇಶನ ದರ್ಶನ ಮಾಡಿಕೊಂಡು ಬಂದ ನಂತರವೇ ಊಟ ಮಾಡುತ್ತಿದ್ದನಂತೆ. ಹಾಗಾಗಿ ಪ್ರಾಣೇಶನ ದಯೆಯಲ್ಲಾ ದಾದಯ್ಯನಾಯಕನ ಮೇಲಾಯಿತು. ಈ ಮೇಲಿನ ಎಲ್ಲಾ ಐತಿಹ್ಯಗಳಿಂದ ದಾದೇಯ್ಯನಾಯಕ ಶಿವಭಕ್ತನಾಗಿದ್ದನೆಂದು ತಿಳಿದುಬರುತ್ತದೆ.

ಹರಪನಹಳ್ಳಿಯ ಮೈದೂರು ಗ್ರಾಮದಲ್ಲಿ ಎತ್ತು-ಎಮ್ಮೆ-ದನಕರುಗಳಿಗೆ ಕಾಯಿಲೆ ಉಂಟಾದರೆ ಪಶುವನ್ನು ಗೌಡರು ಕಟ್ಟುವ ಗೋದಲಿಗೆ ಕಟ್ಟುತ್ತಿದ್ದರು. ಹೀಗೆ ಎರಡು ದಿನಗಳ ಕಾಲ ಕಟ್ಟಿದರೆ ಅವುಗಳ ರೋಗ ನಿವಾರಣೆಯಾಗುವುದು ಎಂದು ಜನರಾಡುವ ಮಾತುಗಳಿಂದ ನಾಯಕರಿಗೆ ಗೊತ್ತಾಯಿತು. ದಾದಯ್ಯನಾಯಕ ಮೈದೂರಿಗೆ ತೆರಳಿ ಗೌಡರ ಗೋದಲಿಯನ್ನು ಅಗೆಸಿದನು. ಗೋದಲಿಯ ಅಡಿಯಲ್ಲಿ ಕಲ್ಲಿನ ವೆಂಕಟೇಶಮೂರ್ತಿ ದೊರೆಯಿತು. ಆ ಮೂರ್ತಿಯನ್ನು ಹರಪನಹಳ್ಳಿಗೆ ಸಾಗಿಸಿ ಈಗೀನ ಹಳೇ ಬಸ್ ನಿಲ್ದಾಣದಲ್ಲಿ ಒಂದು ದೇವಸ್ಥಾನ ನಿರ್ಮಿಸಿ ಅದರಲ್ಲಿ ಮೂರ್ತಿ ಸ್ಥಾಪಿಸಲು ಯೋಚಿಸಿದನು. ಆದರೆ ಹರಪನಹಳ್ಳಿಗೆ ಹೋಗುವ ಮಾರ್ಗದಲ್ಲಿ ಮೂರ್ತಿಯನ್ನು ಸಾಗಿಸುವಾಗ ಬಂಡಿಯ ಅಚ್ಚು ಮುರಿದುಬಿದ್ದಿತು. ಅಂದು ರಾತ್ರಿ ಅರಸನ ಕನಸಿನಲ್ಲಿ ದೇವರು ಬಂದು ಅಲ್ಲಿಯೇ ನೆಲೆಸುವುದಾಗಿ ಸೂಚಿಸಿದಂತಾಗಲು ಅಲ್ಲಿಯೇ ದೇವಾಲಯವನ್ನು ನಿರ್ಮಿಸಿದನು. ಆ ದೇವಾಲಯ ನಿರ್ಮಿಸಿದ ಸ್ವಲ್ಪ ದಿನಗಳ ನಂತರ ಅದೇ ಮೈದೂರು ಗ್ರಾಮದಲ್ಲಿ ಲಕ್ಷ್ಮಿದೇವಿಯ ಮೂರ್ತಿ ದೊರೆಯಿತು. ಆ ಮೂರ್ತಿಯನ್ನು ತಂದು ವೆಂಕಟೇಶ್ವರ ದೇವಸ್ಥಾನದ ಪಕ್ಕದಲ್ಲಿ ಸ್ಥಾಪಿಸಿದನು. ಈ ದೇವಾಲಯದ ಅಕ್ಕಪಕ್ಕದಲ್ಲಿ ಅರ್ಚಕರು ಮಾತ್ರ ವಾಸಿಸುತ್ತಿದ್ದರು. ಕೆಲಕಾಲದ ನಂತರ ಕೆಲವು ಹೊಸ ಮನೆಗಳು ನಿರ್ಮಾಣವಾಗಿರುವುದು ಕಂಡುಬರುತ್ತದೆ. ಇದು ಗ್ರಾಮವಾಗಿ ಪರಿವರ್ತನೆಗೊಂಡು ಈಗ ಈ ಗ್ರಾಮವನ್ನು ದೇವರ ತಿಮ್ಮಲಾಪುರ ಗ್ರಾಮವೆಂದು ಕರೆಯಲಾಗುತ್ತಿದೆ. ಹಾಗೇ ಈ ದೇವಾಲಯಗಳಿಗೆ ಸಂಬಂಧಿಸಿದಂತೆ ಪ್ರತಿವರ್ಷ ರಥೋತ್ಸವ ನಡೆಯುತ್ತದೆ. ಶ್ರೀವೆಂಕಟೇಶ್ವರನಿಗಾಗಿ ನಿರ್ಮಿಸಿದ ಕಟ್ಟಡ ದೇವರಿಲ್ಲದೆ ಖಾಲಿಯಾಗಿ ಉಳಿದಿತ್ತು. ಆಗಿನ ಕಾಲದಲ್ಲಿ ಕುರುಸಾಣಿ ಕಲ್ಲುಗಳನ್ನು ವ್ಯಾಪಾರಿಗಳು ಬೇರೆ ಬೇರೆ ಸ್ಥಳದಿಂದ ಹರಪನಹಳ್ಳಿ ಮಾರ್ಗವಾಗಿ ಹರಿಹರಕ್ಕೆ ಕತ್ತೆಗಳ ಮೇಲೆ ಸಾಗಿಸುತ್ತಿದ್ದರು. ಈ ಸಂದರ್ಭದಲ್ಲಿ ಈ ತಂಡದವರು ಹರಪನಹಳ್ಳಿಯಲ್ಲಿ ಉಳಿದು ಬೆಳಗಿನ ಜಾವದಲ್ಲಿ ಸಬರದ ಕತ್ತೆಗಳನ್ನು ಸಾಗಿಸಿದರು. ಆಗ ಒಂದು ಕಲ್ಲು ಅಲ್ಲೇ ಜಾರಿ ಬಿತ್ತು. ಆ ಕಲ್ಲಿನ ಮೇಲೆ ಶ್ರೀ ವೀರಭದ್ರೇಶ್ವರ ಮೂರ್ತಿಯ ರೇಖಾಚಿತ್ರ ಕಾಣುತ್ತಿತ್ತು. ದಿವಾನ ಹಂಪರಸಪ್ಪನ ಕನಸಿನಲ್ಲಿ ಶ್ರೀ ವೀರಭದ್ರ ದೇವರ ಸೂಚನೆ ಆಗಲು ಅರಸನು ಆ ಮೂರ್ತಿಯನ್ನು ದೇವರಿಲ್ಲದ ಕಟ್ಟಡದಲ್ಲಿ ಪ್ರತಿಷ್ಠಾಪನೆ ಮಾಡಿದನು. ಅಂದಿನಿಂದ ಇಂದಿನವರೆಗೂ ಪ್ರತಿವರ್ಷ ಗೌರಿ ಹುಣ್ಣಿಮೆಯಲ್ಲಿ ರಥೋತ್ಸವ ನಡೆಯುತ್ತದೆ. ಅರಸರು ನೇಮಿಸಿದ ಕೆಲವು ಮಠಗಳ ಸ್ವಾಮಿಗಳು ಈಗಲೂ

ಒಂದೊಂದು ಕಾರ್ಯದಲ್ಲಿ ಪಾಲ್ಗೊಳ್ಳುತ್ತಾರೆ. ೧೯೭೩ರಲ್ಲಿ ಆ ದೇವಸ್ಥಾನದಲ್ಲಿ ಒಂದು ಹೊಸ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಹಳೆಯ ವೀರಭದ್ರ ದೇವರ ಮೂರ್ತಿಯನ್ನು ಹೊಸ ಮೂರ್ತಿಯ ತಳದಲ್ಲಿ ಹಾಕಿರುವರು ಎಂದು ಆ ಭಾಗದ ಹಿರಿಯರು ಮಾಹಿತಿ ತಿಳಿಸುತ್ತಾರೆ. ಈ ದೇವಾಲಯದ ಸುತ್ತಮುತ್ತಲಿನ ಪ್ರದೇಶಕ್ಕೆ ಸಬರದಕೇರಿ ಎಂದು ಹೆಸರಾಯಿತು.

ಹರಪನಹಳ್ಳಿಯ ಪಾಳೆಯಗಾರರು ಪ್ರತಿವರ್ಷ ಮೈಲಾರ ಜಾತ್ರೆಗೆ ಹೋಗುತ್ತಿದ್ದರು. ಒಂದು ಸಾರಿ ಮೈಲಾರ ದೇವರ ಧರ್ಮದರ್ಶಿಗಳು ಅರಸರನ್ನು ಅವಮಾನ ಮಾಡಿದರು. ಇದರಿಂದ ಕೋಪಗೊಂಡ ದಾದಯ್ಯನಾಯಕನು ಹರಪನಹಳ್ಳಿಯಲ್ಲಿ ಒಂದು ದೇವಾಲಯವನ್ನು ನಿರ್ಮಿಸಿ ಶ್ರೀಮೈಲಾರ ಲಿಂಗಸ್ವಾಮಿಯ ಮೂರ್ತಿಯನ್ನು ಸ್ಥಾಪಿಸಿದನು. ಅಂದಿನಿಂದ ಪ್ರತಿವರ್ಷ ಇಲ್ಲಿ ಜಾತ್ರೆ ನಡೆಯಲಾರಂಭಿಸಿತು. ಗೊರವನು ಬಿಲ್ಲು ಏರಿ ಕಾರಣಿಕ ಹೇಳುವುದರೊಂದಿಗೆ ವಿಜೃಂಭಣೆಯಿಂದ ಜಾತ್ರೆ ಜರುಗುವುದು.

ಹೀಗೆ ಹರಪನಹಳ್ಳಿ ಪಾಳೆಯಗಾರರು ಅನೇಕ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಈ ಮೇಲಿನ ಐತಿಹ್ಯಗಳಿಂದ ನಮಗೆ ಹಲವಾರು ವಿಷಯಗಳು ತಿಳಿದುಬರುತ್ತವೆ.

ಹರಪನಹಳ್ಳಿ ಪಾಳೆಯಗಾರ ಮೊದಲ ಬಸವಂತನಾಯಕ ವೀರಶೈವ ಲಿಂಗದೀಕ್ಷೆಯನ್ನು ಪಡೆದುಕೊಂಡು ಕೊಟ್ರಪ್ಪನಾಯಕ ಎಂದು ಹೆಸರನ್ನು ಬದಲಾಯಿಸಿಕೊಂಡನು. ಇದಕ್ಕೆ ಸಂಬಂಧಿಸಿದ ದಾಖಲೆ ದೊರಕುತ್ತದೆ.

ಫ.ಗು.ಹಳಕಟ್ಟಿಯವರು ಬರೆದ "ಸಾರಂಗ ಮಠಾಧೀಶ್ವರರು" ಎಂಬ ಕೃತಿಯಲ್ಲಿ ಶಿವಸಂಗಪ್ಪಯ್ಯನು ಬಳ್ಳಾರಿ ಜಿಲ್ಲೆಯ ಕೊಟ್ಟೂರು ಗ್ರಾಮಕ್ಕೆ ಬಂದ ಮಾಹಿತಿ ಇದೆ. ಬಾಳೆಹಳ್ಳಿ ಸಂಸ್ಥಾನಾಧಿಪತಿಗಳಿಂದ ಚನ್ನವೀರ ಸ್ವಾಮಿ, ಪರ್ವತ ಸಿಂಹಾಸನಾಧಿ ಪತಿಗಳಿಂದ ವೀರಭಿಕ್ಷಾವರ್ತಿ ಸ್ವಾಮಿ ಈ ಮೂರು ಜನರು ಹರಪನಹಳ್ಳಿ ಪಾಳೆಯಗಾರನಾದ ಮೊದಲ ಬಸವಂತ ನಾಯಕನಿಗೆ ಲಿಂಗದೀಕ್ಷೆ ಮಾಡಿದರು ಎಂದು ತಿಳಿಸುತ್ತಾರೆ.

ಹರಪನಹಳ್ಳಿಯಲ್ಲಿ ದೊರೆತ ದಾಖಲೆಯ ಪ್ರಕಾರ ಕಲ್ಯಾಣಪುರ ಪ್ರಾಂತ್ಯದಿಂದ ಮುಸ್ತೂರು ಮಳವಳ್ಳಿಗಳಿಂದ ಮಹಾಮಹಿರಾದ ಗಂಗಾಧರ ಸ್ವಾಮಿ ಒಡೆಯರು ಹರಪನಹಳ್ಳಿಯ ಮೊದಲ ಬಸವಂತನಾಯಕನಿಗೆ ಮಹಾಮಹಿಮೆಗಳನ್ನು ತೋರಿಸಿ ಪುರಾಣ ಲಿಂಗ ಸಾಮರಸ್ಯವನ್ನು ಬೋಧಿಸಿದರು. ಈ ಪ್ರಕಾರಗಳಿಂದ ಪ್ರೇರಿತನಾದ ಮೊದಲ ಬಸವಂತನಾಯಕ ತನಗೆ ಲಿಂಗದೀಕ್ಷೆ ನೀಡಬೇಕೆಂದು ಬೇಡಿಕೊಂಡನು. ಅದರಂತೆ ಸುಲಿಕಲ್ಲಪ್ಪ ಸ್ವಾಮಿ, ಗುರುಪಾದ ಸ್ವಾಮಿ, ಶಾಂತವೀರ ಸ್ವಾಮಿ, ಚನ್ನವೀರ ಸ್ವಾಮಿ, ಮಡಿವಾಳ ಸ್ವಾಮಿ, ಬಸವಸ್ವಾಮಿ, ಮಲ್ಲಿಕಾರ್ಜುನ ಸ್ವಾಮಿ, ಕಾಡುಸಿದ್ದ ಸ್ವಾಮಿ ಮುಂತಾದವರು ಸೇರಿಕೊಂಡು ಬಸವಂತನಾಯಕನನ್ನು ಹಂಪೆಗೆ ಕರೆದುಕೊಂಡು ಹೋಗಿ ಲಿಂಗದೀಕ್ಷೆ ಮಾಡಿ ಕೊಟ್ರಪ್ಪನಾಯಕ ಎಂದು ಹೆಸರು ಮರುನಾಮಕರಣ ಮಾಡಿದರು ಎಂದು ತಿಳಿದುಬರುತ್ತದೆ.

ಇನ್ನೊಂದು ಐತಿಹ್ಯದ ಪ್ರಕಾರ ಹರಪನಹಳ್ಳಿ ಪಾಳೆಯಗಾರರಿಗೂ ಕೆಳದಿ ಪಾಳೆಯಗಾರರಿಗೂ ಸ್ನೇಹವಿತ್ತು. ಕೆಳದಿ ಅರಸರು ವೀರಶೈವರಾಗಿದ್ದರಿಂದ ಅವರ ಸ್ನೇಹ ಸ್ವಭಾವಕ್ಕೆ ಒಳಪಟ್ಟು ಹರಪನಹಳ್ಳಿ ಅರಸರು ವೀರಶೈವ ಲಿಂಗದೀಕ್ಷೆ ಪಡೆದಿರಬೇಕೆಂದು ಕೆಲವರು ಊಹೆ ಮಾಡುತ್ತಾರೆ.

ಜೊತೆಗೆ ಹರಪನಹಳ್ಳಿಯ ಅರಸರಿಗೆ ಕೊಟ್ಟೂರಿನ ಬಸವೇಶ್ವರ ಸ್ವಾಮಿಗಳ ಮೇಲೆ ಹೆಚ್ಚು ಭಕ್ತಿ ವಿಶ್ವಾಸವಿತ್ತು. ಕೊಟ್ರೇಶನ ಪ್ರಭಾವದಿಂದ ವೀರಶೈವರಾಗಿರಬೇಕೆಂದು ಕೆಲವರು ವಾದವಾಗಿದೆ.

ಈ ಮೇಲಿನ ಎಲ್ಲಾ ಹೇಳಿಕೆಗಳಿಗೆ ವ್ಯತಿರಿಕ್ತವಾಗಿ ಕುತೂಹಲಕರವಾದ ಇನ್ನೊಂದು ಐತಿಹ್ಯ ದೊರೆತಿದೆ. ಈ ಐತಿಹ್ಯದ ಪ್ರಕಾರ ಬೇಡನಾದ ಬಸವಂತನಾಯಕ ವೀರಶೈವನಾಗಿದ್ದರ ಹಿನ್ನೆಲೆ ಮತ್ತು ಪರಿಣಾಮಗಳ ಮೇಲೆ ಹೊಸ ಬೆಳಕನ್ನು ಬೀರುತ್ತದೆ. ಬಸವಂತನಾಯಕನು ಮುಮ್ಮಡಿನಾಯಕನ ತರುವಾಯ ಅಧಿಕಾರಕ್ಕೆ ಬಂದನು. ಈತನು ಬಾಗಳಿಯ ಕಲ್ಲೇಶ್ವರ ದೇವಸ್ಥಾನದಲ್ಲಿ ಬಾಗಳಿಯ ಗೌಡನಾದ ದೊಡ್ಡಸಿದ್ದನಗೌಡನ ಜೊತೆ ಜೂಜಾಡಿದನು. ಸೇವಕಿ ಮತ್ತು ತನ್ನ ಇಬ್ಬರು ಸೋದರಿಯರಾದ ಲಕ್ಕವ್ವ ಮತ್ತು ಮಾದವ್ವ ಗೌಡಸಾನಿಯರನ್ನು ಅರಸನಿಗೆ ಕೊಟ್ಟು ವಿವಾಹ ಮಾಡಿಸಬೇಕು ಎಂಬ ಈ ಒಪ್ಪಂದದೊಂದಿಗೆ ಆಟ ಪ್ರಾರಂಭವಾಗಿದ್ದರಿಂದ ಗೆಲುವು ಅರಸನದಾಯಿತು. ಒಪ್ಪಂದದ ಪ್ರಕಾರ ಮದುವೆ ಮಾಡಿಸಬೇಕಿತ್ತು. ಆದರೆ ಗೌಡ ಆ ಒಪ್ಪಂದವನ್ನು ಮುರಿದನು. ಕೊನೆಗೆ ಕೊಟ್ರಪ್ಪನಾಯಕ ವೀರಶೈವನಾಗಿ ಲಿಂಗದೀಕ್ಷೆ ಪಡೆದು ವಿವಾಹ ಮಾಡಿಸುವಂತೆ ಕೇಳಿಕೊಂಡನು. ಗೌಡನ ಸಂಬಂಧಿಕರು ಕೊಟ್ರಪ್ಪನಾಯಕನಿಗೆ ಹೆಣ್ಣನ್ನು ಕೊಡಲು ನಿರಾಕರಿಸಿದರು. ಒಂದು ದಿನ ಗೌಡನ ಆಮಂತ್ರಣ ಮೇರೆಗೆ ಗೌಡನ ಮನೆಗೆ ಊಟಕ್ಕೆ ಹೋದಾಗ ಕೊಟ್ರಪ್ಪನಾಯಕನನ್ನು ಗೌಡನ ವಾಸಿಯಲ್ಲಿದ್ದ ದೊಡ್ಡ ಹಗೇವಿನಲ್ಲಿ ತಳ್ಳಿ ಕಲ್ಲು ಹಾಕಿ ಮುಚ್ಚಿದರು. ಈ ವಿಷಯ ಹರಪನಹಳ್ಳಿ ಪಾಳೆಯಪಟ್ಟುಗಳಿಗೆ ಹಾಗೂ ಅರಮನೆಯ ಅರಸನ ಅಂಗರಕ್ಷಕನಿಗೆ ತಿಳಿಸಿದನು. ಅಲ್ಲಿಂದ ಸೈನ್ಯವೆಲ್ಲ ಬಾಗಳಿಗೆ ಬರತೊಡಗಿತು. ಅಷ್ಟರಲ್ಲಿ ಗೌಡನ ಮನೆತನದವರು ತುಂಗಭದ್ರಾ ನದಿಯನ್ನು ದಾಟಿ ಗದುಗಿನ ಬಳಿಗಾನೂರಿಗೆ ಬಂದಿದ್ದರು. ಹೀಗೆ ಗೌಡನ ಸಂಬಂಧಿಗಳು ಹಾಗೂ ವಂಶಸ್ಥರು ಬೇರೆ ಬೇರೆ ಊರಿಗೆ ತೆರಳಿ ನೆಲೆಸಿದರು. ಹೀಗೆ ಕೊಟ್ರಪ್ಪನಾಯಕ ವೀರಶೈವ ಧರ್ಮಕ್ಕೆ ಮತಾಂತರ ಆಗಿದ್ದನು ಎಂಬುದಕ್ಕೆ ಹರಪನಹಳ್ಳಿ ಪ್ರದೇಶದಲ್ಲಿ ಈ ಬಗ್ಗೆ ಅನೇಕ ಐತಿಹ್ಯಗಳು ದೊರೆಯುತ್ತವೆ.

ಹರಪನಹಳ್ಳಿ ಪಾಳೆಯಗಾರರು ಕೊಟ್ಟೂರು ಬಸವೇಶ್ವರರ ಅನನ್ಯ ಭಕ್ತರಾಗಿದ್ದರು. ಬಸವಂತಪ್ಪನಾಯಕನಿಗೆ ಕೊಟ್ಟೂರು ಬಸವೇಶ್ವರನ ಮೇಲೆ ಅಪಾರ ಭಕ್ತಿಯಿತ್ತು. ತನ್ನ ಆಡಳಿತ ಪ್ರದೇಶದಲ್ಲಿ ಅನೇಕ ಬಸಾಪುರ ಗ್ರಾಮಗಳನ್ನು ನಿರ್ಮಿಸಿರುವುದು ಆತನ ಭಕ್ತಿಯನ್ನು ಸಾಕ್ಷೀಕರಿಸುತ್ತವೆ. ಈ ಪಾಳೆಯಗಾರರು ಕೊಟ್ಟೂರು ಬಸವೇಶ್ವರರ ಮೇಲಿನ ಭಕ್ತಿಯಿಂದ ಕೊಟ್ರಪ್ಪನಾಯಕ, ಮರಿಕೊಟ್ರಪ್ಪ ನಾಯಕ, ವೀರಬಸಪ್ಪ ನಾಯಕ, ಮರಿಬಸಪ್ಪ ನಾಯಕ

ಮುಂತಾದ ಹೆಸರುಗಳನ್ನು ಇಟ್ಟುಕೊಂಡಿರುವುದನ್ನು ನೋಡಬಹುದು. ಸೋಮಶೇಖರನಾಯಕನ ಪತ್ನಿ ಸೋಮಮ್ಮಾಜಿ ವೀರಶೈವ ಧರ್ಮದ ಅನುಯಾಯಿಯಾಗಿದ್ದಳು ಎಂದು ದಾಖಲೆಗಳಿಂದ ತಿಳಿದುಬರುತ್ತದೆ.

ಹರಪನಹಳ್ಳಿ ಪಾಳೆಯಗಾರರು ಶೈವಧರ್ಮದ ಜೊತೆಗೆ ವೈಷ್ಣವಧರ್ಮಕ್ಕೂ ರಾಜಾಶ್ರಯ ನೀಡಿದ್ದರು. ದಾದಯ್ಯನಾಯಕ ವೆಂಕಟೇಶ್ವರ ಮೂರ್ತಿಯನ್ನು ಸ್ಥಾಪಿಸಿದ್ದನ್ನು ನಾವು ತಿಳಿದುಕೊಳ್ಳಬಹುದು. ದೇವರತಿಮ್ಮಲಾಪುರದಲ್ಲಿರುವ ಈ ದೇವಾಲಯವನ್ನು ಈಗ ಲಕ್ಷ್ಮೀವೆಂಕಟೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ.

ಹೊಯ್ಸಳರ ಕಾಲದಲ್ಲಿ ರಾಮಾನುಜಾಚಾರ್ಯರು ತಮಿಳುನಾಡಿನಿಂದ ಕರ್ನಾಟಕಕ್ಕೆ ಬಂದ ನಂತರ ವೈಷ್ಣವ ಧರ್ಮ ಇಲ್ಲಿ ಹೆಚ್ಚು ಪ್ರಚಾರಕ್ಕೆ ಬಂದಿತು. ನಂತರ ಕಾಲದಲ್ಲಿ ಹರಪನಹಳ್ಳಿ ಪಾಳೆಯಪಟ್ಟಿನಲ್ಲಿ ವೈಷ್ಣವಧರ್ಮದ ಆರಾಧನೆ, ಧಾರ್ಮಿಕ ಪರಂಪರೆ ಅಧ್ಯಾಪನೆಗಳು ನಡೆಯುತ್ತಿದ್ದವು. ಹಲವು ರೀತಿಯ ವಿಷ್ಣು ದೇವಾಲಯಗಳು ಈ ನೆಲೆಗಳಲ್ಲಿ ನಿರ್ಮಾಣಗೊಂಡವು. ಈ ಪಾಳೆಯಪಟ್ಟನಾದ್ಯಂತ ಜಾತ್ರೆ, ಉತ್ಸವಗಳು ದೇವಾಲಯಗಳಲ್ಲಿ ನಡೆಯುತ್ತಿದ್ದವು ಎಂದು ತಿಳಿದುಬರುತ್ತದೆ. ಲಕ್ಷ್ಮಿವೆಂಕಟೇಶ್ವರ ದೇವಾಲಯ, ಕಣ್ಣು ಕೊಟ್ಟಪ್ಪ ದೇವಾಲಯ ಮುಂತಾದ ಅನೇಕ ವೈಷ್ಣವಧರ್ಮಕ್ಕೆ ಸೇರಿದ ದೇವಾಲಯಗಳನ್ನು ಕಾಣಬಹುದು.

ಹರಪನಹಳ್ಳಿ ಪಾಳೆಯಗಾರರು ವೈದಿಕ ಧರ್ಮಕ್ಕೆ ಪ್ರೋತ್ಸಾಹ ನೀಡಿದ್ದರು. ತಮ್ಮ ಆಸ್ಥಾನದಲ್ಲಿ ಬ್ರಾಹ್ಮಣರಿಗೆ ಉನ್ನತವಾದ ಸ್ಥಾನಮಾನವನ್ನು ನೀಡಿದ್ದರು. ಇವರ ಅಸ್ಥಾನದಲ್ಲಿದ್ದ ಬ್ರಾಹ್ಮಣರು, ದಿವಾನರು, ರಾಯಸದವರು, ಜೋಯಿಸರು, ಪುರೋಹಿತರು, ವೈದ್ಯರು ಮುಂತಾದ ಅನೇಕ ಪ್ರಮುಖ ಹುದ್ದೆಗಳಲ್ಲಿ ಇದ್ದರು. ಈ ಬ್ರಾಹ್ಮಣರು ಶಾಸ್ತ್ರ, ಪುರಾಣ, ಆಡಳಿತ, ಅರ್ಥಶಾಸ್ತ್ರ ಮುಂತಾದ ವಿಷಯಗಳಲ್ಲಿ ಪಾಂಡಿತ್ಯವನ್ನು ಪಡೆದುಕೊಂಡಿದ್ದರು. ಇವರು ಅರಸರಿಗೆ ರಾಜ್ಯಾಡಳಿತದಲ್ಲಿ ನೆರವು, ಸಲಹೆ, ಸಹಕಾರ ಕೊಡುತ್ತಿದ್ದರು. ಆದುದರಿಂದ ಹರಪನಹಳ್ಳಿ ಪಾಳೆಯಗಾರರು ಅನೇಕ ಬ್ರಾಹ್ಮಣರಿಗೆ ದಾನ-ದತ್ತಿಗಳನ್ನು ನೀಡಿರುವುದು ಹಲವು ಶಾಸನಗಳಿಂದ ತಿಳಿದುಬರುತ್ತದೆ. ಅರಸರು ಯುದ್ಧಕ್ಕೆ ಹೊರಡುವಾಗ ಜಯಶಾಲಿಗಳಾಗಿ ಬನ್ನಿ ಎಂದು ಆಶೀರ್ವಾದ ಮಾಡುತ್ತಿದ್ದರು. ಆದುದರಿಂದ ಇವರಿಗೆ ಅಪಾರ ಮೊತ್ತದ ದಾನವನ್ನು ಕೊಡುತ್ತಿದ್ದರು.

ಉಚ್ಚಂಗಿದುರ್ಗದ ಉಚ್ಚಂಗಮ್ಮ ಇವರ ಕುಲದೇವತೆಯಾಗಿದ್ದಳು. ದಾದಯ್ಯನಾಯಕ ಇಲ್ಲಿ ಅರಮನೆಯನ್ನು ಕಟ್ಟಿಸಿ ಆಡಳಿತ ನಡೆಸುತ್ತಿದ್ದನು. ಇಲ್ಲಿ ಯುಗಾದಿ ಹಬ್ಬ, ದಸರಾ ಹಬ್ಬ, ಮತ್ತು ಹಿರೇ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಈ ಹಬ್ಬಗಳಿಗೆ ಬೇರೆ ಬೇರೆ ರಾಜ್ಯಗಳಿಂದ ಜನರು ಆಗಮಿಸುತ್ತಾರೆ.

ಉಚ್ಚಂಗಿದುರ್ಗದ ಸಣ್ಣ ಪರ್ವತದಲ್ಲಿ ಶಮೀ ವೃಕ್ಷವಿದೆ. ಈ ಪಾಳೆಯಗಾರರು ವಿಜಯದಶಮಿ ದಿನ ಆ ಗುಡ್ಡಕ್ಕೆ ಸೀಮೋಲ್ಲಂಘನೆ ಮಾಡಿ ಪೂಜೆಗಳನ್ನು ಮಾಡಿಕೊಂಡು

ಬರುವ ಸಂಪ್ರದಾಯವಿತ್ತು. ಪಂಚಲೋಹದಿಂದ ನಿರ್ಮಿತವಾದ ಉಚ್ಚಂಗಮ್ಮನ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು ಬನ್ನಿ ಮುಡಿಯುವ ಕಾರ್ಯಕ್ರಮ ನಡೆಯುತ್ತದೆ. ಈ ಸಂದರ್ಭದಲ್ಲಿ ೩೬ ಅಂಗರಕ್ಷಕರ ಸೈನ್ಯ ಮತ್ತು ಇತರೆ ಸಮೂಹ ಮಾತ್ರ ಪಲ್ಲಕ್ಕಿಯೊಂದಿಗೆ ತೆರಳಿತ್ತು. ಚಿತ್ರದುರ್ಗದ ನಾಯಕರು ದಾಳಿ ಮಾಡಿ ಉತ್ಸವಮೂರ್ತಿಯನ್ನು ವಶಪಡಿಸಿಕೊಂಡು ಹೋದರು. ಈ ಸಮಯದಲ್ಲಿ ಮೊದಲ ಸೋಮಶೇಖರನಾಯಕ ಭೂಗರ್ಭದಲ್ಲಿರುವ ಲೋಹದ ಮೂರ್ತಿಯನ್ನು ಬನ್ನಿ ಮುಡಿಯುವ ಕಾರ್ಯಕ್ರಮವನ್ನು ನೆರವೇರಿಸಿದನು. ಆ ದಿನ ಸಂಜೆ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿಕೊಂಡು ವಿವಿಧ ವಾದ್ಯಮೇಳಗಳೊಂದಿಗೆ ಬೆಟ್ಟದಿಂದ ಕೆಳಗೆ ಹೊನ್ನೆಹೊಂಡದ ಎದುರು ಚೌತ್ ಮನೆಯ ಬನ್ನಿ ಮರಕ್ಕೆ ತರುತ್ತಾರೆ. ಬನ್ನಿಕಟ್ಟೆಯನ್ನು ಮೂರು ಸುತ್ತು ಪ್ರದಕ್ಷಿಣೆ ಹಾಕಿಸಿ ದೇವಿ ಕಟ್ಟೆಯ ಮೇಲೆ ಪವಡಿಸಿದ ನಂತರ ಪ್ರತಿವರ್ಷದ ಪದ್ಧತಿಯಂತೆ ದೇವಿಯ ಕೇಸರಿ ಬಣ್ಣದ ಧ್ವಜ ಹರಾಜು ನಡೆಯುತ್ತದೆ. ಹರಾಜಿನಲ್ಲಿ ದೇವಿಯ ಧ್ವಜ ತೆಗೆದುಕೊಂಡವರು ಹರಾಜಿನ ಮೊತ್ತ ಮತ್ತು ಹೊಸ ಧ್ವಜವನ್ನು ಬರುವ ವರ್ಷದ ದಸರಾ ದಿನದಂದು ತಂದು ಸಲ್ಲಿಸುತ್ತಾರೆ. ಇದಾದ ನಂತರ ಅರ್ಚಕರು ಬಿಲ್ಲನ್ನು ಹೆಗಲಿಗೆ ಏರಿಸಿ ಬಾಣಗಳನ್ನು ಹೊಡೆಯುವ ಪದ್ಧತಿಯಿದೆ. ಬಿಲ್ಲನ್ನು ಇಲ್ಲಿನ ವಂಶಪಾರಂಪರಿಕ ಅರ್ಚಕರು ಹೊಡೆಯುತ್ತಾರೆ. ಈ ಅರ್ಚಕರು ಆ ದಿನ ಉಪವಾಸದಲ್ಲಿರುತ್ತಾರೆ. ಒಟ್ಟು ಮೂರು ಬಾಣಗಳಲ್ಲಿ ೨ ಬಾಣಗಳನ್ನು ಹೊಡೆಯುತ್ತಾರೆ. ಬಾಣ ಮೇಲಕ್ಕೆ ಹೊದಂತೆ ಉತ್ತಮ ಮಳೆ ಬೆಳೆಯಾಗುತ್ತದೆ ಎಂಬ ನಂಬಿಕೆ ಇದೆ.

ಹಿರೇಹಬ್ಬವನ್ನು ೩, ೫, ಅಥವಾ ೯ ವರ್ಷಕ್ಕೊಮ್ಮೆ ಆಚರಿಸಲಾಗುತ್ತದೆ. ಹೆಸರೇ ಸೂಚಿಸುವಂತೆ ಇದು ದೊಡ್ಡದಾದ ಹಬ್ಬ. ಇದನ್ನು ಉತ್ತಮ ಮಳೆ ಬೆಳೆ ಆದಾಗ ಮಾತ್ರ ಆಚರಣೆ ಮಾಡುವ ಪದ್ಧತಿ ಇದೆ. ಫೆಬ್ರವರಿ ಅಥವಾ ಮಾರ್ಚ್ ತಿಂಗಳಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ. ಸಮಾಜದ ಎಲ್ಲಾ ವರ್ಗದವರು ಈ ಹಬ್ಬವನ್ನು ಆಚರಿಸುತ್ತಾರೆ. ದೇವಿಗೆ ಕೋಣಗಳನ್ನು ಬಲಿ ಕೊಟ್ಟು ವಿಶೇಷ ಪೂಜೆ ಸಲ್ಲಿಸುತ್ತಾರೆ. ಈ ಕೋಣಗಳನ್ನು ಹರಿಜನರು ೧೮ ದಿನಗಳ ಕಾಲ ಉಪಚರಿಸುತ್ತಾರೆ.

ಹರಪನಹಳ್ಳಿ ಪಾಳೆಯಗಾರರ ಮತ್ತೊಂದು ಆರಾಧನಾ ದೇವರೆಂದರೆ ಆಂಜನೇಯ. ತಮ್ಮ ಆಡಳಿತ ಪ್ರದೇಶಗಳ ವ್ಯಾಪ್ತಿಯಲ್ಲಿ ಅನೇಕ ಆಂಜನೇಯ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ದಾದಯ್ಯನಾಯಕ ೧೨ ಆಂಜನೇಯ ದೇವಾಲಯಗಳನ್ನು ನಿರ್ಮಾಣ ಮಾಡಿಸಿದ್ದನೆಂದು ತಿಳಿದುಬಂದಿದೆ.

ಆಂಜನೇಯ ದೇವಾಲಯಗಳು ಹರಪನಹಳ್ಳಿ ಪ್ರದೇಶದಲ್ಲಿ ಈಗಲೂ ಕಂಡುಬರುತ್ತವೆ. ಈ ಪಾಳೆಯಗಾರರು ಆಂಜನೇಯ ಸ್ವಾಮಿಯ ಪರಮ ಭಕ್ತರಾಗಿದ್ದರು ಎಂದು ತಿಳಿದುಬರುತ್ತದೆ. ಇಲ್ಲಿನ ಎಲ್ಲಾ ಕೋಟೆ ಕೊತ್ತಲುಗಳಲ್ಲಿ ಆಂಜನೇಯ ಸ್ವಾಮಿ ದೇವಾಲಯ ಇದ್ದೇ ಇರುತ್ತದೆ.

ಹಾಗೆ ಇಡೀ ಪಾಳೆಯಪಟ್ಟನಲ್ಲಿ ಆಂಜನೇಯನ ಸಣ್ಣ ಸಣ್ಣ ಗುಡಿಗಳು ಕಂಡುಬರುತ್ತವೆ. ವಿವಿಧ ಭಂಗಿಗಳಲ್ಲಿ ಮೂರ್ತಿಯನ್ನು ಕೆತ್ತಲಾಗಿದೆ. ಈ ಪಾಳೆಯಗಾರರು ಆಂಜನೇಯ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿರುವುದನ್ನು ನೋಡಬಹುದು.

ಹೀಗೆ ಹರಪನಹಳ್ಳಿ ಪಾಳೆಯಗಾರರು ಎಲ್ಲಾ ಮತ ಪಂಥಗಳಿಗೆ ಸಮಾನವಾದ ಪ್ರಾಶಸ್ತ್ಯವನ್ನು ನೀಡಿದ್ದರು. ಇವುಗಳ ಜೊತೆಗೆ ಬುಡಕಟ್ಟು ಸಂಪ್ರದಾಯ ಆಚರಣೆ ಪದ್ಧತಿಗಳನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಕಾಣಬಹುದು. ಹಬ್ಬ ಹರಿದಿನಗಳಲ್ಲಿ ಸಮಾಜದ ಲಿಂಗಾಯತರು, ಜಂಗಮರು, ಬ್ರಾಹ್ಮಣರು, ಹರಿಜನರು, ತಳವಾರರು, ನಾಯಕರು, ಬಾರೀಕರು, ಗಂಗಾಮತಸ್ಥರು, ಮಡಿವಾಳರು, ಕುಂಬಾರರು, ಕುರುಬರು, ಹಡಪದರು, ವಡ್ಡರು, ಅಕ್ಕಸಾಲಿಗರು ಇನ್ನೂ ಹಲವು ಜನಾಂಗದವರು ಭಾಗವಹಿಸುತ್ತಿದ್ದರು. ಈ ಹಬ್ಬ ಹರಿದಿನಗಳಲ್ಲಿ, ಜಾತ್ರೆಗಳಲ್ಲಿ ವಿಶೇಷವಾಗಿ, ಚೌಡಿಕೆ, ಶಹನಾಯಿ, ನಗಾರಿ, ಜಾಗಟೆ, ಡೊಳ್ಳು, ಸಮಾಳ, ಹಲಗೆ, ಕೋಲಾಟ, ಕಹಳೆ ಮುಂತಾದ ಹಲವು ಸಾಧನಗಳಿಂದ ಮನರಂಜನೆ ಕಾರ್ಯಕ್ರಮಗಳು ನಡೆಯುತ್ತಿದ್ದುದು ಕಂಡುಬರುತ್ತದೆ.

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಹೆಚ್ಚಾಗಿ ಆಂಜನೇಯ ದೇವಾಲಯ, ವೀರಭದ್ರ ದೇವಾಲಯ, ನೊಣ್ಣೇಶ್ವರ ದೇವಾಲಯ, ಜೈನ ದೇವಾಲಯಗಳು, ಶಿವ ದೇವಾಲಯ, ರಾಮಲಿಂಗೇಶ್ವರ ದೇವಾಲಯ, ಬಸವಣ್ಣ ದೇವಾಲಯ, ವಿರೂಪಾಕ್ಷ ದೇವಾಲಯ, ಉಚ್ಚಂಗೆಮ್ಮನ ದೇವಾಲಯ, ದುರ್ಗಮ್ಮ ದೇವಾಲಯ, ರೇವಣಸಿದ್ಧೇಶ್ವರ ಮಠ ಗಣಪತಿ, ಬಸಪ್ಪನಗುಡಿ, ಮಾತಂಗವ್ವಗುಡಿ, ಬೀರಲಿಂಗೇಶ್ವರ, ಚೌಡಮ್ಮ, ಮಾರಮ್ಮ, ಹೊನ್ನವ್ವ ನಾಗತಿಯ ದೇವಾಲಯ ಹನುಮಂತ ದೇವರು, ಲಕ್ಷ್ಮೀದೇವಿ ಮುಂತಾದ ಅನೇಕ ದೇವಾಲಯಗಳು ತಮ್ಮ ಆಡಳಿತ ಪ್ರದೇಶದ ವ್ಯಾಪ್ತಿಯಲ್ಲಿ ಕಂಡುಬರುತ್ತವೆ. ಪಾಳೆಯಗಾರರ ಕಾಲದ ಅನೇಕ ದೇವಾಲಯಗಳನ್ನು ಹಲವು ಗ್ರಾಮಗಳಲ್ಲಿ ಇಂದಿಗೂ ನೋಡುತ್ತೇವೆ. ಕೆಲವು ದೇವಾಲಯಗಳು ಸುರಕ್ಷಿತವಾಗಿದ್ದು, ಕೆಲವು ಹಾಳಾಗಿರುವುದು ಕಂಡುಬರುತ್ತವೆ. ಆದರೆ ಪಾಳೆಯಗಾರರ ಕಾಲದ ಸಂಪ್ರದಾಯ, ಆಚರಣೆ, ಪದ್ಧತಿಗಳು ಇಂದಿಗೂ ನಡೆಯುತ್ತಾ ಬಂದಿರುವುದು ಹಲವು ಗ್ರಾಮಗಳಲ್ಲಿ ಕಂಡುಬರುತ್ತದೆ.

ಸಂತೆಬೆನ್ನೂರು ಪಾಳೆಯಗಾರರು ಸಂತೆಬೆನ್ನೂರನ್ನು ಕೇಂದ್ರವನ್ನಾಗಿ ಮಾಡಿಕೊಂಡು ೧೬ನೇ ಶತಮಾನದ ಮಧ್ಯಭಾಗದಿಂದ ಸುಮಾರು ೩೦೦ ವರ್ಷಗಳ ಕಾಲ ಆಡಳಿತ ನಡೆಸಿದ್ದಾರೆ. ಇವರು ವೈದಿಕ ಪದ್ಧತಿಯಂತೆ ಧಾರ್ಮಿಕ ಆಚರಣೆಗಳು ಕಾರ್ಯಕ್ರಮಗಳು ನಡೆಸುತ್ತಿದ್ದುದಾಗಿ ತಿಳಿದುಬರುತ್ತದೆ. ಈ ನಾಯಕರು ಹೊರಡಿಸಿದ ಅನೇಕ ಶಾಸನಗಳಲ್ಲಿ ರಾಮಚಂದ್ರ ದೇವರ ಪಾದಪದ್ಮಾರಾಧಕರಾದ ಹನುಮಂತ ನಿಜಭಕ್ತ ಎಂದು ಶಾಸನಗಳಲ್ಲಿ ಕಂಡುಬರುತ್ತದೆ. ಕೈಫಿಯತ್ತಿನಲ್ಲಿ ಇವರ ಮನೆದೈವ ಸಂತೆಬೆನ್ನೂರು ರಾಮಚಂದ್ರಸ್ವಾಮಿ ಎಂದು

ಉಲ್ಲೇಖಿಸಲಾಗಿದೆ. ಚಿಕ್ಕಕೋಗಲೂರಿನ ಹನುಮಂತ ದೇವರ ಭಕ್ತರೆಂದು ತಿಳಿದುಬರುತ್ತದೆ. ವಿಶ್ವಕೋಶ, ಗೆಜೆಟಿಯರುಗಳಲ್ಲಿ ಇವರು ಸಂತೆಬೆನ್ನೂರಿನಲ್ಲಿ ಕಟ್ಟಿಸಿದ ದೇವಾಲಯ, ಇವರ ಮನೆದೈವ ರಂಗನಾಥಸ್ವಾಮಿ ಎಂದು ಉಲ್ಲೇಖಿಸಲಾಗಿದೆ. ಹೀಗೆ ಒಂದೊಂದು ದಾಖಲೆಯಲ್ಲಿ ಬೇರೆ ಬೇರೆ ರೀತಿಯ ಅಭಿಪ್ರಾಯಗಳನ್ನು ಉಲ್ಲೇಖಿಸಲಾಗಿದೆ. ಆದರೆ ಪಾಳೆಯಗಾರರು ಈ ಮೇಲಿನ ಎಲ್ಲಾ ದೇವರುಗಳನ್ನು ನಿಷ್ಠೆಯಿಂದ ಪೂಜಿಸುತ್ತಿದ್ದರು. ಜೊತೆಗೆ ಹಲವು ಮಠಮಾನ್ಯಗಳಿಗೆ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಮದುವೆ, ಜನನ, ಹಬ್ಬ ಹರಿದಿನಗಳು ಮುಂತಾದ ಶುಭಸಂದರ್ಭದಲ್ಲಿ ಹಲವಾರು ದಾನಗಳನ್ನು ಕೊಡುತ್ತಿದ್ದರು. ಬ್ರಾಹ್ಮಣರಿಗೆ, ಜಂಗಮರಿಗೆ, ಗೋದಾನ, ಭೂದಾನ, ದಕ್ಷಿಣೆಗಳನ್ನು ನೀಡುತ್ತಿದ್ದರು. ಜೊತೆಗೆ ಮಠಗಳಿಗೆ ಸಾಕಷ್ಟು ದಾನ-ದತ್ತಿಗಳನ್ನು ನೀಡುತ್ತಿದ್ದರು.

ಸಂತೆಬೆನ್ನೂರು ನಾಯಕರು ಮೂಲತಃ ಬೇಡರಾಗಿದ್ದರೂ ಇವರು ಸರ್ವಧರ್ಮ ಸಹಿಷ್ಣುಗಳಾಗಿದ್ದರು. ಇವರು ಶೈವ, ವೈಷ್ಣವ, ವೀರಶೈವ ಜಾನಪದ ದೈವದ ದೇವಸ್ಥಾನಗಳಿಗೆ ಮಠಗಳಿಗೆ ದಾನ ದತ್ತಿ ನೀಡಿದ ವಿವರಗಳು ಇವರ ಶಾಸನಗಳಿಂದ ತಿಳಿದುಬರುತ್ತದೆ. ಕೂಡಲಿ ಶೃಂಗೇರಿ ಮಠದ ಪೀಠಾಧಿಕಾರಿಗಳನ್ನು ತಮ್ಮ ರಾಜಗರುಗಳೆಂದು ಅವರಿಗೆ ಹೆಚ್ಚಿನ ಮಾನ್ಯತೆ, ದಾನ-ದತ್ತಿ ನೀಡಿ ಗೌರವಿಸುತ್ತಿದ್ದರು. ಇದಲ್ಲದೆ ಮೂಲ ಶೃಂಗೇರಿ ಜಗದ್ಗುರುಗಳಿಗೆ ಅನೇಕ ದಾನ ದತ್ತಿ ನೀಡಿರುವುದು ಅಂಶಗಳು ಶಾಸನಗಳಲ್ಲಿ ಉಲ್ಲೇಖಿತಗೊಂಡಿವೆ.

ಕೂಡ್ಲಿ ಶೃಂಗೇರಿ ಮಠದ ಪ್ರಾಚೀನ ಶಾಸನ ಲೇಖನ ಸಂಗ್ರಹ ಪುಸ್ತಕದಲ್ಲಿ ಸಂತೆಬೆನ್ನೂರು ನಾಯಕರು ಈ ಮಠಕ್ಕೆ ೧೫ ಶಾಸನ ಬರೆಸಿಕೊಟ್ಟ ಉಲ್ಲೇಖವಿದೆ. ಈ ಶಾಸನಗಳಿಂದ ಸಂತೆಬೆನ್ನೂರು ನಾಯಕರು ಈ ಮಠದೊಂದಿಗೆ ಉತ್ತಮ ಸಂಬಂಧ ಹೊಂದಿದ್ದರು ಎಂದು ಮತ್ತು ಅವರು ಮಠದ ಶಿಷ್ಯರಾಗಿ ನಡೆದುಕೊಂಡು ಬರುತ್ತಿದ್ದರು ಎಂದು ತಿಳಿದುಬರುತ್ತದೆ.[೧೩೯]

ಸಂತೇಬೆನ್ನೂರು ನಾಯಕರು ಶ್ರೀನರಸಿಂಹ ಭಾರತೀಸ್ವಾಮಿಗಳಿಗೆ ದರ್ಶನ ಮಾಡಿದಾಗ ತಾವು ಪೀಠಾಧಿಕಾರಿಗಳಾಗಿದ್ದ ಶೃಂಗೇರಿ ಪೀಠಕ್ಕೆ ಬೇರೊಬ್ಬರನ್ನು ನೇಮಕ ಮಾಡಿರುವ ವಿಚಾರ ಅವರ ಗಮನಕ್ಕೆ ಬಂದಿತ್ತು. ಸಂತೆಬೆನ್ನೂರು ನಾಯಕರು ಆ ಸ್ವಾಮಿಗಳಿಗೆ ಅಲ್ಲಿಯೇ ಒಂದು ಪ್ರತ್ಯೇಕ ಮಠ ಸ್ಥಾಪಿಸಿ ನೆಲೆಸುವಂತೆಯೂ, ಅದಕ್ಕಾಗಿ ಬೇಕಾದ ಸಹಾಯ ಸಹಕಾರ ಆರ್ಥಿಕ ನೆರವು ನೀಡಿ ಆ ಮಠಕ್ಕೆ ಮಂದಿರವನ್ನು ಕಟ್ಟಿಸಿ ಕೊಟ್ಟಿದ್ದಲ್ಲದೆ ಹಲವು ದಾನ ದತ್ತಿಕೊಟ್ಟಿದ್ದಾಗಿ ತಿಳಿದುಬರುತ್ತದೆ.[೧೪೦] ಈ ನಾಯಕರ ಪ್ರೇರಣೆಯಂತೆ ಸ್ವಾಮಿಗಳು ಅಲ್ಲಿಯೇ ನೆಲೆ ನಿಂತರು ನಾಯಕರಿಂದ ಈ ಬಗೆಯ ಹೊಸ ಪರಂಪರೆ ಉದಯವಾಯಿತು.

ಸಂತೆಬೆನ್ನೂರಿನಲ್ಲಿದ್ದ ಮಹಾಂತಮಠ, ಸಿದ್ಧಲಿಂಗಮಠ ಮುಂತಾದ ವೀರಶೈವ ಮಠಗಳಿಗೂ ನಾಯಕರು ದಾನ ದತ್ತಿ ನೀಡಿರುವ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಾಗಿದೆ. ಹೀಗೆ ಮಠಗಳಿಗೆ ದಾನಧರ್ಮ ನೀಡಿದರೆ ಸ್ವರ್ಗಸ್ಥರಾದ ಮಾತಾಪಿತೃಗಳಿಗೆ ಹಿರಿಯರಿಗೆ ಪುಣ್ಯ ಲಭಿಸುತ್ತದೆ

ಎನ್ನುವ ಧಾರ್ಮಿಕ ನಂಬಿಕೆ ಇವರಲ್ಲಿತ್ತು. ಆದುದರಿಂದ ಈ ಪಾಳೆಯಗಾರರು ಮಠದ ದೀಪಾರಾಧನೆ, ನೈವೇದ್ಯ, ಬ್ರಾಹ್ಮಣರಿಗೆ ಅನ್ನಸಂತರ್ಪಣೆ ಮುಂತಾದ ಕಾರ್ಯಗಳಿಗೆ ದಾನ ನೀಡಿರುವುದರಿಂದ ಧರ್ಮ ಸ್ಥಾಪನೆಯಾಗುತ್ತದೆ ಎಂಬ ನಂಬಿಕೆ ಇತ್ತು. ಈ ರೀತಿಯ ಧಾರ್ಮಿಕ ನಂಬಿಕೆಗಳಿಂದಲೇ ಬ್ರಾಹ್ಮಣ ಮಠಗಳಿಗೆ ರಾಜಾಶ್ರಯ ನೀಡಿದ್ದರು.

ಹನುಮಪ್ಪನಾಯಕನು ಹಿರೇಮಾಡಾಳು ಗ್ರಾಮದಲ್ಲಿ ಶಿವಲಿಂಗ ದೇವಸ್ಥಾನವನ್ನು ನಿರ್ಮಾಣ ಮಾಡಿದನು. ಈ ದೇವಸ್ಥಾನದ ನಿರ್ವಹಣೆಗಾಗಿ ಗೋದಾನ, ಭೂದಾನ ಮಾಡಿದನು. ಹಾಗೆಯೇ ಸರ್ಜಾಸೀತಾರಾಮಪ್ಪನಾಯಕನು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ವೆಂಕಟೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಇವುಗಳಲ್ಲದೆ ಹಲವಾರು ದೇವಾಲಯಗಳಿಗೆ, ದೇವರ ಉತ್ಸವಗಳಿಗೆ ಸಂತೆಬೆನ್ನೂರು ಪಾಳೆಯಗಾರರು ದಾನಧರ್ಮ ಮಾಡಿರುವುದನ್ನು ಶಾಸನಾಧಾರಗಳಿಂದ ತಿಳಿದುಬರುತ್ತದೆ. ಹೀಗೆ ಸಂತೇಬೆನ್ನೂರು ಪಾಳೆಯಗಾರರು ಸಮಾಜದ ಮೇಲೆ ಧಾರ್ಮಿಕವಾಗಿ, ಸಾಮಾಜಿಕವಾಗಿ ಹಿಡಿತ ಸಾಧಿಸಲು ರಾಜಾಶ್ರಯ ನೀಡಿರುವುದು ತಿಳಿದುಬರುತ್ತದೆ.

ಕ್ರಿ.ಶ. ೧೬೭೦ರ ತಾಮ್ರಶಾಸನದಲ್ಲಿ ಕೆಂಗಹನುಮಪ್ಪ ನಾಯಕನು ಮುರಗಮಠದ ಶಾಖಾಮಠವಾದ ಬೆಕ್ಕಿನಕಲ್ಲುಮಠವನ್ನು ಕಟ್ಟಿಸಿಕೊಟ್ಟಿದ್ದ ವಿವರಗಳು ತಿಳಿಯುತ್ತದೆ. ಸಂತೆಬೆನ್ನೂರಿನ ವೀರಶೈವ ಮಹಾಂತಮಠಕ್ಕೆ ದಾನದತ್ತಿ ನೀಡಿದ ವಿವರಗಳು ಶಿಲಾಶಾಸನದಲ್ಲಿ ಉಲ್ಲೇಖಗೊಂಡಿರುವುದನ್ನು ಕಾಣಬಹುದು.[೧೧]

ಸಂತೆಬೆನ್ನೂರು ಪಾಳೆಯಗಾರರ ಕಾಲದಲ್ಲಿ ಬ್ರಾಹ್ಮಣರು ಉನ್ನತ ಸ್ಥಾನಮಾನಗಳನ್ನು ಪಡೆದುಕೊಂಡಿದ್ದರು. ಪೂಜೆ ಮಾಡಲು, ವಿದ್ಯಾಭ್ಯಾಸ ಕಲಿಸಲು ಮುಂತಾದ ಮಹತ್ವದ ಕಾರ್ಯಗಳಿಗೆ ಬ್ರಾಹ್ಮಣರು ಇರುತ್ತಿದ್ದರು. ಇವರು ಮಹತ್ವದ ಹುದ್ದೆಗಳನ್ನು ಪಡೆದುಕೊಂಡಿದ್ದರು. ರಾಜನು ಬ್ರಾಹ್ಮಣರನ್ನು ಪೋಷಿಸುತ್ತಿದ್ದನು. ಇದರಿಂದ ರಾಜನ ಗೌರವ, ಘನತೆ, ಸ್ಥಾನಮಾನಗಳು ಹೆಚ್ಚಾಗುತ್ತಿದ್ದವು ಎಂದು ತಿಳಿದುಕೊಂಡಿದ್ದರು. ರಾಜನು ದೇವರ ಪ್ರತಿನಿಧಿ ಎಂದುಕೊಂಡಿದ್ದರು. ಈ ಪಾಳೆಯಗಾರರು ದೇವರಿಗೆ ಮತ್ತು ಬ್ರಾಹ್ಮಣ ಮಠಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಿದ್ದರು.[೧೨] ಈ ಮಠಕ್ಕೆ ನೀಡಿದ ದಾನದತ್ತಿಗಳಲ್ಲಿ ಸಂತೆಬೆನ್ನೂರು ಪಾಳೆಯಗಾರನಾದ ಹನುಮಪ್ಪ ನಾಯಕನು ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಲೆಂದು, ಸರ್ಜಾಹನುಮಪ್ಪನಾಯಕನು ತಮ್ಮ ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ದೊರಕಲಿ ಎಂದು, ಸರ್ಜಾರಂಗಪ್ಪನಾಯಕನು ತನ್ನ ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಬೇಕೆಂದು ಹೇಳಿಕೊಂಡು ದಾನದತ್ತಿ ನೀಡುತ್ತಿದ್ದರು ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.

ಪಾಳೆಯಗಾರರು ಬಗ್ಗೆ ಇರುವ ಶಾಸನಗಳಲ್ಲಿ ಹನುಮಂತ ಎಂಬ ಪದವೇ ಹೆಚ್ಚು ಬಳಸಲ್ಪಟ್ಟಿದೆ. ಹನುಮಂತ ಭಕ್ತಿಗೆ ಹಾಗೂ ಶೌರ್ಯಕ್ಕೆ ಹೆಸರುವಾಸಿ. ಹನುಮಂತನು ಅವೈದಿಕ

ಪಂಥದವನು. ಇವನು ಬುಡಕಟ್ಟು ಪಂಥ ಪ್ರತಿನಿಧಿಸುವವನಾಗಿದ್ದು ನಂತರದಲ್ಲಿ ವೈಷ್ಣವೀಕರಣಗೊಂಡ ದೇವರು. ಹನುಮಂತ ಒಂದು ಕಡೆ ಸಾಹಸ, ಶಕ್ತಿ, ನಿಷ್ಠೆಗಳ ಪ್ರತೀಕವಾಗಿದ್ದರೆ, ಮತ್ತೊಂದು ಕಡೆ ಬುಡಕಟ್ಟು ಹಾಗೂ ವೈಷ್ಣವ ಮತ ಸಮ್ಮಿಲನಗೊಂಡಿರುವುದನ್ನು ಸೂಚಿಸುತ್ತದೆ. ಆದುದರಿಂದ ಈ ದೇವರನ್ನು ಕುಲದೇವರನ್ನಾಗಿ ಮಾಡಿಕೊಂಡಿದ್ದರಿಂದ ತಮ್ಮ ಹೆಸರುಗಳಲ್ಲಿ ಹನುಮಂತ ಎಂಬ ಶಬ್ದ ಹೆಚ್ಚಾಗಿ ಕಂಡುಬರುತ್ತದೆ. ಉದಾಹರಣೆಗಳಿಗೆ ಹಿರೇಹನುಮಪ್ಪನಾಯಕ, ನಿಚ್ಚಮದುವಣಿಗ ಹನುಮಪ್ಪನಾಯಕ, ಸರ್ಜಾಹನುಮಪ್ಪನಾಯಕ, ರೆಡ್ಡಿಹನುಮಪ್ಪನಾಯಕ, ಕುಂಟ ಹನುಮಪ್ಪನಾಯಕ, ಇಮ್ಮಡಿ ಹನುಮಪ್ಪನಾಯಕ, ಸರ್ಜಾಪಟ್ಟಾಭಿ ಹನುಮಪ್ಪನಾಯಕ, ಕೆಂಗಹನುಮಪ್ಪನಾಯಕ, ಹನುಮವ್ವನಾಗತಿ, ಹುನುವಮಾಂಬೆ ಮುಂತಾದವುಗಳಿವೆ. ಇವರ ಕಾಲದಲ್ಲಿ ನಿರ್ಮಾಣಗೊಂಡ ಪ್ರತಿಯೊಂದು ಕೋಟೆಗಳಲ್ಲಿ ಹನುಮಂತ ದೇವರ ಗುಡಿ ಕಂಡುಬರುತ್ತದೆ. ಹೀಗೆ ಆರಂಭದಲ್ಲಿ ಇವರಿಗೆ ಹನುಮಂತ ಮನೆದೇವರು ಆಗಿದ್ದರಿಂದ ಈ ಭಾಗದಲ್ಲಿ ಜನರು ಹೆಚ್ಚಾಗಿ ಈಗಲೂ ಹನುಮಂತ ದೇವರಿಗೆ ಆರಾಧಿಸುತ್ತಿರುವುದನ್ನು ನಾವು ನೋಡಬಹುದು.

ಇತಿಹಾಸಕಾರರು ಹಾಗೂ ಸಂಶೋಧಕರು ಸಂತೆಬೆನ್ನೂರು ಪಾಳೆಯಗಾರರ ಮನೆದೇವರು ರಂಗನಾಥಸ್ವಾಮಿ ಎಂದು ಅಭಿಪ್ರಾಯಪಡುತ್ತಾರೆ. ರಂಗನಾಥ ಎಂದು ಗುರುತಿಸಲ್ಪಡುವ ದೇವರು ಬೇಟೆಯಾಡುವ ದೇವರಾಗಿದ್ದು ತಮ್ಮ ಕುಲದೇವತೆಯನ್ನಾಗಿ ಮಾಡಿಕೊಂಡಿದ್ದರು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಇವರ ಕೈಫಿಯತ್ತಿನಂತೆ ತೋಪೇನಹಳ್ಳಿ ರಂಗನಾಥಸ್ವಾಮಿ, ದೇವರಹಳ್ಳಿ ಉಡಮರಡಿ ರಂಗನಾಥಸ್ವಾಮಿ ದೇವಾಲಯದ ಜೀರ್ಣೋದ್ಧಾರ ಮಾಡಿರುವುದು ಕಂಡುಬರುತ್ತದೆ. ಸಂತೆಬೆನ್ನೂರು ರಾಮಚಂದ್ರ ದೇವಸ್ಥಾನವು ಬಿಜಾಪುರ ಸುಲ್ತಾನರ ದಾಳಿಯಿಂದ ನಾಶ ಮಾಡಲ್ಪಟ್ಟ ಮೇಲೆ ರಂಗನಾಥಸ್ವಾಮಿಯನ್ನು ಮನೆ ದೇವರಾಗಿ ಮಾಡಿಕೊಂಡಿರಬಹುದೆಂದು ತಿಳಿಯಬಹುದು. ಈ ಭಾಗದಲ್ಲಿ ಇಂದಿಗೂ ಅನೇಕ ಕಡೆ ರಂಗನಾಥಸ್ವಾಮಿ ದೇವಾಲಯವಿರುವುದು ಕಂಡುಬರುತ್ತದೆ. ಈ ದೇವಾಲಯಗಳಲ್ಲಿ ಬೇಡರು ಪೂಜೆ ಪುನಸ್ಕಾರಗಳು ನಡೆಸುತ್ತಿರುವುದುನ್ನು ಕಾಣಬಹುದು. ಈ ಪಾಳೆಯಗಾರರು ಪ್ರತಿಯೊಂದು ಧಾರ್ಮಿಕ ಕ್ಷೇತ್ರಗಳಿಗೆ ಭೇಟಿ ನೀಡಿದಾಗಲೆಲ್ಲಾ ದೇವಾಲಯ, ಮಠಗಳಿಗೆ ದಾನದತ್ತಿಗಳನ್ನು ನೀಡುತ್ತಿದ್ದರು. ಇದರಿಂದ ಪಾಳೆಯಗಾರರಿಗೆ ಸುಖ ಶಾಂತಿ ಸಿಗುವುದೆಂದು ನಂಬಿದ್ದರು. ಕೆಲವು ದೇವಾಲಯಗಳಲ್ಲಿ ಧಾರ್ಮಿಕ ಉತ್ಸವಗಳನ್ನು ನಡೆಸುತ್ತಿದ್ದರು.

ಸಂತೆಬೆನ್ನೂರು ಪಾಳೆಯಪಟ್ಟನಲ್ಲಿ ಕೆಳಜಾತಿಯ ಹೆಣ್ಣನ್ನು ಮದುವೆಯಾದರೆ ಇಲ್ಲವೆ ಕೆಳಜಾತಿಯ ಮನೆಗೆ ಹೋಗಿ ಊಟ ಮಾಡಿದರೆ ಅವರನ್ನು ಅಶುದ್ಧರೆಂದು ಪರಿಗಣಿಸಲಾಗುತ್ತಿತ್ತು. ಅಂತಹ ಅಂಶಗಳು ಕಂಡುಬಂದರೆ ಅವರಿಗೆ ದಂಡ ಹಾಕುವುದು ಹಾಗೂ ಶುದ್ಧಿಗಾಗಿ ಅವರಿಂದ ಊಟ ಹಾಕಿಸಿ ಕುಲದೊಳಗೆ ಸೇರಿಸಿಕೊಳ್ಳುತ್ತಿದ್ದರು. ಧಾರ್ಮಿಕ ಕಾರ್ಯದಲ್ಲಿ ವೀಳ್ಯ

ಕೊಡುವುದಕ್ಕೆ ಬಹಳ ಮಹತ್ವವಿತ್ತು. ಸ್ತ್ರೀಯರಿಗೆ ಗೌರವ ಸ್ಥಾನ ಮತ್ತು ಕೆಳಜಾತಿಗಳಲ್ಲಿ ವೇಶ್ಯಾಪದ್ಧತಿ (ದೇವದಾಸಿ) ಇತ್ತು. ಆಯಾ ಜಾತಿಯ ಮುಖ್ಯಸ್ಥರು ತಮ್ಮ ಜಾತಿಗೆ ಸಂಬಂಧಿಸಿದ ತೀರ್ಮಾನಗಳನ್ನು ಕೊಡುವ ಅಧಿಕಾರವಿತ್ತು. ಇದರಿಂದ ಕಾನೂನುವ್ಯವಸ್ಥೆಯಲ್ಲಿ ಎಲ್ಲರಿಗೂ ಸುಲಭವಾಗಿ ನ್ಯಾಯವೂ ಸಿಗುತ್ತಿತ್ತು. ಧರ್ಮಾಧಿಕಾರಿಗಳಿಗೆ ಹೆಚ್ಚಿನ ಗೌರವವಿತ್ತು. ಪಾಳೆಯಗಾರರು ವೈಷ್ಣವ ಸಂಪ್ರದಾಯದ ಪ್ರಕಾರ ವಿವಾಹ ಮಾಡಿಕೊಳ್ಳುತ್ತಿದ್ದರು. ಪಾಳೆಯಗಾರರ ಪತ್ನಿಯರಾದ ನಾಗತಿಯರು ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು.[೬೩] ಈ ಪಾಳೆಯಗಾರರು ಹಾಕಿಸಿದ ಶಾಸನಗಳು ಸಂತೆಬೆನ್ನೂರು ಪಾಳೆಯಪಟ್ಟಿನ ಹಲವಾರು ಪ್ರದೇಶಗಳಲ್ಲಿ ದೊರಕಿವೆ. ಚನ್ನಗಿರಿ, ಹಿರೇಕೂಗಲೂರು, ಚಿಕ್ಕಗಂಗೂರು, ಗೊಪ್ಪೆನಹಳ್ಳಿ, ವಡೆರಹಳ್ಳಿ, ಪಾಳ್ಯ, ಬಳ್ಳಾಪುರ, ಹಿರೇಮಾಡಾಳು, ಕುಂದೂರು, ನಾಗಸಮುದ್ರ, ಅರಸನಗುಪ್ಪೆ, ಆಲದಹಳ್ಳಿ, ತರೀಕೆರೆ, ಹೊಸನಗರ ಮುಂತಾದ ಗ್ರಾಮಗಳಲ್ಲಿ ತಮ್ಮ ಶಾಸನಗಳು, ತಾಮ್ರಶಾಸನಗಳು, ಶಿಲಾಶಾಸನಗಳು ದೊರಕಿವೆ. ಹೆಚ್ಚಿನ ತಾಮ್ರ ಶಾಸನಗಳು ಬ್ರಾಹ್ಮಣರಿಗೆ ಭೂದಾನ ದತ್ತಿ ಕೊಟ್ಟ ವಿಚಾರ ತಿಳಿದುಬರುತ್ತದೆ.

ಪಾಳೆಯಪಟ್ಟಿನ ಹೆಚ್ಚಿನ ನಾಯಕರು, ಬೇಡರು ವಾಲ್ಮೀಕಿ ಜನಾಂಗಕ್ಕೆ ಸೇರಿದವರಾಗಿದ್ದು, ಬೇರೆ ಬೇರೆ ಅರಸರೊಂದಿಗೆ ವಿರೋಧ ಮತ್ತು ಬಾಂಧವ್ಯ ಎರಡನ್ನೂ ಬೆಳೆಸಿರುವುದು ಕಂಡುಬರುತ್ತದೆ. ಚಿತ್ರದುರ್ಗ ನಾಯಕರಿಗೂ ಇವರಿಗೂ ಹಾಗೂ ಕೆಳದಿ ನಾಯಕರಿಗೂ ಅನೇಕ ಭಾರಿ ಯುದ್ಧಗಳಾಗಿರುವುದು ತಿಳಿದುಬರುತ್ತದೆ. ಇಷ್ಟು ಹಗೆತನದ ನಡೆವೆಯೂ ವೈವಾಹಿಕ ಬಾಂಧವ್ಯ ನಡೆದಿರುವುದು ಕಂಡುಬರುತ್ತದೆ.

ಸಂತೆಬೆನ್ನೂರು ಪಾಳೆಯಪಟ್ಟಿನಲ್ಲಿ ಗ್ರಾಮದ ಮುಖ್ಯಸ್ಥರು ತಮ್ಮ ಗ್ರಾಮಗಳಲ್ಲಿ ಧಾರ್ಮಿಕ ಸಂಘಗಳ ಕಡೆ ಗಮನ ನೀಡಿ ಅವುಗಳನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದರು. ಪಾಳೆಯಗಾರರಲ್ಲದೆ ಸೈನಿಕರು, ಮಹಾಜನರು, ನಾಗತಿಯರು ಮತ್ತು ಗ್ರಾಮದ ಪ್ರಮುಖರಿಬ್ಬರು ದೇವಸ್ಥಾನ, ಮಠ, ಅಗ್ರಹಾರಗಳ ರಕ್ಷಣೆಯ ಹೊಣೆ ಹೊತ್ತಿದ್ದರು. ಪಾಳೆಯಗಾರರ ಕಾಲದ ಧಾರ್ಮಿಕ ತಂತ್ರಗಳ ದೃಷ್ಟಿಯು ಅವರ ರಾಜ್ಯಾಡಳಿತದಲ್ಲಾದ ಬದಲಾವಣೆಗೆ, ಅದರ ಪ್ರತಿಕ್ರಿಯೆಗಳಿಗೆ ಪ್ರಬಲವಾದ ಸಾಕ್ಷಿಯಾಗಿದೆ. ಧಾರ್ಮಿಕ ಸಹಿಷ್ಣುತೆಯಿಂದ ಎಲ್ಲಾ ಮತ ಪಂಥಗಳ ಜನರ ಸುಖ ಸಮೃದ್ಧಿ ಏಳಿಗೆಗೆ ಕಾರಣವಾಗುತ್ತದೆ. ಧಾರ್ಮಿಕ ದೃಷ್ಟಿಯಿಂದ ಪರಿಶೀಲಿಸಿದರೆ ಈ ಪ್ರದೇಶದಲ್ಲಿ ಏಕತೆಗಿಂತ ವೈವಿಧ್ಯತೆ ಇತ್ತೆಂದು ಆಧಾರಗಳಿಂದ ತಿಳಿದುಬರುತ್ತದೆ. ವಿವಿಧ ಪಂಥಗಳು ಅಸ್ತಿತ್ವದಲ್ಲಿದ್ದರೂ ಅವುಗಳ ನಡುವೆ ಸಂಘರ್ಷವಿರಲಿಲ್ಲ. ಪಾಳೆಯಗಾರರ ವೈಯಕ್ತಿಕ ಧರ್ಮ ಯಾವುದಿದ್ದರೂ ಅವರು ಎಲ್ಲಾ ಮತ ಧರ್ಮಗಳನ್ನು ಸಮಾನ ದೃಷ್ಟಿಯಿಂದ ನೋಡಿಕೊಂಡರು. ಆದುದರಿಂದ ಪಾಳೆಯಪಟ್ಟಿನಲ್ಲಿ ಧಾರ್ಮಿಕ ಸಮತೋಲವನ್ನು ಕಾಪಾಡಿಕೊಳ್ಳಲು ಸಾಧ್ಯವಾಯಿತು. ಶಿಷ್ಟ ಮತಧರ್ಮಗಳ ಜೊತೆ ಜನಪದ ಧರ್ಮ ಮತ್ತು ಆಚರಣೆಗಳು ಅಸ್ತಿತ್ವದಲ್ಲಿದ್ದವು. ಪಾಳೆಯಗಾರರ ಕಾಲದಲ್ಲಿ ಗ್ರಾಮದೇವತೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಿತು.

ಇವರ ಕಾಲದಲ್ಲಿ ರಂಗನಾಥ, ವೀರಭದ್ರ, ಹನುಮಂತ, ಅಹೋಬಲನರಸಿಂಹ ಮುಂತಾದ ದೇವರುಗಳಿಗೆ ಪಾಳೆಯಗಾರರು ದೇವಾಲಯಗಳನ್ನು ನಿರ್ಮಿಸಿ ಅಪಾರ ಪ್ರಮಾಣದ ಸಂಪತ್ತನ್ನು ದಾನ ಮಾಡಿದ್ದಾರೆ.

ಹೀಗೆ ಸಂತೆಬೆನ್ನೂರು ನಾಯಕರು ವಾಲ್ಮೀಕಿ ವಂಶಸ್ಥರೂ ಬೇಡ ಕುಲದವರಾಗಿದ್ದರೂ ವೀರಶೈವ ಮತ್ತು ಬ್ರಾಹ್ಮಣ ಮಠಗಳಿಗೆ ದಾನದತ್ತಿಗಳನ್ನು ನೀಡಿ ಪ್ರೋತ್ಸಾಹ ನೀಡಿದ್ದಲ್ಲದೆ ಇತರೆ ಧಾರ್ಮಿಕ ಪಂಥಗಳೊಡನೆ ಧರ್ಮ ಸಹಿಷ್ಣುತೆ ತೋರಿಸಿರುವುದು ಕಂಡುಬರುತ್ತದೆ. ಈ ಮಠಗಳು ಧಾರ್ಮಿಕ ಕೇಂದ್ರಗಳಾಗಿಯೂ ಅಲ್ಲದೆ ವಿದ್ಯಾದಾನ ಕೇಂದ್ರಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು.

ಇವರ ಕಾಲದಲ್ಲಿ ದೇವಾಲಯಗಳು ಧಾರ್ಮಿಕವಾಗಿ ಬಹಳ ಪ್ರಬಲವಾಗಿದ್ದವು. ಅವು ಸ್ಥಳೀಯವಾಗಿ ಸಾಮಾಜಿಕ ಮತ್ತು ಧಾರ್ಮಿಕ ಕೇಂದ್ರಗಳಾಗಿದ್ದವು. ಆ ದೇವಾಲಯಗಳಿಗೆ ದಾನ ನೀಡುವುದರ ಮೂಲಕ ಆಯಾ ಸಮಾಜದ ಮೇಲೆ ಪಾಳೆಯಗಾರರು ನಿಯಂತ್ರಣ ಸಾಧಿಸಿದ್ದರು. ಸಮಾಜದ ಬೇರೆ ಬೇರೆ ವರ್ಗಗಳಿಗೆ ಈ ಪಾಳೆಯಗಾರರು ದಾನ ನೀಡಿರುವುದು ಕಂಡುಬರುತ್ತದೆ. ಇದು ರಾಜಧರ್ಮದ ಒಂದು ಭಾಗವಾಗಿತ್ತು ಈ ಪಾಳೆಯಗಾರರು ಮಠಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿರುವುದು ಕಂಡುಬಂದಿದೆ.

ಕರ್ನಾಟಕದಲ್ಲಿ ಆಳಿದ ಬಹುತೇಕ ಪಾಳೆಯಗಾರರು ಬೇಡ ಜನಾಂಗದವರಾಗಿದ್ದರು. ಅದರಂತೆ ಸಂತೆಬೆನ್ನೂರು ಪಾಳೆಯಗಾರರು ಕೂಡ ಬೇಡ ಜನಾಂಗದವರಿಗಾದ್ದರೂ. ಇವರು ಎಲ್ಲಾ ಧರ್ಮಗಳ ಬಗ್ಗೆ ಉದಾರವಾದ ಪ್ರೋತ್ಸಾಹ ಕೊಟ್ಟಿದ್ದರು. ಕೆಲವು ಸಂದರ್ಭದಲ್ಲಿ ತಮ್ಮ ಮೂಲ ಆಚರಣೆ, ಸಂಪ್ರದಾಯಗಳಿಗೆ ಧಕ್ಕೆ ಒದಗಿಬಂದರೆ ಅಂತಹ ಸಂದರ್ಭದಲ್ಲಿ ಯುದ್ಧ ಮಾಡುವುದರ ಮೂಲಕ ಆ ವ್ಯವಸ್ಥೆಯನ್ನು ಬದಲಾಯಿಸುತ್ತಿದ್ದರು. ಉದಾಹರಣೆಗೆ ಹನುಮಪ್ಪ ನಾಯಕನು ಸಂತೆಬೆನ್ನೂರಿನಲ್ಲಿ ಮಸೀದಿಯನ್ನು ಅಪವಿತ್ರಗೊಳಿಸಿದ್ದು, ಇಂತಹ ಒಂದೆರಡು ಉದಾಹರಣೆಗಳು ಬಿಟ್ಟರೆ ಎಲ್ಲಾ ಧರ್ಮ ಪಂಥಗಳಿಗೆ ಶೈವ, ವೈಷ್ಣವ ಮತ್ತು ಶಾಕ್ತೇಯ ಪಂಥ ಧರ್ಮಗಳಿಗೆ ವಿಶೇಷ ಕಾಳಜಿಯನ್ನು ನೀಡುತ್ತಿದ್ದರು. ಅದರ ಜೊತೆಗೆ ತಮ್ಮ ಮೂಲ ಸಂಪ್ರದಾಯ ಆಚರಣೆಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿರುವುದನ್ನು ಕಾಣಬಹುದು.

ಈ ಪಾಳೆಯಗಾರರು ಶೈವ ಮತ್ತು ವೈಷ್ಣವ ಎರಡೂ ಪಂಥಗಳಿಗೆ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಇವರ ಕುಲದೇವರು ವೈಷ್ಣವ ಪಂಥಕ್ಕೆ ಸೇರಿದೆ. ಆದರೂ ಈ ಪಾಳೆಯಗಾರರು ಶೈವ ಧರ್ಮದ ಗುರುಗಳನ್ನು ತಮ್ಮ ಕುಲಗುರುಗಳನ್ನಾಗಿ ಮಾಡಿಕೊಂಡರು. ಅವರ ಸಲಹೆ ಮಾರ್ಗದರ್ಶನದಂತೆ ರಾಜ್ಯಭಾರ ನಡೆಸಿದ್ದಾರೆ. ಪಾಳೆಯಗಾರರು ಶೈವಧರ್ಮಕ್ಕೆ ಪ್ರೋತ್ಸಾಹ ಕೊಡುವುದರ ಜೊತೆಗೆ ಅನೇಕ ಶೈವ ದೇವಾಲಯಗಳನ್ನು ನಿರ್ಮಾಣ ಮಾಡಿದ್ದಾರೆ. ಹಾಗೂ ಜೀರ್ಣೋದ್ಧಾರ ಮಾಡಿದ್ದಾರೆ ಮತ್ತು ಶೈವಮಠಗಳಿಗೆ ದಾನದತ್ತಿ ಕೊಟ್ಟಿರುವ ಅಂಶ ತಿಳಿದುಬರುತ್ತದೆ.

ದಾವಣಗೆರೆ ಪ್ರದೇಶದಲ್ಲಿ ಜನರು ಬೇರೆ ಬೇರೆ ಧರ್ಮದವರಾಗಿದ್ದು, ಹಲವಾರು ದಾನದತ್ತಿಗಳನ್ನು ನೀಡಿದ್ದಲ್ಲದೆ ಅನೇಕ ಶೈವ ದೇವಾಲಯಗಳನ್ನು ಮತ್ತು ಮಠಗಳನ್ನು ಕಟ್ಟಿಸಿದ್ದನ್ನು ಈ ಭಾಗದ ಶಾಸನಗಳು ಉಲ್ಲೇಖಿಸುತ್ತವೆ. ಕ್ರಿ.ಶ. ೧೫೭೧ರ ಸಾಳಂಗ ಶಾಸನೋಕ್ತ[೧೪೪] ಮಹಾಮಂಡಳೇಶ್ವರನಾದ ಗವರಾಜಯ್ಯ ತಮ್ಮ ತಂದೆಯಾದ ವೆಂಕಟಾದ್ರಿ ರಾಜನ ಉತ್ತರ ಕ್ರಿಯೆ ಮಾಡುವಾಗ ತಮ್ಮ ತಂದೆಗೆ ಪುಣ್ಯವಾಗಲೆಂದು ಆನೆಗೊಂದಿ ಮಠದ ವಿಜಯೇಂದ್ರ ಒಡೆಯರ ಮಠಕ್ಕೆ ಸಾಳಂಗ ಗ್ರಾಮವನ್ನು ದತ್ತಿ ಬಿಟ್ಟು ಅಣಜಿಗೆರೆ ಶಾಸನೋಕ್ತ[೧೪೫] ಅಣಜಿಯ ಮಾಜಪ್ಪದೇವನ ಮಠಕ್ಕೆ ಸೋಮನಾಯಕನ ಮಗ ತನ್ನ ತಂದೆ ತಾಯಿಗಳ ಸ್ವರ್ಗ ಸುಖಕ್ಕಾಗಿ ಭೂದಾನ ನೀಡಿದನು. ರೆಡ್ಡಿಹಳ್ಳಿ ಶಾಸನೋಕ್ತ[೧೪೬] ದಳವಾಯಿ ಭರಮಪ್ಪನವರು ಜಗಳೂರು ವಿರಕ್ತಮಠಕ್ಕೆ ದಾನ ನೀಡಿದ ವಿಷಯ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಇನ್ನೂ ಹಲವಾರು ಮಠಗಳಿಗೆ ದಾನ ನೀಡಿದ ವಿಷಯ ತಿಳಿದುಬರುತ್ತದೆ. ಹೊದ್ದಿಗೇರಿ ಶಾಸನೋಕ್ತ[೧೪೭] ವಿರಕ್ತ ಯಂಗಳ ಮಠ ಚಿನ್ನಿಕಟ್ಟ ಶಾಸನೋಕ್ತ,[೧೪೮] ಅರಕೆರೆ ಶಾಸನೋಕ್ತ,[೧೪೯] ಸಿದ್ದಂಮನಹಳ್ಳಿ ಶಾಸನೋಕ್ತ,[೧೫೦] ರೆಡ್ಡಿಹಳ್ಳಿ ಶಾಸನೋಕ್ತ,[೧೫೧] ಜಗಳೂರು ವಿರಕ್ತಮಠ, ಸಂತೆಬೆನ್ನೂರು ಶಾಸನೋಕ್ತ,[೧೫೨] ಲಿಂಗದೇವರ ಮಠ ಮತ್ತು ಭರಮಸಮುದ್ರದ ಮಹಾಮುತ್ತಿನ ಮಠಗಳಿಗೆ೧[೫೩] ದಾನ ಧರ್ಮ ನೀಡಿರುವುದು ಕಂಡುಬರುತ್ತದೆ.

ಹೀಗೆ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರು ಎಲ್ಲಾ ಧರ್ಮಗಳಿಗೂ ಪ್ರೋತ್ಸಾಹ ಕೊಡುತ್ತಿದ್ದರು. ಧರ್ಮಗಳ ಬಗ್ಗೆ ಅವರಲ್ಲಿ ಯಾವ ಪಕ್ಷಪಾತವೂ ಇರಲಿಲ್ಲ. ಆದುದರಿಂದ ಅವರ ಆಡಳಿತದಲ್ಲಿ ಜನರು ಬೇರೆ ಬೇರೆ ಧರ್ಮಗಳನ್ನು ನಿರ್ಭಯತೆಯಿಂದ ಅನುಸರಿಸುತ್ತಿದ್ದರು. ಅದರಂತೆ ಒಂದೊಂದು ಕಾಲದಲ್ಲಿ ಬೇರೆ ಬೇರೆ ಧರ್ಮ ಪಂಥಗಳು ಏಳಿಗೆಯನ್ನು ಪಡೆದಿವೆ.

ಈ ಪ್ರದೇಶದಲ್ಲಿ ಶೈವಧರ್ಮವು ಪ್ರಬಲವಾಗಿತ್ತೆಂದು ಈ ಮೇಲಿನ ಅಂಶಗಳಿಂದ ತಿಳಿದುಬರುತ್ತದೆ. ಜೊತೆಗೆ ಈ ಭಾಗದಲ್ಲಿ ಈಗಲೂ ಇರುವ ಅವರಗೋಳದ ಈಶ್ವರ ಎಲೆಬೇತೂರಿನ ಕಲ್ಲೇಶ್ವರ, ಬಾಗಳಿಯ ಕಲ್ಲೇಶ್ವರ, ಕುರುವದಗಡ್ಡೆಯ ರಾಮೇಶ್ವರ, ಬೆಳಗುತ್ತಿಯ ಸಿದ್ಧೇಶ್ವರ, ನಂದಿಗುಡಿ, ಈಶ್ವರಗುಡಿ ಮುಂತಾದ ದೇವಾಲಯಗಳು ಸಾಕ್ಷಿಯಾಗಿವೆ.

ಈ ಪ್ರದೇಶದ ಶಾಸನಗಳಲ್ಲಿ ವೈಷ್ಣವ ದೇವಾಲಯಗಳಿರುವುದು ಕಂಡುಬರುತ್ತವೆ. ಚಿಕ್ಕಯರೆಹಳ್ಳಿಯ ರಾಮನಾಥ, ಸುರೆಹೊನ್ನೆಯ ಬಾಳಿನಾಥ, ನೀಲಗುಂದದ ರಾಮೇಶ್ವರ ದೇವಾಲಯ, ಅಸಗೋಡಿನ ಈಶ್ವರ ದೇವಾಲಯ, ಕಲ್ಲೆದೇವರಪುರದ ಕಲಿದೇವರು ಮುಂತಾದ ದೇವಾಲಯಗಳು ಇದ್ದವು. ಅವುಗಳಿಗೆ ಪಾಳೆಯಗಾರರು, ಅಧಿಕಾರಿಗಳು, ದಾನದತ್ತಿ ನೀಡಿದ್ದಾರೆ. ಇದೇ ಸಂದರ್ಭದಲ್ಲಿ ಅಗ್ರಹಾರ ಮಹಾಜನರೂ(ಬ್ರಾಹ್ಮಣರು) ದಾನ ನೀಡಿದ್ದು ಶಾಸನಗಳಿಂದ ತಿಳಿದುಬರುತ್ತದೆ.

ಈ ಮೇಲಿನ ಅಂಶಗಳಿಂದ ತಿಳಿದುಬರುವುದೇನೆಂದರೆ ವೈಷ್ಣವ ಧರ್ಮದ ಪ್ರತಿಪಾದಕರಾದ ಬ್ರಾಹ್ಮಣರು ಅಂದಿನ ಸಮಾಜದಲ್ಲಿ ವಿಶಿಷ್ಟ ಸ್ಥಾನ ಪಡೆದಿದ್ದರು. ಇವರ ಉಪಜೀವನಕ್ಕಾಗಿ ರಾಜರು ನಾಗತಿಯರು ಮಹಾಮಂಡಳೇಶ್ವರರು, ಅಧಿಕಾರಿಗಳು ದಾನದತ್ತಿ ಕೊಟ್ಟದ್ದನ್ನು ನೋಡುತ್ತೇವೆ. ಜೊತೆಗೆ ಬ್ರಾಹ್ಮಣರಿಗೆ ಸಾರ್ವಜನಿಕವಾಗಿ ಹಾಗೂ ಹಲವಾರು ವೈಷ್ಣವ ದೇವಾಲಯಗಳಿಗೆ ದಾನದತ್ತಿಗಳನ್ನು ಕೊಟ್ಟದ್ದು ಕಂಡುಬರುತ್ತದೆ. ಪಾಳೆಯಗಾರರ ಕಾಲದಲ್ಲಿ ಬ್ರಾಹ್ಮಣರಿಗೆ ಧಾರ್ಮಿಕ ರಾಜಕೀಯ ಅಧಿಕಾರವನ್ನು ವಹಿಸಿ ಕೊಡುತ್ತದೆ.

ಈ ಭಾಗದಲ್ಲಿ ಶೈವ, ವೈಷ್ಣವ ಧರ್ಮಗಳು ಇದ್ದು, ಜೊತೆ ಜೊತೆಗೆ ಈ ಧರ್ಮಗಳು ಬೆಳೆದುಬಂದಿರುವುದು ಕಂಡುಬರುತ್ತದೆ. ಅರಸರು ರಾಣಿಯರು, ಮಾಂಡಲಿಕರು, ಅಧಿಕಾರಿಗಳು, ದಾನದತ್ತಿಗಳನ್ನು ನೀಡಿ ಎಲ್ಲಾ ಧರ್ಮಗಳನ್ನು ಪೋಷಿಸಿ ಆಚರಣೆಯಲ್ಲಿ ತಂದಿದ್ದು ಕಂಡುಬರುತ್ತದೆ.

**ಕೊನೆಟಿಪ್ಪಣಿಗಳು**

೧. ರಾಬರ್ಟ್ ಸಿವೆಲ್, ಎ ಫರ್‌ಗಾಟನ್ ಎಂಪೈರ್, ಪು.ಸಂ. ೩೮೪

೨. ಅದೇ ಪು.ಸಂ. ೩೮೯

೩. ಅದೇ, ಪು.ಸ.೦ ೨೬೪

೪. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪು.ಸಂ. ೯೨

೫. ಅದೇ, ಪು.ಸಂ. ೯೨

೬. ಅದೇ, ಪು.ಸಂ. ೯೨

೭. ಅದೇ, ಪು.ಸಂ. ೯೪

೮. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ಸಂತೇಬೆನ್ನೂರು ನಾಯಕರು, ಪು.ಸಂ. ೪೨

೯. ಗಂಗಾನಾಯಕ್ ಕೆ.ಎನ್.(ಪ್ರಸಂ), ಪಾಳೆಯಗಾರರ ಶಾಸನಗಳು, ಸಂ–೧, ಪು.ಸಂ. ೪೩

೧೦. ಅದೇ, ಪು.ಸಂ. ೪೩

೧೧. ಸಂತೆಬೆನ್ನೂರು ಸಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೪೩

೧೨. ಅದೇ, ಪುಸಂ. ೪೪

೧೩. ಅದೇ, ಪು.ಸಂ. ೪೪

೧೪. ರೋನಾಲ್ಡ್, ಇಮ್ಯಾಜಿನಿಂಗ್ ಇಂಡಿಯಾ ಪು. ೧೯೦

೧೫. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, ಪು.ಸಂ. ೬೯

೧೬. ಮಹಾಜನ್ ವ್ಹಿ.ಡಿ., ಏನ್ಷಿಯೆಂಟ್ ಇಂಡಿಯಾ ಪು.ಸಂ. ೧೨೧

೧೭. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು.ಸಂ. ೪೩೧

೧೮. ನಾರಾಯಣ ಪಿ.ವಿ., ವಚನ ಸಾಹಿತ್ಯ: ಒಂದು ಸಾಂಸ್ಕೃತಿಕ ಅಧ್ಯಯನ, ಪು.ಸಂ. ೬೦

೧೯. ಅದೇ, ಪು.ಸಂ. ೯೫

೨೦. ಚಿಕ್ಕರೂರು ಗೋವಿಂದಾಚಾರ್ಯ, ಹರಪನಹಳ್ಳಿ ಪಾಳೆಯಗಾರರು, ಅಪ್ರಕಟಿತ ಹಸ್ತಪ್ರತಿ, ಪು.ಸಂ. ೩೬

೨೧. ಗಿರಿಜಾ ಟಿ., ದಾವಣಗೆರೆ ನಮ್ಮ ಜಿಲ್ಲೆ, ಪು.ಸಂ. ೬೭೦

೨೨. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.ಸಂ. ೫೯

೨೩. ಅದೇ, ಪು.ಸಂ. ೬೦

೨೪. ಹರ್ಮನ್ ಕುಲ್ಕೆ(೧೯೯೫), ದಿ ಸ್ಟೇಟ್ ಇನ್ ಇಂಡೀಯ ೧೦೦೦–೧೭೦೦, ಪು.ಸಂ. ೪೧

೨೫. ರಾಜಾರಾಮ ಹೆಗಡೆ, ಲೌಕಿಕ ಅಲೌಕಿಕ, ಪು.ಸಂ. ೩೯

೨೬. ಕೂಡಲಿ ಜನಗನ್ನಾಥ ಶಾಸ್ತ್ರಿ, ಶ್ರೀಕೂಡಲಿ ಶೃಂಗೇರಿ ಮಹಾಸಂಸ್ಥಾನದ ಜಗದ್ಗುರು ಪರಂಪರಾ ದರ್ಪಣ, ಪು.ಸಂ. ೧೪

೨೭. ಭಾಷ್ಯಂ ಎ. ಎಲ್., ವಂಡರ್ ದಟ್ ವಾಸ್ ಇಂಡಿಯಾ, ಪು.ಸಂ. ೧೪೧

೨೮. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪು.ಸಂ. ೨೧೦

೨೯. ರೈಸ್ ಬಿ.ಎಲ್., ಪೂರ್ವೋಕ್ತ, ದಾವಣಗೆರೆ ೩೮

೩೦. ರೈಸ್ ಬಿ.ಎಲ್., ಪೂರ್ವೋಕ್ತ, ಜಗಲೂರು ೩೭

೩೧. ಅದೇ. ಚನ್ನಗಿರಿ, ಪು.ಸಂ.೪೪

೩೨. ರಿತ್ತಿ ಶ್ರೀನಿವಾಸ. ದಿ ಸೇವುಣಾಸ್. ಪು.ಸಂ. ೨೪೯

೩೩. ಭಾಷ್ಯಂ ಎ.ಎಲ್., ಪೂರ್ವೋಕ್ತ, ಪು.ಸ. ೧೪೩

೩೪. ಅದೇ, ಪು.ಸಂ. ೧೪೩

೩೫. ತಿಪ್ಪೇರುದ್ರಸ್ವಾಮಿ ಎಚ್., ಪೂರ್ವೋಕ್ತ, ಪು.ಸಂ. ೨೧೧

೩೬. ಎಂ.ಎ.ಆರ್., ಹೊಸಹಳ್ಳಿ ೧೬೫೨, ದಾವಣಗೆರೆ ಜಿ

೩೭. ನಾರಾಯಣ ಪಿ.ವಿ., ಪೂರ್ವೋಕ್ತ, ಪು.ಸಂ. ೬೬

೩೮. ಅದೇ, ಪು.ಸಂ. ೭೨

೩೯. ರೈಸ್ ಬಿ.ಎಲ್., ಪೂರ್ವೋಕ್ತ, ಸಂ–೧೧, ಜಗಲೂರು

೪೦. ಅದೇ, ಸಂಪುಟ–೧೧, ಪು.ಸಂ.

೪೧. ಸದಾಶಿವಪ್ಪ ಕುಂ.ಬಾ., ಪು.ಸಂ. ೮೫

೪೨. ಅದೇ, ಪು.ಸಂ. ೮೩

೪೩. ಅದೇ, ಪುಸಂ. ೭೬

೪೪. ರೈಸ್ ಬಿ.ಎಲ್.(ಸಂ), ಎ.ಕ. ಜಗಲೂರು, ೪೫, ಪು.ಸಂ. ೨೪೧

೪೫. ಅದೇ, ಪು.ಸಂ. ೪೯

೪೬. ಅದೇ, ಪು.ಸಂ. ೧೫

೪೭. ಅದೇ, ಪು.ಸಂ. ೨೩೧

೪೮. ಅದೇ, ಪು.ಸಂ. ೨೩೭

೪೯. ಶ್ಯಾಮಲಾ ಸಿ.ಆರ್., ಪೂರ್ವ ಕರ್ನಾಟಕ ಪಾಳೆಯಗಾರರು ಪು.ಸಂ. ೧೭೮

೫೦. ಷೇಕ್‌ಅಲಿ ಬಿ.(ಪ್ರಸಂ.), ಕರ್ನಾಟಕ ಚರಿತ್ರೆ, ಸಂಪುಟ-೩, ಪು.ಸಂ. ೩೨೦

೫೧. ರೈಸ್ ಬಿ.ಎಲ್., ಎ.ಕ. ಸಂ-೭, ಪು.ಸಂ.

೫೨. ಎಸ್.ಐ.ಐ.-೯, ಭಾಗ-೨, ೬೬೬, ಮುತ್ತಗಿ, ಕ್ರಿ.ಶ. ೧೫೫೨, ಹರಪನಹಳ್ಳಿ ತಾ. ದಾವಣಗೆರೆ ಜಿ.

೫೩. ಎಂ.ಎ.ಆರ್. ೧೯೪೭, ಅನಗೋಡ ದಾವಣಗೆರೆ, ತಾ.ಜಿ

೫೪. ರೈಸ್ ಬಿ.ಎಲ್., ಪೂರ್ವೋಕ್ತ, ಸಂಪುಟ-೭

೫೫. ಎಸ್.ಐ.ಐ. ೯, ಭಾಗ-೨, ಮುತ್ತಿಗೆ ೧೫೫೭, ದಾವಣಗೆರೆ

೫೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ ೩೭೧

೫೭. ಶಿವಣ್ಣ ಕೆ. ಎಸ್., ೧೯೮೩, ಅಗ್ರೇರಿಯನ್ ಸಿಸ್ಟಮ್ಸ್ ಆಫ್ ಕರ್ನಾಟಕ.

೫೮. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ-೧, ಪು.ಸಂ. ೨೩೧

೫೯. ಶಾಮಶಾಸ್ತ್ರಿ(ಸಂ), ೧೯೬೭, ಕೌಟಿಲ್ಯನ ಅರ್ಥಶಾಸ್ತ್ರ

೬೦. ಚಿದಾನಂದಮೂರ್ತಿ ಎಂ., ೧೯೭೪, ಪೂರ್ವೋಕ್ತ, ಪು.ಸ.ಂ ೩೬೨

೬೧. ಸಂತೋಷ ಎನ್.ಜಿ., ೨೦೦೯, ಅಪ್ರಕಟಿತ ಮಹಾಪ್ರಬಂಧ, ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ, ಪು.ಸಂ. ೧೪೦-೧೪೧

೬೨. ಹಿರೇಮಠ ಬಿ.ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು,

೬೩. ಶಿವಣ್ಣ ಕೆ.ಎಸ್., ಪೂರ್ವೋಕ್ತ, ಪು.ಸಂ. ೧೫೩

೬೪. ಗುರುರಾಜಾಚಾರ್. ಎಸ್., ಸಮ್ ಆಸ್‌ಪೆಕ್ಟ್ಸ್ ಆಫ್ ಎಕನಾಮಿಕ್ ಆ್ಯಂಡ್ ಸೋಶಿಯಲ್ ಲೈಫ್ ಇನ್ ಕರ್ನಾಟಕ, ಪ್ರಸಾರಾಂಗ ಮೈಸೂರು, ವಿಶ್ವವಿದ್ಯಾನಿಲಯ ೧೯೭೪, ಪು.ಸಂ. ೧೯

೬೫. ಫ್ರಾನ್ಸಿಸ್ ಬುಕಾನನ್, ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್ ಸಂ-೨, ಪು.ಸಂ. ೩೩

೬೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೧, ಹರಪನಹಳ್ಳಿ, ಪು. ೧೩೩

೬೭. ಅದೇ, ಹರಪನಹಳ್ಳಿ ಪು.ಸಂ. ೨೧೨,

೬೮. ಸದಾಶಿವಪ್ಪ ಕುಂ.ಬಾ, ಪೂರ್ವೋಕ್ತ, ಪು.ಸಂ. ೯೯-೧೦೦

೬೯. ಅದೇ, ಪು.ಸಂ. ೧೦೫

೭೦. ಅದೇ, ಪು.ಸಂ. ೧೦೫

೭೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ಹರಪನಹಳ್ಳಿ, ೧೧೩, ಕ್ರಿ.ಶ. ೧೩೮೭

೭೨. ಅದೇ, ಹರಪನಹಳ್ಳಿ, ೧೯೨, ೧೬೪೪
೭೩. ಮೇಗಳಗೆರೆಯ ಕಲ್ಲೇಶ್ವರ ದೇವಾಲಯದ ಶಾಸನ, ೩ನೇ ಬಸಪ್ಪನಾಯಕನ ಶಾಸನ
೭೪. ಕಲಬುರ್ಗಿ ಎಂ.ಎಂ.(ಸಂ), ಕರ್ನಾಟಕ ಕೈಫಿಯತ್ತುಗಳು, ಪು.ಸಂ. ೨೧೧
೭೫. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೪೨
೭೬. ರೈಸ್ ಬಿ.ಎಲ್., ಎಫಿಗ್ರಾಫಿಯಾ ಕರ್ನಾಟಕ, ಸಂ, ಚನ್ನಗಿರಿ ೬೯, ಕ್ರಿ.ಶ. ೧೫೬೩
೭೭. ಅದೇ, ಚನ್ನಗಿರಿ ೬೨, ಕ್ರಿ.ಶ. ೧೫೬೫
೭೮. ಸಂತೋಷ ಎನ್.ಜಿ., ಪೂರ್ವೋಕ್ತ, ಪು.ಸಂ. ೮೩-೮೪
೭೯. ಅದೇ, ಪು.ಸಂ. ೮೪
೮೦. ಫ್ರಾನ್ಸಿಸ್ ಬುಕಾನನ್, ಎ. ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್ ಸಂ-೩, ಪು.ಸಂ. ೩೪
೮೧. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೮೦
೮೨. ಅದೇ, ಪು.ಸಂ. ೧೨೪
೮೩. ರೈಸ್ ಬಿ.ಎಲ್., ಪೂರ್ವೋಕ್ತ, ಎ.ಕ. ಜಗಳೂರು. ೨೨
೮೪. ಅದೇ, ಪು.ಸಂ. ೩೧
೮೫. ಅದೇ, ಪು.ಸಂ. ೬೩
೮೬. ಅದೇ, ಪು.ಸಂ. ೪೨
೮೭. ಅದೇ, ಪು.ಸಂ. ೪೬
೮೮. ಅದೇ, ಪು.ಸಂ. ೫೫
೮೯. ಅದೇ, ಪು.ಸ.೦ ೯೨
೯೦. ಅದೇ, ಪು.ಸಂ. ೧೦೫
೯೧. ಅದೇ, ಪು.ಸಂ. ೧೦೯
೯೨. ಕನ್ನಡ ವಿಶ್ವವಿದ್ಯಾಲಯ ಹಂಪಿ, ಶಾಸನ ಸಂ-೧, ಹರಪನಹಳ್ಳಿ ೧೯೨ ಕ್ರಿ.ಶ. ೧೬೪೪
೯೩. ಕಲಬುರ್ಗಿ ಎಂ.ಎಂ.(ಸಂ), ಪೂರ್ವೋಕ್ತ ಪು.ಸಂ. ೨೫
೯೪. ಅದೇ, ಪು.ಸಂ. ೪೨೫
೯೫. ಅದೇ, ಪು.ಸಂ. ೧೦೨
೯೬. ಅದೇ, ಪು.ಸ.೦ ೧೦೨
೯೭. ಫ್ರಾನ್ಸಿಸ್ ಬುಕಾನನ್, ಪೂರ್ವೋಕ್ತ, ಪು. ೩೪೨
೯೮. ಸಂತೋಷ್ ಎನ್.ಜಿ., ಪೂರ್ವೋಕ್ತ, ಪು.ಸಂ. ೧೦೭

೯೯. ಜಿ.ಎಲ್.ರೈಸ್(ಸಂ), ಎ.ಕ. ಚನ್ನಗಿರಿ ೪೩, ಕ್ರಿ.ಶ. ೧೬೫೩

೧೦೦. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೩೦

೧೦೧. ನಾಯಕ್ ಎಸ್.ಜಿ., ಕುಂದೂರು ಅಪ್ರಕಟಿತ ಶಾಸನ, ಇತಿಹಾಸ ದರ್ಶನ ಸಂ-೨೦, ಪು. ೬೦

೧೦೨. ರೈಸ್. ಬಿ.ಎಲ್., ಪೂರ್ವೋಕ್ತ ೨೦೬, ಕ್ರಿ.ಶ. ೧೫೨೫

೧೦೩. ಶಿವಣ್ಣ ಕೆ.ಎಸ್.(ಸಂ), ಕರ್ನಾಟಕ ಚರಿತ್ರೆ ಸಂ-೩, ಪು.ಸಂ. ೧೫೩

೧೦೪. ರೈಸ್ ಬಿ.ಎಲ್., ಪೂರ್ವೋಕ್ತ, ೨೦೬, ದಾವಣಗೆರೆ ಕ್ರಿ.ಶ. ೧೬೯೮

೧೦೫. ಎ.ಕ ಚನ್ನಗಿರಿ, ೪೩, ಕ್ರಿ.ಶ. ೧೬೫೩

೧೦೬. ಎ.ಆರ್.ಎಂ. ನಂ. ೩೧೮

೧೦೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಹರಪನಹಳ್ಳಿ ೧೯ ಕ್ರಿ.ಶ. ೧೭೩೧

೧೦೮. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪು.ಸಂ. ೧೩೩, ೧೩೪)

೧೦೯. ಅದೇ, ಪು.ಸ.ಂ ೧೩೭

೧೧೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಹರಪನಹಳ್ಳಿ, ೨೦೧೩, ಕ್ರಿ.ಶ. ೧೭೨೯

೧೧೧. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೯೮

೧೧೨. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೭೯

೧೧೩. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ಸಂತೆಬೆನ್ನೂರು ನಾಯಕರು ಸಂತೆಬೆನ್ನೂರು ನಾಯಕರ ಶಾಸನಗಳು ಶಾಸನ ಸಂಪುಟ-೪೧ ಕ್ರಿ.ಶ. ೧೬೭೦ ಪು.ಸಂ. ೧೨೮-೧೨೯

೧೧೪. ಅದೇ, ಶಾಸನ ಸಂಪುಟ-೭, ಕ್ರಿ.ಶ. ೧೫೭೬ ಪು.ಸಂ. ೭೮-೮೦

೧೧೫. ಅದೇ, ಶಾಸನ ಸಂಪುಟ-೬, ೭, ಕ್ರಿ.ಶ. ೧೫೭೬, ಪು.ಸಂ. ೭೭-೮೦

೧೧೬. ಅದೇ, ಎ.ಕ. XI, ಶಾಸನ ಸಂಪುಟ-೧೪೪ ಕ್ರಿ.ಶ. ೧೫೮೧

೧೧೭. ಅದೇ, ಚನ್ನಗಿರಿ, ಶಾಸನ ಸಂಪುಟ-೪೮, ಕ್ರಿ.ಶ. ೧೫೫೬

೧೧೮. ಅದೇ, ದಾವಣಗೆರೆ ಶಾಸನ ಸಂಪುಟ ೧೫೮, ಕ್ರಿ.ಶ. ೧೫೭೬

೧೧೯. ಅದೇ, ಚನ್ನಗಿರಿ ಶಾಸನ ಸಂಪುಟ-೬೨, ೧೫೬೫,

೧೨೦. ಅದೇ, ಚನ್ನಗಿರಿ, ಶಾಸನ ಸಂಪುಟ-೪೨, ೧೬೦೭

೧೨೧. ಅದೇ, ಪು.ಸಂ. ೭೯-೮೦

೧೨೨. ಶಾಮಶಾಸ್ತ್ರಿ ಆರ್.(ಸಂ), ಕೆಳದಿ ನೃಪವಿಜಯಂ ೧೯೭೩, ಪು.ಸಂ. ೧೫೯

೧೨೩. ಜಸವಂತಪ್ಪ ಜಿ., ಹರಪನಹಳ್ಳಿ ಪಾಳೆಯಗಾರರು ೮೦ನೇ ವಾರ್ಷಿಕೋತ್ಸವ ಮಿಥಿಕ್ ಸೊಸೈಟಿ ವಿಚಾರ ಸಂಕಿರಣದ ಸಂಕಲನ, ಬೆಂಗಳೂರು, ದಿ. ೧೨.೬.೧೯೮೮

೧೨೪. ಶಾಮಶಾಸ್ತ್ರಿ ಆರ್., ಪೂರ್ವೋಕ್ತ, ಪು.ಸಂ. ೧೫೯

೧೨೫. ಕೆಳದಿ ನೃಪವಿಜಯಂ ೧೯೭೭, ಕ.ಸ.ಪ. ಪು.ಸಂ ೨೦೯-೨೯೧

೧೨೬. ಇತಿಹಾಸದರ್ಶನ, ಸಂಪುಟ-೧೪, ಪು.ಸಂ. ೨೪೦

೧೨೭. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪು.೧೧೦

೧೨೮. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೧೧೧

೧೨೯. ಅದೇ, ಪು.ಸಂ. ೧೧೧

೧೩೦. ಅದೇ, ಪು.ಸಂ. ೧೧೧

೧೩೧. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ಪೂರ್ವೋಕ್ತ, ಪು.ಸಂ. ೫೭

೧೩೨. ಅದೇ, ಪು.ಸಂ. ೫೭

೧೩೩. ಅದೇ, ಪು.ಸಂ. ೫೮

೧೩೪. ಗೋಪಾಲ್ ಆರ್.(ಸಂ), ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.ಸಂ. ೨೪೮

೧೩೫. ಶ್ಯಾಮಲ, ಸಿ.ಆರ್., ಪೂರ್ವ ಕರ್ನಾಟಕದ ಪಾಳೆಯಗಾರರು, ಪು.ಸಂ. ೨೨೪

೧೩೬. ಗೋಪಾಲ್ ಆರ್., ಪೂರ್ವೋಕ್ತ ೨೪೯

೧೩೭. ಮಂಜುನಾಥ ಸಿ.ಯು., ಧಾರ್ಮಿಕ ಸಂಘರ್ಷ ಮತ್ತು ಸಮನ್ವಯ, ಪು.ಸಂ. ೨೪೭

೧೩೮. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪು.ಸಂ. ೮೯

೧೩೯. ಶ್ರೀಕೂಡ್ಲಿ ಶೃಂಗೇರಿ ಮಠದ ಶಾಸನಗಳು

೧೪೦. ರಾಜಾರಾಮ ಹೆಗಡೆ, ಮಲೆಕರ್ನಾಟಕದ ಅರಸು ಮನೆತನಗಳು, ಪು.ಸಂ. ೨೬೧-೨೬೨

೧೪೧. ಗಂಗಾನಾಯಕ್ ಕೆ.ಎನ್.(ಸಂ), ಪಾಳೆಯಗಾರರ ಶಾಸನ ಸಂಪುಟ-೧, ಪು.ಸಂ. ೩೩

೧೪೨. ಮಂಜುನಾಥ ಟಿ., ೨೦೦೬, ಚಿತ್ರದುರ್ಗ ಹಾಗೂ ಸುತ್ತಮುತ್ತಲಿನ ಪಾಳೆಯಗಾರರ ಸಾಂಸ್ಕೃತಿಕ ಇತಿಹಾಸ (ಅಪ್ರಕಟಿತ ಮಹಾಪ್ರಬಂಧ) ಪು.ಸಂ. ೨೮೮

೧೪೩. ಸಂತೆಬೆನ್ನೂರು ಸುಮತೀಂದ್ರ ನಾಡಿಗ್ ಪೂರ್ವೋಕ್ತ, ಪು.ಸಂ. ೪೫

೧೪೪. ಎ.ಕ ೭. ಹೊನ್ನಾಳಿ ೬೦, ಸಾಳಂಗ ೧೫೭೧, ಹೊನ್ನಾಳಿ(ತಾ) ದಾವಣಗೆರೆ (ಜಿ)

೧೪೫. ರೈಸ್ ಬಿ.ಎಲ್., ಪೂರ್ವೋಕ್ತ, ೧೧, ದಾವಣಗೆರೆ, ಪು.ಸಂ. ೭೯

೧೪೬. ಅದೇ, ಜಗಲೂರು, ಪು.ಸಂ. ೪೫

೧೪೭. ರೈಸ್. ಬಿ.ಎಲ್., ಎ.ಕ. ೭ ಚನ್ನಗಿರಿ ೬೬

೧೪೮. ಅದೇ, ಪು.ಸಂ. ೮೨

೧೪೯. ಅದೇ, ಪು.ಸಂ. ೧೦೭

೧೫೦. ಅದೇ, ಪು.ಸಂ. ಜಗಲೂರು

೧೫೧. ಅದೇ, ಪು.ಸಂ. ಜಗಲೂರು

೧೫೨. ಅದೇ, ಪು.ಸಂ. ಚನ್ನಗಿರಿ-೧೧

೧೫೩. ಎ.ಕ.-೧೧, ಜಗಲೂರು-೩೫

## ಅಧ್ಯಾಯ ಐದು

# ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರ ಕಾಲದ ಕಲೆ ಮತ್ತು ವಾಸ್ತುಶಿಲ್ಪ

ಅರವತ್ತುನಾಲ್ಕು ಕಲೆಗಳಲ್ಲಿ ಶಿಲ್ಪಕಲೆಯು ಒಂದು. ಅದರ ಭಾಗವಾಗಿರುವುದೇ ವಾಸ್ತುಶಿಲ್ಪ. ದೇವತೆ ಅಥವಾ ಮಹಾತ್ಮರ ಸಂಕೇತ ಅಥವಾ ಮೂರ್ತಿಗಳಿಗೋಸ್ಕರ ಮಾಡಿದ ಹಾಗೂ ಮನುಷ್ಯರು ವಾಸಿಸುವ ಸ್ಥಳ ಅಥವಾ ವಸತಿಯೇ ವಾಸ್ತು ಎನಿಸುತ್ತದೆ. ವಸ್ತುವಿನಿಂದ ರಚನೆಗೊಂಡದ್ದೇ ವಾಸ್ತು. ಯೋಗ್ಯವಾದ ವಸ್ತುವಿನ ಮೇಲೆ ರಚಿಸಲಾದ ಎಲ್ಲಾ ರಚನೆಗಳನ್ನು ವಾಸ್ತುರಚನೆ ಎನ್ನಬಹುದು. ವ್ಯಾಪಕವಾಗಿ ಮನುಷ್ಯರ ಜೀವನಕ್ಕೆ ಅವಶ್ಯವಾದ ಯಾವುದೇ ರಚನೆ ಕೂಡ ವಾಸ್ತುರಚನೆಯಾಗುತ್ತದೆ. ಹೀಗೆ ಮನೆ, ಕೆರೆ, ಸೇತುವೆ, ಕೋಟೆ, ಅರಮನೆ, ದೇವಾಲಯ, ಮುಂತಾದ ಎಲ್ಲಾ ರಚನೆಗಳು ವಾಸ್ತುಶಿಲ್ಪ ಎನಿಸುತ್ತವೆ. ವಾಸ್ತುಶಿಲ್ಪ ಸಂಸ್ಕೃತಿಯ ವಿಕಾಸಕ್ಕೆ ಮೂಲವೆಂದು ಹೇಳಬಹುದು. ಇವು ಸಾಮಾಜಿಕ ಜೀವನದ ಪ್ರತಿರೂಪ ವಾಸ್ತುಕಾರರು ಮತ್ತು ಶಿಲ್ಪಿಗಳ ಸಹಾಯದಿಂದ ದೇವಸ್ಥಾನಗಳನ್ನು, ಮಠಗಳನ್ನು, ಕೋಟೆಗಳನ್ನು, ಅಗ್ರಹಾರಗಳನ್ನು, ಕೆರೆ, ಬಾವಿಗಳನ್ನು ಕಟ್ಟಿದರು. ವಾಸ್ತುಶಿಲ್ಪದಿಂದ ಆ ಕಾಲದ ಜನಜೀವನವನ್ನು, ನಂಬಿಕೆಗಳನ್ನು ಮತ್ತು ಸಮಾಜದ ಪದ್ಧತಿಗಳನ್ನು ತಿಳಿಯಬಹುದು.

ಮಾನವ ಜನಾಂಗದ ವಿಕಾಸವನ್ನು ಗುರುತಿಸುವ ವಿವಿಧ ಹಂತಗಳನ್ನು ವಾಸ್ತು ಮತ್ತು ಶಿಲ್ಪದ ಬೆಳವಣಿಗೆಯಲ್ಲಿ ಕಂಡುಕೊಳ್ಳಬಹುದು. ವಾಸ್ತುಕಾರರು ತಮ್ಮ ಕಲೆಯ ಸಾರ್ಥಕತೆಯನ್ನು ಅರಮನೆ, ಕೋಟೆ, ದೇವಾಲಯಗಳ ನಿರ್ಮಾಣದಲ್ಲಿ ಕಂಡುಕೊಂಡರು. ವಿಜಯನಗರ ಸಾಮ್ರಾಜ್ಯ ಪತನವಾದ ನಂತರ ಅಮರನಾಯಕರು, ಪಾಳೆಯಗಾರರು, ಸಂಸ್ಥಾನಿಕರು, ಮಾಂಡಲಿಕರು ಅಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸಿದರು. ವಿಜಯನಗರ ಅವನತಿ ಆದ ನಂತರ ಅಲ್ಲಿದ್ದ ವಾಸ್ತುಕಾರರು, ಸ್ಥಪತಿಗಳು ವಿವಿಧ ಅಮರನಾಯಕರು, ಪಾಳೆಯಗಾರರು ಹಾಗೂ ಚಿಕ್ಕಪುಟ್ಟ ಅರಸರ ಆಶ್ರಯವನ್ನು ಪಡೆದುಕೊಂಡ ವಿಷಯ ತಿಳಿಯುತ್ತದೆ. ಆದುದರಿಂದ ವಿಜಯನಗರದ ವಾಸ್ತು ಮತ್ತು ಕಲಾ ಪರಂಪರೆ ಪಾಳೆಯಗಾರರ ಕಾಲದಲ್ಲಿ ಮುಂದುವರಿಯಿತು.

ಇವರ ಕಾಲದಲ್ಲಿ ವಾಸ್ತುಕಲೆಯಲ್ಲಿ ವಿಜಯನಗರದಷ್ಟು ವೈಭವವವನ್ನು ಪಡೆದುಕೊಂಡಿರಲಿಲ್ಲ. ಕಾರಣ ಆರ್ಥಿಕ ಸಂಪನ್ಮೂಲದ ಕೊರತೆ, ನಿರಂತರ ಯುದ್ಧಗಳು ಮುಂತಾದ ಅಂಶಗಳು ಕಂಡುಬರುತ್ತವೆ. ಆದರೆ ಪಾಳೆಯಗಾರರ ವಾಸ್ತುಕಲೆ ವಿಜಯನಗರದ ವೈಭವದ ನೆರಳಿನಂತೆ ಕಂಡುಬರುತ್ತದೆ.

ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಆಳ್ವಿಕೆ ಪ್ರದೇಶದ ವ್ಯಾಪ್ತಿಯಲ್ಲಿ ಅನೇಕ ರಾಜಕೀಯ ಏಳುಬೀಳುಗಳ ನಡುವೆ ವಾಸ್ತುಶಿಲ್ಪ, ಚಿತ್ರಕಲೆ, ಜನಪದಕಲೆ ಸಾಂಸ್ಕೃತಿಕ ಕ್ಷೇತ್ರಗಳಾಗಿ ಮಾರ್ಪಟ್ಟಿವೆ. ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನ, ದೇವಸ್ಥಾನ, ಮಠ ಹಾಗೂ ವೀರಗಲ್ಲುಗಳಿಂದ ಇವುಗಳನ್ನು ತಿಳಿದುಕೊಳ್ಳಬಹುದು. ವಾಸ್ತುಕಾರರಿಗೆ ಸಮರ್ಥ ಆಶ್ರಯ ದೊರೆತು ಈ ಪ್ರದೇಶದಲ್ಲಿ ವಾಸ್ತುಶಿಲ್ಪಕಲೆ ಶ್ರೀಮಂತವಾಗಿ ಬೆಳೆದಿದೆ. ವಾಸ್ತುಕಾರರು ಹಾಗೂ ಶಿಲ್ಪಿಗಳು ಪಾಳೆಯಗಾರರ ಸಹಾಯದಿಂದ ದೇವಸ್ಥಾನಗಳನ್ನು, ಮಠಗಳನ್ನು, ಕೋಟೆಗಳನ್ನು, ಅಗ್ರಹಾರಗಳನ್ನು, ಕೆರೆ, ಬಾವಿಗಳನ್ನು ಕಟ್ಟಿಸಿದರು. ಹಬ್ಬ-ಹರಿದಿನ, ಧರ್ಮ ಇವುಗಳ ನಂಬಿಕೆಗಳಿಂದ ದೇವಸ್ಥಾನಗಳು, ಮಠಗಳು ಹುಟ್ಟಿಕೊಂಡವು. ಇವು ಶೈಕ್ಷಣಿಕ ಕೇಂದ್ರವೂ ಸಾಂಸ್ಕೃತಿಕ ಆಗರವೂ ಆಗಿದ್ದವು. ವಾಸ್ತುಶಿಲ್ಪದಿಂದ ಪಾಳೆಯಗಾರರ ಕಾಲದ ಜನಜೀವನ, ನಂಬಿಕೆಗಳು, ಸಮಾಜದ ಪದ್ಧತಿಗಳು ಮುಂತಾದ ಹಲವಾರು ಅಂಶಗಳನ್ನು ತಿಳಿಯಬಹುದು. ಹೀಗೆ ವಾಸ್ತುಶಿಲ್ಪ ಬೆಳೆಯಲು ದೇವಸ್ಥಾನಗಳೇ ಪ್ರಮುಖ ಕಾರಣವೆಂದು ಹೇಳಬಹುದು.

ಪಾಳೆಯಗಾರರು ವಿಜಯನಗರ ಸಾಮ್ರಾಜ್ಯ ಪತನವಾದ ನಂತರ ಅವರ ರಾಜ್ಯಾಡಳಿತ ಕ್ರಮ, ಆರ್ಥಿಕ ವ್ಯವಸ್ಥೆ, ಧಾರ್ಮಿಕ ಪರಂಪರೆ, ಸಾಮಾಜಿಕ ಚಟುವಟಿಕೆಗಳನ್ನು ಅನುಸರಿಸಿಕೊಂಡು ಬಂದಂತೆ ಕಲೆ ಮತ್ತು ವಾಸ್ತುಶಿಲ್ಪದ ಸಂಸ್ಕೃತಿಯನ್ನು ಪೋಷಿಸಿಕೊಂಡು ಬಂದಿದ್ದಾರೆ. ಇವರು ರಕ್ಷಣೆಗಾಗಿ ಕೋಟೆಗಳನ್ನು ಕಟ್ಟಿ ಅದರೊಳಗೆ ಅರಮನೆ, ದೇವಸ್ಥಾನಗಳು, ಮಠಗಳನ್ನು ಕಟ್ಟಿಕೊಂಡಿದ್ದರು. ಹಲವು ದೇವಾಲಯಗಳನ್ನು ಕಟ್ಟಿದ್ದರೆ ಮತ್ತೆ ಕೆಲವು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿರುವುದು ಕಂಡುಬರುತ್ತದೆ.

ಪಾಳೆಯಗಾರರ ಕಾಲದ ದೇವಾಲಯಗಳು ವಿಜಯನಗರ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿವೆ ಯಾದರೂ ಸಾಕಷ್ಟು ಪ್ರಾದೇಶಿಕ ಪ್ರಭಾವಕ್ಕೆ ಒಳಗಾಗಿವೆ. ಹೆಚ್ಚಾಗಿ ಸ್ಥಳೀಯ ಅಂಶಗಳನ್ನು ಒಳಗೊಂಡ ಈ ದೇವಾಲಯಗಳನ್ನು ವಿಜಯನಗರ ವಾಸ್ತುಶೈಲಿಯ ಪ್ರಾದೇಶಿಕ ರೂಪಗಳೆಂದು ಹೇಳಬಹುದು. ಪಾಳೆಯಗಾರರ ರಾಜಕೀಯ ಮತ್ತು ಆರ್ಥಿಕ ಇತಿಮಿತಿಗಳು ಹಾಗೂ ದೇವಾಲಯಗಳ ನಿರ್ಮಾಣದಲ್ಲಿ ಸ್ಥಳೀಯ ಶಿಲ್ಪಗಳ ವ್ಯಾಪಕ ಬಳಕೆ ಈ ಬದಲಾವಣೆಗೆ ಕಾರಣವಾಗಿದೆ. ಇವರು ಒಂದು ಕಡೆ ಶಿಷ್ಟ ಪ್ರಕಾರದ ಶೈಲಿಯನ್ನು ಅನುಸರಿಸುತ್ತಾರೆ. ಮತ್ತೊಂದೆಡೆ ಜನಪದೀಯ ಶೈಲಿಗೆ ಅನಿವಾರ್ಯವಾಗಿ ಬದಲಾವಣೆ ಮಾಡಿಕೊಂಡಿದ್ದರು. ಇವರು ಪ್ರಧಾನವಾಗಿ ಸ್ಥಳೀಯವಾಗಿ ಸಿಗುವ ಕಣಶಿಲೆ(ಗ್ರಾನೈಟ್)ಯನ್ನು ಬಳಸಿಕೊಂಡಿದ್ದಾರೆ.

ಕಣಶಿಲೆಯ ನಂತರ ಸಾಮಾನ್ಯವಾಗಿ ಶಿಖರ, ಮುಖಮಂಟಪ, ದೇವಕೋಷ್ಠಗಳು, ಅವುಗಳಲ್ಲಿರುವ ಶಿಲ್ಪಗಳು ಕಾಲ, ಹಾರ, ಕೋಲಾಟಗಳು ಹಾಗೂ ದ್ವಾರಗೋಪುರಗಳನ್ನು ಇಟ್ಟಿಗೆ, ಸಣ್ಣಸಣ್ಣ ಕಲ್ಲಿನ ತುಂಡುಗಳು ಮತ್ತು ಗಾರೆಯಿಂದ ನಿರ್ಮಿಸಲಾಗಿದೆ.

ಪಾಳೆಯಗಾರರು ಎಲ್ಲಾ ಧರ್ಮಗಳಿಗೆ ಪ್ರೋತ್ಸಾಹ ನೀಡುತ್ತಿದ್ದರೆಂದು ತಿಳಿದುಬರುತ್ತದೆ. ಶೈವ, ವೈಷ್ಣವ, ವೀರಶೈವ ಮುಂತಾದ ಸಂಪ್ರದಾಯದ ಹಲವು ದೇವಾಲಯಗಳನ್ನು ಕಟ್ಟಿಸುವುದರ ಜೊತೆಗೆ ಇತರರು ಕಟ್ಟಲು ಪ್ರೋತ್ಸಾಹ ನೀಡಿದರು. ೧೫ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಹರಪನಹಳ್ಳಿ, ಸಂತೆಬೆನ್ನೂರು, ಬಸವಾಪಟ್ಟಣ, ತರೀಕೆರೆ, ಬಿಳಿಚೋಡು, ಜಗಲೂರು, ಉಚ್ಚಂಗಿದುರ್ಗ ಮುಂತಾದ ಪಾಳೆಯಗಾರರು ಅನೇಕ ದೇವಸ್ಥಾನಗಳನ್ನು, ಮಠಗಳನ್ನು, ಕೋಟೆ, ಅರಮನೆಗಳನ್ನು, ಕೆರೆ, ಕಾಲುವೆಗಳನ್ನು ಕಟ್ಟಿಸಿದ್ದಲ್ಲದೆ ಅವುಗಳ ನಿರ್ವಹಣೆಗಾಗಿ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ.

**ಹರಪನಹಳ್ಳಿ ಪಾಳೆಯಗಾರರ ಕಾಲದ ಕಲೆ ಮತ್ತು ವಾಸ್ತುಶಿಲ್ಪ**

ಹರಪನಹಳ್ಳಿ ಪಾಳೆಯಗಾರರು ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಈ ಪಾಳೆಯಗಾರರು ಆಳ್ವಿಕೆ ನಡೆಸಿದ ಪ್ರದೇಶದ ವ್ಯಾಪ್ತಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಹಲವು ಗ್ರಾಮಗಳಲ್ಲಿ ತಮ್ಮ ಕೊಡುಗೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಪ್ರಮುಖವಾಗಿ ಹರಪನಹಳ್ಳಿ, ಉಚ್ಚಂಗಿದುರ್ಗ, ಕೂಲಹಳ್ಳಿ, ಹಿರೇಮ್ಯಾಗಳಗೇರಿ, ಅರಸೀಕೆರೆ, ನಾರಾಯಣದೇವರ ಕೆರೆ, ಕೊಟ್ಟೂರು, ಹನಸಿ, ಅರಸಿಕೇರೆ, ಮೈದೂರು, ದೇವರ ತಿಮ್ಮಲಾಪುರ, ಹಂಪಾಪಟ್ಟಣ, ಕುಂಚೂರು, ಕೂಲಹಳ್ಳಿ, ಬಂಡ್ರಿ, ನಿಚ್ಚವ್ವನಹಳ್ಳಿ ಮುಂತಾದ ಗ್ರಾಮಗಳಲ್ಲಿ ಕೋಟೆಗಳು, ದೇವಾಲಯಗಳು, ಬುರುಜುಗಳು ಕಂಡುಬರುತ್ತವೆ. ಆದರೆ ಇವುಗಳನ್ನು ಗುರುತಿಸಲು ಸ್ವಲ್ಪ ಕಷ್ಟವಾದರೂ ಸ್ಥಳೀಯರ ಹೇಳಿಕೆಗಳಿಂದ ಅವಲೋಕಿಸಿ ಪರಸ್ಪರ ಹೋಲಿಕೆಗಳಿಂದ ಸ್ಪಷ್ಟವಾಗಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಕೆಲವು ಗ್ರಾಮಗಳಲ್ಲಿನ ದೇವಾಲಯಗಳು ಆಧುನಿಕ ಕಾಲಕ್ಕೆ ತಕ್ಕಂತೆ ಜೀರ್ಣೋದ್ಧಾರಗೊಂಡು ಬೇರೆ ಸ್ವರೂಪವನ್ನು ಪಡೆದುಕೊಂಡಿವೆ. ಆದರೂ ತುಲನಾತ್ಮಕ ಅಧ್ಯಯನ ಮಾಡುವುದರ ಮೂಲಕ ಹರಪನಹಳ್ಳಿ ಪಾಳೆಯಗಾರರ ವಾಸ್ತುರಚನೆ, ಲಕ್ಷಣಗಳನ್ನು ಗುರುತಿಸಲು ಒಂದು ಸಣ್ಣ ಪ್ರಯತ್ನ ಮಾಡಲಾಗಿದೆ.

**ಹರಪನಹಳ್ಳಿ ಪಾಳೆಯಗಾರರ ಕೋಟೆಗಳು**

ಹರಪನಹಳ್ಳಿ ಪಾಳೆಯಗಾರರು ಹಲವಾರು ಕೋಟೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಕೋಟೆಗಳನ್ನು ಪುರ, ಕಿಲ್ಲೆ, ದುರ್ಗ ಮುಂತಾದ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ದುರ್ಗಮವಾದ, ಪ್ರವೇಶಿಸಲು ಕಷ್ಟಕರವಾದ ಒಂದು ಆಯಕಟ್ಟಿನ ಪ್ರದೇಶವನ್ನು ಕೋಟೆ ಎಂದು ಕರೆಯಬಹುದು. ಸೈನಿಕರಿಂದ ಆವರಿಸಲ್ಪಟ್ಟ ಮತ್ತು ರಕ್ಷಣೆಗೆ ಮೀಸಲಾಗಿರುವ ಗಟ್ಟಿಯಾದ ಕೋಟೆ ಎಂದು ಎಂ.ಕೊಟ್ರೇಶ್ ಅಭಿಪ್ರಾಯಪಡುತ್ತಾರೆ.[೧] ಕೋಟೆಗಳ ಆಕಾರ, ಭೌತಿಕ ಸ್ವರೂಪ,

ಗಾತ್ರ, ಭೌಗೋಳಿಕ ನೆಲೆ, ನಿರ್ಮಾಣ, ತಾಂತ್ರಿಕತೆ, ಬಳಸಿದ ಸಾಮಗ್ರಿ, ತಳ ವಿನ್ಯಾಸ ಮುಂತಾದ ಅಂಶಗಳನ್ನು ಪರಿಗಣಿಸಿ ಕೋಟೆ ಚಿತ್ರಗಳನ್ನು ಗುರುತಿಸಲಾಗುತ್ತದೆ. ಈ ಅಂಶಗಳನ್ನು ಪರಿಗಣಿಸಿ ಕೋಟೆಗಳನ್ನು ಜಲದುರ್ಗ, ಗಿರಿದುರ್ಗ, ವನದುರ್ಗ, ಬಯಲುದುರ್ಗ, ನೆಲದುರ್ಗ, ಪಂಕದುರ್ಗ ಮುಂತಾದ ಅನೇಕ ಪ್ರಕಾರದ ಕೋಟೆಗಳನ್ನು ಗುರುತಿಸಬಹುದು.

ಹರಪನಹಳ್ಳಿ ಪಾಳೆಯಗಾರರ ಕೋಟೆಗಳು ಹಲವು ಗ್ರಾಮಗಳಲ್ಲಿ ದೊರೆತಿವೆ. ಬಾಗಳಿ, ಕೂಲಹಳ್ಳಿ, ಉಚ್ಚಂಗಿದುರ್ಗ, ಹರಪನಹಳ್ಳಿ, ನಾರಾಯಣದೇವರಕೆರೆ, ಕುರೇದಗಡ್ಡಿ, ಹಂಪಾಪಟ್ಟಣ, ತಂಬ್ರಹಳ್ಳಿ, ಹ್ಯಾರಡ, ಹೊಳಲು, ಕರಡಿದುರ್ಗ, ಕೊಟ್ಟೂರು, ವೀರನದುರ್ಗ, ಹನಸಿ ಮುಂತಾದ ಅನೇಕ ಸ್ಥಳಗಳಲ್ಲಿ ಇವರು ಕೋಟೆಗಳನ್ನು ಕಟ್ಟಿಸಿದ್ದಾರೆ. ಆದರೆ ಕೆಲವು ಉತ್ತಮ ಸ್ಥಿತಿಯಲ್ಲಿದ್ದು ಈಗಲೂ ಇವೆ. ಇನ್ನೂ ಕೆಲವು ವಿನಾಶದ ಅಂಚಿನಲ್ಲಿವೆ.

**ಉಚ್ಚಂಗಿದುರ್ಗ ಕೋಟೆ**

ಉಚ್ಚಂಗಿದುರ್ಗ ಪ್ರದೇಶವು ಸಾವಿರಾರು ವರ್ಷಗಳ ಚರಿತ್ರೆಯನ್ನು ಹೊಂದಿದೆ. ಇಲ್ಲಿ ಪಲ್ಲವರು, ಕದಂಬರು, ಗಂಗರು, ರಾಷ್ಟ್ರಕೂಟರು, ನೊಳಂಬರು, ಕಲ್ಯಾಣಿ ಚಾಲುಕ್ಯರು ಹೊಯ್ಸಳರು, ವಿಜಯನಗರದ ಅರಸರು ಆಡಳಿತ ನಡೆಸಿದ ಉಲ್ಲೇಖಗಳನ್ನು ಕಾಣಬಹುದು. ಇಲ್ಲಿನ ಪ್ರಾಚೀನ ಕಾಲದ ದೇವಾಲಯ ಮತ್ತು ಕೋಟೆಯ ಕಾಲವನ್ನು ಸ್ಪಷ್ಟವಾಗಿ ನಿರ್ಣಯಿಸುವುದು ಕಷ್ಟಕರವಾಗಿದೆ. ಇದಕ್ಕೆ ಕಾರಣ ಸ್ಪಷ್ಟ ಆಧಾರಗಳು ಲಭ್ಯವಿಲ್ಲ. ಈ ಪ್ರದೇಶವು ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಕೇಂದ್ರವಾಗಿದ್ದು, ವಿಜಯನಗರ ಸಾಮ್ರಾಜ್ಯಪತನಾನಂತರ ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಆಡಳಿತ ಕೇಂದ್ರವಾಯಿತು. ಇಲ್ಲಿರುವ ಕೋಟೆ ಅತಿ ಪ್ರಾಚೀನವಾದುದು. ಶ್ರೇಷ್ಠ ಗಿರಿದುರ್ಗಕ್ಕೆ ಉದಾಹರಣೆಯಾಗಿದೆ.[೨] ಹರಪನಹಳ್ಳಿ ಪಾಳೆಯಗಾರರ ಸ್ಥಾಪಕ ದಾದಯ್ಯನಾಯಕ ಈ ಕೋಟೆಯನ್ನು ಜೀರ್ಣೋದ್ಧಾರಗೊಳಿಸಿ ಈ ಪ್ರದೇಶದಿಂದ ಆಡಳಿತ ನಡೆಸಿರುವುದು ಕಂಡುಬರುತ್ತದೆ.

ಈ ಕೋಟೆಯನ್ನು ಉತ್ತರ ಮತ್ತು ದಕ್ಷಿಣಕ್ಕೆ ಹಬ್ಬಿರುವ ಬೆಟ್ಟವನ್ನು ಬಳಸಿಕೊಂಡು ನಿರ್ಮಾಣ ಮಾಡಲಾಗಿದೆ. ಈ ಕೋಟೆಯ ಗೋಡೆ ಸುಮಾರು ೧೫ರಿಂದ ೨೦ ಅಡಿ ಎತ್ತರ ಹಾಗೂ ಆರು ಅಡಿ ಅಗಲವಾಗಿದೆ. ಈ ಕೋಟೆಯ ಗೋಡೆಯಲ್ಲಿ ಸುಮಾರು ೩೦ ಬತೇರಿಗಳನ್ನು ನಿರ್ಮಿಸಲಾಗಿದೆ. ಇವುಗಳನ್ನು ಶತ್ರುಗಳನ್ನು ಗಮನಿಸುವುದಕ್ಕೆ ಹಾಗೂ ಕೋಟೆಯ ರಕ್ಷಣೆಗೆ ನಿರ್ಮಾಣ ಮಾಡಿಕೊಳ್ಳಲಾಗಿದೆ. ಇದೊಂದು ಗಿರಿದುರ್ಗವಾಗಿದ್ದು ಬಂದೂಕನ್ನು ಬಳಸಲು ಕಿಂಡಿಗಳನ್ನು ಅಳವಡಿಸಲಾಗಿದೆ. ಕೋಟೆ ಗೋಡೆಯ ಕೆಳಭಾಗದಲ್ಲಿ ಆಯತಾಕಾರದ ಕಲ್ಲುಗಳನ್ನು ಬಳಸಲಾಗಿದೆ.

ಈ ಕೋಟೆಗೆ ಪ್ರಮುಖವಾಗಿ ಆರು ಬಾಗಿಲುಗಳಿವೆ. ಸುಮಾರು ೧.೫ಕಿ.ಮೀ ಉದ್ದವಿದೆ. ಕೋಟೆಯೊಳಗೆ ಶತ್ರುಗಳು ಪ್ರವೇಶಿಸುವುದು ಸುಲಭದ ಕೆಲಸವಾಗಿರಲಿಲ್ಲ. ಸುತ್ತಲೂ ಆಳವಾದ

ಕಂದಕಗಳು ಮತ್ತು ಕಡಿದಾದ ಬೆಟ್ಟವನ್ನು ಹೊಂದಿದೆ. ವಿಶಾಲವಾದ ಮತ್ತು ಎತ್ತರವಾದ ಗೋಡೆಗಳಿದ್ದು, ಗಾರೆಯನ್ನು ಬಳಸಿ ಭದ್ರಪಡಿಸಲಾಗಿದೆ. ಕೋಟೆಯ ಒಳಭಾಗದಲ್ಲಿ ಜನವಸತಿಗಾಗಿ ಗೃಹಗಳಿದ್ದು ನೀರಿನ ಸೌಕರ್ಯ ಕಲ್ಪಿಸಲಾಗಿತ್ತು. ಬೆಟ್ಟದ ತುದಿಯಲ್ಲಿ ಎರಡು ಅರಮನೆ ಹಾಗೂ ಉಚ್ಚಂಗೆಮ್ಮನ ದೇವಾಲಯಗಳು ಕಂಡುಬರುತ್ತವೆ. ಕೋಟೆಯನ್ನು ಆಕ್ರಮಿಸಲು ಶತ್ರುಗಳು ದಾಳಿ ಮಾಡಿದ ಕೆಲವು ಕುರುಹುಗಳು ಕಾಣಸಿಗುತ್ತವೆ. ಈ ಕೋಟೆಯನ್ನು ವಶಪಡಿಸಿಕೊಳ್ಳಲು ಚಿತ್ರದುರ್ಗದ ಪಾಳೆಯಗಾರರು ಅನೇಕ ಬಾರಿ ಯುದ್ಧಗಳನ್ನು ಮಾಡಿದ್ದಾರೆ. ಈ ಕೋಟೆಯಲ್ಲಿ ಪ್ರಮುಖವಾದ ಗಂಟೆಶಾಸನ ಕಂಡುಬಂದಿದ್ದು ದಾದಯ್ಯನಾಯಕನಿಂದ ಬಸಪ್ಪನಾಯಕನವರೆಗಿನ ವಂಶಾವಳಿಯನ್ನು ಗುರ್ತಿಸಲು ಸಹಾಯಕವಾಗುತ್ತದೆ. ಜೊತೆಗೆ ಇವರ ಸಾಮಂತಾಧಿಕಾರಿ ಶಿವನಪ್ಪನಾಯಕನ ಉಲ್ಲೇಖವೂ ಕಂಡುಬರುತ್ತದೆ. ಪಾಳೆಯಗಾರರ ಕಾಲದಲ್ಲಿ ಈ ಕೋಟೆಯನ್ನು ಅನೇಕ ಬಾರಿ ದುರಸ್ಥಿಗೊಳಿಸಿರುವುದು ಕಂಡುಬರುತ್ತದೆ.

ಈ ಕೋಟೆಯಲ್ಲಿ ಅನೇಕ ಗುಡಿಗೋಪುರಗಳು, ಬಾವಿಗಳು, ಹೊಂಡಗಳು, ದೇವಾಲಯಗಳು ಕಂಡುಬರುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಬನಶಂಕರಿ, ತವಕ್ಲೇಶ್ವರ, ಹಾಲಮ್ಮ, ಬಸವಣ್ಣನ ದೇವಾಲಯ, ಕೋಟೆ ಆಂಜನೇಯ, ಕೆಳಕೋಟೆ ಆಂಜನೇಯ, ವೀರಭದ್ರ, ನೊಣಂಬೇಶ್ವರ, ಉಚ್ಚಂಗೆಮ್ಮನ ದೇವಾಲಯಗಳು ಹಾಗೂ ವಿರೂಪಾಕ್ಷ ದೇವಾಲಯ, ಗಣೇಶನ ಗುಡಿ, ಕೋಟೆಯ ಮಧ್ಯೆ ಸೇದುಬಾವಿ, ಸಿದ್ಧೇಶ್ವರ ಮಠ, ಕುಷ್ಠದ ಎಲ್ಲಮ್ಮ, ಉಚ್ಚಲಬಾವಿ, ಶಿವ, ರಾಮಲಿಂಗೇಶ್ವರ, ಜೈನ ಸ್ಮಾರಕಗಳನ್ನು ಕೋಟೆಯ ಒಳಗೆ ಹಾಗೂ ಹೊರಗೆ ಕಾಣಬಹುದು. ಹಾಗೆಯೇ ಕೋಟೆ ಗೋಡೆಗಳಲ್ಲಿ ಅನೇಕ ಉಬ್ಬುಚಿತ್ರಗಳಿವೆ. ಅರಸನಬಾವಿ, ಅರಸಿಯ ಹೊಂಡ, ಹಿರೇಹೊಂಡ, ಚಿಕ್ಕಹೊಂಡ, ಆನೆ ಬಟ್ಟಲಬಾವಿ, ತೊಟ್ಟಿಲಬಾವಿಗಳು ಕಂಡುಬರುತ್ತವೆ.

**ಕರಡಿದುರ್ಗ ಕೋಟೆ**

ಉಚ್ಚಂಗಿದುರ್ಗದ ಬೆಟ್ಟಶ್ರೇಣಿಗಳಿಗೆ ಹೊಂದಿಕೊಂಡಂತೆ ಚಿಕ್ಕದಾದ ಬೆಟ್ಟ ಇದೆ. ಇದನ್ನು ಕರಡಿದುರ್ಗ ಎಂದು ಕರೆಯಲಾಗುತ್ತದೆ. ಇದು ಕೊಡದ ರೂಪದಲ್ಲಿದ್ದು ಈ ಬೆಟ್ಟವನ್ನು ಬಳಸಿ ಕೋಟೆಯನ್ನು ಕಟ್ಟಲಾಗಿದೆ. ಈ ಕೋಟೆಯನ್ನು ಹರಪನಹಳ್ಳಿ ಪಾಳೆಯಗಾರ ಮುಮ್ಮಡಿ ಬಸಪ್ಪನಾಯಕ ಕಟ್ಟಿಸಿರಬಹುದೆಂದು ಇಲ್ಲಿನ ಸ್ಥಳೀಯರು ತಿಳಿಸುತ್ತಾರೆ. ಗಾತ್ರ ಮತ್ತು ವಿಸ್ತೀರ್ಣದಲ್ಲಿ ಚಿಕ್ಕದಾಗಿದ್ದರೂ ಕೋಟೆಯ ಲಕ್ಷಣಗಳು, ಜನವಸತಿ ಸೌಕರ್ಯ ಮುಂತಾದ ದೃಷ್ಟಿಯಿಂದ ವ್ಯವಸ್ಥಿತವಾಗಿತ್ತೆಂದು ತಿಳಿದುಬರುತ್ತದೆ. ಈ ಕೋಟೆಗೆ ದಕ್ಷಿಣ ದಿಕ್ಕಿನಿಂದ ಪ್ರವೇಶವಿದೆ. ಮುಖ್ಯದ್ವಾರ ಶಿಥಿಲಗೊಂಡಿದೆ. ಪ್ರವೇಶದ್ವಾರದ ಎದುರಿಗೆ ಆಂಜನೇಯ ದೇಗುಲವಿದೆ. ಜನವಸತಿಗೆ ಯೋಗ್ಯವಾದ ಕೋಟೆ ಹಿಂಭಾಗದಲ್ಲಿ ಮನೆಗಳನ್ನು ನಿರ್ಮಾಣ ಮಾಡಿಕೊಳ್ಳಲಾಗಿದೆ. ಈ ಮನೆಗಳನ್ನು ಕಣಶಿಲೆಗಳಿಂದ ನಿರ್ಮಿಸಲಾಗಿದೆ. ಕೋಟೆಯ ಮುಖ್ಯದ್ವಾರದ ಎರಡೂ ಬದಿಗೆ ೩೦ರಿಂದ ೪೦ ಅಡಿ ಎತ್ತವಿರುವ ಕೊತ್ತಲಗಳಿವೆ. ಕೋಟೆಯ ಮಧ್ಯಭಾಗದಲ್ಲಿ ಸುಮಾರು ೫೦ ಅಡಿ ಎತ್ತರದ ಬೃಹದಾಕಾರದ ಕೊತ್ತಳವಿದೆ. ಇದು ಸುಮಾರು ೫೦ ಅಡಿ ಸುತ್ತಳತೆಯನ್ನು

ಹೊಂದಿರಬಹುದು. ಇದನ್ನು ಹತ್ತಲು ಮೆಟ್ಟಿಲುಗಳಿದ್ದು ಕೊತ್ತಳದ ಮೇಲಿಂದ ನೋಡಿದರೆ ಇಡೀ ಕೋಟೆಯನ್ನು ಕಾಣಬಹುದು. ಕೋಟೆಯಲ್ಲಿ ಅಲ್ಲಲ್ಲಿ ಕೊತ್ತಲಗಳನ್ನು ನಿರ್ಮಿಸಲಾಗಿದೆ. ಈ ಕೋಟೆಗೋಡೆಯು ಸುಮಾರು ೧೫ರಿಂದ ೨೦ ಅಡಿ ಎತ್ತರವಾಗಿದೆ. ಸುಮಾರು ೪ರಿಂದ ೫ ಅಡಿ ಅಗಲವಿದೆ. ಕೋಟೆಯಲ್ಲಿ ನೀರನ್ನು ಸಂಗ್ರಹಿಸಲು ಹೊಂಡಗಳನ್ನು ಪಾಳೆಯಗಾರರು ನಿರ್ಮಿಸಿದ್ದಾರೆ. ಕೋಟೆಯ ಪ್ರವೇಶದ ಎದುರು ಆಂಜನೇಯ ದೇವಾಲಯವಿದೆ. ಇದು ಗರ್ಭಗೃಹ, ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಆರು ಅಡಿ ಎತ್ತರದ ಆಂಜನೇಯನ ಉಬ್ಬುಶಿಲ್ಪವಿದೆ.

ಉಚ್ಚಂಗಿದುರ್ಗದ ಮೇಲೆ ಶತ್ರುಗಳು ದಾಳಿ ಮಾಡಿದಾಗ ಸೈನ್ಯದ ತುಕಡಿಯನ್ನು ಗುಪ್ತವಾಗಿ ಇಡುವುದಕ್ಕೆ ಕರಡಿದುರ್ಗದ ಕೋಟೆಯನ್ನು ಪಾಳೆಯಗಾರರು ನಿರ್ಮಿಸಿರಬಹುದು ಅಥವಾ ಪಾಳೆಯಗಾರರ ಕುಟುಂಬವರ್ಗದವರು, ಸೈನಿಕರು ಉನ್ನತವರ್ಗದವರು ವಾಸಿಸಲು ಈ ಕೋಟೆಯನ್ನು ಕಟ್ಟಿರಬಹುದೆಂದು ಕರಡಿದುರ್ಗ ಗ್ರಾಮದ ಹಿರಿಯರು ತಿಳಿಸುತ್ತಾರೆ.

**ಬಂಡ್ರಿ ಕೋಟೆ**

ಈ ಕೋಟೆ ಹರಪನಹಳ್ಳಿ ಪಾಳೆಯಗಾರರ ಕಾಲದ ಸೈನಿಕ ನೆಲೆಯಾಗಿದೆ. ಒಂದು ಚಿಕ್ಕ ಬೆಟ್ಟದ ಮೇಲೆ ಪಾಳೆಯಗಾರರು ಕೋಟೆಯನ್ನು ನಿರ್ಮಿಸಿದ್ದಾರೆ. ಕೋಟೆ ಗೋಡೆಯಲ್ಲಿ ಈಗ ನಾಲ್ಕು ಬುರುಜುಗುಳು ಕಂಡುಬರುತ್ತವೆ. ಇನ್ನೂ ಹೆಚ್ಚು ಬುರುಜುಗಳು ಇದ್ದವು ಎಂದು ಸ್ಥಳೀಯರಿಂದ ತಿಳಿದುಬರುತ್ತದೆ. ಮಧ್ಯಭಾಗದಲ್ಲಿ ಒಂದು ದೊಡ್ಡ ಬುರುಜನ್ನು ನೋಡಬಹುದು. ಕೋಟೆಯ ಪ್ರವೇಶದ್ವಾರವನ್ನು ಸುಂದರವಾಗಿ ನಿರ್ಮಿಸಲಾಗಿದೆ. ಪ್ರವೇಶದ್ವಾರದ ಪಕ್ಕದಲ್ಲಿ ಎರಡು ಜಗುಲಿಗಳನ್ನು ನೋಡಬಹುದು. ಕೋಟೆಯ ಒಳಗಡೆ ದಾದಯ್ಯನಾಯಕ ಮತ್ತು ರಂಗಣ್ಣನಾಯಕನ ಚಿಕ್ಕ ಚಿಕ್ಕ ಗುಡಿಗಳಿವೆ. ಆದುದರಿಂದ ಕೋಟೆ ನಿರ್ಮಾಣ ಇವರೀರ್ವರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ತಿಳಿದುಬರುತ್ತದೆ.

ಮಧ್ಯಭಾಗದಲ್ಲಿರುವ ದೊಡ್ಡದಾದ ಬುರುಜನ್ನು ಕರಡಿಹುಡೇವು ಎಂದು ಕರೆಯುತ್ತಾರೆ. ಕೋಟೆಯಲ್ಲಿ ಆನೆಹೊಂಡ, ದೊಡ್ಡಹೊಂಡ, ತುಪ್ಪದ ಕೊಳ ಮತ್ತು ನುಪ್ಪಣ್ಣನ ಗದ್ದುಗೆಗಳಿದ್ದವೆಂದು ಸ್ಥಳೀಯರು ತಿಳಿಸುತ್ತಾರೆ. ಜೊತೆಗೆ ಆಂಜನೇಯ ದೇವಸ್ಥಾನ, ಬಂಡಿಬಸಪ್ಪನ ದೇಗುಲಗಳಿವೆ. ಇದರಲ್ಲಿ ಗರ್ಭಗೃಹ, ಸಭಾಮಂಟಪಗಳಿವೆ. ಗರ್ಭಗೃಹದಲ್ಲಿ ನಂದಿಯ ಶಿಲ್ಪವಿದೆ. ಈ ಕೋಟೆಯೊಳಗೆ ಕಲ್ಲುಗಣಿಗಾರಿಕೆ ನಡೆಯುತ್ತಿರುವುದರಿಂದ ಪ್ರಮುಖ ಸ್ಮಾರಕಗಳು ಸಂಪೂರ್ಣ ನಾಶವಾಗಿದೆ. ಕೋಟೆಗೋಡೆಯು ನಾಶವಾಗಿ ಕೇವಲ ಮಹಾದ್ವಾರ ಮಾತ್ರ ಉಳಿದುಕೊಂಡಿದೆ. ಈ ಕೋಟೆಯು ಹರಪನಹಳ್ಳಿ ಪಾಳೆಯಗಾರರ ರಾಜಕೀಯ, ಸಾಮಾಜಿಕ, ಆಡಳಿತ, ಆರ್ಥಿಕ ಇತಿಹಾಸವನ್ನು ತಿಳಿದುಕೊಳ್ಳಲು ಬಹುಮುಖ್ಯವಾಗಿದೆ ಎಂದು ಹೇಳಬಹುದು.

**ಹರಪನಹಳ್ಳಿ ಕೋಟೆ**

ಹರಪನಹಳ್ಳಿ ಪಾಳೆಯಗಾರರ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಆದುದರಿಂದ ಇಲ್ಲಿ ಅನೇಕ ಸ್ಮಾರಕಗಳನ್ನು ನೋಡಬಹುದು. ಕೆರೆಯ ದಂಡೆಯ ಮೇಲೆ ಇರುವ ಈ ಕೋಟೆ ವಿಶಾಲವಾದ ಪ್ರದೇಶದಲ್ಲಿದೆ. ಇಲ್ಲಿ ಕಂದಕ, ಬುರುಜುಗಳು ಮಾತ್ರ ಪ್ರಸ್ತುತ ಕಂಡುಬರುತ್ತವೆ. ಸ್ಥಳೀಯರನ್ನು ವಿಚಾರಿಸಿದಾಗ ಈ ಪ್ರದೇಶಗಳಲ್ಲಿ ಪಾಳೆಯಗಾರರ ದೊಡ್ಡ ಕೋಟೆ, ಅರಮನೆ ಉದ್ಯಾನವನಗಳಿದ್ದವೆಂದು ಹೇಳುತ್ತಾರೆ. ಇಲ್ಲಿ ಪಂಕದುರ್ಗ, ನೆಲದುರ್ಗ, ಬಯಲುದುರ್ಗಗಳನ್ನು ನಿರ್ಮಿಸಿದ್ದಾರೆಂದು ಎಂ.ಕೊಟ್ರೇಶ್ ಅಭಿಪ್ರಾಯಪಡುತ್ತಾರೆ. ಈ ಕೋಟೆಯನ್ನು ದಾದಯ್ಯನಾಯಕ ನಿರ್ಮಿಸಿರಬಹುದೆಂದು ಊಹಿಸುತ್ತಾರೆ.

ಹರಪನಹಳ್ಳಿ ಪಾಳೆಯಗಾರರು ನಿರ್ಮಿಸಿದ ಕೋಟೆಗಳಲ್ಲಿ ದೊಡ್ಡದಾದ ಕೋಟೆ ಇದಾಗಿದೆ. ಸುಮಾರು ೩೦ ಎಕರೆ ಪ್ರದೇಶದಲ್ಲಿ ಈ ಕೋಟೆಯನ್ನು ನಿರ್ಮಿಸಲಾಗಿದೆ. ಇದರ ಸುತ್ತಲೂ ಕಡಿದಾದ ಕಂದಕಗಳಿದ್ದವು. ಈಗ ಇಲ್ಲಿ ಯಾವುದೇ ಅವಶೇಷ ಉಳಿದಿಲ್ಲ. ಈ ಕೋಟೆಯಲ್ಲಿ ಕೋಟೆ ಆಂಜನೇಯ, ಕೋಟೆ ಕಾಳಿಕಾಂಬ, ಆಧುನಿಕ ಜೈನ ದೇವಸ್ಥಾನಗಳು ಕಂಡುಬರುತ್ತವೆ. ಕೋಟೆ ಆಂಜನೇಯ ದೇವಸ್ಥಾನ ದಾದಯ್ಯನಾಯಕನಿಂದ ಸ್ಥಾಪಿಸಲ್ಪಟ್ಟಿದೆ. ಇದರ ಮುಂಭಾಗ ಪಾಳೆಯಗಾರರ ಅರಮನೆ, ಉದ್ಯಾನವನ, ಸೇನಾವಲಯ, ಖಜಾನೆ ಇತ್ಯಾದಿಗಳಿದ್ದವೆಂದು ಸ್ಥಳೀಯರು ಹೇಳುತ್ತಾರೆ. ಈ ಕೋಟೆಯನ್ನು ಸ್ಥಳೀಯರು ಎರಡು ಸುತ್ತಿನ ಕೋಟೆ ಎಂದು ಕರೆಯುತ್ತಾರೆ. ಒಂದನೇ ಸುತ್ತು ಹೊನ್ನವ್ವನಾಗತಿಯ ಹೆಸರು ಹಾಗೂ ಎರಡನೆಯ ಸುತ್ತಿಗೆ ಸಂಜೀವನಾಯಕನ ಹೆಸರನ್ನು ಇಡಲಾಗಿದೆ.

ಪ್ರಸ್ತುತ ಈ ಕೋಟೆಯ ಅವಶೇಷಗಳು ಅಲ್ಲಲ್ಲಿ ಅಲ್ಪಸ್ವಲ್ಪ ಕಂಡುಬರುತ್ತವೆ. ಒಂದು ಬುರುಜು ಮಾತ್ರ ಕಂಡುಬರುತ್ತಿದ್ದು ಉಳಿದ ಬುರುಜುಗಳು ನಾಶವಾಗಿವೆ. ಎನ್.ಕೆ. ಜೋಶಿಯವರು ಈ ಕೋಟೆಯ ವಿನ್ಯಾಸ, ರಚನಾಕ್ರಮ ಹಾಗೂ ಅವಶ್ಯಕತೆಗಳಲ್ಲಿ ಹಿಂದೂ ಪದ್ಧತಿಯಿದ್ದು ಇದನ್ನು ಹಿಂದೂ ವಾಸ್ತು ಕೋಟೆ ಎಂದು ಕರೆದಿದ್ದಾರೆ. ಈ ಕೋಟೆಯಲ್ಲಿ ಉಳಿದವು ಏಕೈಕ ಪಾಳೆಯಗಾರರ ಅವಶೇಷವೆಂದರೆ ಆಂಜನೇಯ ದೇವಾಲಯ ಇದು ದಕ್ಷಿಣಾಭಿಮುಖವಾಗಿದ್ದು ಗರ್ಭಗೃಹ ಹಾಗೂ ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಆಂಜನೇಯನ ಉಬ್ಬುಶಿಲ್ಪವಿದೆ. ಈ ದೇವಸ್ಥಾನದ ಮುಂದೆ ದೊಡ್ಡ ಗಾತ್ರದ ದುಂಡನೆಯ ಕಲ್ಲುಗಳು ಕಂಡುಬರುತ್ತವೆ. ಸ್ಥಳೀಯರನ್ನು ವಿಚಾರಿಸಿದಾಗ ಈ ಗುಂಡುಕಲ್ಲುಗಳನ್ನು ಭರಮಪ್ಪ ದೇವರು ಎಂದು ಹೇಳುತ್ತಾರೆ. ಬಹುಶಃ ಇವು ರಕ್ಷಣಾ ಆಯುಧಗಳಾಗಿರಬಹುದೆಂದು ನಂಬಲಾಗಿದೆ.

**ವೀರನದುರ್ಗ ಕೋಟೆ**

ಕೂಡ್ಲಿಗಿ ತಾಲ್ಲೂಕಿನಲ್ಲಿ ಕಂಡುಬರುವ ಕೋಟೆಯಿದು. ಹರಪನಹಳ್ಳಿ ಪಾಳೆಯಗಾರರು ತಮ್ಮ ಪಾಳೆಯಪಟ್ಟನ್ನು ವಿಸ್ತರಿಸಿದ ಅಂಶ ಇದರಿಂದ ತಿಳಿದುಬರುತ್ತದೆ. ಜರಿಮಲೆ ಪಾಳೆಯಗಾರರಿಂದ ವೀರನದುರ್ಗವನ್ನು ಹರಪನಹಳ್ಳಿ ಪಾಳೆಯಗಾರರು ವಶಪಡಿಸಿಕೊಂಡಿದ್ದಾರೆ.

ಈ ಕೋಟೆಯ ಕಾವಲುಗಾರ ಹಾಗೂ ಸಾಮಂತನಾಗಿ ರಾಮಯ್ಯನಾಯಕನಿದ್ದನು. ಈ ಕೋಟೆಯನ್ನು ಬೆಟ್ಟವನ್ನು ಬಳಸಿ ನಿರ್ಮಿಸಲಾಗಿದೆ. ಎರಡು ಹೆಬ್ಬಂಡೆಗಳನ್ನು ಬಳಸಿ ಮಹಾದ್ವಾರವನ್ನು ನಿರ್ಮಿಸಲಾಗಿದೆ. ಇದೊಂದು ರಕ್ಷಣಾ ನೆಲೆಯಾಗಿದ್ದು, ಈ ಕೋಟೆಯಲ್ಲಿ ಜನವಸತಿ ಇತ್ತೆಂದು ತಿಳಿದುಬರುತ್ತದೆ. ಆಹಾರಧಾನ್ಯ, ನೀರಿನ ಸಂಗ್ರಹಣೆ ವ್ಯವಸ್ಥೆ ಇತ್ತು. ಕೋಟೆಯ ಸುತ್ತಲೂ ದೊಡ್ಡ ಪ್ರಮಾಣದ ಬುರುಜುಗಳು ಕಂಡುಬರುತ್ತವೆ. ಅನೇಕ ದೇವಾಲಯಗಳು ಶಿಲ್ಪಗಳು, ವೀರಗಲ್ಲುಗಳು ಇಲ್ಲಿ ಕಂಡುಬರುತ್ತವೆ.

**ಹನಸಿ ಕೋಟೆ**

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಹನಸಿ ಗ್ರಾಮದಲ್ಲಿ ಹರಪನಹಳ್ಳಿ ಪಾಳೆಯಗಾರರ ಒಂದು ಕೋಟೆಯನ್ನು ನೋಡಬಹುದು. ಈ ಕೋಟೆಯನ್ನು ಜರಿಮಲೆ ಪಾಳೆಯಗಾರರಿಂದ ಭರಮಣ್ಣನಾಯಕನು ವಶಪಡಿಸಿಕೊಂಡು ಪ್ರಮುಖ ರಕ್ಷಣಾಕೇಂದ್ರವನ್ನಾಗಿ ಮಾಡಿಕೊಂಡನು. ಈ ಕೋಟೆಯು ಸಂಪೂರ್ಣ ಹಾಳಾಗಿದ್ದು ಕೆಲವೆಡೆ ಕೋಟೆಗೋಡೆಗಳು ಮಾತ್ರ ಉಳಿದುಕೊಂಡಿದೆ. ಕಾವಲುಗೋಪುರಗಳನ್ನು ಈಗಲೂ ನೋಡಬಹುದು. ಸುತ್ತಲೂ ಕಂದಕವಿರುವ ಈ ಕೋಟೆಯನ್ನು ದಪ್ಪಕಲ್ಲುಗಳು ಮತ್ತು ಮಣ್ಣಿನಿಂದ ನಿರ್ಮಿಸಲಾಗಿದೆ. ಈ ಕೋಟೆಯು ನೆಲದುರ್ಗಕ್ಕೆ ಉದಾಹರಣೆಯಾಗಿದೆ. ಕೋಟೆಯ ದಕ್ಷಿಣ ದಿಕ್ಕಿನಲ್ಲಿ ಈಶ್ವರ ದೇವಾಲಯವಿದೆ.

**ತಂಬ್ರಹಳ್ಳಿ ಕೋಟೆ**

ಇದು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಕಂಡುಬರುವ ಒಂದು ಗ್ರಾಮ. ಇಲ್ಲಿ ಹರಪನಹಳ್ಳಿ ಪಾಳೆಯಗಾರರ ಕೋಟೆ ಇರುವುದನ್ನು ನೋಡಬಹುದು. ಈ ಕೋಟೆ ಪಾಳೆಯಗಾರರ ಪ್ರಮುಖ ಸೇನಾನೆಲೆಯಾಗಿತ್ತು. ಬೆಟ್ಟವನ್ನು ಬಳಸಿ ಕೋಟೆಯನ್ನು ನಿರ್ಮಿಸಲಾಗಿದೆ. ಕೋಟೆಗೋಡೆಯ ಕೆಲವು ಅವಶೇಷಗಳನ್ನು ಹಾಗೂ ಒಂದು ಬುರುಜನ್ನು ಪ್ರಸ್ತುತ ನೋಡಬಹುದು. ಪಾಳೆಯಗಾರರ ಸಾಮಂತ ಓಬಣ್ಣನಾಯಕ ಇಲ್ಲಿಯ ಆಡಳಿತಗಾರನಾಗಿದ್ದನು. ಇದೊಂದು ಗಿರಿದುರ್ಗವಾಗಿದ್ದು, ಇಲ್ಲಿ ಸುಂದರವಾದ ಪುಷ್ಕರಿಣಿಯನ್ನು ನಿರ್ಮಿಸಲಾಗಿದೆ. ಬೆಟ್ಟದ ಇಳಿಜಾರಿನಲ್ಲಿ ಗಾಳಿ ಮಂಟಪವಿದೆ.

ಹೀಗೆ ಹರಪನಹಳ್ಳಿ ಪಾಳೆಯಗಾರರು ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಅನೇಕ ಕೋಟೆಗಳನ್ನು ನಿರ್ಮಿಸಿದ್ದರು. ಅವುಗಳನ್ನು ಪ್ರಮುಖ ನೆಲೆಗಳನ್ನಾಗಿ, ಆಡಳಿತದ ಕೇಂದ್ರಗಳನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದಾರೆ. ಇವುಗಳಲ್ಲದೆ ಇನ್ನೂ ಅನೇಕ ಕಡೆ ಇವರ ಕೋಟೆ ಕಂಡುಬಂದಿದ್ದು, ಅವು ಸಂಪೂರ್ಣವಾಗಿ ನೆಲಸಮಗೊಂಡಿವೆ. ಒಟ್ಟಾರೆ ಈ ಕೋಟೆಗಳು ಹರಪನಹಳ್ಳಿ ಪಾಳೆಯಗಾರರ ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯವಸ್ಥೆಗಳ ಮೇಲೆ ಸಾಕಷ್ಟು ಪ್ರಭಾವ ಬೀರಿರುವುದನ್ನು ತಿಳಿದುಕೊಳ್ಳಬಹುದು.

**ಹರಪನಹಳ್ಳಿ ಪಾಳೆಯಗಾರರ ಅರಮನೆಗಳು**

ವಿಜಯನಗರೋತ್ತರಕಾಲೀನ ಸಂದರ್ಭದಲ್ಲಿ ಪಾಳೆಯಗಾರರು ಸಾಮಂತರು, ಮಾಂಡಲಿಕರು ತಮ್ಮ ಪ್ರತಿಷ್ಠೆ ಸ್ಥಾನಮಾನಗಳಿಗನುಗುಣವಾಗಿ ಅರಮನೆಗಳನ್ನು ನಿರ್ಮಿಸಿಕೊಂಡಿದ್ದರು. ಈ ಅರಮನೆಗಳು ರಾಜನ ಗಾಂಭೀರ್ಯ, ಘನತೆ, ಗೌರವ ಪ್ರತಿಷ್ಠೆ ಸ್ಥಾನಮಾನಗಳ ಪ್ರತೀಕವಾಗಿದ್ದವು. ಇಂತಹ ಅರಮನೆಗಳು ಬಹುತೇಕ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಕಂಡುಬರುತ್ತವೆ. ಈ ಪಾಳೆಯಗಾರರ ಕಾಲದ ಅರಮನೆಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಾಗಿದೆ. ಕಸವನಹಳ್ಳಿ ಶಾಸನವು ಅರಮನೆಯ ಪುರವರ್ಗ ಜೀರ್ಣೋದ್ಧಾರ ಮಾಡಿದ ಬಗ್ಗೆ ವಿವರ ನೀಡುತ್ತದೆ. ೧ನೇ ಸೋಮಶೇಖರನಾಯಕನ ಕಾಲದಲ್ಲಿ ಅರಮನೆ ವೈದ್ಯ ಕೃಷ್ಣಾಚಾರ್ಯರ ಬಗ್ಗೆ ಉಲ್ಲೇಖಗೊಂಡಿದೆ. ಮೈದೂರು ಶಾಸನದಲ್ಲಿ ಅರಮನೆಯ ದಾರಿಯಲ್ಲಿ ಭೂಮಿಯನ್ನು ದಾನ ನೀಡಿದ ಅಂಶ ಕಂಡುಬರುತ್ತದೆ. ಕ್ಷೇತ್ರಕಾರ್ಯಕ್ಕೆ ತೆರಳಿದ ಸಂದರ್ಭದಲ್ಲಿ ಪಾಳೆಯಗಾರರ ಅರಮನೆಗಳನ್ನು ವೀಕ್ಷಿಸಲಾಯಿತು. ಈ ಪಾಳೆಯಗಾರರ ಅರಮನೆಗಳು ಉಚ್ಚಂಗಿದುರ್ಗ, ಹರಪನಹಳ್ಳಿ, ಕೂಲಹಳ್ಳಿ ಮುಂತಾದ ಪ್ರದೇಶಗಳಲ್ಲಿ ಕಂಡುಬಂದಿವೆ. ಆದರೆ ಹರಪನಹಳ್ಳಿಯಲ್ಲಿ ಇರುವ ಅರಮನೆ ಸಂಪೂರ್ಣವಾಗಿ ನೆಲಸಮವಾಗಿದ್ದು ಅರಮನೆಯ ಕೆಲವು ಅವಶೇಷಗಳು, ಪಳೆಯುಳಿಕೆಗಳು ಮಾತ್ರ ಕಂಡುಬರುತ್ತವೆ. ಈ ಪಳೆಯುಳಿಕೆಯ ಆಧಾರದ ಮೇಲೆ ಹಾಗೂ ಗ್ರಾಮದ ಹಿರಿಯರು ತಿಳಿಸುವ ವಿಚಾರದ ಮೇಲೆ ಹರಪನಹಳ್ಳಿಯಲ್ಲಿ ಅರಮನೆ ಇತ್ತು ಎಂದು ತಿಳಿದುಬರುತ್ತದೆ. ಈ ಅರಮನೆಗಳು ಹರಪನಹಳ್ಳಿ ಪಾಳೆಯಗಾರರ ಅಧಿಕಾರ, ಗಾಂಭೀರ್ಯ, ಪ್ರತಿಷ್ಠೆ, ಗೌರವಗಳ ಪ್ರತೀಕವಾಗಿದ್ದವು.

**ಉಚ್ಚಂಗಿದುರ್ಗ ಅರಮನೆ**

ಈ ಅರಮನೆ ಹರಪನಹಳ್ಳಿ ಪಾಳೆಯಗಾರರ ಪ್ರಮುಖ ಅರಮನೆಯಾಗಿತ್ತು. ದಾದಯ್ಯನಾಯಕ ಈ ಎರಡು ದೊಡ್ಡ ಕಟ್ಟಡಗಳನ್ನು ಉಚ್ಚಂಗಿದುರ್ಗದ ಕೋಟೆಯ ಆವರಣದಲ್ಲಿ ಕಟ್ಟಿಸಿದ್ದಾನೆ. ಇವುಗಳನ್ನು ಸ್ಥಳೀಯರು ರಾಜ ಮತ್ತು ರಾಣಿಯ ಅರಮನೆ ಎಂದು ಹೇಳುತ್ತಾರೆ.

ಉಚ್ಚಂಗೆಮ್ಮ ದೇವಾಲಯದ ಎದುರಿಗೆ ಅರಮನೆ ಇದೆ. ಈ ಅರಮನೆಗೆ ಉತ್ತರ ದಿಕ್ಕಿನಿಂದ ಪ್ರವೇಶ ದ್ವಾರವಿದ್ದು, ಇದರ ಸ್ಥಿತಿ ಹೇಳುವುದಾದರೆ ಮೇಲ್ಚಾವಣಿ ಬಿದ್ದುಹೋಗಿದ್ದು ಒಳಭಾಗದಲ್ಲಿರುವ ಎಲ್ಲಾ ಅವಶೇಷಗಳು ಹಾಗೇ ಇವೆ. ಈ ಅರಮನೆಯನ್ನು ಅವಲೋಕಿಸಿದರೆ ಇದರ ಸುತ್ತಲೂ ರಕ್ಷಣಾಗೋಡೆ ಇರುವುದನ್ನು ತಿಳಿಯುತ್ತದೆ. ಈ ಗೋಡೆ ಸುಮಾರು ೫ ಅಡಿ ದಪ್ಪವಿದ್ದು ನಾಲ್ಕು ದಿಕ್ಕಿನ ಎಲ್ಲಾ ಮೂಲೆಯಲ್ಲಿ ಒಂದೊಂದು ಕಾವಲು ಗೋಪುವನ್ನು ಹೊಂದಿದೆ. ಈ ಗೋಪುರಗಳನ್ನು ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಲಾಗಿದೆ. ಗೋಪುರಗಳನ್ನು ನಿರ್ಮಿಸಲು ಪ್ರಮುಖ ಕಾರಣ ವೈರಿಗಳ ಆಗಮನವನ್ನು ಮತ್ತು ಚಲನವಲನವನ್ನು ವೀಕ್ಷಿಸಲು ಬಳಕೆಯಾಗುತ್ತಿತ್ತು. ಅರಮನೆಯ ಒಳಗಡೆ ಅಡುಗೆ ಮನೆ, ದೇವರ ಮನೆ, ಸಂಗ್ರಹಾಗಾರಗಳು,

ಶೌಚಾಲಯಗಳು, ಹಜಾರ ಇತ್ಯಾದಿ ಪ್ರಕಾರಗಳು ಕಂಡುಬರುತ್ತವೆ. ಸುಸಜ್ಜಿತವಾದ ಮತ್ತು ವೈಭವಯುತವಾಗಿರುವ ಈ ಅರಮನೆ ಪಾಳೆಯಗಾರರ ಕಾಲದ ವೈಭವಕ್ಕೆ ಕೈಗನ್ನಡಿಯಾಗಿದೆ.

ಈ ಅರಮನೆಯ ಕೆಳಭಾಗದಲ್ಲಿ ಇನ್ನೊಂದು ಅರಮನೆ ಇದೆ. ಇದನ್ನು ಸ್ಥಳೀಯರು ರಾಣಿಯ ಅರಮನೆ ಎಂದು ತಿಳಿಸುತ್ತಾರೆ. ಇದು ಕೂಡ ಪ್ರಮುಖ ಅರಮನೆಯಾಗಿತ್ತು. ಈ ಅರಮನೆಯಲ್ಲೂ ಬುರುಜುಗಳು ಇದ್ದವು ಎಂದು ತಿಳಿದುಬರುತ್ತದೆ. ಸ್ಥಳೀಯರು ಈ ಅರಮನೆಯನ್ನು ಹೊನ್ನನಾಗತಿಯ ಹುಡೇವು ಎಂದು ಕರೆಯುತ್ತಾರೆ. ಈ ಮೇಲಿನ ಎರಡು ಅರಮನೆಗಳನ್ನು ಬೇರೆ ಬೇರೆ ಕಾಲಾವಧಿಯಲ್ಲಿ ನಿರ್ಮಿಸಿರಬಹುದು ಎಂದು ತಿಳಿದುಬರುತ್ತದೆ.

**ಕೂಲಹಳ್ಳಿ ಅರಮನೆ**

ಹರಪನಹಳ್ಳಿ ಪಾಳೆಯಗಾರರು ಮೊದಲು ತಮ್ಮ ಆಳ್ವಿಕೆಯನ್ನು ಬಾಗಳಿಯಿಂದ ಆರಂಭಿಸಿದರು. ಇಲ್ಲಿಂದ ೨ ಕಿ.ಮೀ. ದೂರದಲ್ಲಿರುವ ಕೂಲಹಳ್ಳಿಯಲ್ಲಿ ಹರಪನಹಳ್ಳಿ ಪಾಳೆಯಗಾರರ ಅರಮನೆ ಎಂದು ಗುರುತಿಸಲ್ಪಡುವ ಒಂದು ಮಠವಿದೆ. ಇಲ್ಲಿ ಕೋಟೆ, ಅರಮನೆ, ಬುರುಜುಗಳು ಕಂಡುಬರುತ್ತವೆ. ಈ ಮಠ ಅಥವಾ ಅರಮನೆಯ ಸುತ್ತ ಕಲ್ಲಿನ ಕೋಟೆಯಿದ್ದು, ಮಧ್ಯೆ ಎತ್ತರವಾದ ಮೂರು ಅಂತಸ್ತಿನ ಬೃಹತ್ತಾದ ಕಲ್ಲಿನ ಮಹಾದ್ವಾರವಿದೆ. ಈ ಮಹಾದ್ವಾರವನ್ನು ದಾಟಿ ಹೋದರೆ ಸುಮಾರು ೧೦೦ರಿಂದ ೧೫೦ ಅಡಿ ಉದ್ದ ಅಗಲವಿರುವ ಮದ್ದಾನೇಶ್ವರ ಮಠವಿದೆ. ಈ ಕಟ್ಟಡವನ್ನು ನೋಡಿದರೆ ಮಠದ ಲಕ್ಷಣಗಳು ಕಂಡುಬರುವುದಿಲ್ಲ. ಇಲ್ಲಿ ವಿಶಾಲವಾದ ಹಜಾರ, ಕಂಬಗಳು, ನೆಲಮಾಳಿಗೆ ಗುಹೆ, ದಾನ್ಯಸಂಗ್ರಹಗಳಿಗೆ ಹುಡೇವುಗಳು ಗುಪ್ತಮಾರ್ಗಗಳು, ನೀರಿನ ಬಾವಿಗಳು, ಗವಿಗಳು, ಕಲ್ಲಿನ ಜಗುಲಿಗಳು, ಅಂಕಣಗಳು ಕಂಡುಬರುತ್ತವೆ. ಒಳಗಡೆ ಕುದುರೆಲಾಯ, ಹೊರಭಾಗವನ್ನು ವೀಕ್ಷಿಸಿದರೆ ಚಿಕ್ಕ ಚಿಕ್ಕ ಗೋಪುರಗಳು, ದೊಡ್ಡದಾದ ಪ್ರವೇಶದ್ವಾರ, ಬುರುಜು, ಮಧ್ಯೆ ದೇವಾಲಯ, ಗುಪ್ತ ಗುಹೆಗಳು ಮುಂತಾದ ಸ್ಮಾರಕಗಳ ಸಂಗಮವಾಗಿದೆ. ಆದುದರಿಂದ ಇದು ಪಾಳೆಯಗಾರರ ಕಾಲದ ಅರಮನೆಯಾಗಿದೆ ಎಂದು ಹೇಳಬಹುದು. ಕುಂ.ಬಾ.ಸದಾಶಿವಪ್ಪನವರು ಇದು ಪಾಳೆಯಗಾರರ ಆಡಳಿತ ಕೇಂದ್ರ, ರಾಜಕೀಯ ಶಕ್ತಿಯ ಕೇಂದ್ರದ ಅರಮನೆ ಆಗಿತ್ತೆಂದು, ನಂತರ ಮದ್ದಾನೇಶ್ವರ ಗುರುಮನೆ ಆಗಿದೆ ಎಂದು ಅಭಿಪ್ರಾಯಪಡುತ್ತಾರೆ.

ಒಟ್ಟಾರೆ ಈ ಕಟ್ಟಡದ ವಾಸ್ತುರಚನೆ, ಬಳಸಿದ ಸಾಮಗ್ರಿಗಳು ಹಾಗೂ ಈ ಕಟ್ಟಡದ ಸುತ್ತಮುತ್ತಲಿನ ಹುಡೇವುಗಳು, ಚಿಕ್ಕಹಳ್ಳಿ ಹುಡೇವು, ಬಂಡ್ರಿಯಲ್ಲಿರುವ ಹುಡೇವು, ಕೋಟೆ, ಮುಂತಾದವುಗಳನ್ನು ಗಮನಿಸಿದರೆ ಇದು ಹರಪನಹಳ್ಳಿ ಪಾಳೆಯಗಾರರ ಅರಮನೆ ಆಗಿತ್ತೆಂದು ಸ್ಪಷ್ಟವಾಗಿ ನಿರ್ಣಯಕ್ಕೆ ಬರಬಹುದು. ಹೀಗೆ ಹರಪನಹಳ್ಳಿ ಪಾಳೆಯಗಾರರು ತಮ್ಮ ಅರಮನೆಗಳನ್ನು ನಿರ್ಮಿಸಿಕೊಂಡು ತಮ್ಮ ಸಾಮ್ರಾಜ್ಯವನ್ನು ಸುಭದ್ರವಾಗಿರಿಸಿಕೊಂಡಿದ್ದರು. ಶತ್ರುಗಳ ದಾಳಿಗಳಿಂದ ರಕ್ಷಣೆಗಾಗಿ ಸುಸಜ್ಜಿತವಾದ ಸ್ಥಳಗಳಲ್ಲಿ ಅರಮನೆಗಳನ್ನು ನಿರ್ಮಿಸಿಕೊಂಡಿದ್ದನ್ನು ಕಾಣಬಹುದು.

**ಹರಪನಹಳ್ಳಿ ಪಾಳೆಯಗಾರರ ದೇವಾಲಯಗಳು**

ಪ್ರಾಚೀನ ಕಾಲದಿಂದಲೂ ದೇವಾಲಯಗಳ ನಿರ್ಮಾಣ ಕಾರ್ಯಚಟುವಟಿಕೆಗಳು ನಡೆದರೂ ಶಾತವಾಹನರ ಕಾಲದಲ್ಲಿ ಬೆಳವಣಿಗೆ ಹೊಂದಿದ ದೇವಾಲಯಗಳ ವಾಸ್ತುರಚನೆಯನ್ನು ಬೌದ್ಧ ಸ್ತೂಪ, ಚೈತನ್ಯ ಹಾಗೂ ವಿಹಾರಗಳ ಮೂಲಕ ಗುರುತಿಸಬಹುದು. ಬಾದಾಮಿ ಚಾಲುಕ್ಯರ ಕಾಲದಿಂದ ಈ ದೇವಾಲಯಗಳ ನಿರ್ಮಾಣ ಕಾರ್ಯ ಭರದಿಂದ ಸಾಗಿವೆ. ಇವರ ದೇವಾಲಯಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿ ನಿರ್ಮಾಣಗೊಂಡಿವೆ. ನಂತರ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಕಾಲದ ದೇವಾಲಯಗಳನ್ನು ಅವುಗಳ ವಾಸ್ತುರಚನೆ, ಶೈಲಿ, ಬಳಸಿದ ಸಾಮಗ್ರಿಗಳ ಆಧಾರದ ಮೇಲೆ ಸ್ಪಷ್ಟವಾಗಿ ಗುರುತಿಸಬಹುದು.

ಹರಪನಹಳ್ಳಿ ಪಾಳೆಯಗಾರರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ದೇವಾಲಯಗಳನ್ನು ನಿರ್ಮಿಸಿರುವುದರ ಮೂಲಕ ಆ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿ ಅವುಗಳ ಅಭಿವೃದ್ಧಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಈ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ವಾಸ್ತು ಶೈಲಿಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಮಾಡಿಕೊಂಡು ತಮ್ಮದೇ ಆದ ಹೊಸ ಶೈಲಿಯಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿರುವುದು ಕಂಡುಬರುತ್ತದೆ.

ಇವರ ಕಾಲದ ಪ್ರಮುಖ ದೇವಾಲಯಗಳು ಹರಪನಹಳ್ಳಿ ಉಚ್ಚಂಗಿದುರ್ಗ, ಕೂಲಹಳ್ಳಿ, ಅರಸೀಕೆರೆ, ನಾರಾಯಣದೇವರಕೆರೆ, ಕೊಟ್ಟೂರು, ನಿಚ್ಚವ್ವನಹಳ್ಳಿ, ಮೈದೂರು, ದೇವರತಿಮ್ಮಲಾಪುರ ಕುಂಚೂರು, ಹಿರೇಮ್ಯಾಗಳಗೇರಿ, ತಂಬ್ರಹಳ್ಳಿ ಮುಂತಾದ ಗ್ರಾಮಗಳಲ್ಲಿ ಕಂಡುಬರುತ್ತವೆ. ಕೆಲವು ದೇವಾಲಯಗಳನ್ನು ಇಂದು ಗುರುತಿಸಲು ಸಾಧ್ಯವಾಗುತ್ತಿಲ್ಲ. ಅಂತಹವುಗಳನ್ನು ಸ್ಥಳಿಯ ಹೇಳಿಕೆ ಪರಸ್ಪರ ಹೋಲಿಕೆಗಳಿಂದ ಗುರುತಿಸಬಹುದು. ಈ ದೇವಾಲಯಗಳ ಗೋಪುರಗಳು ಇಂದು ಸಂಪೂರ್ಣ ಜೀರ್ಣೋದ್ಧಾರಗೊಂಡು ಆಧುನಿಕತೆಗೆ ಒಗ್ಗಿಕೊಂಡಿವೆ. ಈ ನಿಟ್ಟಿನಲ್ಲಿ ಹರಪನಹಳ್ಳಿ ಕೋಟೆ ಪ್ರದೇಶದಲ್ಲಿರುವ ಕೋಟೆ ಆಂಜನೇಯ, ಕಾಳಿಕಾಂಬ, ವೀರಭದ್ರೇಶ್ವರ, ಗುಡಿಕೇರಿ ಪ್ರಸನ್ನ ವೆಕಂಟರಮಣ ದೇವಾಲಯ, ದೇವರತಿಮ್ಮಲಾಪುರದ ಶ್ರೀಲಕ್ಷ್ಮೀ ವೆಂಕಟರಮಣ, ಮುಸ್ಸೂರಿನ ಕಡೆ ಆಂಜನೇಯ ದೇವಾಲಯ, ಕೂಲಹಳ್ಳಿಯ ಗೋಣಿಬಸವೇಶ್ವರ, ಶ್ರೀಮದ್ದಾನೇಶ್ವರ ಮಠ ಇನ್ನೂ ಮುಂತಾದ ಪ್ರಮುಖ ದೇವಾಲಯಗಳನ್ನು ನೋಡಬಹುದು.

**ದೇವರತಿಮ್ಮಲಾಪುರದ ಶ್ರೀ ಲಕ್ಷ್ಮೀ ವೆಂಕಟರಮಣ ದೇವಾಲಯ**

ಹರಪನಹಳ್ಳಿಯ ಮೊದಲ ಪಾಳೆಯಗಾರರ ದಾದಯ್ಯನಾಯಕ ಕಟ್ಟಿಸಿದ ದೇವಾಲಯ. ಇದು ವಿಜಯನಗರ ದ್ರಾವಿಡ ಶೈಲಿಯಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವನ್ನು ಕಣಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯ ಪ್ರಮುಖವಾಗಿ ಗರ್ಭಗುಡಿ, ಅಂತರಾಳ,

ಸಭಾಮಂಟಪವನ್ನು ಹೊಂದಿದ್ದು, ದೊಡ್ಡ ಗೋಪುರವುಳ್ಳ ಪ್ರವೇಶದ್ವಾರವಿದೆ. ಈ ದೇವಾಲಯವು ಸರಳ ಕೆತ್ತನೆಯ ೧೬ ಕಂಬಗಳನ್ನು ಒಳಗೊಂಡಿದೆ. ಇದು ಶ್ರೀವೈಷ್ಣವ ಪಂಥಕ್ಕೆ ಸೇರಿದ್ದಾಗಿದ್ದು ಅಂತರಾಳವನ್ನು ಪ್ರವೇಶಿಸಲು ದ್ವಾರಪಾಲಕರನ್ನು ಹೊಂದಿದ ಹೆಬ್ಬಾಗಿಲು ಇದೆ. ಗರ್ಭಗೃಹ ಹಾಗೂ ಅಂತರಾಳದ ದ್ವಾರಗಳಲ್ಲಿ ಗಜಲಕ್ಷ್ಮಿಯ ತೋರಣವಿದೆ. ಗರ್ಭಗೃಹದಲ್ಲಿ ಶ್ರೀವೆಂಕಟರಮಣ ದೇವರ ೫ ಅಡಿ ಎತ್ತರದ ಶಿಲ್ಪವಿದೆ. ಹಾಗೂ ಎಡಭಾಗದಲ್ಲಿ ಶ್ರೀಲಕ್ಷ್ಮಿಯ ಶಿಲ್ಪವಿದೆ.

ಅಂತರಾಳಕ್ಕೆ ಹೊಂದಿಕೊಂಡಂತೆ ಕಣ್ಣುಕೊಟ್ಟಪ್ಪ ದೇವರ ಗುಡಿ ಇದೆ. ಈಶಾನ್ಯದಲ್ಲಿ ನಾಗದೇವತೆಯ ಶಿಲ್ಪಗಳಿವೆ. ತೆರೆದ ಮಂಟಪದ ಎದುರು ಪತ್ನಿ ಸಮೇತರಾಗಿ ದಾದಯ್ಯನಾಯಕ ಹಾಗೂ ರಂಗಣ್ಣನಾಯಕರ ಶಿಲ್ಪಗಳಿವೆ. ಈ ದೇವಾಲಯವನ್ನು ಸಂಪೂರ್ಣವಾಗಿ ಆಧುನಿಕ ಸಾಮಗ್ರಿಗಳಿಂದ ಗೋಪುರ, ಮಂಟಪ ಇತ್ಯಾದಿಯನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಈ ದೇವಾಲಯ ಸ್ಥಾಪನೆಯ ಹಿಂದಿನ ಘಟನೆಯನ್ನು ಈ ಹಿಂದೆ ಚರ್ಚಿಸಲಾಗಿದೆ. ಪ್ರಸ್ತುತ ಈ ದೇವಾಲಯದಲ್ಲಿ ನಿತ್ಯ ಪೂಜೆ, ಆರಾಧನೆ, ಅಭಿಷೇಕಗಳು ನಡೆಯುತ್ತಿದ್ದು ಪ್ರತಿವರ್ಷ ರಥೋತ್ಸವ ನಡೆಯುತ್ತದೆ. ಸದ್ಯ ಇದು ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆಯ ವ್ಯಾಪ್ತಿಗೆ ಸೇರ್ಪಡೆಗೊಂಡಿದೆ.

**ಶ್ರೀ ವೀರಭದ್ರದೇವಾಲಯ, ಹಳೆಬಸ್ ನಿಲ್ದಾಣ ಹರಪನಹಳ್ಳಿ**

೧೬ನೇ ಶತಮಾನದಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯ ಉತ್ತರಾಭಿಮುಖವಾಗಿದ್ದು ಶೈವಪಂಥಕ್ಕೆ ಸೇರಿದೆ. ಈ ದೇವಾಲಯ ನೃತ್ಯಮಂಟಪ, ಅಂತರಾಳ, ತೆರೆದ ಮಂಟಪ, ಗರ್ಭಗೃಹ ಎಂಬ ನಾಲ್ಕು ಭಾಗಗಳನ್ನು ಹೊಂದಿದೆ. ಅಂತರಾಳದ ಪೂಜಾವಸ್ತುಗಳನ್ನಿಡಲು ಇದನ್ನು ಬಳಸಲಾಗುತ್ತದೆ. ಗರ್ಭಗೃಹವು ಕಂಚಿನ ಲೋಹಕವಚದ ಬಾಗಿಲು ಹೊಂದಿದ್ದು, ಗಜಲಕ್ಷ್ಮೀ ಹಾಗೂ ದೀಪವನ್ನು ಹಿಡಿದಿರುವ ಉಬ್ಬುಶಿಲ್ಪಗಳಿವೆ. ಶ್ರೀವೀರಭದ್ರೇಶ್ವರ ಶಿಲ್ಪವನ್ನು ಉತ್ತರದ ಗದ್ದಿಗೆಯ ಮೇಲೆ ಸ್ಥಾಪಿಸಲಾಗಿದೆ. ವಂಶಪಾರಂಪರ್ಯವಾಗಿ ಪೂಜಾಕಾರ್ಯ ನಡೆಯುತ್ತಿದೆ. ಪಂಚಮಸಾಲಿ ಲಿಂಗಾಯತರು ಪ್ರತಿದಿನ ಪೂಜೆ, ಅಭಿಷೇಕ, ರಥೋತ್ಸವ, ಉತ್ಸವ, ಪೂಜಾಕಾರ್ಯಕ್ರಮವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಐತಿಹ್ಯ, ವಾಸ್ತು, ಸ್ಥಳೀಯರ ಮಾಹಿತಿಯ ಪ್ರಕಾರ ಈ ದೇವಾಲಯ ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿದ್ದು, ಪ್ರಸ್ತುತ ಜೀರ್ಣೋದ್ಧಾರಗೊಂಡು ಸುಣ್ಣ-ಬಣ್ಣಗಳಿಂದ ಅಲಂಕಾರಗೊಂಡಿದೆ.

**ಪ್ರಸನ್ನ ವೆಂಕಟರಮಣ ದೇವಸ್ಥಾನ, ಹರಪನಹಳ್ಳಿ**

ಕ್ರಿ.ಶ. ೧೭ನೇ ಶತಮಾನದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿರುವ ಈ ದೇವಾಲಯ ದ್ರಾವಿಡ ಶೈಲಿಯಲ್ಲಿದೆ. ವೈಷ್ಣವ ಪಂಥಕ್ಕೆ ಸೇರಿದ್ದು ೮ ಸ್ತಂಭಗಳು ಹಾಗೂ ಗರ್ಭಗುಡಿಯನ್ನು ಹೊಂದಿದೆ. ಸುಮಾರು ಎರಡು ಅಡಿ ಎತ್ತರದ ವೆಂಕಟರಮಣಸ್ವಾಮಿಯ

ದುಂಡು ಶಿಲ್ಪವಿದೆ. ಈ ದೇವಾಲಯದ ಸುತ್ತ ಪ್ರಾಕಾರವಿದೆ. ಅಂತರಾಳವಿಲ್ಲದ ಕಂಬಗಳಿಂದ ಕೂಡಿದ ಮಂಟಪವಿದೆ. ಈ ಮಂಟಪದಲ್ಲಿ ಹರಪನಹಳ್ಳಿ ಪಾಳೆಯಗಾರರ ಕಾಲದ ಶಾಸನವೊಂದು ಅಂಟಿಕೊಂಡಿದೆ. ಈ ಶಾಸನವನ್ನು ಎಂ.ಕೊಟ್ರೇಶ್ ಅವರು ಪ್ರಕಟಿಸಿದ್ದು, ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಇತಿಹಾಸವನ್ನು ಗುರ್ತಿಸುವಲ್ಲಿ ಈ ಶಾಸನ ಪ್ರಮುಖ ಪಾತ್ರ ವಹಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ದೇವಾಲಯದ ಹೊರಗಡೆ ದೀಪಸ್ತಂಭವಿದ್ದು ದೇವಾಲಯ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ.

**ಕೋಟೆ ಆಂಜನೇಯ ದೇವಾಲಯ ಹರಪನಹಳ್ಳಿ**

ಪಾಳೆಯಗಾರರ ಆರಾಧ್ಯದೈವವಾಗಿದ್ದ ಆಂಜನೇಯ ದೇವಸ್ಥಾನ ಹರಪನಹಳ್ಳಿ ಕೋಟೆ ಆವರಣದಲ್ಲಿದೆ. ಈ ದೇವಾಲಯವನ್ನು ದಾದಯ್ಯನಾಯಕ ಸ್ಥಾಪಿಸಿದನೆಂದು ಪ್ರತೀತಿ ಇದೆ. ಇದಕ್ಕೆ ಸಂಬಂಧಿಸಿದಂತೆ ಈ ಹಿಂದೆ ಐತಿಹ್ಯವನ್ನು ಚರ್ಚಿಸಲಾಗಿದೆ. ತೆರೆದ ಮಂಟಪ ಗರ್ಭಗೃಹವನ್ನು ಹೊಂದಿದ್ದು, ಗರ್ಭಗೃಹದ ಪ್ರವೇಶದ್ವಾರಕ್ಕೆ ಲೋಹದ ಹೊದಿಕೆಯಿದೆ. ಗರ್ಭಗುಡಿಯಲ್ಲಿ ಸುಮಾರು ೪ರಿಂದ ೫ ಅಡಿ ಎತ್ತರದ ಉಬ್ಬುಶಿಲ್ಪವಿದೆ. ಕಣಶಿಲೆ, ಗಾರೆಯಿಂದ ಕಟ್ಟಿರುವ ಈ ದೇವಾಲಯವು ಸುಣ್ಣಬಣ್ಣಗಳಿಂದ ಅಲಂಕಾರಗೊಂಡಿದೆ. ಕೋಟೆಯ ಆವರಣದಲ್ಲಿರುವ ಈ ದೇವಾಲಯವನ್ನು ಪಾಳೆಯಗಾರರು ಪೂಜೆ ಮಾಡಿದ ದೇವಾಲಯವಾಗಿತ್ತು ಎಂದು ನಾಗರಾಜ ಅವರು ತಿಳಿಸುತ್ತಾರೆ. ಪಾರಂಪರಿಕವಾಗಿ ಬೇಡ(ನಾಯಕ) ಜನಾಂಗದವರೆ ಇಂದು ಪೂಜೆ, ಅಭಿಷೇಕ ಮುಂತಾದ ಕಾರ್ಯಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ನಿತ್ಯ ಪೂಜೆ, ವಿಶೇಷ ದಿನದಂದು ದಾಸೋಹ, ವಾರ್ಷಿಕ ರಥೋತ್ಸವ ನಡೆಯುತ್ತಿದ್ದು, ಹಂಪಿ ವಿರೂಪಾಕ್ಷೇಶ್ವರ ರಥೋತ್ಸವ ದಿನದಂದು ಇಲ್ಲಿ ವಾರ್ಷಿಕ ರಥೋತ್ಸವ ನಡೆಯುತ್ತದೆ. ಪಾಳೆಯಗಾರರ ಕಾಲದಿಂದಲೂ ಈ ಪರಂಪರೆ ಬೆಳೆದುಬಂದಿರುವ ಪ್ರತೀತಿ ಇದೆ.

**ಶ್ರೀ ಆಂಜನೇಯ ದೇವಸ್ಥಾನ, ಮೈದೂರು**

ಹರಪನಹಳ್ಳಿ ಪಾಳೆಯಗಾರರ ಆಡಳಿತ ವ್ಯಾಪ್ತಿಯಲ್ಲಿ ಬರುವ ಮೈದೂರು ಗ್ರಾಮದಲ್ಲಿ ಕಡೆ ಆಂಜನೇಯ ಸ್ವಾಮಿ ದೇವಾಲಯವಿದೆ. ದ್ರಾವಿಡ ಶೈಲಿಯಲ್ಲಿರುವ ಈ ದೇವಾಲಯವನ್ನು ಕಣಶಿಲೆ, ಗಾರೆ ಮತ್ತು ಮರಗಳಿಂದ ನಿರ್ಮಿಸಲಾಗಿದೆ. ವಿಶಾಲ ಪ್ರವೇಶ, ಮುಖ್ಯದ್ವಾರ ಹಾಗೂ ಸುತ್ತಲೂ ಕಣಶಿಲೆಯ ಗೋಡೆಗಳಿಂದ ಆವೃತ್ತವಾಗಿರುವ ಪ್ರಾಕಾರವಿದೆ. ಮರದ ಕಂಬಗಳ ಸಭಾಮಂಟಪವಿದೆ. ಅಧಿಷ್ಠಾನದ ಮೇಲೆ ಸಿಂಹ ಹಾಗೂ ನಾಗ ಉಬ್ಬುಶಿಲ್ಪವಿಗಳಿ. ಈ ದೇವಾಲಯ ಸಭಾಮಂಟಪ ಹಾಗೂ ಗರ್ಭಗುಡಿ ಎಂಬ ೨ ಭಾಗಗಳನ್ನು ಹೊಂದಿದೆ. ಗರ್ಭಗೃಹದ ಪ್ರವೇಶ ಬಾಗಿಲು ಕಂಚಿನ ಲೋಹದ ಹೊದಿಕೆಯನ್ನು ಹೊಂದಿದ್ದು ಎಡ ಬಲದಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಗರ್ಭಗೃಹದಲ್ಲಿ ೨ ಅಡಿ ಎತ್ತರದ ಬಲಗೈ ಮೇಲೆ ಎತ್ತಿರುವ ಕೆತ್ತಿರುವ ಆಂಜನೇಯ ಉಬ್ಬು ಶಿಲ್ಪವಿದೆ. ಈ ದೇವಾಲಯ ಚಿಗಟೇರಿಯ ಶಿವಸಪ್ಪ

ನಾಯಕರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಹಿರಿಯರು ತಿಳಿಸುತ್ತಾರೆ. ಕ್ರಿ.ಶ. ೧೬೪೪ರ ಕಾಲಮಾನವನ್ನು ಹೊಂದಿದ ಪಾಳೆಯಗಾರರ ಶಾಸನವೊಂದು ಇಲ್ಲಿ ದೊರೆತಿದೆ.

**ಆಂಜನೇಯ ದೇವಾಲಯ, ಕರಡಿದುರ್ಗ**

೧೬ನೇ ಶತಮಾನದಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯ ದ್ರಾವಿಡ ಶೈಲಿಯಲ್ಲಿದೆ. ಕಣಶಿಲೆಯಿಂದ ನಿರ್ಮಾಣಗೊಂಡಿದ್ದು ವೈಷ್ಣವಪಂಥಕ್ಕೆ ಸೇರಿದೆ. ಸರಳವಾಸ್ತುವನ್ನು ಹೊಂದಿರುವ ಈ ದೇವಾಲಯ ಸಭಾಮಂಟಪ ಮತ್ತು ಗರ್ಭಗೃಹವನ್ನು ಹೊಂದಿದೆ. ಎದುರು ೧೫ ಅಡಿಯ ದೀಪಸ್ತಂಭವಿದೆ. ಸಭಾಮಂಟಪದಲ್ಲಿ ಮುಮ್ಮಡಿ ಬಸಪ್ಪನಾಯಕನ ಶಾಸನವೊಂದು ಇದೆ. ಇಲ್ಲಿ ಪಾಳೆಯಗಾರರ ಪ್ರಸಿದ್ಧ ಕೋಟೆ ಕೂಡ ಇತ್ತು. ಇದು ಇಂದು ಸಂಪೂರ್ಣ ನೆಲಸಮವಾಗಿದೆ. ಕೋಟೆಯ ಒಳಗಡೆ ಕುಲದೈವ ಆಂಜನೇಯನ ದೇವಾಲಯವಿದೆ. ಈ ದೇವಾಲಯವನ್ನು ಸಂಪೂರ್ಣವಾಗಿ ಆಧುನಿಕ ಸಾಮಗ್ರಿಗಳನ್ನು ಬಳಸಿ ಜೀರ್ಣೋದ್ಧಾರಗೊಳಿಸಲಾಗಿದೆ. ಪ್ರತಿವರ್ಷ ಯುಗಾದಿಯ ನಂತರ ಉತ್ಸವ ನಡೆಯುತ್ತದೆ.

ಇವುಗಳಲ್ಲದೆ ಹರಪನಹಳ್ಳಿ ಪಾಳೆಯಗಾರರ ಕಾಲದ ದೇವಾಲಯಗಳು ಹೊಳಲು, ಕುಂಚೂರು, ಹಿರೇಮ್ಯಾಗಳಗೇರಿ, ಅರಸೀಕೆರೆ, ಮಾಗನಹಳ್ಳಿ, ಕೂಲಹಳ್ಳಿ, ಚಿಕ್ಕಮ್ಯಾಗಳಗೇರಿ, ಅಲಗಿಲವಾಡ, ನಾರಾಯಣದೇವರಕೆರೆ, ತಂಬ್ರಹಳ್ಳಿ ಮುಂತಾದ ಅನೇಕ ಪ್ರದೇಶಗಳಲ್ಲಿ ಕಂಡುಬರುತ್ತವೆ. ಹರಪನಹಳ್ಳಿಯ ಸುತ್ತ ೧೨ ದಿಕ್ಕಿಗೆ ೧೨ ಉಕ್ಕಡಗಳು ಪ್ರತಿ ಉಕ್ಕಡಕ್ಕೂ ಒಂದೊಂದು ಆಂಜನೇಯ ದೇವಾಲಯಗಳು ಇದ್ದವು.

**ಕೆಳಕೋಟೆ ಆಂಜನೇಯ, ಉಚ್ಚಂಗಿದುರ್ಗ:** ದ್ರಾವಿಡ ಶೈಲಿಯಲ್ಲಿರುವ ಈ ದೇವಾಲಯ ಗರ್ಭಗೃಹ, ನವರಂಗವನ್ನು ಹೊಂದಿದೆ. ನವರಂಗ ೬ ಕಂಬವನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಸುಮಾರು ೬ರಿಂದ ೭ ಅಡಿ ಎತ್ತರವಿರುವ ಆಂಜನೇಯ ಮೂರ್ತಿ ಇದೆ. ವಿಶಾಲವಾದ ಪಾಳೆಯನ್ನು ಹೊಂದಿರುವ ಈ ದೇವಾಲಯ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ.

**ಉಚ್ಚಂಗೆಮ್ಮ ದೇವಾಲಯ, ಹರಪನಹಳ್ಳಿ**

ಹರಪನಹಳ್ಳಿ ಪಾಳೆಯಗಾರ ದಾದಯ್ಯನಾಯಕ ಈ ದೇವಾಲಯವನ್ನು ಹರಪನಹಳ್ಳಿಯ ವಾಯವ್ಯ ದಿಕ್ಕಿನಲ್ಲಿ ಸಣ್ಣ ಪರ್ವತದ ಮೇಲೆ ನಿರ್ಮಿಸಿದ್ದಾನೆ. ಹೊನ್ನವ್ವ ನಾಗತಿ ಉಚ್ಚಂಗಿದುರ್ಗದ ಕೋಟೆಯ ಮೇಲಿಂದ ಬಿದ್ದು ಮರಣ ಹೊಂದಿದಾಗ ದಾದೇಯನಾಯಕ ಈ ದುಃಖದಲ್ಲಿ ಉಚ್ಚಂಗಿದುರ್ಗಕ್ಕೆ ಹೋಗಲು ಮನಸ್ಸಾಗುವುದಿಲ್ಲ. ಆದರೆ ಮನೆತನದ ದೇವತೆಯಾದ ಉಚ್ಚಂಗೆಮ್ಮಳಿಗೆ ಪೂಜೆ ಮಾಡಲೇಬೇಕಾದ ಅನಿವಾರ್ಯತೆ ಬಂದಾಗ ಹರಪನಹಳ್ಳಿಯ ಸಮೀಪದಲ್ಲಿ ಈ ದೇವಾಲಯವನ್ನು ನಿರ್ಮಿಸುತ್ತಾನೆ. ಹೊಸದಾಗಿ ಉಚ್ಚಂಗೆಮ್ಮನ ಮೂರ್ತಿ ಪ್ರತಿಷ್ಠಾಪಿಸಿ ಹರಪನಹಳ್ಳಿ ಸುತ್ತಮುತ್ತಲಿನ ಜನರಿಗೆ ಅನುಕೂಲವಾಗುವಂತೆ ಮಾಡಲಾಯಿತು. ಪ್ರಸ್ತುತ ಈ ದೇವಾಲಯ ಹಾಳಾಗಿರುವುದು ಕಂಡುಬರುತ್ತದೆ.

ಹರಪನಹಳ್ಳಿ ಪಟ್ಟಣದಲ್ಲಿ ಶ್ರೀವಿರೂಪಾಕ್ಷೇಶ್ವರ ದೇವಾಲಯ, ಶೃಂಗೇರಿಯ ಶಂಕರ ಮಠ ಕಂಡುಬರುತ್ತವೆ. ಇವು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿವೆ ಎಂದು ತಿಳಿದುಬರುತ್ತದೆ. ಇವುಗಳಿಂದ ಪಾಳೆಯಗಾರರಿಗೆ ಹಂಪಿ ಮತ್ತು ಶೃಂಗೇರಿ ಮಠದೊಂದಿಗೆ ಸಂಬಂಧ ಇತ್ತು ಎಂದು ಹೇಳಬಹುದು. ಹಿರೆ ಮ್ಯಾಗಳಗೇರಿಯಲ್ಲಿ ಶ್ರೀ ಆಂಜನೇಯ ದೇವಾಲಯವಿದ್ದು ಇದು ಪ್ರಸ್ತುತ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ಈ ದೇವಾಲಯದಲ್ಲಿರುವ ಉಯ್ಯಾಲೆ ಕಂಬ ಚಿತ್ರದುರ್ಗದ ಕೋಟೆಯಲ್ಲಿರುವ ಉಯ್ಯಾಲೆ ಕಂಬದ ಮಾದರಿಯಲ್ಲಿ ಕಂಡುಬರುತ್ತದೆ. ನಿಚ್ಚವನಹಳ್ಳಿ ಗ್ರಾಮ ಹರಪನಹಳ್ಳಿ ಪಾಳೆಯಗಾರರ ಪ್ರಮುಖ ಆಡಳಿತ ಕೇಂದ್ರವಾಗಿದ್ದು ಇಲ್ಲಿನ ಆಂಜನೇಯ ದೇವಾಲಯದಲ್ಲಿ ಇವರ ಶಾಸನ ಈಗಲೂ ಸುಸ್ಥಿತಿಯಲ್ಲಿರುವುದು ಕಂಡುಬರುತ್ತದೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿಯಲ್ಲಿ ಹರಪನಹಳ್ಳಿ ಪಾಳೆಯಗಾರರ ಸಾಮಂತ ಅರಸ ಓಬರನಾಯಕ ಶ್ರೀರಂಗನಾಥ ದೇವಾಲಯವನ್ನು ನಿರ್ಮಿಸಿದ ಎಂದು ಹೇಳಲಾಗುತ್ತದೆ. ರಂಗನಾಥ ಶಿಲ್ಪವು ಸರ್ಪದ ಮೇಲೆ ಮಲಗಿದಂತಿದೆ. ಇಲ್ಲಿ ಶಿವಲಿಂಗವೂ ಇದೆ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಬಾವಿಯನ್ನು ಕೂಡ ನಿರ್ಮಿಸಲಾಗಿದೆ. ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ಈ ದೇವರ ರಥೋತ್ಸವ ನಡೆಯುತ್ತದೆ. ಹಾಗೆ ನಾರಾಯಣದೇವರಕೆರೆಯಲ್ಲಿ ಪಾಳೆಯಗಾರರ ಕಾಲದ ಅರಮನೆ, ಪುಷ್ಕರಣಿ, ದೇವಾಲಯಗಳು ತುಂಗಭದ್ರಾ ಆಣೆಕಟ್ಟೆಯ ಹಿನ್ನೀರಿನಲ್ಲಿ ಮುಳುಗಡೆಯಾಗಿವೆ. ಆದರೆ ಬೇಸಿಗೆ ಕಾಲದಲ್ಲಿ ನದಿಯ ನೀರು ಕಡಿಮೆ ಆದಾಗ ಈ ಸ್ಮಾರಕಗಳ ಅವಶೇಷಗಳು ಕಂಡುಬರುತ್ತವೆ.

ಹರಪನಹಳ್ಳಿ ಪಾಳೆಯಗಾರ ಮುಮ್ಮಡಿ ಬಸವಂತಪ್ಪನಾಯಕ ಉಚ್ಚಂಗೆಮ್ಮ ದೇವಿಗೆ ಗಂಟೆಯನ್ನು ಮಾಡಿಸಿ ಶಾಸನವನ್ನು ಬರೆಯಿಸಿದ್ದಾನೆ. ಈ ಶಾಸನದಲ್ಲಿ ರಂಗಣ್ಣನಾಯಕನ ಹೆಸರು ಉಲ್ಲೇಖವಿರುವುದನ್ನು ನೋಡಬಹುದು.

**ಹರಪನಹಳ್ಳಿ ಪಾಳೆಯಗಾರರ ಕಾಲದ ಮಠಗಳು**

ವಾಸ್ತುಶಿಲ್ಪ ಪರಂಪರೆಯಲ್ಲಿ ಹಾಗೂ ಧಾರ್ಮಿಕ ವ್ಯವಸ್ಥೆಯಲ್ಲಿ ಮಠಗಳು ಬಹುಮಹತ್ವದ ಪಾತ್ರ ವಹಿಸುತ್ತವೆ. ಪ್ರಾಚೀನ ಕಾಲದಿಂದಲೂ ಮಠಗಳು ರಾಜಕೀಯ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿ ಮುಖ್ಯ ಪಾತ್ರ ವಹಿಸಿರುವುದನ್ನು ಕಾಣಬಹುದು. ಈ ಮಠಗಳಿಗೆ ರಾಜರು, ಮಹಾರಾಜರು, ಸಾಮಂತರು, ಮಾಂಡಲಿಕರು, ಅಮರನಾಯಕರು, ಪಾಳೆಯಗಾರರು, ಮಂತ್ರಿಗಳು, ಅಧಿಕಾರಿಗಳು ಹಾಗೂ ಸಾಮಾನ್ಯ ಜನರು ದಾನ-ಧರ್ಮಗಳನ್ನು ನೀಡಿ ಮಠ ಪರಂಪರೆಯನ್ನು ಉಳಿಸಿ ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಜೊತೆಗೆ ವಾಸ್ತುಶಿಲ್ಪ ದೃಷ್ಟಿಯಿಂದಲೂ ಪ್ರಮುಖ ಸ್ಥಾನ ಪಡೆದಿರುವುದು ಕಂಡುಬರುತ್ತದೆ.

ಹರಪನಹಳ್ಳಿ ಪಾಳೆಯಗಾರರು ಹಲವಾರು ಮಠಮಾನ್ಯಗಳನ್ನು ಸ್ಥಾಪಿಸಿ ದಾನ-ಧರ್ಮ ನೀಡಿರುವುದನ್ನು ಅವರ ಶಾಸನಗಳಿಂದ ತಿಳಿಯಬಹುದು. ಇವರ ಕಾಲದಲ್ಲಿ ಸುಮಾರು ೧೦೧ ಮಠಗಳು ಇದ್ದವೆಂದು ತಿಳಿದುಬರುತ್ತದೆ. ಇವುಗಳಲ್ಲಿ ಕೂಲಹಳ್ಳಿಯ ಮದ್ದಾನೇಶ್ವರ ಮಠ ಹಾಗೂ ಗೋಣಿಬಸವೇಶ್ವರರ ಮಠಗಳು ಪ್ರಮುಖವಾಗಿವೆ. ಮದ್ದಾನೇಶ್ವರ ಮಠವು ಪ್ರಾಚೀನ ಕಾಲದ ಕಟ್ಟಡವಾದರೂ ಹರಪನಹಳ್ಳಿ ಪಾಳೆಯಗಾರರು ಜೀರ್ಣೋದ್ಧಾರ ಮಾಡಿ ಅಭಿವೃದ್ಧಿಪಡಿಸಿದ್ದಾರೆ.

ಮದ್ದಾನೇಶ್ವರ ಮಠವು ಸಾಕಷ್ಟು ವಿಶಾಲವಾಗಿದ್ದು, ಪ್ರಾಚೀನ ಕಾಲದ ಕಟ್ಟಡವಾಗಿದೆ. ಈ ಮಠಕ್ಕೆ ಮೂರು ಬಾಗಿಲುಗಳಿದ್ದು ದ್ವಾರದ ಪಕ್ಕದಲ್ಲಿ ಸೋಬಾನಗಳು, ಬಲಭಾಗಕ್ಕೆ ಆನೆ, ಎಡಭಾಗದಲ್ಲಿ ಸಿಂಹದ ಶಿಲ್ಪಗಳಿವೆ. ಎರಡನೇ ದ್ವಾರದ ಮೇಲೆ ಆಂಜನೇಯನ ಶಿಲ್ಪವಿದೆ, ಎರಡು ಮತ್ತು ಮೂರನೇ ದ್ವಾರದ ಮಧ್ಯದಲ್ಲಿ ಹಲವು ಪ್ರಾಣಿ ಪಕ್ಷಿ, ದೇವತೆಗಳ ಉಬ್ಬು ಶಿಲ್ಪಗಳಿವೆ. ಒಳಗಡೆ ಪ್ರವೇಶಿಸಿದರೆ ವಿಶಾಲವಾದ ಪಡಸಾಲೆಗಳಿವೆ. ಗರ್ಭಗೃಹದ ಪೀಠದ ಮೇಲೆ ಮದ್ದಾನೇಶ್ವರ ಶಿಲ್ಪವಿದೆ. ಮಠದ ಒಳಗಡೆ ಕೆಲವು ಗುಹೆಗಳಿದ್ದು ಗೋಡೆಗಳ ಮೇಲೆ ಆಂಜನೇಯ ನಾಗಶಿಲ್ಪಗಳು ಇನ್ನು ಮುಂತಾದ ಕೆಲವು ಉಬ್ಬುಶಿಲ್ಪಗಳನ್ನು ಕಾಣಬಹುದು. ಮಠದ ಮೇಲೆ ಒಂದೊಂದು ಹುಡೇವು ಕಂಡುಬರುತ್ತದೆ. ಪಂಚಗಣಧೀಶ್ವರರಾದ ಕೋಲಶಾಂತೇಶ್ವರಸ್ವಾಮಿ, ಕೆಂಪಯ್ಯಸ್ವಾಮಿ, ತಿಪ್ಪೇರುದ್ರಸ್ವಾಮಿ, ಮದ್ದಾನೇಶ್ವರಸ್ವಾಮಿ, ಕೊಟ್ಟೂರೇಶ್ವರಸ್ವಾಮಿ ಈ ಭಾಗಕ್ಕೆ ಬಂದು ಕೆಲವು ದಿನಗಳ ಕಾಲ ನೆಲೆಸಿದ್ದರು ಎಂಬ ಪ್ರತೀತಿ ಇದೆ.

ಮೊದಲನೇ ಸೋಮಶೇಖರನ ಕಾಲದಲ್ಲಿ ಸುಮಾರು ೬೦ ಮಠಗಳಿದ್ದವೆಂದು ತಿಳಿದುಬರುತ್ತದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಗುರುಪಾದ ದೇವರ ಮಠ, ಕಲ್ಯಾಣಪ್ಪನವರ ಮಠ, ಹಲ್ಮರಿಮಠ, ಕಾಶಿಮಠ, ಚೌಕಿಮಠ, ಗದ್ದಿಗೆಮಠ, ಸುರಪಾನಮಠ, ತೆಗ್ಗಿನಮಠ, ಕೆಂಪಯ್ಯ ಸ್ವಾಮಿಗಳ ಮಠ ಮುಂತಾದ ಸುಮಾರು ೬೦ ಮಠಗಳಿದ್ದವು ಎಂದು ತಿಳಿದುಬರುತ್ತದೆ.

ಮೊದಲು ಅರಮನೆಯಾಗಿದ್ದ ಮದ್ದಾನೇಶ್ವರ ಮಠ, ಮದ್ದಾನೇಶ್ವರರು ಕನಕವ್ವ ನಾಗತಿಯನ್ನು ವಿವಾಹವಾದ ನಂತರ ಇಲ್ಲೇ ನೆಲೆಸಿದರು. ಅಂದಿನಿಂದ ಈ ಅರಮನೆ ಮಠವಾಗಿ ಪರಿವರ್ತನೆಯಾಯಿತು. ಈ ಮಠದಲ್ಲಿ ಸುಮಾರು ೩೦೦ಕ್ಕೂ ಹೆಚ್ಚು ಕಂಬಗಳಿವೆ. ಸುಮಾರು ೬೦ ಬೃಹತ್ ಶಿಲಾಸ್ತಂಭಗಳಿವೆ. ಮಠದ ಸುತ್ತ ಹಾಳಾಗಿರುವ ಗೋಡೆಯಿದ್ದು, ಮಠದ ಒಳಗಡೆ ವಿಶಾಲವಾದ ಒಳಾಂಗಣವಿದೆ. ಇಲ್ಲಿ ಹಲವಾರು ಉಬ್ಬುಶಿಲ್ಪಗಳಿರುವುದು ಕಂಡುಬರುತ್ತದೆ. ಇಂದು ಈ ಮಠ ನೂರಾರು ಎಕರೆಯ ವಿಸ್ತೀರ್ಣದಲ್ಲಿ ಆವರಿಸಿದೆ. ಗೋಪುರಗಳು, ಬುರುಜು, ವಿಶಾಲವಾದ ಹಜಾರ, ಸುಂದರ ಶಿಲ್ಪಗಳು, ಶಿಲಾಸ್ತಂಭಗಳು, ಬಾವಿಗಳನ್ನು ಒಳಗೊಂಡು ಹೀಗೆ ಕಂಗೊಳಿಸುವ ಈ ಮಠ ಒಂದು ಅದ್ಭುತ ತಂತ್ರಜ್ಞಾನ ಕುಶಲತೆ ಹೊಂದಿದೆ

ಹರಪನಹಳ್ಳಿ ಪಾಳೆಯಗಾರರ ಇನ್ನೊಂದು ಬೃಹತ್ ಮಠವೆಂದರೆ ಕೊಟ್ಟೂರು ಬಸವೇಶ್ವರ ಮಠ. ಇಲ್ಲಿ ತೊಟ್ಟಲುಮಠ, ಹಿರೇಮಠ, ಮೂರ್ಕಲ್ಲುಮಠ, ಗಚ್ಚಿನಮಠ ಮುಂತಾದ ಮಠಗಳು ಇಲ್ಲಿ ಪ್ರಸಿದ್ಧಿಯನ್ನು ಪಡೆದಿವೆ.

ಕೊಟ್ಟೂರಿನ ಶ್ರೀಬಸವೇಶ್ವರರ ಮಠಕ್ಕೆ ಹಿರೇಮಠ ಹಾಗೂ ದಮಾರರ ಮಠವೆಂತಲೂ ಕರೆಯುತ್ತಾರೆ. ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಶ್ರೀಗುರು ಕೊಟ್ಟೂರು ಬಸವೇಶ್ವರರು ೧೫-೧೬ನೇ ಶತಮಾನದಲ್ಲಿ ಇಲ್ಲಿ ನೆಲೆಸಿದರು. ಅಂದಿನಿಂದ ಇದು ಕೊಟ್ಟೂರು ಬಸವೇಶ್ವರ ಮಠವಾಯಿತು. ಇದಕ್ಕಿಂತ ಮುಂಚೆ ಈ ಮಠ ವೀರಭದ್ರೇಶ್ವರ ದೇವಾಲಯವಾಗಿತ್ತೆಂದು ತಿಳಿದುಬರುತ್ತದೆ. ಹರಪನಹಳ್ಳಿ ಪಾಳೆಯಗಾರ ಕೊಟ್ರಪ್ಪನಾಯಕ ಶ್ರೀಗುರು ಕೊಟ್ಟೂರು ಬಸವೇಶ್ವರರನ್ನು ತಮ್ಮ ಆರಾಧ್ಯದೈವವೆಂದು ರಾಜಗುರುಗಳನ್ನಾಗಿಸಿಕೊಂಡಿದ್ದರು. ಇವರ ಮೇಲೆ ಭಕ್ತಿ ಹಾಗೂ ನಂಬಿಕೆಗಳನ್ನು ಇಟ್ಟುಕೊಂಡಿದ್ದರು. ಈ ಮಠವು ವಿಜಯನಗರ ವಾಸ್ತು ಶೈಲಿಯಲ್ಲಿ ರಚನೆಗೊಂಡಿದ್ದು, ಮುಖಮಂಟಪ, ಪ್ರವೇಶದ್ವಾರ, ಸಭಾಮಂಟಪ, ಗರ್ಭಗುಡಿ, ಗೋಪುರಗಳನ್ನು ಹೊಂದಿದೆ. ಮುಖಮಂಟಪದಲ್ಲಿ ಗಣೇಶ, ಗಜಲಕ್ಷ್ಮಿ ಮುಂತಾದ ದೇವತಾ ವಿಗ್ರಹಗಳನ್ನು ಕಾಣಬಹುದು. ಈ ಮಠದ ಗೋಪುರದ ಬಗ್ಗೆ ಜನಪದರಲ್ಲಿ ಒಂದು ಐತಿಹ್ಯವಿದೆ. ಮರಾಠರಾದ ಸಿದ್ದೋಜಿ, ಚಿತ್ರದುರ್ಗದ ಪಾಳೆಯಗಾರ ಮದಕರಿನಾಯಕ, ಹರಪನಹಳ್ಳಿ ಪಾಳೆಯಗಾರ ಸೋಮಶೇಖರನಾಯಕ ಇವರ ಮಧ್ಯೆ ಯುದ್ಧ ಸಂಭವಿಸುತ್ತದೆ. ಕೊಟ್ಟೂರು ಕೋಟೆಯನ್ನು ಮುತ್ತಿಗೆ ಹಾಕಲು ಇವರು ಪ್ರಯತ್ನಿಸುತ್ತಾರೆ. ಕದನದ ಸಮಯದಲ್ಲಿ ಕೋಟೆ ಪ್ರದೇಶದಲ್ಲಿದ್ದ ಶ್ರೀವೀರಭದ್ರೇಶ್ವರ ಮೂರ್ತಿಗೆ ಮದ್ದುಗುಂಡುಗಳು ತಗುಲಿ ಮೂರ್ತಿ ಒಡೆದು ಹೋಳಾಯಿತು ಹಾಗೂ ಗೋಪುರ ಒಡೆದುಹೋಯಿತು. ವಿಜಯಿಯಾದ ಸೋಮೇಶ್ವರ ನಾಯಕ ಅದೇ ರೀತಿಯ ಅದಕ್ಕಿಂತ ದೊಡ್ಡ ಗೋಪುರವನ್ನು ಕಟ್ಟಿಸಿ ದೇವರ ಕೃಪೆಗೆ ಪಾತ್ರನಾದನು ಎಂದು ತಿಳಿದುಬರುತ್ತದೆ.

ಈ ಮಠದ ಸಭಾಮಂಟಪ ಸುಮಾರು ೪೦ ಕಂಬಗಳನ್ನು ಹೊಂದಿದ್ದು ಇಲ್ಲಿ, ಸಿಂಹ ಸವಾರರು, ಶಿವ, ಪಾರ್ವತಿ, ನರಸಿಂಹ, ನೃತ್ಯಗಾರ್ತಿಯರು, ಋಷಿಗಳು, ಸಿಂಹಗಳು, ಉಬ್ಬುಶಿಲ್ಪಗಳು ಮುಂತಾದ ಹಲವು ಚಿತ್ರಗಳು ಕಂಡುಬರುತ್ತವೆ. ಗರ್ಭಗುಡಿಯಲ್ಲಿ ಕೊಟ್ಟೂರು ಬಸವೇಶ್ವರ ಮೂರ್ತಿಯನ್ನು ಕಾಣಬಹುದು.

ಕೊಟ್ಟೂರಿನ ಗಚ್ಚಿನಮಠ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಹೇಳಬಹುದು. ಇದರ ವೈಶಿಷ್ಟ್ಯವೆಂದರೆ ಮೊಗಲರ ಚಕ್ರವರ್ತಿ ಅಕ್ಬರ್ ಭಾವೈಕ್ಯದ ಸಂಕೇತವಾಗಿ ಶ್ರೀಗುರು ಕೊಟ್ಟೂರೇಶ್ವರನಿಗೆ ಭಕ್ತಿಪೂರ್ವಕವಾಗಿ ಅರ್ಪಿಸಿದ ಮಣಿಮಂಚವನ್ನು ಈ ಮಠದಲ್ಲಿ ಕಾಣಬಹುದು. ಇದು ಗದ್ದುಗೆಯ ಮಠವಾಗಿರುವುದರಿಂದ ಪಾಳೆಯಗಾರರು ನಿರ್ಮಿಸಿದ್ದಾರೆ ಎಂದು ಹೇಳಬಹುದು. ಇಲ್ಲಿ ಕಟ್ಟಡಗಳ ಮೇಲೆ ನಾಗ ಉಬ್ಬುಶಿಲ್ಪ, ಮೀನು, ಸಿಂಹಮುಖಗಳ

ಉಬ್ಬುಶಿಲ್ಪಗಳಿರುವುದರಿಂದ ಪಾಳೆಯಗಾರರಿಂದ ನಿರ್ಮಾಣವಾಗಿದೆ ಎಂದು ಹೇಳಬಹುದು. ಈ ಮಠ ಹಿರೇಮಠಕ್ಕಿಂತ ಹೆಚ್ಚು ವೈಶಾಲ್ಯವ ಹೊಂದಿದೆ. ರಂಗಣ್ಣನಾಯಕ ಕೊಟ್ಟೂರು ಬಸವೇಶ್ವರರಿಗೆ ಭಕ್ತಿಯನ್ನು ಸಮರ್ಪಿಸುವ ಉದ್ದೇಶದಿಂದ ಮಠದ ಮಧ್ಯಭಾಗವನ್ನು ಮತ್ತು ಮಹಾದ್ವಾರವನ್ನು ಕಟ್ಟಿಸಿದ್ದನೆಂದು ತಿಳಿದುಬರುತ್ತದೆ.

ಇವುಗಳಲ್ಲದೆ ಹರಪನಹಳ್ಳಿ ಪಾಳೆಯಗಾರರು ಇನ್ನು ಹಲವಾರು ಸಣ್ಣಪುಟ್ಟ ಮಠಗಳನ್ನು ನಿರ್ಮಿಸಿರುವುದು ಕಂಡುಬರುತ್ತವೆ. ಅವುಗಲ್ಲಿ ಪ್ರಮುಖವಾದವುಗಳೆಂದರೆ ಮೊದಲನೇ ವೀರಬಸಪ್ಪನಾಯಕ ಅಕಾಲ ಮರಣಕ್ಕೆ ತುತ್ತಾದಾಗ ಆತನ ಸಮಾಧಿಯನ್ನು ಹರಪನಹಳ್ಳಿ ಪಟ್ಟಣದ ಹೀರೆ ಕುರುಬರಕೇರಿಯಲ್ಲಿ ಸಮಾಧಿ ಮಾಡಿ ಅಲ್ಲಿ ದೇವಾಲಯವನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಇದಕ್ಕೆ ಅರಸುಮಠವೆಂದು ಕರೆಯುತ್ತಾರೆ. ಮೊದಲನೇ ಸೋಮಶೇಖರ ನಾಯಕ ಕೂಲಹಳ್ಳಿಯಲ್ಲಿ ಗೋಣಿಬಸಪ್ಪನ ಮಠವನ್ನು ನಿರ್ಮಿಸಿದ್ದಾನೆಂದು ತಿಳಿದುಬರುತ್ತದೆ.

ಹೀಗೆ ಹಲವಾರು ಮಠಗಳನ್ನು ಸ್ಥಾಪಿಸಿ ಅವುಗಳಿಗೆ ದಾನದತ್ತಿಗಳನ್ನು ನೀಡಿ, ಅವುಗಳ ಅಭಿವೃದ್ಧಿಗೆ ಹರಪನಹಳ್ಳಿ ಪಾಳೆಯಗಾರರು ಕಾರಣೀಕರ್ತರಾಗಿದ್ದಾರೆ. ಶಿವನಪ್ಪನಾಯಕನು ಚಿಗಟೇರಿಯಲ್ಲಿ ಹರಪನಹಳ್ಳಿ ಪಾಳೆಯಗಾರರಿಗೆ ಅಧೀನರಾಗಿ, ವಿಧೇಯರಾಗಿ ಆಳ್ವಿಕೆ ನಡೆಸುತ್ತಿದ್ದು, ಈ ನಾಯಕ ಶ್ರೀ ಕೂಡಲಿಶಂಕರಭಾರತಿಸ್ವಾಮಿಗಳ ಮಠಕ್ಕೆ ಬಸಾಪುರ ಗ್ರಾಮವನ್ನು ದಾನವಾಗಿ ನೀಡಿದ್ದನು. ಮುಮ್ಮಡಿ ಬಸಪ್ಪನಾಯಕ ಕೊಟ್ಟೂರು ಬಸವೇಶ್ವರ ಸ್ವಾಮಿಗೆ ಕಾನಾಯಕನಕಟ್ಟೆ ಗ್ರಾಮವನ್ನು ದಾನವಾಗಿ ನೀಡಿದನು. ಬಾಗಳಿಬಸಪ್ಪನಾಯಕ ನರಸಿಂಹಭಾರತಿ ಸ್ವಾಮಿಗಳಿಗೆ ಮಾಣಿಸೋಮಲಾಪುರ ಗ್ರಾಮವನ್ನು ಉಂಬಳಿಯಾಗಿ ನೀಡಿರುವುದು ಶಾಸನದಿಂದ ತಿಳಿದುಬರುತ್ತದೆ. ಬಾಗಳಿ ಹರಿಯಮ್ಮಾಜಿ ಜೋಯಿಸ ಪ್ರಸನ್ನಭಟ್ಟರಿಗೆ ಶಂಕರಾಚಾರ್ಯ ಮಠ ಕಟ್ಟಿಸಿ ಭೂಮಿಯನ್ನು ದತ್ತಿಯಾಗಿ ನೀಡಿದಳು. ಮುಮ್ಮಡಿ ಬಸಪ್ಪನಾಯಕ ಶೃಂಗೇರಿ ಸ್ವಾಮಿಗಳಿಗೆ ದಾನದತ್ತಿಗಳನ್ನು ನೀಡಿರುವುದು ಶಾಸನಗಳಲ್ಲಿ ಉಲ್ಲೇಖಿತಗೊಂಡಿವೆ.

ಹೀಗೆ ಹರಪನಹಳ್ಳಿ ಪಾಳೆಯಗಾರರು ತಮ್ಮ ಆಡಳಿತ ಅವಧಿಯಲ್ಲಿ ಹಲವಾರು ಮಠಗಳನ್ನು ಸ್ಥಾಪಿಸಿ ಅವುಗಳಿಗೆ ದಾನದತ್ತಿ ನೀಡುವುದರಿಂದ ಪ್ರೋತ್ಸಾಹ ನೀಡುತ್ತಿದ್ದರು. ಅಂದಿನ ಕಾಲದ ಮಠಗಳು ಹರಪನಹಳ್ಳಿ ಪಾಳೆಯಗಾರರ ಕಲೆ ಮತ್ತು ವಾಸ್ತುಶಿಲ್ಪಕ್ಕೆ ನೀಡಿದ ಒಂದು ಕೊಡುಗೆ ಎಂದು ಹೇಳಬಹುದು. ಹರಪನಹಳ್ಳಿ ಪಾಳೆಯಗಾರರು ಮಠಮಾನ್ಯಗಳನ್ನು ನಿರ್ಮಿಸಿರುವುದು ಹಾಗೂ ಅವುಗಳಿಗೆ ದಾನದತ್ತಿಗಳನ್ನು ನೀಡಿರುವುದನ್ನು ಅವಲೋಕಿಸಿದರೆ ಈ ಪಾಳೆಯಗಾರರು ಆರ್ಥಿಕವಾಗಿ ಸದೃಢರಾಗಿದ್ದರು ಎಂದು ತಿಳಿಯುತ್ತದೆ. ಸುಂದರವಾಗಿ ಅಲಂಕೃತಗೊಂಡಿರುವ ಈ ಮಠಗಳನ್ನು ನೋಡಿದರೆ ಅವರ ಕಾಲದಲ್ಲಿ ಸಾಕಷ್ಟು ಪ್ರೋತ್ಸಾಹ ನೀಡುತ್ತಿದ್ದರು ಎಂದು ತಿಳಿದುಬರುತ್ತದೆ.

**ಮೂರ್ತಿಶಿಲ್ಪಗಳು**

ವೇದಗಳ ಕಾಲದ ಸಂಸ್ಕೃತಿಯಲ್ಲಿ ಪ್ರಕೃತಿಶಕ್ತಿಗಳ ಅರಾಧನೆ ಹೆಚ್ಚಾಗಿದ್ದು ವಿಗ್ರಹ ಅಥವಾ ಮೂರ್ತಿಗಳ ಆರಾಧನೆ ಇರಲಿಲ್ಲ. ಆದರೂ ಇಂದ್ರ, ವರುಣ, ರುದ್ರ, ಅಗ್ನಿ, ಮುಂತಾದ ದೇವತೆಗಳಿಗೆ ಮನುಷ್ಯ ಮೂರ್ತಿಯಾಕಾರದ ಕಲ್ಪನೆಯನ್ನು ಕೊಟ್ಟಿರುವುದು ಕಂಡುಬರುತ್ತದೆ.[೩] ರಾಮಾಯಣ ಮಹಾಭಾರತ ಗ್ರಂಥಗಳಲ್ಲಿಯೂ ದೇವಾಲಯಗಳು ಉಲ್ಲೇಖವಾಗಿರುವುದರಿಂದ ಆ ವೇಳೆಗಾಗಲೇ ವಿಗ್ರಹಾರಾಧನೆ ಸ್ವಲ್ಪ ಮಟ್ಟಿಗೆ ಪ್ರಚಲಿತದಲ್ಲಿತ್ತೆಂದು ತಿಳಿದುಬರುತ್ತದೆ. ವೇದೋತ್ತರ ಕಾಲದಲ್ಲಿ ಗೃಹ್ಯಸೂತ್ರಗಳಲ್ಲಿ ಮೂರ್ತಿಪೂಜೆಯ ಉಲ್ಲೇಖ ಕಂಡುಬರುತ್ತದೆ. ನಂತರ ಸಾಹಿತ್ಯ ಗ್ರಂಥವಾದ ಶತರುದ್ರಿಯಲ್ಲಿ ಬ್ರಾಹ್ಮಣ ಸಂಸ್ಕೃತಿಯ ಕೆಲವು ಪ್ರಮುಖ ದೇವತೆಗಳಾದ ಶಿವ, ವಿಷ್ಣು, ಬ್ರಹ್ಮ, ವಕ್ರತುಂಡ, ದುರ್ಗ, ಆದಿತ್ಯ ಮುಂತಾದ ದೇವತೆಗಳ ಉಲ್ಲೇಖ ಹಾಗೂ ದೇವತಾ ನಾಮಗಳಿಗೆ ಗ್ರಾಂಥಿಕ ಆಧಾರಗಳು ಆ ಕಾಲದಲ್ಲಿ ಸಿಗುತ್ತವೆ.[೪]

ಮೌರ್ಯ, ಶಾತವಾಹನರ ಕಾಲದಲ್ಲಿ ಪ್ರಾರಂಭವಾದ ಮೂರ್ತಿಶಿಲ್ಪದ ಬೆಳವಣಿಗೆ ಗುಪ್ತರು, ಬಾದಾಮಿ ಚಾಲುಕ್ಯರ ಕಾಲದಲ್ಲಿ ಪ್ರವರ್ಧಮಾನವಾಗಿ ಬೆಳೆದುನಿಂತಿತು. ವಿಶೇಷವಾಗಿ ಕರ್ನಾಟಕದಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇನ್ನಷ್ಟು ಉತ್ತುಂಗ ತಲುಪಿತು. ವಿಜಯನಗರದ ಅಸ್ತಿತ್ವದೊಂದಿಗೆ ಕರ್ನಾಟಕದ ಮೂರ್ತಿಶಿಲ್ಪ ಮತ್ತೊಂದು ಆಯಾಮವನ್ನು ಪಡೆದುಕೊಂಡಿತು. ಈ ಕಾಲದಲ್ಲಿ ಹೆಚ್ಚು ಮೂರ್ತಿಶಿಲ್ಪಗಳು ರಚನೆಯಾದವು. ಗಾತ್ರದ ದೃಷ್ಟಿಯಿಂದ ಬೃಹತ್ ಪ್ರಮಾಣದ ಮೂರ್ತಿಶಿಲ್ಪಗಳು ಸೃಷ್ಟಿಯಾಗಿ ಕರ್ನಾಟಕದ ಮೂರ್ತಿಶಿಲ್ಪ ಕಲೆಯನ್ನು ವೈಭವೀಕರಿಸಿದವು.[೫] ಇದೇ ಕಲಾಪರಂಪರೆಯನ್ನು ಮುಂದುವರಿಸಿಕೊಂಡು ಬಂದ ಪಾಳೆಯಗಾರರು ಕೆಲವು ಇತಿಮಿತಿಗಳಿಂದ ಇವರ ವೈಭವವನ್ನು ಮುಂದುವರಿಸಲು ಆಗಲಿಲ್ಲ. ಪ್ರಾದೇಶಿಕ ಸಂಪನ್ಮೂಲ ಹಾಗೂ ಸಂಗತಿಗಳಿಗೆ ಆದ್ಯತೆ ನೀಡುವುದು ಅನಿವಾರ್ಯವಾಯಿತು. ಅದರ ಪರಿಣಾಮವಾಗಿ ಮೂರ್ತಿಶಿಲ್ಪ ಕ್ಷೇತ್ರದಲ್ಲಿ ಮತ್ತೊಂದು ಆಯಾಮ ಬೆಳವಣಿಗೆ ಆದಂತಾಯಿತು. ಅದು ಪ್ರಾದೇಶಿಕ ಸಂಸ್ಕೃತಿಯನ್ನು ಬಿಂಬಿಸುತ್ತ ಶಿಲ್ಪ ಪ್ರಕಾರ ಮತ್ತು ಶೈಲಿಯ ಸೃಷ್ಟಿ ಸಂಪ್ರದಾಯಬದ್ಧವಾಗಿರದ ಈ ಶೈಲಿ ಅನೇಕ ಹೊಸ ಲಕ್ಷಣಗಳನ್ನು ಅಳವಡಿಸಿಕೊಂಡು ಕರ್ನಾಟಕದ ಮೂರ್ತಿ ಶಿಲ್ಪ ಪರಂಪರೆಯಲ್ಲಿ ಮಹತ್ವದ ಪ್ರಭಾವ ಬೀರಿತು.[೬] ಈ ಕಾರ್ಯ ಚಟುವಟಿಕೆಯಲ್ಲಿ ಹರಪನಹಳ್ಳಿ ಪಾಳೆಯಗಾರರು ಕರ್ನಾಟಕದ ಮೂರ್ತಿಶಿಲ್ಪಕಲೆ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿರುವುದು ಬಹುಮಹತ್ವದ ಸಂಗತಿಯಾಗಿದೆ.

ಹರಪನಹಳ್ಳಿ ಪಾಳೆಯಗಾರರ ಕಾಲದ ಹಲವು ಮೂರ್ತಿಶಿಲ್ಪಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿದ್ದು, ಶೈವ, ವೈಷ್ಣವ, ಹಾಗೂ ಶಾಕ್ತಪಂಥದ ಶಿಲ್ಪಗಳೆಂದು ವಿಂಗಡಿಸಬಹುದು. ಇವುಗಳ ಜೊತೆಗೆ ಕೆಲವು ಜಾನಪದೀಯ ಆಂಜನೇಯ ಶಿಲ್ಪಗಳು ಕೂಡ

ದೊರಕಿವೆ. ಹಾಗೆಯೇ ನಾಗತಿಯರ ಪ್ರತಿಮೆಗಳು, ಪಾಳೆಯಗಾರರ ಮೂರ್ತಿಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಸ್ಮಾರಕಶಿಲೆಗಳು ಮುಂತಾದ ಮೂರ್ತಿಗಳು ಜಾನಪದೀಯ ಅಥವಾ ಸ್ಥಳೀಯ ಶೈಲಿಯಲ್ಲಿ ರಚನೆಯಾಗಿರುವುದನ್ನು ಗುರುತಿಸಲಾಗಿದೆ.

ಅಂತಹ ಮೂರ್ತಿಶಿಲ್ಪಗಳಲ್ಲಿ ಪ್ರಮುಖವಾದವುಗಳೆಂದರೆ ಹರಪನಹಳ್ಳಿಯಲ್ಲಿ ಸಪ್ತಮಾತೃಕೆಯರು, ಶಿವಲಿಂಗ, ಗಜಲಕ್ಷ್ಮಿ ಹಿರೇಮ್ಯಾಗಳಗೇರಿಯ, ನಾಗಬಂಧ, ತಂಬ್ರಹಳ್ಳಿ, ನಾಗರಹಾವು, ಗಜಲಕ್ಷ್ಮಿ, ಆಂಜನೇಯ ಆನೆ, ಯತಿ, ಮತ್ಸ್ಯಕನ್ಯೆ, ಒಂಟೆ ಸವಾರ, ಮಿಥುನಶಿಲ್ಪ, ಲಜ್ಜಾಗೌರಿ ಅನೆಸವಾರರು, ಮಂಗ ಲಿಂಗಕ್ಕೆ ನಮಸ್ಕರಿಸುತ್ತಿರುವುದು, ಉಚ್ಚಂಗಿದುರ್ಗದ ಕೋಟೆ ಮೀನು ಮತ್ತು ಆಮೆ, ಮಾಗನಹಳ್ಳಿ ನಂದಿ, ನಾರಾಯಣದೇವರಕೆರೆ ಹಣ್ಣನ್ನು ತಿನ್ನುತ್ತಿರುವ ಮಂಗಗಳು, ಕಾಮಭಟ್ಟರಹಳ್ಳಿ ಸೂರ್ಯಚಂದ್ರ ಇನ್ನೂ ಹಲವಾರು ಸ್ಥಳಗಳಲ್ಲಿ ಶಿಲ್ಪಗಳನ್ನು ಹರಪನಹಳ್ಳಿ ಪಾಳೆಯಗಾರರ ಆಡಳಿತ ವ್ಯಾಪ್ತಿಯಲ್ಲಿ ಕಾಣಬಹುದು.

**ಹರಪನಹಳ್ಳಿ ಪಾಳೆಯಗಾರರು ನಿರ್ಮಿಸಿದ ಪುಷ್ಕರಿಣಿಗಳು**

ಹರಪನಹಳ್ಳಿ ಪಾಳೆಯಗಾರರ ಪುಷ್ಕರಿಣಿಗಳನ್ನು ಸಾಮಾಜಿಕ, ಧಾರ್ಮಿಕ ಮತ್ತು ಕೃಷಿ ಮುಂತಾದ ಉದ್ದೇಶಕ್ಕಾಗಿ ನಿರ್ಮಿಸುತ್ತಿದ್ದರು. ಇವರ ಕಾಲದಲ್ಲಿ ನಿರ್ಮಿಸಲಾದ ಪುಷ್ಕರಿಣಿಗಳು ಹರಪನಹಳ್ಳಿ, ಉಚ್ಚಂಗಿದುರ್ಗ, ತಂಬ್ರಹಳ್ಳಿ, ದೇವರತಿಮ್ಮಲಾಪುರ ನಾರಯಣದೇವರ ಕೆರೆ, ಚಿಗಟೇರಿ ಮುಂತಾದ ಕಡೆ ಕಂಡುಬರುತ್ತವೆ. ಚಿಗಟೇರಿ ಉಚ್ಚಂಗಿದುರ್ಗ ಮತ್ತು ತಂಬ್ರಹಳ್ಳಿ ಗ್ರಾಮಗಳಲ್ಲಿ ಕಂಡುಬರುವ ಪುಷ್ಕರಣಿಗಳು ವಾಸ್ತುಶಿಲ್ಪ ದೃಷ್ಟಿಯಿಂದ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ.

**ಉಚ್ಚಂಗಿದುರ್ಗ ಪುಷ್ಕರಿಣಿ**

ಉಚ್ಚಂಗಿದುರ್ಗದಲ್ಲಿ ಬೃಹತ್ ಗಾತ್ರದ ಪುಷ್ಕರಿಣಿ ಕಂಡುಬರುತ್ತದೆ. ಇದು ಕಣಶಿಲೆಯಿಂದ ನಿರ್ಮಿಸಲ್ಪಟ್ಟದ್ದು, ಇಳಿಯಲು ಮೆಟ್ಟಿಲುಗಳನ್ನು ಮಾಡಲಾಗಿದೆ. ಇದು ಅತ್ಯಂತ ಕಲಾತ್ಮಕವಾಗಿದೆ. ಸೌಂದರ್ಯದ ದೃಷ್ಟಿಯಿಂದ ಹಾಗೂ ಗಾತ್ರದ ದೃಷ್ಟಿಯಿಂದ ಹರಪನಹಳ್ಳಿ ಪಾಳೆಯಗಾರರು ನಿರ್ಮಿಸಿದ ಅತ್ಯಂತ ದೊಡ್ಡ ಹಾಗೂ ಸುಂದರ ಪುಷ್ಕರಿಣಿಯಾಗಿದೆ.

**ಚಿಗಟೇರಿ ಪುಷ್ಕರಿಣಿ**

ಹರಪನಹಳ್ಳಿ ಪಾಳೆಯಗಾರರ ನಿಷ್ಠಾವಂತ ಹಾಗೂ ವಿಶ್ವಾಸಿಕ ಸಾಮಂತನಾದ ಶಿವನಪ್ಪ ನಾಯಕ ಚಿಗಟೇರಿಯಲ್ಲಿ ಪುಷ್ಕರಿಣಿಯನ್ನು ನಿರ್ಮಿಸಿದ್ದಾನೆ. ಇದು ಗ್ರಾಮದ ಮಧ್ಯಭಾಗದಲ್ಲಿದ್ದು, ಸುಮಾರು ೭೦ ಅಡಿ ಉದ್ದ, ಹಾಗೂ ೫೦ ಅಡಿ ಅಗಲವಾಗಿದ್ದು ೭೦ ಅಡಿ ಆಳವನ್ನು ಹೊಂದಿದೆ ಎಂದು ಸ್ಥಳೀಯರು ತಿಳಿಸುತ್ತಾರೆ. ಬೃಹತ್ ಗಾತ್ರದ ಕಣಶಿಲೆಯನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ಇಳಿಯಲು ಮತ್ತು ಹತ್ತಲು ಮೆಟ್ಟಿಲುಗಳನ್ನು ಮಾಡಲಾಗಿದೆ. ಮಧ್ಯದಲ್ಲಿ

ಮಂಟಪವನ್ನು ಕಾಣಬಹುದು. ಇದರ ಅನೇಕ ಕಡೆ ಉಬ್ಬುಶಿಲ್ಪಗಳಿವೆ. ನಾಗಬಂಧ, ಮಂಗ, ಸಿಂಹ, ಮಿಥುನ ಶಿಲ್ಪಗಳನ್ನು ಕಾಣಬಹುದು. ಈ ಪುಷ್ಕರಿಣಿಯಿಂದ ನೀರನ್ನು ಮೇಲಕ್ಕೆ ಎತ್ತಲು ಎತದ ಕಟ್ಟೆ ನಿರ್ಮಿಸಲಾಗಿದೆ.

**ದೇವರತಿಮ್ಮಲಾಪುರ ಪುಷ್ಕರಿಣಿ**

ಈ ಪುಷ್ಕರಿಣಿ ಅರ್ಧಭಾಗ ಬೃಹತ್ ಕಣಶಿಲೆಯಿಂದ ನಿರ್ಮಾಣವಾಗಿದ್ದು ಉಳಿದ ಅರ್ಧಭಾಗ ನೈಸರ್ಗಿಕ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದೆ. ಇದು ಶ್ರೀ ಲಕ್ಷ್ಮೀವೆಂಕಟರಮಣ ದೇವಾಲಯದ ಪೂರ್ವ ದಿಕ್ಕಿನಲ್ಲಿರುವ ಹೊಲದ ಮಧ್ಯಭಾಗದಲ್ಲಿ ಕಂಡುಬರುತ್ತದೆ. ಇಳಿಯಲು ಮೆಟ್ಟಿಲುಗಳಿದ್ದು ಸುತ್ತಲೂ ರಕ್ಷಣಾಗೋಡೆಯಿದೆ. ಈ ಪುಷ್ಕರಿಣಿಯನ್ನು ಮ್ಯಾಜಿಸ್ಟ್ರೇಟರ್ ಆಗಿದ್ದ ವೆಂಕಟಾಚಲಪತಿಯವರು ಜೀರ್ಣೋದ್ಧಾರಗೊಳಿಸಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ೧೮೪೧ರ ಶಾಸನ ಕೂಡ ಕಂಡುಬರುತ್ತದೆ. ಇದರಲ್ಲಿ ಯಾವುದೇ ರೀತಿಯ ಉಬ್ಬುಶಿಲ್ಪಗಳಿರುವುದಿಲ್ಲ. ಇದು ಸಂಪೂರ್ಣವಾಗಿ ನೀರಿನಿಂದ ತುಂಬಿಕೊಂಡಿದ್ದು ಇದೂ ಕೂಡ ಹರಪನಹಳ್ಳಿ ಪಾಳೆಯಗಾರರ ಕಲೆ, ವಾಸ್ತುಶಿಲ್ಪಕ್ಕೆ ಉತ್ತಮ ಉದಾರಣೆಯಾಗಿದೆ.

**ತಂಬ್ರಹಳ್ಳಿ ಪುಷ್ಕರಣಿ**

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ ಗ್ರಾಮದ ಬೆಟ್ಟದ ರಂಗನಾಥಸ್ವಾಮಿ ದೇವಾಲಯದ ಹತ್ತಿರ ಹರಪನಹಳ್ಳಿ ಪಾಳೆಯಗಾರರ ಸಾಮಂತನಾದ ಓಬರನಾಯಕ ಇಲ್ಲಿ ಪುಷ್ಕರಿಣಿಯನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಈ ಪುಷ್ಕರಿಣಿ ಕಣಶಿಲೆಯಿಂದ ನಿರ್ಮಿಸಲಾಗಿದ್ದು, ೮೦ ಅಡಿ ಉದ್ದ, ೬೦ ಅಡಿ ಅಗಲ, ೮೦ ಅಡಿ ಆಳ ಇದೆ. ಇದನ್ನು ಇಳಿಯಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಭಿತ್ತಿಗಳ ಮೇಲೆ ನಾಗಬಂಧ, ಸಿಂಹ, ನಾಗ, ಹೂಬಳ್ಳಿ ಮುಂತಾದ ಕಲಾತ್ಮಕ ಉಬ್ಬುಶಿಲ್ಪಗಳಿವೆ. ಮುಂಭಾಗದಲ್ಲಿ ಕಮಾನಿರುವ ಪ್ರವೇಶದ್ವಾರವಿದೆ. ಹರಪನಹಳ್ಳಿ ಪಾಳೆಯಗಾರರು ನಿರ್ಮಿಸಿದ ಕಲಾಕೃತಿಯಲ್ಲಿ ಇದು ಕೂಡ ಮಹತ್ವವನ್ನು ಪಡೆದಿದೆ.

ಹೀಗೆ ಹರಪನಹಳ್ಳಿ ಪಾಳೆಯಗಾರರು ಪ್ರಮುಖ ಪುಷ್ಕರಿಣಿಗಳನ್ನು ನಿರ್ಮಿಸಿ ಅವುಗಳ ಉಪಯೋಗವನ್ನು ಪಡೆದಿರುವುದು ಕಾಣಬಹುದು. ಈ ಪುಷ್ಕರಿಣಿಗಳನ್ನು ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕೃಷಿ ನೀರಾವರಿ ಮುಂತಾದ ಉದ್ದೇಶಗಳಿಗೆ ನಿರ್ಮಿಸುತ್ತಿದ್ದರು. ಇವು ಅಭಿವೃದ್ಧಿಗೆ ಪೂರಕವಾಗಿದ್ದವು ಎಂದು ಹೇಳಬಹುದು.

ಪುಷ್ಕರಿಣಿಗಳಲ್ಲದೆ ಬಾವಿ, ಹೊಂಡಗಳನ್ನು ನಿರ್ಮಿಸಿರುವುದನ್ನು ಕಾಣಬಹುದು. ಹರಪನಹಳ್ಳಿ, ಬಸವನಕೋಟೆ, ಮಾಗನಹಳ್ಳಿ, ಹಿರೇಮ್ಯಾಗಳಗೇರಿ, ನಾರಾಯಣದೇವರ ಕೆರೆ, ಚಿಕ್ಕಮ್ಯಾಗಳಗೇರಿ,

ಕುಂಚೂರು ಮುಂತಾದ ಕಡೆ ಇವರ ಕಾಲದಲ್ಲಿ ನಿರ್ಮಾಣವಾದ ಬಾವಿಗಳನ್ನು ಕಾಣಬಹುದು. ಈ ಬಾವಿಗಳು ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವ ಪಡೆದುಕೊಂಡಿವೆ.

ಪಾಳೆಯಗಾರರ ಕಾಲದ ಬಾವಿಗಳು ಹಳ್ಳಿಗಳಲ್ಲಿ ಕುಡಿಯುವ ನೀರಿನ ಉದ್ದೇಶಕ್ಕೆ ನಿರ್ಮಿಸಿರುವುದು ಕಂಡುಬರುತ್ತದೆ. ಕೆಲವು ಕಡೆ ಸಂಪೂರ್ಣ ಸಾಧಾರಣ ಕಲ್ಲುಗಳಿಂದ ಕಟ್ಟಡವನ್ನು ಕಟ್ಟಲಾಗಿದ್ದು, ಕೆಲವು ಕಡೆ ಬಾವಿಯ ಅರ್ಧಭಾಗದ ಮೇಲ್ಭಾಗದವರೆಗೆ ಮಾತ್ರ ಕಲ್ಲು ಕಟ್ಟಡ ಹೊಂದಿದೆ. ಈ ಬಾವಿಗಳು ಮತ್ತು ಹೊಂಡಗಳು ಸುಮಾರು ೫೦ರಿಂದ ೭೦ ಅಡಿಗಳ ಆಳದವರೆಗೂ ಇದೆ ಎಂದು ತಿಳಿದುಬರುತ್ತದೆ.

ಹರಪನಹಳ್ಳಿ ಪಾಳೆಯಗಾರರು ನಿರ್ಮಿಸಿದ ಹಲವಾರು ಹೊಂಡಗಳು ಮತ್ತು ಬಾವಿಗಳು ಶಾಸನಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು. ೧೫೧೪ರ ಹಿರೇಮ್ಯಾಗಳಗೇರಿ ಶಾಸನವು ಬಾವಿ ನಿರ್ಮಾಣದ ಬಗ್ಗೆ ಉಲ್ಲೇಖಿಸುತ್ತದೆ. ೧೬೪೪ರ ಮೈದೂರು ಶಾಸನದಲ್ಲಿ ಮಹಾನಾಯಕಾಚಾರ್ಯ ಬಸವಯ್ಯನಾಯಕನ ಕಾಲದಲ್ಲಿ ಮೈದೂರಿನಲ್ಲಿ ಏತ ಮತ್ತು ಕಲ್ಲು ದೋಣಿಗಳನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ೧೭೧೦ರ ಹರಿಯಮ್ಮಾಜಿ ಶಾಸನದಲ್ಲಿ ಕೋರೆಗಲ್ಲು ಕಾಲುವೆ ಕಟ್ಟಿದ ಪ್ರಯುಕ್ತ ದಾನ ನೀಡಿದ ವಿವರಗಳು ಉಲ್ಲೇಖಗೊಂಡಿವೆ. ಹೀಗೆ ಹಲವಾರು ಶಾಸನಗಳಲ್ಲಿ ಈ ಅಂಶಗಳ ಬಗ್ಗೆ ಉಲ್ಲೇಖಗೊಂಡಿರುವುದು ಕಂಡುಬರುತ್ತವೆ. ಈ ಬಾವಿಗಳ ಹೊಂಡಗಳ ನಿರ್ಮಾಣದ ತಾಂತ್ರಿಕತೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವದವುಗಳೆನಿಸಿಕೊಳ್ಳುತ್ತವೆ.

**ವೀರಗಲ್ಲುಗಳು**

ವೀರನ ಪರಾಕ್ರಮ, ಸಾಹಸಗಳು ಸಮಸ್ತ ಪ್ರಜೆಗಳಿಗೆ ತಿಳಿಯುವುದಕ್ಕೋಸ್ಕರ ವೀರಗಲ್ಲುಗಳನ್ನು ನೆಡುತ್ತಿದ್ದರು. ವೀರನಿಗೆ ಸ್ವರ್ಗ, ಕೈಲಾಸ, ವೈಕುಂಠ ಪ್ರಾಪ್ತವಾಗುತ್ತದೆ ಎಂಬ ಪಾರಮಾರ್ಥಿಕ ಉದ್ದೇಶ ಅವುಗಳಿಂದ ತಿಳಿಯಲ್ಪಡುತ್ತದೆ. ವೀರಶಿಲ್ಪವಿರುವ ವೀರಗಲ್ಲುಗಳ ಮೇಲೆ ಅವನ ಪರಾಕ್ರಮದ ಪಾಠವನ್ನು ಕೆತ್ತಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ವೀರಗಲ್ಲುಗಳ ಶಿಲ್ಪ ಮತ್ತು ಪಾಠವನ್ನು ಅವುಗಳಲ್ಲಿನ ವೀರನ ಪ್ರಶಂಸೆ ವರ್ಣನೆ, ರೀತಿ, ಶೈಲಿ ಮುಂತಾದವುಗಳನ್ನು ಗಮನಿಸಿದಾಗ ಬಹುಪಾಲು ವೀರಗಲ್ಲುಗಳ ಉದ್ದೇಶ ವೀರನ ಪರಾಕ್ರಮವನ್ನು ಲೋಕಕ್ಕೆ ತಿಳಿಸುವುದೇ ಆಗಿತ್ತು. ಈ ರೀತಿಯ ವೀರಗಲ್ಲುಗಳನ್ನು ಅರಸ ತನ್ನ ಸಾಮ್ರಾಜ್ಯದಲ್ಲಿ ಸಾಹಸ ಕಾರ್ಯವನ್ನು ಮಾಡಿದ ವೀರನ ಪರಾಕ್ರಮವನ್ನು ಮೆಚ್ಚಿಕೊಂಡು ನಿರ್ಮಿಸುತ್ತಿದ್ದನು. ಕೆಲವೊಂದು ಸಂದರ್ಭದಲ್ಲಿ ಊರಿನ ಜನರೆಲ್ಲರೂ ಸೇರಿಕೊಂಡು ಈ ರೀತಿಯ ವೀರಗಲ್ಲುಗಳನ್ನು ಹಾಕಿಸುತ್ತಿದ್ದ ಉಲ್ಲೇಖಗಳೂ ಕೂಡ ನಮಗೆ ಸಿಗುತ್ತವೆ. ವೀರಗಲ್ಲುಗಳನ್ನು ಸಾಮಾನ್ಯವಾಗಿ ದೇವಾಲಯದ ಬಳಿ, ಊರ ಬಾಗಿಲ ಮುಂದೆ, ತೋಟಗಳಲ್ಲಿ, ಹೊಲಗದ್ದೆಗಳಲ್ಲಿ, ಮೈದಾನ, ಚಾವಡಿ ಕೆರೆ, ಹೊಂಡಗಳ ಬಳಿ ಎಲ್ಲಾ ಕಡೆಗಳಲ್ಲಿ ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದರು.

ವಿವಿಧ ರೀತಿಯ ವೀರಗಲ್ಲುಗಳನ್ನು ನಾವು ವಿಂಗಡಣೆ ಮಾಡಬಹುದು.

ಬೇಟೆಯಲ್ಲಿ ಸತ್ತ ವೀರರು

ಯುದ್ಧದಲ್ಲಿ ಸತ್ತ ವೀರರು

ನೀರಿನಲ್ಲಿ ಮುಳಗಿ ಸತ್ತ ವೀರರು

ಗಡಿ ಸಂಬಂಧಿತ ಕಾಳಗದಲ್ಲಿ ಸತ್ತ ವೀರರು

ಪೆಣ್ಬುಯ್ಯಲ್‌ನಲ್ಲಿ ಸತ್ತ ವೀರರು

ಕಳ್ಳರೊಡನೆ ಹೋರಾಡಿ ಸತ್ತ ವೀರರು

ತುರುಗಾಳದಲ್ಲಿ ಮಡಿದವರು

ಊರ ಉಯ್ಯಾಲೆಯಲ್ಲಿ ಸತ್ತ ವೀರರು

ಹರಪನಹಳ್ಳಿ ಪಾಳೆಯಗಾರರ ಆಡಳಿತದ ವ್ಯಾಪ್ತಿಯಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಹಲವು ಊರುಗಳಲ್ಲಿ ವಿವಿಧ ಪ್ರಕಾರದ ವೀರಗಲ್ಲುಗಳು ದೊರಕಿವೆ. ಅವುಗಳಲ್ಲಿ ಪ್ರಮುಖವಾಗಿ ಹರಪನಹಳ್ಳಿ, ಉಚ್ಚಂಗಿದುರ್ಗ, ದೇವರತಿಮ್ಮಲಾಪುರ, ಅರಸೀಕೆರೆ, ಕಡ್ಲಬಾಳು, ಮಾಗನಹಳ್ಳಿ, ಬಾಗಳಿ, ಬಾಲೇನಹಳ್ಳಿ, ಬಂಡ್ರಿ, ಅಲಗಿಲವಾಡ, ವೀರನದುರ್ಗ, ಹೀರೆಮ್ಯಾಗಳಗೇರಿ, ಕಸವನಹಳ್ಳಿ, ಕಂಚಿಕೆರೆ, ನಾರಾಯಣದೇವರಕೆರೆ, ತಂಬ್ರಹಳ್ಳಿ ಇನ್ನೂ ಅನೇಕ ಗ್ರಾಮಗಳಲ್ಲಿ ಕಂಡುಬರುತ್ತವೆ. ಈ ವೀರಗಲ್ಲುಗಳು ಬೇಟೆ, ಯುದ್ಧ, ಪೆಣ್ಬುಯ್ಯಲ್, ತುರುಕಾಳಗ ಮುಂತಾದ ಅನೇಕ ವಿಷಯಗಳಿಗೆ ಸಂಬಂಧಿಸಿದ ವೀರಗಲ್ಲುಗಳು ದೊರಕಿವೆ.

ಹಿರೇಮ್ಯಾಗಳಗೇರಿ ಗ್ರಾಮದ ಮಧ್ಯದಲ್ಲಿ ವೀರ ಮತ್ತು ಕುದುರೆಯ ಉಬ್ಬುಶಿಲ್ಪ ಅತ್ಯಾಕರ್ಷಕ ವೀರಗಲ್ಲಿದೆ. ಸುಮಾರು ೪ ಅಡಿ ಎತ್ತರ, ೨ ಅಡಿ ಅಗಲ, ೧ ಅಡಿ ದಪ್ಪವಾಗಿದೆ. ಇದನ್ನು ಬಳಪದ ಶಿಲೆಯಲ್ಲಿ ಕೆತ್ತಿಸಲಾಗಿದೆ. ಈ ಕಲ್ಲಿನಲ್ಲಿ ವೀರನು ಕುದುರೆಯನ್ನು ಪಳಗಿಸುವಂತೆ ಕಂಡುಬರುತ್ತದೆ. ಇವನು ದಷ್ಟಪುಷ್ಟವಾದ ಅಂಗವನ್ನು ಹೊಂದಿದ್ದು ನಿಂತ ಭಂಗಿಯಲ್ಲಿದ್ದಾನೆ. ಬಲಗೈಯಲ್ಲಿ ಖಡ್ಗ ಹಾಗೂ ಎಡಗೈಯಿಂದ ಕುದುರೆಯನ್ನು ಹಿಡಿದಿದ್ದಾನೆ. ಕುದುರೆಯು ಲಗಾಮು, ತುರಾಯಿ ಇತರ ಅಲಂಕಾರಗಳಿಂದ ಸಿಂಗಾರಗೊಂಡು ಎರಡು ಕಾಲುಗಳನ್ನು ಮೇಲಕ್ಕೆ ಎತ್ತಿ ನಿಂತಿರುವ ಚಿತ್ರಗಳು ಕಂಡುಬರುತ್ತವೆ. ವೀರನ ಹಿಂಬದಿಯಲ್ಲಿ ಮತ್ತೊಂದು ಕುದುರೆಯು ನಿಂತಿರುವ ದೃಶ್ಯಾವಳಿ ಕಂಡುಬರುತ್ತವೆ. ವೀರನು ಕೊರಳಲ್ಲಿ ಕಂಠಿಹಾರ, ಉದ್ದನೆಯ ಸರ, ಕೈಕಡಗ, ತೋಳ್ಬಂದಿ, ಕಾಲಿನ ಕಡಗ ಧರಿಸಿದ್ದಾನೆ. ಸೊಂಟಕ್ಕೆ ಬಟ್ಟೆ ಧರಿಸಿ ಕಚ್ಚೆಪಂಜೆಯನ್ನು ಹಾಕಿ ಕಟ್ಟಿರುವಂತಿದೆ. ಈ ವೀರಗಲ್ಲು ಹರಪನಹಳ್ಳಿ ಪಾಳೆಯಗಾರರ ಕಾಲದ್ದೆಂದು ಶಿಲ್ಪ ಕೆತ್ತನೆಯ ಲಕ್ಷಣಗಳ ಮೇಲೆ ತಿಳಿಯಬಹುದು.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ ಗ್ರಾಮದಲ್ಲಿ ಹರಪನಹಳ್ಳಿ ಪಾಳೆಯಗಾರರ ಕಾಲದ ವೀರಗಲ್ಲು ದೊರಕಿದೆ. ಪುಷ್ಕರಿಣಿಯ ಪ್ರವೇಶದ್ವಾರದ ಮುಂದೆ ಇದನ್ನು ಕಾಣಬಹುದು. ೩ ಅಡಿ ಅಗಲ ೨ ಅಡಿ ಎತ್ತವಿರುವ ಬಿಳಿ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಈ ವೀರಗಲ್ಲಿನಲ್ಲಿ ೨ ದೃಶ್ಯಗಳು ಕಂಡುಬರುತ್ತವೆ. ಮೊದಲನೆಯದು ನಿಂತಿರುವ ಕುದುರೆ, ಇನ್ನೊಬ್ಬನು ಕುಳಿತಿರುವ ದೃಶ್ಯವಿದೆ. ಎಡಗೈಯಲ್ಲಿ ಕುದುರೆಯ ಲಗಾಮು ಬಲಗೈಯನ್ನು ಮೇಲಕ್ಕೆ ಎತ್ತಿರುವ ದೃಶ್ಯವಿದೆ. ಕುದುರೆಯ ಬಾಲವು ಸೆಟೆದುನಿಂತಿರುವ ದೃಶ್ಯವಿದೆ. ೨ನೇ ದೃಶ್ಯದಲ್ಲಿ ಕುದುರೆಯ ಮುಂದೆ ವೀರನು ನಡೆದುಕೊಂಡು ಹೋಗುವಂತೆ ಕಂಡುಬರುತ್ತದೆ. ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಕೋವಿ ಹಿಡಿದಿರುವನು. ಈ ದೃಶ್ಯ ಬಹುತೇಕ ಮೆರವಣಿಗೆ ಹೊರಟಿರುವಂತೆ ಕಂಡುಬರುತ್ತದೆ. ಈ ಶಿಲ್ಪ ಹರಪನಹಳ್ಳಿ ಪಾಳೆಯಗಾರರ ಕಾಲದ್ದೆಂದು ಸಾಂದರ್ಭಿಕ ದಾಖಲೆಗಳಿಂದ ತಿಳಿದುಕೊಳ್ಳಬಹುದು.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಉಪನಾಯಕನಹಳ್ಳಿ ಗ್ರಾಮವು ಹರಪನಹಳ್ಳಿ ಪಾಳೆಯಗಾರರ ಪ್ರಮುಖ ಕೇಂದ್ರವಾಗಿದೆ. ಈ ಗ್ರಾಮದಲ್ಲಿ ಹರಪನಹಳ್ಳಿ ಪಾಳೆಯಗಾರರ ಕಾಲದ ಕೋಟೆ, ದೇವಾಲಯ, ವೀರಗಲ್ಲು ಮತ್ತು ಮಹಾಸತಿಗಲ್ಲು ಇರುವುದನ್ನು ನೋಡಬಹುದು. ಆದರೆ ಪ್ರಸ್ತುತ ಕೋಟೆ ಸಂಪೂರ್ಣ ನೆಲಸಮವಾಗಿದ್ದು, ಕೋಟೆಯಿದ್ದ ಜಾಗವನ್ನು ಸ್ಥಳೀಯರು ತೋರಿಸುತ್ತಾರೆ. ಪಾಳೆಯಗಾರರ ಕಾಲದ ಆಂಜನೇಯ ದೇವಾಲಯವನ್ನು ಇಲ್ಲಿ ನೋಡಬಹುದು. ಇಲ್ಲಿನ ವೀರಗಲ್ಲು ಸುಮಾರು ೪ ಅಡಿ ಎತ್ತರವಾಗಿದ್ದು ೩ ಅಡಿ ಅಗಲವಾಗಿದೆ. ವೀರನು ಬಲಗಾಲನ್ನು ಮುಂದೆ ಮಾಡಿ ಎಡಗಾಲನ್ನು ಹಿಂದೆ ಮಾಡಿಕೊಂಡು ಎಡಗೈಯಿಂದ ಬಿಲ್ಲನ್ನು ಹಿಡಿದು ಬಲಗೈಯಿಂದ ಬಾಣವನ್ನು ಬಿಡುತ್ತಿರುವ ದೃಶ್ಯವಿದೆ. ವೀರಗಲ್ಲಿನ ಮೇಲುತುದಿಯಲ್ಲಿ ಸೂರ್ಯಚಂದ್ರ, ಬಸವ ಹಾಗೂ ಲಿಂಗಮುದ್ರೆ ಇದ್ದು ವೀರನು ಕೈಮುಗಿದು ಪದ್ಮಾಸನದಲ್ಲಿ ಕುಳಿತಿರುವ ದೃಶ್ಯವಿದೆ. ಈ ಗ್ರಾಮದ ಸಮೀಪದಲ್ಲಿ ನಾರಾಯಣದೇವರಕೆರೆ ಇದ್ದು ಇದು ಹರಪನಹಳ್ಳಿ ಪಾಳೆಯಗಾರರ ಕಾಲದ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ.

ಇದೇ ಗ್ರಾಮದಲ್ಲಿ ಮಹಾಸತಿ ಕಲ್ಲು ದೊರೆತಿದ್ದು ಇಬ್ಬರು ಮಹಾಸತಿಯರು ಸತಿ ಹೋಗಿರುವ ದೃಶ್ಯ ಕಂಡುಬರುತ್ತದೆ. ಶಿಲ್ಪಗಳಲ್ಲಿ ಇವರ ಎತ್ತರ ಮತ್ತು ಗಾತ್ರ ಬೇರೆ ಬೇರೆಯಾಗಿವೆ. ಈ ಇಬ್ಬರು ಸತಿಯರು ಕೇಶ ಮತ್ತು ವಸ್ತ್ರಾಭರಣಗಳಿಂದ ಅಲಂಕೃತರಾಗಿದ್ದಾರೆ. ಚಿಕ್ಕ ಸತಿ ಬಲಗೈಯನ್ನು ಮೇಲಕ್ಕೆತ್ತಿ ಹಿಡಿದು, ಎಡಗೈಯನ್ನು ಇಳಿಬಿಟ್ಟಿದ್ದಾಳೆ. ಪಕ್ಕದಲ್ಲಿ ಹಿರೇಸತಿ ತನ್ನೆರಡು ಕೈಗಳನ್ನು ಜೋಡಿಸಿ ಕೈ ಮುಗಿದು ನಿಂತಿದ್ದಾಳೆ. ಮೇಲ್ಭಾಗದಲ್ಲಿ ನಂದಿ, ಲಿಂಗಮುದ್ರೆ ಇದ್ದು ಪಕ್ಕದಲ್ಲಿ ಈ ಇಬ್ಬರು ಸತಿಯರು ಪದ್ಮಾಸನದಲ್ಲಿ ಕುಳಿತಿರುತ್ತಾರೆ. ಸೂರ್ಯ-ಚಂದ್ರರು ಇಲ್ಲಿ ಚಿತ್ರಿತರಾಗಿದ್ದಾರೆ. ಇವುಗಳ ಲಕ್ಷಣಗಳಿಂದ ಇದು ಹರಪನಹಳ್ಳಿ ಪಾಳೆಯಗಾರರ ಕಾಲದ್ದೆಂದು ತಿಳಿದುಬರುತ್ತದೆ. ಬಿಳಿ ಕಣಶಿಲೆಯಿಂದ ನಿರ್ಮಾಣಗೊಂಡಿರುವ ಈ ಮಹಾಸತಿಕಲ್ಲು ೩ ಅಡಿ ಅಗಲ ಹಾಗೂ ೩ ೧/೨ ಅಡಿ ಎತ್ತರವಾಗಿದೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ನಾರಾಯಣದೇವರ ಕೆರೆ ಹರಪನಹಳ್ಳಿ ಪಾಳೆಯಗಾರರ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ. ಇಲ್ಲಿ ಪ್ರಮುಖವಾಗಿ ಹರಪನಹಳ್ಳಿ ಪಾಳೆಯಗಾರರ ಕೋಟೆ, ಅರಮನೆ ದರ್ಬಾರ್ ಹಾಲ್ ಮುಂತಾದ ಸ್ಮಾರಕಗಳು ನಿರ್ಮಾಣಗೊಂಡಿದ್ದವು ಎಂದು ದಾಖಲೆಗಳಿಂದ ತಿಳಿದುಬರುತ್ತದೆ. ಅದರಂತೆ ಇಲ್ಲಿ ೨ ಮಹಾಸತಿ ಕಲ್ಲುಗಳು ಅಕ್ಕಪಕ್ಕದಲ್ಲಿ ಕಂಡುಬರುತ್ತವೆ. ೧ನೇ ಮಾಸ್ತಿಕಲ್ಲಿನ ಮೇಲೆ ವೀರ ಮತ್ತು ಸತಿಯ ಚಿತ್ರವಿದೆ. ಇದು ಸುಮಾರು ३ ೧/೨ ಅಡಿ ಅಗಲ ३ ಅಡಿ ಎತ್ತರವಿದೆ. ಇಲ್ಲಿ ವೀರನು ಹೋರಾಟ ಮಾಡುತ್ತಿರುವಂತಿದೆ. ಎಡಗೈಯಲ್ಲಿ ಚಾಕು ಹಾಗೂ ಬಲಗೈಯಲ್ಲಿ ಕೋವಿ ಹಿಡಿದಿರುವಂತಿದೆ. ಪಕ್ಕದಲ್ಲಿ ಸತಿ ಅಲಂಕಾರ ಮಾಡಿಕೊಂಡು ಎರಡು ಕೈಗಳನ್ನು ಮೇಲಕ್ಕೆ ಎತ್ತಿ ಕೈಯಲ್ಲಿ ಹಣ್ಣುಗಳನು ಹಿಡಿದಿರುವಂತಿದೆ. ೨ನೇ ಮಹಾಸತಿಕಲ್ಲು ೨ ಅಡಿ ಅಗಲ ಮತ್ತು ೨ ೧/೨ ಅಡಿ ಎತ್ತರವಾಗಿದೆ. ಇದರಲ್ಲಿಯೂ ಅಲಂಕಾರಗೊಂಡ ವೀರ ಮತ್ತು ಸತಿಯ ಚಿತ್ರವಿದೆ. ಈ ಮಹಾಸತಿಕಲ್ಲಿನಲ್ಲಿ ವೀರನ ಅಂಗರಚನೆ ಬಲಿಷ್ಠವಾಗಿದೆ. ದುಂಡುಮುಖ, ಮೀಸೆ, ಕೆಳಬಾಚಿಕೊಂಡು ಕಟ್ಟಿದ ತುರುಬು, ಕೈ ಕಡಗ, ತೋಳ್ಬಂದಿ, ಸೊಂಟಪಟ್ಟಿ ಇದೆ. ಬಲಗೈಯಲ್ಲಿ ಖಡ್ಗ ಹಿಡಿದಿರುವನು ಎಡಗೈಯಲ್ಲಿ ಶತ್ರುವಿನ ರುಂಡ ಹಿಡಿದಂತಿದೆ. ಪಕ್ಕದಲ್ಲಿ ಸತಿ ಸುಂದರವಾಗಿ ಅಲಂಕಾರ ಮಾಡಿಕೊಂಡು ತನ್ನೆರಡು ಕೈಗಳಿಂದ ಕೈ ಮುಗಿಯುತ್ತಾ ನಿಂತಿದ್ದಾಳೆ. ಕೇಶವನ್ನು ಬಾಚಿಕೊಂಡು ಕಟ್ಟಿದ ತುರುಬು ಆಕರ್ಷಣೀಯವಾಗಿದೆ. ಎರಡು ತೊಳುಗಳಿಗೆ ತೋಳ್ಬಂದಿ ಧರಿಸಿದ್ದಾಳೆ. ಈ ಎರಡೂ ಶಿಲ್ಪಗಳ ಸೌಂದರ್ಯ ಗಮನ ಸೆಳೆಯುವಂತಿದೆ.

ಹರಪನಹಳ್ಳಿಯಿಂದ ೮ ಕಿ.ಮೀ. ದೂರದಲ್ಲಿ ಹಡಗಲಿ ಮಾರ್ಗವಾಗಿ ಹೋದರೆ ಚಿಕ್ಕಹಳ್ಳಿ ಎಂಬ ಗ್ರಾಮ ಬರುತ್ತದೆ. ಇದು ಹರಪನಹಳ್ಳಿ ಪಾಳೆಯಗಾರರ ಕಾಲದ ಪ್ರಮುಖ ರಕ್ಷಣಾ ನೆಲೆಯಾಗಿದೆ. ಇಲ್ಲಿ ಹುಡೇವು ಸಹ ಕಂಡುಬರುತ್ತದೆ. ಬಾಗಳಿ ಹಾಗೂ ಕೂಲಹಳ್ಳಿ ರಕ್ಷಣೆಯಲ್ಲಿ ಈ ಹುಡೇವು ಪ್ರಮುಖ ಪಾತ್ರ ವಹಿಸುತ್ತದೆ. ಇಲ್ಲಿ ಪಾಳೆಯಗಾರರ ಕಾಲದ ಆಂಜನೇಯ ದೇವಾಲಯ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ಇಲ್ಲಿ ಮಹಾಸತಿ ಕಲ್ಲು ಮತ್ತು ಶಾಸನವಿದೆ. ಈ ಮಹಾಸತಿ ಕಲ್ಲು ೫ ಅಡಿ ಎತ್ತರ, ೨ ಅಡಿ ಅಗಲವಾಗಿದ್ದು, ನೀಲಿ ಮಿಶ್ರಿತ ಬಳಪದ ಕಲ್ಲಿನಿಂದ ರಚಿತವಾಗಿದೆ. ಮಧ್ಯಭಾಗದಲ್ಲಿ ಶಿಲ್ಪ ಚಿತ್ರವಿದ್ದು ಮೇಲ್ಭಾಗದಲ್ಲಿ ೧३ ಸಾಲುಗಳುಳ್ಳ ಶಾಸನವಿದೆ. ಇದರ ಮೇಲ್ಭಾಗದಲ್ಲಿ ಲಿಂಗಮುದ್ರೆ ಇದೆ. ಇದರಲ್ಲಿ ವೀರನು ಹೋರಾಡುತ್ತಿರುವ ದೃಶ್ಯವಿದೆ. ಎಡಗೈಯಲ್ಲಿ ಬಿಲ್ಲು ಹಿಡಿದು ಬಲಗೈಯಿಂದ ಬಾಣವನ್ನು ಬಿಡುತ್ತಿರುವಂತಿದೆ. ಶತ್ರು ವೀರನು ಈತನ ಪಾದತಳದಲ್ಲಿ ಸತ್ತುಬಿದ್ದಿದ್ದಾನೆ. ವೀರನ ಇಬ್ಬರು ಪತ್ನಿಯರು ಸತಿ ಹೋಗುವ ದೃಶ್ಯವಿದೆ. ಸತಿಯರು ಕೇದಿಗೆ ಆಭರಣ ಹಾಗೂ ವಸ್ತ್ರಗಳಿಂದ ಅಲಂಕಾರಗೊಂಡು ಸತಿ ಪ್ರವೇಶಿಸಲು ಸಿದ್ಧವಾಗಿರುವಂತೆ ಬಿಂಬಿತವಾಗಿವೆ. ಭೌಗೋಳಿಕ ಸನ್ನಿವೇಶ, ಅಲಂಕಾರ ಇತ್ಯಾದಿ ಅಂಶಗಳಿಂದ ಇದು ಹರಪನಹಳ್ಳಿ ಪಾಳೆಯಗಾರರ ಕಾಲದ್ದು ಎಂದು ನಿರ್ಧರಿಸಬಹುದು.

ಒಟ್ಟಾರೆ ಹರಪನಹಳ್ಳಿ ಪಾಳೆಯಗಾರರು ವಿಜಯನಗರೋತ್ತರ ಕಾಲದ ವಾಸ್ತುಶಿಲ್ಪ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಕ್ಷೇತ್ರಕಾರ್ಯ ಕೈಗೊಂಡು ಹರಪನಹಳ್ಳಿ ಪಾಳೆಯಗಾರರ ಆಡಳಿತ ವ್ಯಾಪ್ತಿಯನ್ನು ಅವಲೋಕಿಸಿದಾಗ ಇಲ್ಲಿ ನಿರ್ಮಾಣವಾದ ಕೋಟೆ, ಅರಮನೆ, ಮಠ, ಕೆರೆ, ಬಾವಿ, ಹೊಂಡ, ದೇವಾಲಯ, ಪುಷ್ಕರಿಣಿ, ವೀರಗಲ್ಲು, ಮಹಾಸತಿಗಲ್ಲು, ಶಾಸನಶಿಲ್ಪಗಳು ಮುಂತಾದವುಗಳು ಕಂಡುಬರುತ್ತವೆ. ಈ ಎಲ್ಲಾ ನಿರ್ಮಾಣಗಳು ಹರಪನಹಳ್ಳಿ, ಉಚ್ಚಂಗಿದುರ್ಗ, ದೇವರತಿಮ್ಮಲಾಪುರ, ಮೈದೂರು, ನಿಚ್ಚವ್ವನಹಳ್ಳಿ, ಕೊಟ್ಟೂರು ಕೂಲಹಳ್ಳಿ, ಅರಸೀಕೆರೆ ಹೀರೇಮ್ಯಾಗಳಗೇರಿ, ಚಿಕ್ಕಮ್ಯಾಗಳಗೇರಿ, ಕುಂಚೂರು, ನಾರಾಯಣದೇವರಕೆರೆ, ತಂಬ್ರಹಳ್ಳಿ, ಉಪನಾಯಕನಹಳ್ಳಿ, ಹನಸಿ, ಹಂಪಾಪಟ್ಟಣ ಮುಂತಾದ ಅನೇಕ ಗ್ರಾಮಗಳಲ್ಲಿ ಇವರ ಸ್ಮಾರಗಳು ಕಂಡುಬರುತ್ತವೆ. ಹಲವಾರು ಉದ್ದೇಶಗಳಿಗಾಗಿ ಈ ಸ್ಮಾರಕಗಳನ್ನು ನಿರ್ಮಾಣ ಮಾಡುತ್ತಿದ್ದರು. ಇವರ ಕಾಲದ ರಚನಾಕಾರ್ಯ ಉತ್ತಮವಾಗಿದ್ದು, ವಿಜಯನಗರ ಸಾಮ್ರಾಜ್ಯದ ಶೈಲಿಯೊಂದಿಗೆ ತಮ್ಮದೇ ಆದ ಶೈಲಿಯನ್ನು ಬಿಂಬಿಸುತ್ತಾ ಪ್ರತಿಯೊಂದು ಸ್ಮಾರಕಗಳಿಗೆ ವೈಶಿಷ್ಟ್ಯಪೂರ್ಣ ಕೊಡುಗೆಯನ್ನು ನೀಡಿದೆ.

**ಸಂತೆಬೆನ್ನೂರು ನಾಯಕರ ಕಲೆ ಮತ್ತು ವಾಸ್ತುಶಿಲ್ಪ**

ಸಂತೆಬೆನ್ನೂರು ನಾಯಕರು ವಿಜಯನಗರ ಅರಸರಿಂದ ಅಮರಮಾಗಣಿಯನ್ನು ಪಡೆದುಕೊಂಡು ಅವರ ಅಧೀನರಾಗಿ ಆಳ್ವಿಕೆ ಆರಂಭಿಸಿದರು. ಇವರು ತಾಳಿಕೋಟೆ ಯುದ್ಧದ ನಂತರ ಸ್ವತಂತ್ರ ಪಾಳೆಯಪಟ್ಟನ್ನು ಸ್ಥಾಪಿಸಿದರು. ವಿಜಯನಗರ ಅರಸರ ಅಧೀನರಾಗಿದ್ದರಿಂದ ಕಲೆ ಮತ್ತು ವಾಸ್ತುಶಿಲ್ಪಗಳಲ್ಲಿ ಅವರದೇ ಆದ ಪದ್ಧತಿಯನ್ನು ಅನುಸರಿಸಿದರು. ನಂತರ ಶಾಹಿಸುಲ್ತಾನರ ಅಧೀನರಾಗಿ ಆಡಳಿತ ನಡೆಸಿ ಇಂಡೋ ಅರೇಬಿಕ್ ಶೈಲಿಯ ಕಟ್ಟಡಗಳನ್ನು ನಿರ್ಮಿಸಲು ಮುಂದಾದರು.

ಇವರ ಕಾಲದಲ್ಲಿ ಕಲೆ ಮತ್ತು ವಾಸ್ತುಶಿಲ್ಪವು ಧಾರ್ಮಿಕ, ಆರ್ಥಿಕ, ಸಾಮಾಜಿಕ ತಳಹದಿಯ ಮೇಲೆ ಬೆಳೆದು ಬಂದಿರುವುದನ್ನು ಕಾಣಬಹುದು. ಹಾಗೆ ಇವುಗಳ ಪರಿವರ್ತನೆಗೆ ಮಾನವನ ಅಭಿರುಚಿಗೆ ತಕ್ಕಂತೆ ಕಾಲಕಾಲಕ್ಕೆ ಬದಲಾಗುತ್ತಾ ಬಂದಿರುವುದನ್ನು ನೋಡಬಹುದು. ಹಿಂದಿನ ವೈಭವವನ್ನು ಸಡಿಲಗೊಳಿಸಿ ಸರಳವಾದ ಸ್ಮಾರಕಗಳು ನಿರ್ಮಾಣಗೊಂಡವು. ಪ್ರಮುಖವಾಗಿ ಇವರ ಕಾಲದಲ್ಲಿ ಕೋಟೆಗಳು, ಅರಮನೆಗಳು, ದೇವಾಲಯಗಳು, ಪುಷ್ಕರಿಣಿಗಳು, ಹೊಂಡ, ಬಾವಿಗಳು, ಕೆರೆ-ಕಾಲುವೆಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಶಾಸನಶಿಲ್ಪಗಳು ನಿರ್ಮಾಣಗೊಂಡಿವೆ. ಇವುಗಳನ್ನು ಒಂದೊಂದಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಕೋಟೆಗಳು**

ಸಂತೆಬೆನ್ನೂರು ನಾಯಕರು ತಮ್ಮ ರಕ್ಷಣೆಗಾಗಿ ಹಲವಾರು ಕೋಟೆಗಳನ್ನು ಕಟ್ಟಿಸಿದ್ದು ಇವರ ಆಡಳಿತ ಪ್ರದೇಶದಲ್ಲಿ ಕಾಣಬಹುದು. ಬಹುಮುಖ್ಯವಾಗಿ ಸಂತೆಬೆನ್ನೂರು, ಬಸವಾ

ಪಟ್ಟಣ, ತರೀಕೆರೆ ಹೊದಿಗೆರೆ, ಕಾಮನಗಿರಿ, ದೇವರಹಳ್ಳಿ, ರಂಗಯ್ಯನಗಿರಿ, ಹನುಮಗಿರಿ, ಹರಿಹರ ಮುಂತಾದ ಪ್ರದೇಶದಲ್ಲಿ ನೆಲದುರ್ಗ ಹಾಗೂ ಗಿರಿದುರ್ಗಗಳನ್ನು ನಿರ್ಮಿಸಲಾಗಿದೆ.

**ಸಂತೆಬೆನ್ನೂರು ಕೋಟೆ**

ಸಂತೆಬೆನ್ನೂರು ನಾಯಕರ ಕಾಲದ ಪ್ರಮುಖ ಕೋಟೆಯಾಗಿದ್ದು, ಪ್ರಸ್ತುತ ಈ ಸ್ಮಾರಕದ ಅವಶೇಷಗಳು ಸಂಪೂರ್ಣ ನಾಶವಾಗಿವೆ. ಚಿತ್ರದುರ್ಗದ ಪಾಳೆಯಗಾರರು ಇದನ್ನು ವಶಪಡಿಸಿಕೊಳ್ಳಲು ಸಾಕಷ್ಟು ಪ್ರಯತ್ನ ಮಾಡಿದರು. ಆದರೆ ಈ ಬಲವಾದ ಕೋಟೆಯನ್ನು ವಶಪಡಿಸಿಕೊಳ್ಳಲು ಅವರಿಂದ ಸಾಧ್ಯವಾಗಲ್ಲಿಲ್ಲ. ೨ನೇ ಬಾರಿ ಕಸ್ತೂರಿರಂಗಪ್ಪನಾಯಕರು ಮುತ್ತಿಗೆ ಹಾಕಲು ಪ್ರಯತ್ನಿಸಿದರೂ ಅದು ಫಲಿಸಲಿಲ್ಲ. ಆದರೆ ಮುಂದೆ ಮುತ್ತಿಗೆ ಹಾಕಿ ಸಂತೆಬೆನ್ನೂರು ಮತ್ತು ಬಸವಾಪಟ್ಟಣದ ಕೋಟೆಗಳನ್ನು ನಾಶ ಮಾಡಿದರು. ಸಂತೆಬೆನ್ನೂರಿನಲ್ಲಿ ಪ್ರಮುಖವಾಗಿ ಅರಮನೆ, ರಾಜ ಪ್ರಮುಖರ ವಾಸಸ್ಥಾನಗಳು ಇದ್ದವು ಎಂದು ಸಂತೆಬೆನ್ನೂರು ಸುಮತೀಂದ್ರ ನಾಡಿಗ್ ಅವರು ತಮ್ಮ ಕೃತಿಯಾದ ಸಂತೆಬೆನ್ನೂರು ನಾಯಕರು ಕೃತಿಯಲ್ಲಿ ತಿಳಿಸಿರುತ್ತಾರೆ.

**ಬಸವಾಪಟ್ಟಣದ ಕೋಟೆ**

ಧೂಮರಾಜ ಎಂಬುವನು ಈ ಪ್ರದೇಶದಲ್ಲಿ ನೆಲೆಸಿದ್ದನು. ಆದುದರಿಂದ ಇಲ್ಲಿಯ ಬೆಟ್ಟಕ್ಕೆ ಧೂಮನಬೆಟ್ಟ ಎಂದು ಹೆಸರು ಬಂದಿದೆ. ಇವನಿಗೆ ಇಬ್ಬರು ಮಕ್ಕಳು. ಕೆಂಗಣ್ಣನಾಯಕ ಮತ್ತು ರಾಮಪ್ಪನಾಯಕ. ಧೂಮರಾಜ ಇಲ್ಲಿ ಕೋಟೆಯನ್ನು ಕಟ್ಟಿಸಿದನೆಂದು ದಾಖಲೆಗಳಿಂದ ತಿಳಿದುಬರುತ್ತದೆ.

ಈ ಕೋಟೆಯನ್ನು ಸ್ಥಳೀಯ ಕಲ್ಲುಗಳನ್ನೇ ಬಳಸಿ ನಿರ್ಮಿಸಲಾಗಿದೆ. ಈ ಕೋಟೆಯನ್ನು ಸಂತೆಬೆನ್ನೂರು ನಾಯಕನಾದ ಧೂಮರಾಜ ಕಟ್ಟಿಸಿದ್ದಾನೆಂದು ಸ್ಥಳೀಯ ಹಿರಿಯರು ತಿಳಿಸಿದ್ದಾರೆ. ಯಾವುದೇ ಗಾರೆಗಳನ್ನು ಬಳಸದೆ ಚಕ್ಕೆ ಕಲ್ಲುಗಳನ್ನು ಬಳಸಿ ನಿರ್ಮಿಸಲಾಗಿದೆ. ಬೆಟ್ಟಗುಡ್ಡಗಳ ಸಾಲನ್ನು ಬಳಸಿಕೊಂಡು ಸುಮಾರು ಎರಡು ಕಿ.ಮೀ.ದಷ್ಟು ವಿಸ್ತಾರವಾದ ಗೋಡೆಯನ್ನು ನಿರ್ಮಿಸಲಾಗಿದೆ.ಕೋಟೆಯಲ್ಲಿ ಅಲ್ಲಲ್ಲಿ ಬುರುಜುಗಳ ಕುರುಹುಗಳು ಕಂಡುಬರುತ್ತವೆ. ಈ ಕೋಟೆಯನ್ನು ನಾಯಕರು ತಮ್ಮ ಪಾಳೆಯಪಟ್ಟನ್ನು ವೀಕ್ಷಿಸಲು ಕಟ್ಟಿದ್ದರು ಎಂದು ನಿರ್ಧರಿಸಬಹುದು. ಇಲ್ಲಿ ಮದ್ದು ಗುಂಡುಗಳು ಹಾಗೂ ಯುದ್ಧದ ಸಾಮಗ್ರಿಗಳನ್ನು ಸಂಗ್ರಹಿಸುತ್ತಿದ್ದರು ಎಂದು ಸ್ಥಳೀಯರು ತಿಳಿಸಿದ್ದಾರೆ. ಅಲ್ಲಲ್ಲಿ ಗುಹೆಗಳು ಹಾಗೂ ಬಾವಿಗಳು ಕಂಡುಬರುತ್ತವೆ. ಬಸವಾಪಟ್ಟಣದ ಅರಮನೆಯನ್ನು ಈ ಕೋಟೆಯಿಂದ ಸಂಪೂರ್ಣವಾಗಿ ವೀಕ್ಷಿಸಬಹುದು. ನಾಯಕರು ತಮ್ಮ ರಕ್ಷಣೆಗಾಗಿ ಹಾಗೂ ಅರಮನೆಯ ಪ್ರದೇಶದ ರಕ್ಷಣೆಗಾಗಿ ಕೋಟೆಯನ್ನು ಕಟ್ಟಿಸಿರಬಹುದು. ಪ್ರಸ್ತುತ ಈ ಗುಡ್ಡದಲ್ಲಿ ಪವನ ಶಕ್ತಿಯ ಕಾಮಗಾರಿ ನಡೆದಿರುವುದರಿಂದ

ಕೋಟೆಗೋಡೆಯು ನೆಲಸಮವಾಗಿರುವುದು ಕಂಡುಬರುತ್ತದೆ. ಅಲ್ಲಲ್ಲಿ ಮಾತ್ರ ಕೋಟೆಗೋಡೆ ಉಳಿದಿರುವುದು ಕಂಡುಬರುತ್ತದೆ.

ಈ ಗುಡ್ಡದ ಕೆಳಪ್ರದೇಶದಲ್ಲಿ ಒಂದು ಕೋಟೆಯಿದ್ದು, ಇದು ಈಗ ಸಂಪೂರ್ಣ ನೆಲಸಮವಾಗಿದೆ. ಕೋಟೆ ಪ್ರದೇಶ ಪ್ರಸ್ತುತ ಕೃಷಿ ಭೂಮಿಯಾಗಿ ಪರಿವರ್ತನೆಗೊಂಡಿದೆ. ಅಲ್ಲಲ್ಲಿ ಕೋಟೆಗೋಡೆಗಳ ಅವಶೇಷ ಉಳಿದಿದೆ. ಕೋಟೆಯ ಮಹಾದ್ವಾರದ ಅರ್ಧಭಾಗ ಉಳಿದಿದ್ದು, ಇಲ್ಲಿ ಭರಮಪ್ಪನ ಗುಡಿ ಕಂಡುಬರುತ್ತದೆ. ಇಲ್ಲಿ ಸ್ಥಳೀಯರು ದಸರಾ, ಯುಗಾದಿ ಹಬ್ಬದ ದಿನ ಪೂಜಾಕಾರ್ಯಗಳನ್ನು ನಡೆಸುತ್ತಾರೆ. ಈ ಕೋಟೆಯೊಳಗೆ ಅರಮನೆ, ಮಂತ್ರಿಗಳ, ವಾಸದ ಮನೆಗಳು ಇದ್ದವು. ಇಲ್ಲಿ ಅಷ್ಟ ಮೂಲೆ ದಿಕ್ಕಿನ ಸ್ನಾನದ ಬೋಗುಣಿ ಮಾತ್ರ ಉಳಿದಿದೆ. ಇದರಲ್ಲಿ ಅರಸನ ಜೊತೆ ಏಳು ರಾಣಿಯರು ಸ್ನಾನ ಮಾಡುತ್ತಿದ್ದರು ಎಂದು ಸ್ಥಳೀಯರು ತಿಳಿಸುತ್ತಾರೆ. ಒಂದೇ ಕಲ್ಲಿನ ಬೋಗುಣಿಯಲ್ಲಿ ಕೆಂಗಣ್ಣನಾಯಕ ತನ್ನ ಏಳು ಜನ ರಾಣಿಯರೊಂದಿಗೆ ಸ್ನಾನ ಮಾಡುತ್ತಿದ್ದ. ವಿಶಿಷ್ಟವಾದ ಬೋಗುಣಿಯನ್ನು ಕಟ್ಟಿಸಿದ್ದಲ್ಲದೆ, ಏಕಕಾಲಕ್ಕೆ ತಣ್ಣೀರು, ಬಿಸಿನೀರು ಬರುತ್ತಿತ್ತು ಎಂಬ ಮಾಹಿತಿಯಿದೆ. ಈ ಅರಮನೆಯಲ್ಲಿ ಸುರಂಗಮಾರ್ಗವನ್ನು ಮಾಡಿಸಿದ್ದನು. ಅದರ ಭವ್ಯತೆಯಿಂದಲೇ ಅವರ ರಸಿಕತನ ವಾಸ್ತುವಿನ್ಯಾಸ ಅರಿಯಬಹುದು.

ಕೆಂಗಣ್ಣನಾಯಕ ಅಧಿಕಾರಕ್ಕೆ ಬಂದ ನಂತರ ಸುಮಾರು ೫ ವರ್ಷಗಳ ಕಾಲ ಬಸವಾಪಟ್ಟಣದ ಕೋಟೆಯನ್ನು ದುರುಸ್ತಿಗೊಳಿಸಿದನೆಂದು ತಿಳಿದುಬರುತ್ತದೆ. ಇವನ ಆಳ್ವಿಕೆಯಲ್ಲಿ ಪಾಳೆಯಪಟ್ಟು ಶ್ರೀಮಂತವಾಗಿತ್ತು. ಈ ಕೋಟೆಗೆ ಮೂರು ಕಡೆ ಬಾಗಿಲಿದ್ದು, ಉತ್ತರದಲ್ಲಿ ಚೌಡೇಶ್ವರಿ ಬಾಗಿಲು, ದಕ್ಷಿಣದಲ್ಲಿ ಹನುಮಬಾಗಿಲು, ಪಶ್ಚಿಮದಲ್ಲಿ ಹರವಿ ಬಾಗಿಲುಗಳಿದ್ದವು. ಅಲ್ಲದೆ ಬಸವಾಪಟ್ಟಣದ ಸುತ್ತಲೂ ಬೆಟ್ಟಗುಡ್ಡಗಳು ಈ ಪಾಳೆಯಪಟ್ಟಿಗೆ ರಕ್ಷಣೆಯಾಗಿದ್ದವು. ಆದರೂ ಬೆಟ್ಟಗುಡ್ಡಗಳಲ್ಲಿ ಕೋಟೆ, ಬುರುಜು, ಬತೇರಿಗಳನ್ನು ನಿರ್ಮಿಸಿ ಅಲ್ಲಿ ಸೈನಿಕರನ್ನು ಕಾವಲಿರಿಸಿದ. ಈ ಎಲ್ಲಾ ಕಾರಣದಿಂದ ಸುಮಾರು ೫೫-೬೦ ವರ್ಷಗಳ ಕಾಲ ಆಳ್ವಿಕೆ ನಡೆಸಿದನು.

**ಚನ್ನಗಿರಿ ಕೋಟೆ**

ಚನ್ನಗಿರಿ ಪಟ್ಟಣದ ನೈರುತ್ಯ ದಿಕ್ಕಿನಲ್ಲಿ ೬೧ ಕಿ.ಮೀ. ಎತ್ತರದ ಬೆಟ್ಟದಲ್ಲಿ ಕೆಳದಿ ಚನ್ನಮ್ಮಾಜಿ ಈ ಕೋಟೆಯನ್ನು ಕಟ್ಟಿಸಿದ್ದಾಳೆ. ಇದಕ್ಕೆ ಉತ್ತರ, ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಬಾಗಿಲುಗಳಿವೆ. ಉತ್ತರ ದಿಕ್ಕಿನಲ್ಲಿರುವ ಬಾಗಿಲೇ ಮುಖ್ಯದ್ವಾರವಾಗಿದೆ. ಪೂರ್ವ ಮತ್ತು ದಕ್ಷಿಣ ದಿಕ್ಕಿನಲ್ಲಿರುವ ಬಾಗಿಲುಗಳು ಚಿಕ್ಕವು. ಎರಡು ಸುತ್ತಿನ ಕೋಟೆಯಾಗಿದ್ದು ಹೊರ ಮತ್ತು ಒಳಗಡೆ ಅನೇಕ ಕೊತ್ತಲುಗಳಿರುವುದು ಕಂಡುಬರುತ್ತದೆ. ಇದರ ಭಿತ್ತಿಯನ್ನು ಚಿಕ್ಕ ಚಿಕ್ಕ ಕಲ್ಲು ಮತ್ತು ಮಣ್ಣನ್ನು ಬಳಸಿ ನಿರ್ಮಿಸಲಾಗಿದೆ. ಕೆಲವು ಕೊತ್ತಲಗಳು ಭಿನ್ನವಾಗಿದ್ದು

ಚೌಕಾಕಾರದ ದಪ್ಪಕಲ್ಲುಗಳಿಂದ ನಿರ್ಮಿಸಲಾಗಿದೆ. ಇವುಗಳ ಗೋಡೆಗಳಲ್ಲಿ ಅನೇಕ ಕಿಂಡಿಗಳ ವ್ಯವಸ್ಥೆ ಮಾಡಲಾಗಿದೆ. ಇವುಗಳ ಮೂಲಕ ಬಂದೂಕನ್ನು ವೈರಿಗಳ ಕಡೆಗೆ ಹಾರಿಸಲು ಬಿಡಲಾಗಿತ್ತು ಎಂದು ತಿಳಿಯುತ್ತದೆ. ಕೆಲವು ಭಾಗಗಳಲ್ಲಿ ಮುಳ್ಳಿನ ಪೊದೆಗಳನ್ನು ಬೆಳೆಸಿ ಕೋಟೆಯ ಗೋಡೆ ಹಾಗೂ ಕೋಟೆಯ ಪ್ರದೇಶಗಳನ್ನು ಕಾಣದಂತೆ ಮಾಡಲಾಗಿತ್ತು. ಇದರ ಗೋಡೆಗಳು ಇಳಿಜಾರಿನಿಂದ ಕೂಡಿದ್ದು, ಗೋಡೆಯ ಮೇಲೆ ಸೈನಿಕರಿಗೆ ಓಡಾಡಲು ಹಾಗೂ ಹೋರಾಡಲು ಅನುಕೂಲವಾಗಿದೆ. ರಾಣಿಚನ್ನಮ್ಮಾಜಿ ಸಂತೆಬೆನ್ನೂರು ಪಾಳೆಯಗಾರ ಹನುಮಪ್ಪ ನಾಯಕನಿಂದ ಈ ನಗರವನ್ನು ವಶಪಡಿಸಿಕೊಂಡು ಇಲ್ಲಿ ಕೋಟೆಯನ್ನು ನಿರ್ಮಿಸಿದಳು ಎಂದು ತಿಳಿದುಬರುತ್ತದೆ. ಈ ಕೋಟೆಯಲ್ಲಿ ಶಿವಾಜಿಯ ಮಗ ರಾಜರಾಮರಾಯನಿಗೆ ಚನ್ನಮ್ಮಾಜಿ ಆಶ್ರಯ ನೀಡಿದ್ದಳು. ಹೀಗಾಗಿ ಮೊಗಲ್ ದೊರೆ ಔರಂಗಜೇಬನ ಸೈನಿಕರು ಇವಳ ಮೇಲೆ ದಾಳಿ ಮಾಡಿದಾಗ ಅವರನ್ನು ಹಿಮ್ಮೆಟ್ಟಿಸಿದಳೆಂದು ಚರಿತ್ರೆಯ ಪುಟಗಳಿಂದ ತಿಳಿಯಬಹುದು.

ಈ ಕೋಟೆಯ ಮೇಲೆ ಸುಮಾರು ೨೦ ಅಡಿ ಎತ್ತರವಾದ ವೃತ್ತಾಕಾರವಾದ ಬತೇರಿಯಿದೆ. ಈ ಬತೇರಿಯ ಮೇಲೆ ಹೋಗಲು ಕಟ್ಟಡ ಹೊರ ಮತ್ತು ಒಳಭಾಗಗಳಲ್ಲಿ ಮೆಟ್ಟಿಲುಗಳನ್ನು ಕಟ್ಟಲಾಗಿದೆ. ಈ ಬತೇರಿಯಿಂದ ಸುತ್ತಲೂ ಇರುವ ಪ್ರದೇಶವನ್ನು ಬಹುದೂರದವರೆಗೆ ನೋಡಬಹುದು. ಈ ಕೋಟೆಯ ಬತೇರಿಗಳ ಮೇಲಿನಿಂದ ನಾಲ್ಕು ದಿಕ್ಕಿನಲ್ಲಿ ದೂರದವರೆಗೆ ವೈರಿಯ ಚಲನವಲನಗಳನ್ನು ನೋಡಬಹುದು. ಈ ಕೋಟೆಯಲ್ಲಿ ದೇವಾಲಯಗಳು, ಪುಷ್ಕರಿಣಿಗಳು, ಬುರುಜುಗಳು, ಕಂದಕಗಳಿದ್ದು ಇವುಗಳನ್ನು ಮುಂದಿನ ಉಪಶೀರ್ಷಿಕೆಗಳಲ್ಲಿ ವಿಶ್ಲೇಷಿಸಲಾಗುವುದು.

ಹೀಗೆ ಸಂತೆಬೆನ್ನೂರು ನಾಯಕರು, ಬಸವಾಪಟ್ಟಣದ ನಾಯಕರು ಅನೇಕ ಕಡೆ ಕೋಟೆಗಳನ್ನು ನಿರ್ಮಿಸಿ ಕಲೆ, ವಾಸ್ತುಶಿಲ್ಪಕಲೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ.

**ದೇವಾಲಯಗಳು**

ದೇವಾಲಯಗಳು ಮಾನವರ ಧಾರ್ಮಿಕ ಆಚರಣೆ, ನಂಬಿಕೆ, ಭಕ್ತಿ, ಶ್ರದ್ಧೆಯನ್ನು ಒಂದು ಕಡೆ ಕಲೆಹಾಕುವಂತಹ ಸಾಂಸ್ಕೃತಿಕ ಕೇಂದ್ರಗಳಾಗಿವೆ. ದೇವಾಲಯದ ಕಟ್ಟಡದ ರಚನೆ ಮತ್ತು ಮೂರ್ತಿಗಳ ರಚನೆಯನ್ನು ದೇವಾಲಯ ವಾಸ್ತುಶಿಲ್ಪವೆಂದು ಕರೆಯಬಹುದು. ಸಾಮಾನ್ಯವಾಗಿ ಗರ್ಭಗೃಹ. ಅಂತರಾಳ, ನವರಂಗ, ಮುಖಮಂಟಪ, ಸ್ತಂಭಗಳು ಇನ್ನೂ ಮುಂತಾದ ಭಾಗಗಳಿದ್ದರೆ ದೇವಾಲಯ ಎಂದು ಕರೆಯುತ್ತಾರೆ. ಸಂತೆಬೆನ್ನೂರು ಪಾಳೆಯಗಾರರ ಕಾಲದ ದೇವಾಲಯಗಳು ಸರಳತೆಯಿಂದ ಕೂಡಿದ್ದು, ಅದಕ್ಕೆ ಹಲವಾರು ಕಾರಣಗಳನ್ನು ತಿಳಿದುಕೊಳ್ಳಬಹುದು. ಆರ್ಥಿಕತೆ, ಪ್ರತಿಭಾವಂತ ಶಿಲ್ಪಿಗಳ ಕೊರತೆ ಹಾಗೂ ಆಗಾಗ ನಡೆಯುತ್ತಿದ್ದ ಸ್ಥಳೀಯ ಯುದ್ಧಗಳು ಪ್ರಮುಖ ಕಾರಣಗಳಾಗಿವೆ.

ಇವರು ನಿರ್ಮಿಸಿರುವ ದೇವಾಲಯಗಳು ಪ್ರಮುಖವಾಗಿ ಸಂತೆಬೆನ್ನೂರು, ದೇವರಹಳ್ಳಿ, ಚಿಕ್ಕಕೋಗಲೂರು, ದಾಗಿನಕಟ್ಟೆ, ಹೊರಕೆರೆ, ಬಾಗೂರು, ತೋಪನಹಳ್ಳಿ, ಕುಂದೂರು, ಬಳ್ಳಾಪುರ, ಕೆಲ್ಲೋಡು, ಹಿರೇಮಾಡಾಳು, ಕಲ್ಲತ್ತಗಿರಿ, ಯಗಟ, ಕಾಮನದುರ್ಗ ಮುಂತಾದ ಹಲವಾರು ಗ್ರಾಮಗಳಲ್ಲಿ ಕಂಡುಬರುತ್ತದೆ.

**ರಾಮಚಂದ್ರ ದೇವಾಲಯ, ಸಂತೆಬೆನ್ನೂರು**

ಸಂತೆಬೆನ್ನೂರಿನ ಪುಷ್ಕರಿಣಿ ದಡದ ಮೇಲೆ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಇದನ್ನು ಕೆಂಗಪ್ಪನಾಯಕರು ಕಟ್ಟಿಸಿದ್ದರು. ಇದು ಸಂತೇಬೆನ್ನೂರು ನಾಯಕರ ಆರಾಧ್ಯದೈವವಾಗಿತ್ತು. ಈ ದೇವಾಲಯವು ೬೪ ಅಂಕಣಗಳಿಂದ ಕೂಡಿತ್ತು ಎಂದು ಸ್ಥಳೀಯರು ಮಾಹಿತಿ ಕೊಡುತ್ತಾರೆ. ಬಿಜಾಪುರದ ದಂಡನಾಯಕ ರಣದುಲ್ಲಾಖಾನ್ ಈ ಪ್ರದೇಶದ ಮೇಲೆ ದಾಳಿ ಮಾಡಿ ಸುಂದರವಾಗಿದ್ದ ರಾಮಚಂದ್ರ ದೇವಾಲಯವನ್ನು ನೆಲಸಮ ಮಾಡಿದನೆಂದು ತಿಳಿದುಬರುತ್ತದೆ. ಅದೇ ಜಾಗದಲ್ಲಿ ರಣದುಲ್ಲಾಖಾನ್ ಒಂದು ಭವ್ಯವಾದ ಮಸೀದಿಯನ್ನು ಕಟ್ಟಿಸಿರುವುದು ಪ್ರಸ್ತುತ ಕಂಡುಬರುತ್ತದೆ.

ಇಂಡೋ-ಅರಬಿಕ್ ಶೈಲಿಯಲ್ಲಿರುವ ಈ ಮಸೀದಿ ೧೦೫ ಅಡಿ ಉದ್ದ, ೪೦ ಅಡಿ ಅಗಲವಿದೆ. ಒಟ್ಟು ೯ ಕಮಾನುಗಳನ್ನು ೧೬ ಕಂಬಗಳ ಮೇಲೆ ನಿರ್ಮಿಸಲಾಗಿದೆ. ಎಡ ಭಾಗದಲ್ಲಿ ಮೇಲಕ್ಕೆ ಹತ್ತಲು ೨೪ ಮೆಟ್ಟಿಲುಗಳಿವೆ. ಸ್ಮಾರಕ ಈಗ ಕೇಂದ್ರಪ್ರಾಚ್ಯವಸ್ತು ಇಲಾಖೆಗೆ ಒಳಪಟ್ಟಿದೆ.

ಹಿರೇಕೋಗಲೂರು ಸುಖನೇಶ್ವರ, ಕಲ್ಲೇಶ್ವರ, ಮಲ್ಲೇಶ್ವರ ದೇವಸ್ಥಾನಗಳ ಕಲ್ಲನ್ನು ಬಳಸಿ ಈ ಮಸೀದಿಯನ್ನು ನಿರ್ಮಿಸಲಾಗಿದೆ. ಹಿರೇಕೆಂಗಪ್ಪನಾಯಕ ಆಳುತ್ತಿದ್ದ ಸಂದರ್ಭದಲ್ಲಿ ರಣದುಲ್ಲಾಖಾನ್ ನಾಯಕನನ್ನು ಸೋಲಿಸಿ ರಾಮಚಂದ್ರ ದೇವಾಲಯವನ್ನು ಕೆಡವಿಹಾಕಿ ಮಸೀದಿಯನ್ನು ಕಟ್ಟಿಸಿದನು. ಮುಂದೆ ಚಿಕ್ಕಕೆಂಗಪ್ಪನಾಯಕನು ಅಣ್ಣನಾದ ಹಿರೇ ಕೆಂಗಪ್ಪನಾಯಕನನ್ನು ಬಿಡಿಸಿಕೊಂಡು ಆಡಳಿತ ನಡೆಸಲು ಅನುಮತಿ ಪಡೆದುಕೊಂಡು ಬಂದನು. ಇಂತಹ ಸಂದರ್ಭದಲ್ಲಿ ರಾಮಚಂದ್ರ ದೇವಾಲಯವನ್ನು ಕೆಡವಿಹಾಕಿ ಮಸೀದಿ ಕಟ್ಟಿಸಿರುವುದಕ್ಕೆ ಕೋಪದಿಂದ ಅಪವಿತ್ರಗೊಳಿಸಲು ಒಳಗಡೆ ಹಂದಿಯನ್ನು ಕಡಿಸಿದನು. ಹಂದಿ ಮುಸ್ಲಿಮರಿಗೆ ಅಪವಿತ್ರವಾದುದು. ಅಂಕಣದಲ್ಲಿದ್ದ ಒಂದು ಕಲ್ಲನ್ನು ಕೀಳಿಸಿದನು. ಅಲ್ಲೇ ಇದ್ದ ರಣದುಲ್ಲಾಖಾನ್ ಅನುಚರರನ್ನು ಅಲ್ಲಿಂದ ಓಡಿಸಿದನು. ಹೀಗೆ ಮಸೀದಿಯನ್ನು ಅಪವಿತ್ರಗೊಳಿಸಿದನು. ಮುಂದೆ ಈ ಭವ್ಯಕಟ್ಟಡ ದೇವಸ್ಥಾನವೂ ಆಗಲಿಲ್ಲ ಮಸೀದಿಯೂ ಆಗಲಿಲ್ಲ.

ಬ್ರಿಟಿಷರ ಕಾಲದಲ್ಲಿ ಈ ಭವ್ಯ ಕಟ್ಟಡ ಸೈನಿಕರ ಕೊಠಡಿಯಾಗಿತ್ತು. ಇಲ್ಲಿ ಸೈನಿಕರು ತಂಗಿದ್ದರು ಹಾಗೂ ಮದ್ದು ಗುಂಡುಗಳನ್ನು ಸಂಗ್ರಹಿಸುತ್ತಿದ್ದರು. ಮೈಸೂರು ಸಂಸ್ಥಾನಿಕರ ಕಾಲದಲ್ಲಿ ಈ ಕಟ್ಟಡ ಜಿಲ್ಲಾ ಬೋರ್ಡ್ ವಶದಲ್ಲಿತ್ತು. ಇದನ್ನು ಮುಸಾಫಿರ್‌ಖಾನ್(ಪ್ರವಾಸಿ

ಬಂಗಲೆ) ಆಗಿ ಪರಿವರ್ತಿಸಲಾಯಿತು. ಈಗ ಈ ಕಟ್ಟಡದಲ್ಲಿ ಯಾವುದೇ ಪೂಜೆ ಪುನಸ್ಕಾರಗಳು, ಪ್ರಾರ್ಥನೆ ಸಲ್ಲಿಸುವುದನ್ನು ಸರ್ಕಾರ ನಿರ್ಬಂಧಿಸಿದೆ. ಈ ಮುಸಾಫಿರ್‌ಖಾನ್ ಕಟ್ಟಡ ಕೇಂದ್ರ ಸರ್ಕಾರ ರಕ್ಷಿತ ಪ್ರದೇಶವೆಂದು ಘೋಷಣೆ ಮಾಡಲ್ಪಟ್ಟಿದ್ದು ಭಾರತ ಸರ್ಕಾರದ ಪ್ರಾಚ್ಯವಸ್ತು ಇಲಾಖೆಯ ರಕ್ಷಣಾ ಸ್ಮಾರಕವಾಗಿವೆ.

ಇವುಗಳಲ್ಲದೆ ಸಂತೆಬೆನ್ನೂರು ಗ್ರಾಮದ ಕೆರೆಯಿಂದ ಸ್ವಲ್ಪ ದೂರದಲ್ಲಿ ಪಾಳೆಯಗಾರರ ಕಾಲದ ಹನುಮಂತ ದೇವಾಲಯವಿದೆ. ಅದರ ಪಕ್ಕದಲ್ಲಿ ಕಲ್ಲಿನ ಕೋಟೆ ಇದ್ದು, ಇದು ಈಗ ಸಂಪೂರ್ಣ ಹಾಳಾಗಿದೆ. ಕೋಟೆಯ ಕೆಲವು ಅವಶೇಷಗಳು ಮತ್ತು ಕಂದಕಗಳನ್ನು ಮಾತ್ರ ಪ್ರಸ್ತುತ ಕಾಣಬಹುದು.

**ಆಂಜನೇಯ ದೇವಾಲಯ, ಚಿಕ್ಕಕೋಗಲೂರು**

ಕ್ರಿ.ಶ. ಸುಮಾರು ೧೬೭೦ರಲ್ಲಿ ನಿರ್ಮಿಸಿದ ಈ ದೇವಾಲಯ ದಕ್ಷಿಣಾಭಿಮುಖವಾಗಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಪ್ರವೇಶ ಮಂಟಪವನ್ನು ಹೊಂದಿದೆ. ಇದು ಏಕಕೂಟ ಮಾದರಿಯಲ್ಲಿದೆ. ಈ ದೇವಾಲಯದ ಅಧಿಷ್ಠಾನ ಮತ್ತು ಬಿತ್ತಿಯ ಭಾಗವು ಸರಳವಾಗಿದ್ದು, ಶಿಖರಭಾಗ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ದೇವಾಲಯದ ನವರಂಗದ ಕಂಬಗಳು ಸರಳ ಮಿಶ್ರಿತ ಕಂಬಗಳಾಗಿವೆ. ಕಂಬದ ಪೀಠಭಾಗವು ಚೌಕಾಕಾರವಾಗಿದ್ದು ನರಸಿಂಹ, ಗರುಡ, ವರಾಹ ಶಿಲ್ಪಗಳನ್ನು ಕಾಣಬಹುದು. ದೇವಾಲಯದ ಗರ್ಭಗೃಹವು ಚೌಕಾಕಾರವಾಗಿದ್ದು ಮಧ್ಯದಲ್ಲಿ ಎತ್ತರವಾದ ಆಂಜನೇಯ ಸ್ವಾಮಿ ವಿಗ್ರಹವಿದೆ. ಈ ದೇವಾಲಯದ ಪ್ರಾಂಗಣದಲ್ಲಿ ಒಂದು ಶಾಸನವಿದ್ದು, ಈ ಶಾಸನವು ಗಣಪತಿ ಸ್ತುತಿಯಿಂದ ಪ್ರಾರಂಭವಾಗಿ ಬೋಳೆಯ ಕಾಮಣ್ಣನಾಯಕರ ಮೊಮ್ಮಕ್ಕಳು ಹಿರಿಯ ತಿಮ್ಮಣ್ಣನಾಯಕರು ಚಿಕ್ಕ ಕೋಗಲೂರನ್ನು ದತ್ತಿ ಹಾಕಿರಬೇಕು ಎಂದು ತಿಳಿಸುತ್ತದೆ.

**ವಿರೂಪಾಕ್ಷೇಶ್ವರ ದೇವಾಲಯ, ಬಸವಾಪಟ್ಟಣ**

೧೬ನೇ ಶತಮಾನದಲ್ಲಿ ನಿರ್ಮಾಣವಾಗಿದ್ದ ಏಕಕೂಟ ದೇವಾಲಯವಾಗಿದೆ. ಪ್ರವೇಶ ಮಂಟಪ ಹಾಗೂ ಗರ್ಭಗೃಹವನ್ನು ಹೊಂದಿದೆ. ಪ್ರವೇಶಮಂಟಪವನ್ನು ಪ್ರವೇಶಿಸಲು ಸೋಪಾನ ಹಾಗೂ ಹಸ್ತಿಹಸ್ತಾ ಫಲಕಗಳಿವೆ. ಈ ದೇವಾಲಯದ ಅಧಿಷ್ಠಾನ ಭಾಗವು ಚಚ್ಚೌಕವಾಗಿದೆ. ಭಿತ್ತಿಯ ಭಾಗವು ಸಾಧಾರಣವಾಗಿದೆ. ಯಾವುದೇ ಅಲಂಕಾರಗಳು ಕಂಡುಬರುವುದಿಲ್ಲ. ಸರಳವಾದ ನಾಲ್ಕು ಮುಖ್ಯ ಹಾಗೂ ಅಷ್ಟಮುಖಗಳನ್ನು ಹೊಂದಿರುವ ಕಂಬಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯ ಕೆತ್ತನೆಯಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು ಇದರ ಅಕ್ಕಪಕ್ಕದಲ್ಲಿ ಗಣಪತಿ ಮತ್ತು ದುರ್ಗಮ್ಮನ ಮೂರ್ತಿಯೂ ಸಹ ಕಾಣಬಹುದು. ದೇವಾಲಯದ ಪ್ರಾಂಗಣದಲ್ಲಿ ಗಂಗಾಧರೇಶ್ವರ ದೇವಾಲಯ ಹಾಗೂ ಕೇಶವ ದೇವಾಲಯವನ್ನು ಸಹ ಕಾಣಬಹುದು. ಇದು ಕೂಡ ಪಾಳೆಯಗಾರರು ನಿರ್ಮಿಸಿದ ದೇವಾಲಯವಾಗಿದೆ.

**ದುರ್ಗಾಂಬಿಕ ದೇವಾಲಯ, ಬಸವಾಪಟ್ಟಣ**

ಪೂರ್ವಾಭಿಮುಖವಾಗಿ ಇರುವ ಈ ದೇವಾಲಯವು ಪ್ರವೇಶಮಂಟಪ, ಅಂತರಾಳ ಹಾಗೂ ಗರ್ಭಗೃಹವನ್ನು ಹೊಂದಿದೆ. ಹೊರಭಾಗದಲ್ಲಿ ಅಧಿಷ್ಠಾನ, ಭಿತ್ತಿಗಳು, ಸರಳವಾಗಿವೆ. ದೇವಾಲಯದ ಮೇಲ್ಭಾಗದಲ್ಲಿ ಕಲ್ಲುಚಪ್ಪಡಿಯನ್ನು ಬಳಸಿದ್ದಾರೆ. ಅವುಗಳಿಗೆ ಯಾವುದೇ ರೀತಿಯ ಅಲಂಕಾರವನ್ನು ಮಾಡಿಲ್ಲ. ಗರ್ಭಗೃಹವು ಆಯತಾಕಾರವಾಗಿದ್ದು, ಅದರ ಮಧ್ಯದಲ್ಲಿ ದುರ್ಗಾಂಬಿಕ ದೇವಿಯ ಮೂಲವಿಗ್ರಹವನ್ನು ನೋಡಬಹುದು. ವಿಶಾಲವಾದ ಪ್ರಾಂಗಣವನ್ನು ಹೊಂದಿದೆ. ಪ್ರಾಂಗಣದಲ್ಲಿ ಅನೇಕ ತೃಟಿತವಾದ ಮೂರ್ತಿ ಶಿಲ್ಪಗಳನ್ನು ಕಾಣಬಹುದು. ಈ ದೇವಾಲಯ ಆಧುನಿಕ ಸಾಮಗ್ರಿಗಳಿಂದ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ.

**ರಂಗನಾಥಸ್ವಾಮಿ ದೇವಾಲಯ, ದಾಗಿನಕಟ್ಟೆ**

ಏಕಕೂಟ ಮಾದರಿಯ ದೇವಾಲಯವಾಗಿದ್ದು ಮುಖ್ಯದ್ವಾರ ಪೂರ್ವಾಭಿಮುಖವಾಗಿದೆ. ಪ್ರವೇಶಮಂಟಪ, ನವರಂಗ, ಅಂತರಾಳ, ಗರ್ಭಗೃಹವನ್ನು ಹೊಂದಿದೆ. ಪ್ರವೇಶಮಂಟಪವು ಎತ್ತರವಾದ ಜಗಲಿಯ ಮೇಲೆ ಕಂಬಗಳ ಪಡಸಾಲೆ ಹೊಂದಿದೆ. ಒಟ್ಟು ೩೦ ಕಂಬಗಳನ್ನು ಹೊಂದಿದೆ. ಗರ್ಭಗೃಹ, ಅಧಿಷ್ಠಾನ ಸರಳವಾಗಿವೆ. ದೇವಾಲಯದ ಶಿಖರವು ಇತ್ತೀಚೆಗೆ ನವೀನ ಮಾದರಿಯಲ್ಲಿ ನಿರ್ಮಿಸಲಾಗಿದೆ. ಕಂಬಗಳು ಚೌಕಾಕಾರದಲ್ಲಿದ್ದು ಈ ನಾಲ್ಕು ಭಾಗದಲ್ಲಿ ನರಸಿಂಹ, ಗರುಡ, ಆನೆ, ಗಿಳಿ, ನವಿಲು, ವರಹ ಹಾಗೂ ಕೆಲವು ಮಿಥುನಶಿಲ್ಪಗಳನ್ನು ಕಾಣಬಹುದು. ಲಲಾಟದಲ್ಲಿ ಗರುಡಮೂರ್ತಿಯನ್ನು ಕಾಣಬಹುದು ಬಾಗಿಲಿನ ಕೆಳಭಾಗದಲ್ಲಿ ಜಯವಿಜಯ ದ್ವಾರಪಾಲಕರನ್ನು ಹೊಂದಿದೆ. ಗರ್ಭಗೃಹ ಚೌಕಕಾರವಾಗಿದ್ದು, ಮಧ್ಯದಲ್ಲಿ ರಂಗನಾಥಸ್ವಾಮಿಯ ವಿಗ್ರಹವನ್ನು ಕಾಣಬಹುದು. ಆಂಜನೇಯ ದೇವಾಲಯ ಹಾಗೂ ಮಾಸ್ತಮ್ಮ ದೇವಾಲಯವನ್ನು ಕಾಣಬಹುದು.

**ಸಿದ್ಧೇಶ್ವರ ದೇವಾಲಯ, ಶಾಂತಿಸಾಗರ(ಸೂಳೆಕೆರೆ)**

ಈ ದೇವಾಲಯವು ಮುಖಮಂಟಪ, ನವರಂಗ, ಅಂತರಾಳ ಗರ್ಭಗುಡಿಯನ್ನು ಹೊಂದಿದೆ ಹೊರಭಾಗದ ಅಧಿಷ್ಠಾನವು ಉಪಾನ, ಪದ್ಮ, ಕುಮುದಗಳಿಂದ ಕೂಡಿದ್ದು ಭಿತ್ತಿಯಲ್ಲಿ ನವ ಶಿಲ್ಪಗಳಿಂದ ಸರಳವಾಗಿದೆ. ಗರ್ಭಗುಡಿಯ ಮೇಲೆ ಶಿಖರವಿದೆ. ಚೌಕಾಕಾರದ ಗರ್ಭಗುಡಿಯಲ್ಲಿ ಲಿಂಗವಿದ್ದು ಈ ಗುಡಿಯ ದ್ವಾರ ಮತ್ತು ಲಲಾಟವು ಸಾಧಾರಣವಾಗಿದೆ. ಅಂತರಾಳವು ಆಯತಾಕಾರವಾಗಿದೆ. ನವರಂಗ ಪಶ್ಚಿಮ ಭಾಗದಲ್ಲಿ ಎರಡು ಕೋಷ್ಠ ಗುಡಿಗಳಿದ್ದು, ಅವುಗಳಲ್ಲಿ ಕುದುರೆ, ಕುದುರೆಯನ್ನೇರಿದ ಸ್ತ್ರೀ-ಪುರುಷರು ಹಾಗೂ ಕೇಶವನ ಮೂರ್ತಿಗಳಿವೆ. ನವರಂಗಕ್ಕೆ ಪೂರ್ವ, ಉತ್ತರ ಮತ್ತು ದಕ್ಷಿಣದಲ್ಲಿ ಪ್ರವೇಶ ದ್ವಾರಗಳಿವೆ. ನವರಂಗವು ಹನ್ನೆರಡು ಅಂಕಗಳಿಂದ ಕೂಡಿದ್ದು ಆರು ಶಿಲೆಯ ಕಂಬಗಳಿವೆ. ಈ ಕಂಬಗಳು ದ್ರಾವಿಡ ಶೈಲಿಯಲ್ಲಿವೆ. ನಾಲ್ಕುಕಂಬಗಳ ಚೌಕಾಕಾರವ ಭಾಗವಲ್ಲಿ ಗಣೇಶ, ಕಾರ್ತಿಕೇಯ, ಗಿಳಿಗಳು ಧ್ಯಾನ್ಯಮಗ್ನರಾಗಿ, ನರ್ತಕಿಯರು

ನಂದಿ, ಕೋಲಾಟದ ಸ್ತ್ರೀಯರು, ವೀರಭದ್ರ, ಮಹೇಶ್ವರಿ, ರಾಮ ಮುಂತಾದ ಅನೇಕ ಶಿಲ್ಪಗಳು ಕಂಡುಬರುತ್ತವೆ. ಈ ದ್ವಾರದ ಕಕ್ಷಾಸನವಿರುವ ಎರಡು ಕಡೆಯ ಹೊರಭಾಗದ ಭಿತ್ತಿಯಲ್ಲಿ ಮಿಥುನಶಿಲ್ಪಗಳು, ಸಿಂಹ, ಆನೆ, ಗಿಳಿ, ಹಂಸ ಶಿಲ್ಪಗಳನ್ನು ಕೆತ್ತಲಾಗಿದೆ. ಪೂರ್ವ ಪ್ರವೇಶ ದ್ವಾರದ ಮುಂದೆ ಒಂದು ಬೃಹತ್ ಗ್ರಾನೈಟ್ ಶಿಲೆಯ ದೀಪಸ್ತಂಭವಿದೆ. ಅದರಲ್ಲಿ ಭಕ್ತನೋರ್ವನ ಶಿಲ್ಪವಿದೆ. ಈ ದೇವಾಲಯದ ಸುತ್ತಲೂ ಪ್ರಾಕಾರ ಗೋಡೆಯಿದೆ. ಮಹಾದ್ವಾರ ದಕ್ಷಿಣ ದಿಕ್ಕಿಗಿದೆ ಇಲ್ಲಿನ ಮುಖ್ಯದ್ವಾರದ ಬಳಿ ಕ್ರಿ.ಶ. ೧೫೪೬ರ ಶಾಸನವೊಂದು ಇದ್ದು ಈ ಶಾಸನದಲ್ಲಿ ಈ ದೇವಾಲಯಕ್ಕೆ ದತ್ತಿ ಬಿಟ್ಟ ವಿಚಾರ ಉಲ್ಲೇಖವಿದೆ.

**ಈಶ್ವರ ದೇವಾಲಯ, ಬೆಳಲಗೆರೆ**

ಇದು ಏಕಕೂಟ ದೇವಾಲಯವಾಗಿದ್ದು, ಮುಖಮಂಟಪ, ನವರಂಗ, ಗರ್ಭಗೃಹವನ್ನು ಹೊಂದಿದೆ. ದೇವಾಲಯದ ಭಿತ್ತಿಯ ಭಾಗ ಹಾಗೂ ಶಿಖರದ ಭಾಗವು ಮಣ್ಣಿನಲ್ಲಿ ಮುಚ್ಚಿಕೊಂಡಿದೆ. ದೇವಾಲಯದ ನವರಂಗ, ಕಂಬಗಳು, ಪೀಠಗಳು ಚೌಕಾಕಾರದಲ್ಲಿವೆ. ಆ ಕಂಬಗಳು ಉಬ್ಬುಶಿಲ್ಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಉದ್ಭವ ಶಿವಲಿಂಗವಿದೆ. ಮುಂದೆ ನಂದಿಯ ಶಿಲ್ಪವಿದೆ. ಈ ದೇವಾಲಯ ಪಾಳೆಯಗಾರರ ಕಾಲದಲ್ಲಿ ನಿರ್ಮಿಸಲ್ಪಟ್ಟಿರುವುದು ಆಧಾರಗಳಿಂದ ತಿಳಿದುಬರುತ್ತದೆ.

**ಕೋಟೆರಂಗನಾಥಸ್ವಾಮಿ ದೇವಾಲಯ, ಚನ್ನಗಿರಿ**

ಕೋಟೆಯನ್ನು ಹೊಂದಿರುವ ಬೆಟ್ಟದ ಮೇಲೆ ರಂಗನಾಥಸ್ವಾಮಿ ದೇವಾಲಯವಿದೆ. ಮುಖಮಂಟಪ ಹಾಗೂ ಗರ್ಭಗುಡಿಗಳಿಂದ ಕೂಡಿದೆ. ಗರ್ಭಗುಡಿಯಲ್ಲಿ ಮೂರು ಅಡಿ ಎತ್ತರವಿರುವ ಶಂಖ, ಚಕ್ರ, ಬಿಲ್ಲು ಬಾಣ ಹಿಡಿದು ಬೇಟೆಗಾರನ ಉಡುಪು ತೊಟ್ಟು ನಿಂತಿರುವ ಸುಂದರ ಬೇಟೆರಂಗನಾಥಸ್ವಾಮಿಯ ವಿಗ್ರಹವಿದೆ. ೧೮ನೇ ಶತಮಾನದಲ್ಲಿ ನಿರ್ಮಿತವಾಗಿದೆ ಎಂದು ಆಧಾರಗಳಿಂದ ತಿಳಿದುಬರುತ್ತದೆ. ಸಭಾಂಗಣದಲ್ಲಿ ವಿಷ್ಣು ವಿಗ್ರಹವಿದೆ. ಐದು ತಲೆಯ ಎಂಟು ಕೈಗಳ ಆಂಜನೇಯ ಸ್ವಾಮಿ ನೆಲೆಸಿದ್ದಾನೆ. ಈ ದೇವಾಲಯದ ನವರಂಗ, ಪ್ರವೇಶದ್ವಾರವು, ತ್ರಿಶಾಖೆಯನ್ನು ಒಳಗೊಂಡು ಆರು ಅಡಿ ಎತ್ತರವಿರುವ ಬಾಗಿಲಿದೆ. ಚೌಕಾಕಾರದ ಗರ್ಭಗೃಹ ಮಧ್ಯದಲ್ಲಿ ರಂಗನಾಥಸ್ವಾಮಿಯ ವಿಗ್ರಹವಿದೆ. ಈ ದೇವಾಲಯದ ಮುಂಭಾಗದಲ್ಲಿ ಗರುಡ ಗಂಭವಿದೆ.

**ರಂಗನಾಥಸ್ವಾಮಿ ದೇವಾಲಯ, ದೇವರಹಳ್ಳಿ**

ದೇವರಹಳ್ಳಿ ದೇವರು ನೆಲೆಸಿದ ಪ್ರಮುಖ ಧಾರ್ಮಿಕ ಕ್ಷೇತ್ರ. ಈ ಕ್ಷೇತ್ರದ ಬಗ್ಗೆ ಸ್ಥಳೀಯರು ಕೆಲವು ಐತಿಹ್ಯವನ್ನು ತಿಳಿಸುತ್ತಾರೆ. ಇವರ ಪ್ರಕಾರ ಈ ಕ್ಷೇತ್ರದ ಪೌರಾಣಿಕ ಹಿನ್ನೆಲೆಯಂತೆ ಹಿಂದೆ ಇದು ಉಲ್ಕಾಮುಖನೆಂಬ ರಾಕ್ಷಸನ ವಾಸಸ್ಥಾನವಾಗಿದ್ದು, ದೈವ ಭಕ್ತರನ್ನು ಕಾಡಿಸುತ್ತಿದ್ದನು. ಈ ಸಂದರ್ಭದಲ್ಲಿ ದೇವರು ಇಲ್ಲಿ ಹರಿ-ಹರ ರೂಪದಲ್ಲಿ ಅವತರಿಸಿ ಈ ರಾಕ್ಷಸನನ್ನು ಸಂಹರಿಸಿದನೆಂದು ಪ್ರತೀತಿ ಇದೆ. ಇಲ್ಲಿ ಸುಮಾರು ೧೫೦ ಅಡಿ

ಎತ್ತರದ ಬೆಟ್ಟ ಇದೆ. ಈ ಬೆಟ್ಟಕ್ಕೆ ಉಡುಮುರಡಿ ಬೆಟ್ಟ ಎಂದು ಕರೆಯುತ್ತಾರೆ. ಈ ಬೆಟ್ಟದ ಮೇಲೆ ರಂಗನಾಥಸ್ವಾಮಿ ನೆಲೆಸಿರುವುದು ಕಂಡುಬರುತ್ತದೆ. ಉದ್ಭವಮೂರ್ತಿಯಾದ ಈ ಲಿಂಗದ ಪಕ್ಕದಲ್ಲಿ ಶಂಖ ಚಕ್ರವಿರುವುದರಿಂದ ಶ್ರೀಹರಿಯೆಂದು, ಎಡಭಾಗದಲ್ಲಿ ಜಟೆಗಂಗೆ ಇರುವುದರಿಂದ ಹರನೆಂದು ಜನರು ಹೇಳುತ್ತಾರೆ. ಶ್ರೀ ರಂಗನಾಥನ ವಿರುದ್ಧ ದಿಕ್ಕಿನಲ್ಲಿ ಶ್ರೀ ಲಕ್ಷ್ಮೀದೇವಿಯ ಗುಡಿ ಇದೆ. ವಿಜಯನಗರದ ಅರಸರು ಕಟ್ಟಿಸಿದ್ದ ಈ ದೇವಾಲಯವನ್ನು ಸಂತೆಬೆನ್ನೂರು ಪಾಳೆಯಗಾರರು ಜೀರ್ಣೋದ್ಧಾರ ಮಾಡಿದ್ದಾರೆ. ನವರಂಗದ ಮಂಟಪವನ್ನು ಗಿರಿಯಮ್ಮ ಎಂಬ ನಾಗತಿ ಕಟ್ಟಿಸಿದ್ದಾಳೆಂದು ಇಲ್ಲಿನ ಶಾಸನದಲ್ಲಿ ಉಲ್ಲೇಖಗೊಂಡಿದೆ.

ಕ್ರಿ.ಶ. ೧೬೫೪ರ ಶಾಸನ ಉಲ್ಲೇಖದಲ್ಲಿ ಈ ಪ್ರದೇಶವನ್ನು ಉಡುಮರಡಿ ರಂಗನಾಥ ಸ್ವಾಮಿ ಎನ್ನುವರು. ಈ ದೇವಾಲಯದ ಬಲಭಾಗದಲ್ಲಿ ಸಂಜೀವಿನಿ ಗುಡಿ, ಎಡಗಡೆ ಒಳಕಲ್ಲು ಹನುಮಪ್ಪನ ದೇವಾಲಯ, ಕರಿಯಮ್ಮ, ಚೌಡಮ್ಮ, ಭೈರವ, ಬ್ರಹ್ಮದೇವ, ಪಾದದೇವ ಎಂಬ ಅನೇಕ ಸಣ್ಣ ಸಣ್ಣ ಗುಡಿಗಳಿವೆ.

ಕರ್ನಲ್ ಮೆಕೆಂಜಿ ಕೈಫಿಯತ್ತಿನಂತೆ ವಿಜಯನಗರದ ಅರಸರ ಪ್ರೌಢದೇವರಾಯನು ಬೇಟೆಗಾಗಿ ಈ ಪ್ರದೇಶಕ್ಕೆ ಬಂದಿದ್ದನು. ಅವನಿಗೆ ಅಲ್ಲಿ ಒಂದು ದೊಡ್ಡ ಉಡ ಕಾಣಿಸಿತು. ಸೈನಿಕರು ಅದನ್ನು ಹಿಂಬಾಲಿಸಿದಾಗ ಮುಂದೆ ಮರಡಿ ಗ್ರಾಮದ ಬಳಿ ಸುಗಂಧ ಪರಿಮಳ ಬೀರಿದ್ದರಿಂದ ಮರಡಿ ಗ್ರಾಮಕ್ಕೆ ಪಾದಮರಡಿ ಎಂದು ಹೆಸರಾಯಿತು. ಮುಂದಿನ ಗ್ರಾಮದಲ್ಲಿ ಬೆಳ್ಳಿ ಚಿನ್ನದ ಸ್ವರೂಪ ಪಡೆದುಕೊಂಡಾಗ ಆ ಗ್ರಾಮಗಳಿಗೆ ಬಳಗನಾಡು, ಚಿನ್ನಾಪುರ ಎಂದು ಹೆಸರಿನಿಂದ ಕರೆಯಲಾಗುತ್ತಿದೆ. ದೊಡ್ಡ ಉಡದಂತೆ ಕಂಡಿದ್ದ ಈ ಊರಿಗೆ ಹಿರೇ ಉಡ ಎಂದು ಹೆಸರಾಯಿತು. ಚಿಕ್ಕದಾಗಿ ಕಂಡಿದ್ದರಿಂದ ಚಿಕ್ಕ ಉಡ ಎಂದು ಹೀಗೆ ಕಾಕನೂರು ಕೊಂಡದಹಳ್ಳಿ ಗುಡ್ಡದ ಮೇಲೆ ಹೋಗಿ ಹುತ್ತದಲ್ಲಿ ಸೇರಿದಾಗ ಸೈನಿಕರು ಆ ಹುತ್ತವನ್ನು ಅಗೆಯಲು ಪ್ರಾರಂಭಿಸಿದರು. ಅಗೆಯುವ ಸಂದರ್ಭದಲ್ಲಿ ಲಿಂಗಸ್ವರೂಪಿಯಾಗಿ ಕಾಣಿಸಿಕೊಂಡಿತು. ಅಂದಿನಿಂದ ಉಡುಗಿರಿ ರಂಗನಾಥ ದೇವಾಲಯ ಎಂದು ಹೆಸರಾಯಿತು. ಮುಂದೆ ಸಂತೆಬೆನ್ನೂರು ನಾಯಕರು ಸುಂದರವಾದ ದೇವಾಲಯವನ್ನು ನಿರ್ಮಿಸಿದರು. ಇಡೀ ತಾಲ್ಲೂಕಿನಲ್ಲಿ ಪ್ರತಿವರ್ಷ ಇಲ್ಲಿ ಅತಿದೊಡ್ಡ ಜಾತ್ರೆ ನಡೆಯುತ್ತದೆ. ಈ ದೇವಾಲಯ ಮುಜರಾಯಿ ಇಲಾಖೆಗೆ ಸೇರಿದ್ದು, ದೇವಸ್ಥಾನಕ್ಕೆ ಹೋಗಲು ೧೦೧ ಮೆಟ್ಟಿಲುಗಳಿವೆ. ಪ್ರಸ್ತುತ ಹಲವಾರು ಭಕ್ತರು ಸೇರಿಕೊಂಡು ಈ ದೇವಾಲಯವನ್ನು ಸಂಪೂರ್ಣ ಜೀರ್ಣೋದ್ಧಾರ ಮಾಡಿದ್ದಾರೆ. ಆದುದರಿಂದ ಆಧುನಿಕ ಸಾಮಗ್ರಿಗಳಿಂದ ಕಂಗೊಳಿಸಲ್ಪಟ್ಟಿದೆ.

ಇವುಗಳಲ್ಲದೆ ಅನೇಕ ಸಣ್ಣಪುಟ್ಟ ದೇವಾಲಯಗಳನ್ನು ಸಂತೆಬೆನ್ನೂರು ನಾಯಕರು, ಕಟ್ಟಿಸಿರುವುದು, ಜೀರ್ಣೋದ್ಧಾರ ಕೈಗೊಂಡಿರುವುದು ಹಾಗೂ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ.

ಮದುಕೆರೆ ಎಂಬ ಊರಿನಲ್ಲಿ ಕೆಂಗಹನುಮಪ್ಪನಾಯಕ ಮಧುಕೇಶ್ವರ ದೇವಾಲಯವನ್ನು ನಿರ್ಮಿಸಿದನು. ಹಾಗೆಯೇ ಇಲ್ಲಿ ಒಂದು ಕೆರೆಯನ್ನು ಕಟ್ಟಿಸಿ ನೀರಾವರಿಗೆ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಹನುಮಪ್ಪ ನಾಯಕನ ಮಗ ರಾಜಪ್ಪನಾಯಕ ಬಾಗೂರಿನಲ್ಲಿ ಲಕ್ಷ್ಮೀದೇವಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದಲ್ಲದೆ ಲಕ್ಷ್ಮೀದೇವಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾನೆ.

೨ನೇ ಹನುಮಪ್ಪ ಆಡಳಿತ ನಡೆಸುವ ಸಂದರ್ಭದಲ್ಲಿ ವಡೇರಹಳ್ಳಿಯಲ್ಲಿ ಒಂದು ದೇವಾಲಯವನ್ನು ನಿರ್ಮಿಸಿ ದಾನ-ದತ್ತಿ ನೀಡಿರುವುದು ದಾವಣಗೆರೆಯ ಶಾಸನ ಸಂಖ್ಯೆ ೧೫೪೮ರಲ್ಲಿ ಉಲ್ಲೇಖಗೊಂಡಿದೆ. ವೀರಹನುಮಪ್ಪನಾಯಕನ ಅಳಿಯ ಚಿಕ್ಕನಾಗಪ್ಪನಾಯಕನು ತನ್ನ ತಂದೆ ತಾಯಿಗಳಿಗೆ ಒಳ್ಳೆಯದಾಗಲಿ ಎಂದು ಅಣಜಿಯ ಮಾಚಪ್ಪ ದೇವರ ಮಠಕ್ಕೆ ದಾನಧರ್ಮ ನೀಡಿರುವುದು ಕಂಡುಬರುತ್ತದೆ. ಹನುಮಪ್ಪನಾಯಕನ ಸಾಮಂತ ನಾಯಕನೊಬ್ಬ ಮಾಯಕೊಂಡದ ವೀರೇಶ್ವರ ದೇವರಿಗೆ ಬುಳ್ಳಾಪುರ ಗ್ರಾಮವನ್ನು ಉಂಬಳಿಯಾಗಿ ನೀಡಿರುವುದು ಎಪಿಗ್ರಾಫಿಯ ಕರ್ನಾಟಕ ೧೪೪೦ರ ಶಾಸನದಲ್ಲಿ ಉಲ್ಲೇಖಗೊಂಡಿದೆ. ಹಾಗೆ ಹನುಮಪ್ಪ ನಾಯಕನ ಮೊಮ್ಮಗ ದಳನಾಯಕನು ಕಲ್ಲೋಡು ಹನುಮಂತ ದೇವರಿಗೆ ಕುರುಬರಹಳ್ಳಿ ಗ್ರಾಮವನ್ನು ಉಂಬಳಿ ಹಾಕಿರುವ ಉಲ್ಲೇಖ ಹೊಳಲ್ಕೆರೆಯ ೯೨ನೇ ಶಾಸನದಲ್ಲಿ ದೊರೆಯುತ್ತದೆ.

ಹೊದಿಗರೆ ಎಂಬ ಗ್ರಾಮದಲ್ಲಿ ಕೆಂಗಪ್ಪನಾಯಕ ಒಂದು ಕೋಟೆಯನ್ನು ಕಟ್ಟಿಸಿ ಕೆರೆಯ ಪ್ರದೇಶದಲ್ಲಿ ರಂಗನಾಥ ದೇವರ ದೇವಸ್ಥಾನವನ್ನು ಕಟ್ಟಿಸಿದ ಉಲ್ಲೇಖಗಳು ನಮಗೆ ಆಧಾರಗಳಿಂದ ತಿಳಿದುಬರುತ್ತದೆ. ಕೋಟೆ ಕಟ್ಟಿಸಿದ ನಂತರ ಕೆಂಗಪ್ಪನಾಯಕನು ಇದೇ ಪ್ರಮಾಣದಲ್ಲಿ ರಂಗನಾಥ ಸ್ವಾಮಿಯ ದೇವಾಲಯವನ್ನು ಕಟ್ಟಿಸಿದ ಅಂಶ ತಿಳಿದುಬರುತ್ತದೆ. ಹೀಗೆ ಅನೇಕ ದೇವಾಲಯಗಳನ್ನು ಕಟ್ಟಿಸಿ ಅವುಗಳಿಗೆ ದಾನ-ದತ್ತಿಗಳನ್ನು ನೀಡಿ ಜೀರ್ಣೋದ್ಧಾರ ಮಾಡಿರುವುದು ಕಂಡುಬರುತ್ತದೆ.

ಇವರ ಆಳ್ವಿಕೆಯ ಸಂದರ್ಭದಲ್ಲಿ ಬುಳ್ಳಾಪುರದ ಆಂಜನೇಯ ದೇವಸ್ಥಾನ ಬಿಳಿಗಿರಿ ರಂಗನಾಥಸ್ವಾಮಿ, ಹನುಮಸಾಗರದ ಸದಾಶಿವಪ್ಪ ದೇವಾಲಯ, ಹಿರೇಮಾಡಾಳು ಮಲ್ಲೇಶ್ವರ ದೇವಸ್ಥಾನ, ಕುಂದೂರು ಆಂಜನೇಯಸ್ವಾಮಿ, ಕಾಮನದುರ್ಗದ ಚನ್ನರಾಯಸ್ವಾಮಿ ದೇವಾಲಯ, ಕಲ್ಲತ್ತಗಿರಿಯ ವೀರಭದ್ರ ದೇವಾಲಯ ಮುಂತಾದ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಕೆಲವು ದೇವಾಲಯಗಳಿಗೆ ಜೀರ್ಣೋದ್ಧಾರ ಮಾಡಿ ದಾನ-ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ.

ಸ್ತ್ರೀ ದೇವತೆಗಳಾದ ದುರ್ಗಮ್ಮ, ಕರಿಯಮ್ಮ, ಪಿಳ್ಳಮ್ಮ, ಚೌಡಮ್ಮ, ಯಲ್ಲಮ್ಮ, ಮಾರಮ್ಮ, ಕಾಳಮ್ಮ ಮುಂತಾದ ಸ್ತ್ರೀ ದೇವತೆಗಳಿಗೂ ಪೂಜೆ ಪುನಸ್ಕಾರ ಮಾಡುವುದರೊಂದಿಗೆ ಹೆಚ್ಚಿನ ಮಾನ್ಯತೆ ನೀಡುತ್ತಿದ್ದರು. ಕನ್ಯೆದೇವತೆಗಳ ಹೆಸರಿನಲ್ಲಿ ಹಬ್ಬ-ಜಾತ್ರೆ, ಉತ್ಸವ ಮುಂತಾದ

ಆಚರಣೆಗಳನ್ನು ಜನರು ಮಾಡುತ್ತಿದ್ದರು. ಅವರ ಹೆಸರಿನಲ್ಲಿ ಕುರಿ, ಕೋಳಿ, ಮೇಕೆ, ಕೋಣ ಮುಂತಾದ ಪ್ರಾಣಿಗಳನ್ನು ಬಲಿ ಕೊಡುವ ಪದ್ಧತಿ ಇತ್ತು. ಈ ನಾಯಕರು ಕಟ್ಟಿಸಿದ ದೇವಸ್ಥಾನಗಳು ಸರಳವಾಗಿದ್ದು ನಯಗೊಳಿಸಿದ ಭಾರಿಗಾತ್ರದ ಕಲ್ಲನ್ನು ಉಪಯೋಗಿಸಿರುವುದು ಕಂಡುರುಬತ್ತದೆ. ಹಲವು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ್ದಾರೆ. ದೇವಾಲಯಗಳು ಜನಜೀವನದ ಭಾಗಗಳಾಗಿದ್ದು ಅವುಗಳ ನಿರ್ಮಾಣ, ಜಾತ್ರೆ ಉತ್ಸವ, ಧರ್ಮ ಸಹಿಷ್ಣುತೆಗೆ ನಾಂದಿ ಹಾಡಿದರು.

ಒಟ್ಟಾರೆ ಇವರ ಕಾಲದ ದೇವಾಲಯಗಳು ಕಲೆ, ವಾಸ್ತುಶಿಲ್ಪದಲ್ಲಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿವೆ. ಅವು ಸಮಾಜದ ಉನ್ನತಿಯ ಜೊತೆಗೆ ಪ್ರೀತಿಗಾಗಿಯೂ ಧರ್ಮರಕ್ಷಕವಾಗಿಯೂ ಕೆಲಸ ನಿರ್ವಹಿಸುತ್ತಿದ್ದವು.

**ಪುಷ್ಕರಣಿ: ಸಂತೆಬೆನ್ನೂರು**

ಕೆಂಗಹನುಮಪ್ಪನಾಯಕ ಸಂತೆಬೆನ್ನೂರು ಪ್ರದೇಶವನ್ನು ಅಮರಮಾಗಣಿಯನ್ನಾಗಿ ಪಡೆದುಕೊಂಡು ಆಳ್ವಿಕೆ ನಡೆಸಿದನು. ಈ ಅಮರಮಾಗಣಿಯಲ್ಲಿ ಕೋಟೆ, ಅರಮನೆ, ದೇವಾಲಯಗಳು, ಕೆರೆಗಳನ್ನು ನಿರ್ಮಿಸಿದ್ದಲ್ಲದೆ ದಕ್ಷಿಣ ಭಾರತದಲ್ಲಿ ಅತಿ ಸುಂದರವಾದ ಪುಷ್ಕರಿಣಿಯನ್ನು ನಿರ್ಮಿಸಿದನು. "ಇಷ್ಟೊಂದು ಸುಂದರವಾದ ಪುಷ್ಕರಿಣಿ ದಕ್ಷಿಣ ಭಾರತದಲ್ಲಿ ಬೇರೆಲ್ಲೂ ಇಲ್ಲ" ಎಂದು ಖ್ಯಾತ ಸಂಶೋಧಕ ಎಂ.ಚಿದಾನಂದಮೂರ್ತಿ ಹೇಳಿದ್ದಾರೆ. ಇಲ್ಲಿನ ಸರೋವರ, ಪುಷ್ಕರಿಣಿಯನ್ನು ಸ್ಥಳಿಯರು ಹೊಂಡ ಎಂದು ಕರೆಯುತ್ತಾರೆ.

ಈ ಸುಂದರ ಪುಷ್ಕರಿಣಿಯು ೨೩೫ ಅಡಿ ಉದ್ದ, ೨೪೫ ಅಡಿ ಅಗಲ ಹಾಗೂ ೩೦ ಅಡಿ ಆಳವಾಗಿದೆ ಎಂದು ಸಂತೆಬೆನ್ನೂರು ಸುಮತೀಂದ್ರ ನಾಡಿಗ್ ಅಭಿಪ್ರಾಯಪಡುತ್ತಾರೆ. ಈ ಪುಷ್ಕರಿಣಿಯ ಸುತ್ತಲೂ ೩ ಅಡಿ ಎತ್ತರವಿರುವ ಮೆಟ್ಟಿಲುಗಳಿವೆ. ನಾಲ್ಕು ದಿಕ್ಕುಗಳಲ್ಲಿ ಕೆಂಪು ಗ್ರಾನೈಟ್ ಶಿಲೆಯ ಸುಂದರ ನಾಲ್ಕು ಪ್ರವೇಶ ದ್ವಾರಗಳಿವೆ. ಎಂಟು ದಿಕ್ಕುಗಳಲ್ಲಿ ಅಷ್ಟ ದಿಕ್ಪಾಲಕರ ಮಂಟಪಗಳಿದ್ದವು. ಆದರೆ ಪ್ರಸ್ತುತ ಈಗ ೬ ಮಾತ್ರ ಉಳಿದಿವೆ. ಇನ್ನು ಎರಡು ಮಂಟಪಗಳು ಗಾಳಿ, ಮಳೆಗೆ ನಾಶವಾಗಿವೆ ಎಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ. ಈ ಮಂಟಪಗಳು ಪುಷ್ಕರಿಣಿಗೆ ಸೌಂದರ್ಯಭೂಷಣವಾಗಿವೆ. ಪ್ರವೇಶಮಂಟಪಗಳು ವಿಸ್ತೀರ್ಣದಲ್ಲಿ ದೊಡ್ಡವಿದ್ದು ೧೨ ಕಲ್ಲಿನ ಕಂಬಗಳ ಆಧಾರದ ಮೇಲೆ ೧೫ ಅಡಿ ಉದ್ದ, ೨೨ ಅಡಿ ಅಗಲದ ವ್ಯಾಸಪೀಠದಲ್ಲಿ ನಿರ್ಮಿತವಾಗಿವೆ. ಉಳಿದ ನಾಲ್ಕು ಮೂಲೆ ಮಂಟಪಗಳನ್ನು ೧೦ ಅಡಿ ಉದ್ದ, ೧೦ ಅಡಿ ಅಗಲದ ವೇದಿಕೆಯ ಮೇಲೆ ನಿರ್ಮಿಸಲಾಗಿದೆ. ಈ ಮಂಟಪಗಳ ಮೇಲೆ ದಿಕ್ಪಾಲಕರ ವಿಗ್ರಹಗಳನ್ನು ವಾಹನ ಸಮೇತ ಕೆತ್ತಲಾಗಿದೆ. ಮಂಟಪದ ಕಂಬಗಳ ಮೇಲೆ ಪಾಳೆಯಗಾರರ ವಿವಿಧ ಭಂಗಿಯ ವಿಗ್ರಹಗಳು, ವಿಷ್ಣು, ಗಣಪತಿ, ಶ್ರೀರಾಮ, ನರಸಿಂಹ,

ಆಂಜನೇಯನ ಪ್ರತಿಮೆಗಳು ಶಂಖ, ಚಕ್ರ, ಗದಾ, ಪದ್ಮ, ಲಾಂಛನಗಳ ಉಬ್ಬು ಶಿಲ್ಪಗಳನ್ನು ಚಿತ್ರಿಸಲಾಗಿದೆ. ಜೊತೆಗೆ ಇವುಗಳ ಮೇಲೆ ೧೦ ಅಡಿ ಎತ್ತರದ ಗಾರೆ ಮತ್ತು ಇಟ್ಟಿಗೆಗಳಿಂದ ವೀಕ್ಷಣಾಗೋಪುರಗಳನ್ನು ನಿರ್ಮಿಸಲಾಗಿದೆ.

ಪುಷ್ಕರಿಣಿಯ ಮಧ್ಯದಲ್ಲಿ ಒಂದು ಸುಂದರವಾದ ಪುಷ್ಕರಿಣಿ ಇದೆ. ಸ್ಥಳೀಯರು ಇದನ್ನು ಕಾರಂಜಿಮಂಟಪ ಎಂದೂ ಕರೆಯುತ್ತಾರೆ. ಸಂಗ್ರಹವಾದ ನೀರು ಈ ಮಂಟಪದ ತುತ್ತ ತುದಿಯಿಂದ ಹೊರಗೆ ಚಿಮ್ಮುವ ವ್ಯವಸ್ಥೆ ಇತ್ತೆಂದು ಸ್ಥಳೀಯರು ಮಾಹಿತಿ ನೀಡುತ್ತಾರೆ. ಈ ಕಾರಂಜಿ ಅಥವಾ ವಸಂತಮಂಟಪವು ನಾಲ್ಕು ಮಹಡಿಯನ್ನು ಹೊಂದಿದ್ದು ನಾಲ್ಕು ದಿಕ್ಕಿನಿಂದ ನೋಡಿದರೂ ಒಂದೇ ತರಹ ಕಾಣುವ ಕಲ್ಲಿನ ತೇರಿನಂತೆ ಕಾಣುತ್ತದೆ. ಈ ನಾಲ್ಕು ಮಹಡಿಯನ್ನು ಪ್ರವೇಶದ್ವಾರದ ಮಹಡಿ, ಸುರಂಗಮಾರ್ಗಗಳ ಮಹಡಿ, ಉಯ್ಯಾಲೆ ಮಹಡಿ, ಗೋಪುರಮಹಡಿ ಎಂದು ಗುರುತಿಸಬಹುದು.

"ಕಾರಂಜಿಯ ಮಂಟಪವನ್ನು ವಿಶಾಲ ಬಂಡೆಯ ಮೇಲೆ ನಿರ್ಮಿಸಲಾಗಿದೆ. ಅಡಿಪಾಯವನ್ನು ೫ ಅಡಿ ಎತ್ತರ, ೩೦ ಅಡಿ ಉದ್ದ ಅಗಲದ ಕೆಂಪು ಗ್ರಾನೈಟ್‌ಗಳಿಂದ ನಿರ್ಮಿಸಲಾಗಿದೆ. ಪ್ರವೇಶದ್ವಾರದ ಮಹಡಿಯ ನಾಲ್ಕು ದಿಕ್ಕಿನಲ್ಲಿ ೮ ಅಡಿ ಎತ್ತರದ ಒಂದೊಂದು ಪ್ರವೇಶದ್ವಾರವಿದ್ದು, ಅದರಿಂದ ೨ನೇ ಮಹಡಿಗೆ ಅಂದರೆ ಸುರಂಗಮಾರ್ಗಗಳ ಮಹಡಿಗೆ ಹೋಗಲು ೧೨ ಮೆಟ್ಟಿಲುಗಳಿವೆ. ಈ ಮಹಡಿಯು ರಹಸ್ಯ ಕೋಟೆಯಂತಿದೆ. ೨೪ ಅಡಿ ಉದ್ದ, ೨೪ ಅಡಿ ಅಗಲ, ೧೦ ಅಡಿ ಎತ್ತರದ ಪ್ರವೇಶದ್ವಾರ ಮಹಡಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಒಳಗಡೆ ಟೊಳ್ಳಾದ ಕೋಣೆ ಇರುವುದು ತಿಳಿದುಬರುತ್ತದೆ."[6]

ಸುರಂಗಮಾರ್ಗಗಳ ಮಹಡಿಯಲ್ಲಿ ನಾಲ್ಕು ಕಡೆ ವೀಕ್ಷಣಾಗ್ಯಾಲರಿ ನಿರ್ಮಿಸಲಾಗಿದೆ. ಮಹಡಿಯ ರಚನಾಕೌಶಲ್ಯ, ಕೆತ್ತನೆ, ಜೋಡಣೆ, ವಿನ್ಯಾಸ ಕಲಾತ್ಮಕವಾಗಿದ್ದು ಪ್ರವಾಸಿಗರನ್ನು ಬೆರಗುಗೊಳಿಸುವಂತಿದೆ. ಮಹಡಿಯ ಮಧ್ಯೆ ಕಲ್ಲುಚಪ್ಪಡಿ ಹಾಸಿ ಇಟ್ಟಿಗೆ ಗಾರೆಯಿಂದ ಮುಚ್ಚಿದ ಒಂದು ಸ್ಥಳ ಇದ್ದು, ಅಲ್ಲಿಂದ ಪುಷ್ಕರಣಿ ಒಳಗಿರುವ ಸುರಂಗಮಾರ್ಗದ ಮೂಲಕ ಹೊರಹೋಗುವ ವ್ಯವಸ್ಥೆಯೂ ಇದ್ದಿರಬಹುದು. ಶತ್ರುಗಳು ದಾಳಿ ಮಾಡಿದರೆ ಅಂತಹ ಸಂದರ್ಭದಲ್ಲಿ ತಪ್ಪಿಸಿಕೊಂಡು ಹೋಗಲು ಸಹಾಯವಾಗಲೆಂದು ಇದನ್ನು ರಚನೆ ಮಾಡಲಾಗಿದೆ. ಈ ಮಾರ್ಗ ನೀರಿನೊಳಗಿದ್ದು ಹೊರನೋಟಕ್ಕೆ ಕಾಣಿಸುವುದಿಲ್ಲ.

"ಉಯ್ಯಾಲೆಮಹಡಿ ೨೪ ಅಡಿ ಉದ್ದ, ೨೪ ಅಡಿ ಅಗಲ, ೧೨ ಅಡಿ ಎತ್ತರ ಇದ್ದು ೧೬ ಕಲ್ಲಿನ ಕಂಬಗಳ ಮೇಲೆ ನಿರ್ಮಿಸಲಾಗಿದೆ. ಈ ಮಹಡಿಯ ಮಧ್ಯಭಾಗದಲ್ಲಿ ೮ ಅಡಿ ಅಗಲ, ೮ ಅಡಿ ಉದ್ದ, ೨ ಅಡಿ ಎತ್ತರವಿರುವ ವೇದಿಕೆ ಇದೆ. ಅದರ ಮೇಲೆ ದೇವರ ಉತ್ಸವಗಳನ್ನು ನಡೆಸಲು ಉಯ್ಯಾಲೆ ಹಾಕಲು ಅನುಕೂಲವಾಗುವಂತೆ ಕಬ್ಬಿಣದ ಕೊಂಡಿಗಳನ್ನು ಜೋಡಿಸಲಾಗಿದೆ."[7]

ಕೊನೆಯದಾಗಿ ತುದಿಯಲ್ಲಿ ಗೋಪುರಮಹಡಿ ಇದೆ. ಇದು ಉಯ್ಯಾಲೆ ಮಹಡಿಯ ಈಶಾನ್ಯ ಭಾಗಕ್ಕೆ ಇದೆ. ಇದರ ಮೂಲಕ ಏಣಿಯ ಸಹಾಯದಿಂದ ಈ ಗೋಪುರಮಹಡಿಗೆ ಏರಲು ಸಾಧ್ಯವಾಗಬಹುದು. ಇದು ಇಡೀ ಪುಷ್ಕರಣಿಗೆ ಕಳಶವಿದ್ದಂತೆ ಇದೆ. ಇದು ಕೂಷ್ಮಾಂಡ ಶೈಲಿಯಲ್ಲಿದ್ದು, ಅದರ ಸುತ್ತ ಗಂಡಭೇರುಂಡ, ಆನೆ, ಶರಭ, ಸಿಂಹ, ಶಾರ್ದೂಲ, ನವಿಲು, ಹಂಸ, ನಾಗರ, ಬೆಳ್ಳಿ, ಪ್ರಾಣಿಪಕ್ಷಿಗಳ ಸೂಕ್ಷ್ಮಾತಿ ಸೂಕ್ಷ್ಮ ಕೆತ್ತನೆಗಳಿವೆ.[೧೦]

ಸುಮಾರು ೫೦೦ ವರ್ಷಗಳ ಹಿಂದೆ ನಿರ್ಮಿಸಲ್ಪಟ್ಟ ಈ ಪುಷ್ಕರಿಣಿ ನೀರಿನಲ್ಲಿ ಇದ್ದರೂ ಯಾವುದೇ ರೀತಿಯ ಹಾನಿಯಾಗಿಲ್ಲ. ಮಳೆಯ ನೀರು ತೂಬಿನ ಮೂಲಕ ಪುಷ್ಕರಿಣಿಗೆ ಬರುವ ವ್ಯವಸ್ಥೆಯನ್ನು ಮಾಡಲಾಗಿದೆ. ಈ ತೂಬಿನ ಮಂಟಪವೂ ಸುಂದರವಾಗಿದ್ದು ೬ ಕಂಬಗಳ ಮೇಲೆ ನಿರ್ಮಿಸಲಾಗಿದೆ. ಇಲ್ಲಿನ ಒಂದು ಕಂಬದ ಮೇಲೆ ಕೆಂಗಪ್ಪನಾಯಕ ಕೈಮುಗಿದು ನಿಂತಿರುವ ಉಬ್ಬುಶಿಲ್ಪವನ್ನು ಕಾಣಬಹುದು. ಪುಷ್ಕರಣಿಯ ನೀರು ಹೆಚ್ಚಾದರೆ ಹೊರಗಡೆ ಹೋಗುವಂತೆ ಪೂರ್ವದಿಕ್ಕಿನಲ್ಲಿ ಕೋಡಿಮಂಟಪವನ್ನು ನಿರ್ಮಿಸಲಾಗಿದೆ. ಪಾಳೆಯಗಾರರ ಆಡಳಿತ ಸಂದರ್ಭದಲ್ಲಿ ಈ ಪುಷ್ಕರಿಣಿಯ ವಾಸ್ತುಶೈಲಿ ಹಿಂದೂ ಮತ್ತು ಮುಸ್ಲಿಂ ವಾಸ್ತುಶಿಲ್ಪ ಶೈಲಿಗಳ ಸಮ್ಮಿಶ್ರಣದಿಂದ ಕೂಡಿದೆ. ಬಹುಭಾಗ ಈ ಪುಷ್ಕರಿಣಿಯಲ್ಲಿ ಗ್ರಾನೈಟ್ ಕಲ್ಲನ್ನು ಹೆಚ್ಚಾಗಿ ಬಳಸಲಾಗಿದೆ. ಕರ್ನಲ್ ಮೆಕಂಜಿ ಸಂಗ್ರಹಿಸಿದ ಕೈಫಿಯತ್ತಿನಲ್ಲಿ ಈ ಪುಷ್ಕರಿಣಿಯನ್ನು ಶ್ರೀರಾಮತೀರ್ಥ ಎಂದು ಕರೆಯಲಾಗಿದೆ.

ಕೆಲವು ವರ್ಷಗಳ ಹಿಂದೆ ಸಂತೆಬೆನ್ನೂರು ಪಟ್ಟಣಕ್ಕೆ ಈ ಪುಷ್ಕರಿಣಿಯ ನೀರು ಕುಡಿಯಲು ಸರಬರಾಜು ಆಗುತ್ತಿತ್ತು. ಪ್ರಸ್ತುತ ಈ ಪುಷ್ಕರಿಣಿ ಕೇಂದ್ರ ಪ್ರಾಚ್ಯವಸ್ತು ರಕ್ಷಣೆಗೆ ಒಳಪಟ್ಟಿದ್ದು ಸಂರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿದೆ.

**ಚನ್ನಗಿರಿಕೋಟೆ ಪುಷ್ಕರಿಣಿ**

ಈ ಹಿಂದೆ ಚರ್ಚಿಸಿದಂತೆ ಚನ್ನಗಿರಿಯಲ್ಲಿ ಚನ್ನಮ್ಮಾಜಿ ಕೋಟೆಯನ್ನು ಕಟ್ಟಿಸಿದರು. ಈ ಕೋಟೆಯಲ್ಲಿ ಶ್ರೀರಂಗನಾಥ ದೇವಾಲಯದ ಪಶ್ಚಿಮದಿಕ್ಕಿಗೆ ದೊಡ್ಡದಾದ ಕೊಳ ಅಥವಾ ಪುಷ್ಕರಿಣಿಯಿದೆ. ಈ ಪುಷ್ಕರಿಣಿಯನ್ನು ನೈಸರ್ಗಿಕವಾಗಿ ತಗ್ಗಾಗಿರುವ ಸ್ಥಳದಲ್ಲಿ ಬಂಡೆಯ ಭಾಗವನ್ನು ಕೊರೆದು ನಿರ್ಮಿಸಲಾಗಿದೆ. ಕೆಳಗೆ ಇಳಿಯಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಕೆಳಭಾಗದಲ್ಲಿ ಬಂಡೆಯಲ್ಲಿಯೇ ಮೆಟ್ಟಿಲುಗಳನ್ನು ಕೊರೆಯಲಾಗಿದೆ. ಈ ಕೋಟೆಯಲ್ಲಿ ಇನ್ನೂ ಸಣ್ಣ ಸಣ್ಣ ಕೊಳಗಳಿರುವುದನ್ನು ಕಾಣಬಹುದು. ಈ ಕೊಳಗಳಲ್ಲಿನ ನೀರು ವರ್ಷವಿಡೀ ಇರುತ್ತದೆ. ಇದು ಯಾವ ಕಾಲದಲ್ಲಿ ಬತ್ತಿಹೋಗುವುದಿಲ್ಲ ಎಂದು ಸ್ಥಳೀಯರು ಹೇಳುತ್ತಾರೆ. ಈ ಕೊಳದಿಂದ ನೀರನ್ನು ತಂದು ರಂಗನಾಥ ದೇವರ ಪೂಜೆಗೆ ಬಳಸಲಾಗುತ್ತದೆ. ಈ ಕೊಳವು ಸುಮಾರು ೧೫ ಅಡಿ ಆಳವನ್ನು ಹೊಂದಿದೆ.

ಹೀಗೆ ಸಂತೆಬೆನ್ನೂರು ಪಾಳೆಯಪಟ್ಟನಲ್ಲಿ ಮಹತ್ವಪೂರ್ಣವಾದ ೨ ಪುಷ್ಕರಿಣೆಗಳು ಕಂಡುಬರುತ್ತವೆ. ಆಗಿನ ಕಾಲದಲ್ಲಿ ಇವುಗಳಿಂದ ಸಾಕಷ್ಟು ಅನೂಕೂಲ ಆಗುತ್ತಿತ್ತು ಎಂದು ತಿಳಿದುಬರುತ್ತದೆ. ಈ ಸಂತೆಬೆನ್ನೂರು ಪುಷ್ಕರಿಣಿಯಿಂದ ಈ ನಾಯಕರ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ಒಂದು ಮೆರುಗು ಬಂದಿದೆ. ಇಂತಹ ಪುಷ್ಕರಿಣಿಯನ್ನು ದುರಸ್ತಿಗೊಳಿಸಿ ಅವುಗಳನ್ನು ಸಂರಕ್ಷಿಸಲು ಸರ್ಕಾರ ಮುಂದಾಗಬೇಕು ಮತ್ತು ಅವುಗಳ ಮಹತ್ವವನ್ನು ಪ್ರಚಾರಪಡಿಸುವುದು ಅಗತ್ಯವಿದೆ.

**ಸಂತೆಬೆನ್ನೂರು ನಾಯಕರ ಮಠಗಳು**

ಸಂತೆಬೆನ್ನೂರು ನಾಯಕರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಅನೇಕ ಮಠಗಳನ್ನು ಸ್ಥಾಪಿಸಿದ್ದರು. ಕೆಲವು ಮಠಗಳಿಗೆ ದಾನದತ್ತಿ ನೀಡಿದ್ದರು. ಈ ನಾಯಕರು ಕಟ್ಟಿಸಿದ ಮಠಗಳು ಪ್ರಮುಖವಾಗಿ ವಿದ್ಯಾಪ್ರಸಾರ, ಜ್ಞಾನಪ್ರಸಾರ ಮತ್ತು ಮತಪ್ರಚಾರ ಕೇಂದ್ರಗಳಾಗಿದ್ದವು. ಈ ನಾಯಕರು ದೇವಾಲಯ, ಮಠಗಳ ಸ್ಥಾಪನೆ, ಪೋಷಣೆಗಾಗಿ ಹೆಚ್ಚಿನ ಪ್ರೋತ್ಸಾಹ ಹಾಗೂ ಪ್ರಾಮುಖ್ಯತೆಯನ್ನು ನೀಡಿದ್ದರು. ಈ ಮಠಗಳು ಸಮಾಜದ ಪ್ರಗತಿಗೆ ಹಾಗೂ ಸಾಮ್ರಾಜ್ಯದ ಉನ್ನತಿಗೆ, ಧರ್ಮರಕ್ಷಕವಾಗಿ ಕೆಲಸ ನಿರ್ವಹಿಸುತ್ತಿದ್ದವು. ಧರ್ಮಗುರುಗಳ ಮಾರ್ಗದರ್ಶನ ನಾಯಕರ ಆಡಳಿತ ಉತ್ತುಂಗ ಶಿಖರಕ್ಕೆ ಏರಲು ಕಾರಣವಾಗಿತ್ತು. ನಾಯಕರು ಸ್ಥಾಪಿಸಿದ ಮಠಗಳ ಕುರಿತು ಅವರ ಅನೇಕ ಶಾಸನಗಳಲ್ಲಿ ದಾಖಲಾಗಿರುವುದು ಕಂಡುಬರುತ್ತದೆ.

**ಕೂಡಲಿ ಶೃಂಗೇರಿ ಮಠ**

ಈ ಮಠ ಶಿವಮೊಗ್ಗ ಜಿಲ್ಲೆಯಲ್ಲಿದೆ. ಇದು ತುಂಗಾ ಮತ್ತು ಭದ್ರಾ ನದಿಗಳು ಸಂಗಮವಾಗುವ ಕೂಡಲಿ ಎಂಬ ಸ್ಥಳದಲ್ಲಿ ನಿರ್ಮಿಸಲ್ಪಟ್ಟಿದೆ. ಶ್ರೀ ಕೂಡಲಿ-ಶೃಂಗೇರಿ ಮಠವು ಅದ್ವೈತ ಮಠವಾಗಿದ್ದು, ಈ ಅದ್ವೈತ ಪೀಠದ ಸ್ಥಾಪನೆಗೆ ಸಂತೆಬೆನ್ನೂರು ನಾಯಕರು ಕಾರಣಕರ್ತರು ಎಂದು ಹೇಳಲಾಗುತ್ತದೆ. ಇಲ್ಲಿ ಈ ನಾಯಕರು ಮಠಕ್ಕೆ ಬರೆದುಕೊಟ್ಟ ೧೫ ಶಾಸನ ಅಥವಾ ಸನ್ನದುಗಳ ದಾಖಲೆ ಇದೆ.

ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಕೂಡಲಿ-ಶೃಂಗೇರಿ ಮಠ ಎಂದು ಕರೆಯಲ್ಪಡುವ ಅದ್ವೈತ ಮಠವಿದೆ. ಜೊತೆಗೆ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಸ್ವಾಮಿಗಳವರ ಮಠ ಎಂಬ ದ್ವೈತ ಪಂಥದ ಮಠ ಹಾಲಿ ಇದೆ. ಸೋದೆ ಮಠಗಳ ಸ್ವಾಮಿಗಳು ಮಠವನ್ನು ಸ್ಥಾಪಿಸಿಕೊಂಡಿದ್ದರು ಎಂದು ತಾಮ್ರಶಾಸನದಿಂದ ತಿಳಿದುಬರುತ್ತದೆ.

ಶ್ರೀ ಗುರು ಕೂಡಲಿ-ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ, ಲೇಖನ ಸನ್ನದುಗಳನ್ನು ಆ ಮಠಕ್ಕೆ ಬರೆದುಕೊಟ್ಟಿರುವುದು ಕಂಡುಬರುತ್ತದೆ. ಈ ದಾಖಲೆಗಳಿಂದ ತಿಳಿದುಬರುವ ಮುಖ್ಯ ಅಂಶವೆಂದರೆ ಶೃಂಗೇರಿ ಮಠಾಧೀಶ್ವರರಾಗಿದ್ದ ಶ್ರೀ ನರಸಿಂಹ ಭಾರತಿ ಸ್ವಾಮಿಗಳು

ಕಾಶೀಯಾತ್ರೆಗೆ ಹೋಗಿ ಬಹಳ ದಿನ ಕಾಲ ಹಿಂದಿರುಗಿ ಬರಲಿಲ್ಲ. ಆದುದರಿಂದ ಅಲ್ಲಿನ ಪೀಠಕ್ಕೆ ಮಠಾಧಿಪತಿಗಳನ್ನು ಅಲ್ಲಿಯ ಜನರು ಬೇರೆ ಪೀಠಾಧಿಪತಿಗಳನ್ನು ನೇಮಕ ಮಾಡಿಕೊಂಡರು. ಹಿಂತಿರುಗಿ ಬಂದ ನರಸಿಂಹ ಭಾರತಿ ಸ್ವಾಮಿಗಳು ಶೃಂಗೇರಿಗೆ ಹೋಗದೆ ಕೂಡಲಿಯಲ್ಲಿ ಉಳಿದುಕೊಂಡರೆಂದು, ಸಂತೆಬೆನ್ನೂರು ನಾಯಕರು ಅವರಿಗೆ ಆಶ್ರಯ ನೀಡಿ ಅನೇಕ ದಾನದತ್ತಿಗಳನ್ನು ನೀಡಿದರಲ್ಲದೆ ಕೂಡಲಿಯಲ್ಲಿ ಪ್ರತ್ಯೇಕ ಶೃಂಗೇರಿ ಮಠ ಕಟ್ಟಿಕೊಟ್ಟರೆಂದು ತಿಳಿದುಬರುತ್ತದೆ.[೧೧] ಈಗಲೂ ಈ ಮಠಕ್ಕೆ ಸಂತೆಬೆನ್ನೂರು ನಾಯಕನ ಉಬ್ಬುಶಿಲ್ಪವೊಂದಕ್ಕೆ ಮಠದಿಂದ ಗೌರವಪೂಜೆ ನಡೆಯುತ್ತಿರುವುದು ಕಂಡುಬರುತ್ತದೆ.

ಈ ಮಠಕ್ಕೆ ಇಮ್ಮಡಿ ಸೀತಾರಾಮಪ್ಪನಾಯಕ, ಹನುಮಪ್ಪನಾಯಕ, ಸರ್ಜಾ ಹನುಮಪ್ಪನಾಯಕ, ನಿಚ್ಚಮದುವಣಿಗ ಹನುಮಪ್ಪನಾಯಕ ಇನ್ನೂ ಮುಂತಾದ ನಾಯಕರು ಭೂದಾನ, ಗ್ರಾಮದಾನ, ಹಲವಾರು ಸೀಮೆಗಳನ್ನು ತಮ್ಮ ಮಾತಾಪಿತೃಗಳಿಗೆ ಅಕ್ಷಯ ಪುಣ್ಯ ಲೋಕ ಪ್ರಾಪ್ತಿಯಾಗಲೆಂದು ಮಠದ ವೆಚ್ಚಕ್ಕೆ ದಾನ ಕೊಟ್ಟಿದ್ದರೆಂದು ದಾನಶಾಸನ, ತಾಮ್ರಶಾಸನ, ದಾನಪತ್ರ, ಹಕ್ಕಿನ ಪತ್ರಗಳನ್ನು ಹಾಕಿಸಿರುವುದು ಕಂಡುಬರುತ್ತದೆ.

ಮಠಕ್ಕೆ ಸಂಬಂಧಿಸಿದಂತೆ ಹರಿಕೇರಿ ಹೋಬಳಿಯ ೫ ಗ್ರಾಮಗಳು, ಯಡತೊರೆ ಸೀಮೆಯ ೫ ಗ್ರಾಮಗಳು, ದಂದೂರು ಗ್ರಾಮ, ಅಯನೂರು ಸೀಮೆಯ ಮಳಲಗೊಪ್ಪ ಗ್ರಾಮ, ಹಾರನಹಳ್ಳಿ ಸೀಮೆಯ ಹಂಗರಹಾಳ, ಲಿಂಗಾಪುರ, ದೇವಲಾಪುರ, ಗಾಜನೂರು ಸೀಮೆಯ ೫ ಗ್ರಾಮಗಳು, ಉತ್ಸವಕ್ಕಾಗಿ ೫೦ ವರಹ, ಚೆನ್ನಾಂಬಪುರ ಅಗ್ರಹಾರ, ತರೀಕೆರೆಯ ದೊಡ್ಡಕೆರೆ ಹಿಂದೆಯ ತೋಟದ ಭಾಗವನ್ನು ಮುಂತಾದವುಗಳು ದಾನದತ್ತಿ ನೀಡಿರುವುದು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಈ ರೀತಿ ಸಂತೆಬೆನ್ನೂರು ನಾಯಕರು ಮಠಕ್ಕೆ ನೀಡಿದ ದಾಖಲೆಗಳಲ್ಲಿ ೧೫ ಸನ್ನದುಗಳು, ೮ ದಾನಶಾಸನಗಳಿವೆ. ಈ ಎಲ್ಲಾ ದಾನಶಾಸನಗಳ ಮೇಲೆ ಶ್ರೀಪುತ್ರ ಸರ್ಜಾಹನುಮಪ್ಪನಾಯಕ ಎಂಬ ಮುದ್ರೆ ಹಾಗೂ ಕೆಳಗೆ ಶ್ರೀರಾಮ ಎಂದು ನಾಗರೀ ಲಿಪಿಯಲ್ಲಿ ಉಲ್ಲೇಖವಾಗಿವೆ.

ಇವುಗಳಲ್ಲಿ ೨ನೇ ಪೀಠಾಧಿಪತಿಗಳಾಗಿದ್ದ ಶ್ರೀ ವಿದ್ಯಾರಣ್ಯ ಭಾರತಿ ಸ್ವಾಮಿಗಳ ಮೊದಲನೇ ಶಾಸನ, ೫ನೇ ಪೀಠಾಧಿಪತಿಗಳಾಗಿದ್ದ ಅಭಿನವ ವಿದ್ಯಾರಣ್ಯ ಭಾರತಿ ಸ್ವಾಮಿಗಳವರಿಗೆ ೨ ರಿಂದ ೭ರವರೆಗಿನ ೬ ಶಾಸನಗಳನ್ನು, ೬ನೇ ಪೀಠಾಧಿಪತಿ ೩ನೇ ನರಸಿಂಹ ಭಾರತಿ ಸ್ವಾಮಿಗಳಿಗೆ ೮ನೇ ಶಾಸನ, ೭ನೇ ಪೀಠಾಧಿಪತಿ ದ್ವಿತೀಯ ಶಂಕರ ಭಾರತೀ ಮಹಾಸ್ವಾಮಿಗಳಿಗೆ ೧೦ ರಿಂದ ೧೪ನೇ ಶಾಸನಗಳನ್ನು ಬರೆದುಕೊಟ್ಟಿರುವುದು ಕಂಡುಬರುತ್ತದೆ.[೧೨] ಇವುಗಳಲ್ಲಿ ೧ನೇ ಶಾಸನ ಸಂತೆಬೆನ್ನೂರು ನಾಯಕರ ಮೊದಲನೇ ಹನುಮಪ್ಪನಾಯಕ, ೨ರಿಂದ ೭ನೇ ಶಾಸನ ಸರ್ಜಾಹನುಮಪ್ಪನಾಯಕ, ೫ರಿಂದ ೧೦ನೇ ಶಾಸನ ೨ನೇ ಹನುಮಪ್ಪನಾಯಕ, ೧೧ರಿಂದ ೧೩ನೇ ಶಾಸನ ಸೀತಾರಾಮಪ್ಪನಾಯಕ, ೧೪ನೇ ಶಾಸನ ೩ನೇ ಹನುಮಪ್ಪನಾಯಕ,

೧೫೫೦ನೇ ಶಾಸನ ಸರ್ಜಾ ರಂಗಪ್ಪನಾಯಕ ಕೂಡ್ಲಿ ಶೃಂಗೇರಿ ಮಠಕ್ಕೆ ಬರೆದುಕೊಟ್ಟಿದ್ದಾರೆ.[೧೩] ಈ ಮೇಲಿನ ಅಂಶಗಳಿಂದ ತಿಳಿದುಬರುವುದೇನೆಂದರೆ ಕೂಡಲಿ–ಮಠಕ್ಕೆ ಹರಕೇರಿ ಹೋಬಳಿಗೆ ಸೇರಿದ ಪಂಚಗ್ರಾಮಗಳನ್ನು, ಶೆಟ್ಟಿಹಳ್ಳಿ, ಕೊಡುಮಗ್ಗೆ, ಮಳಲಗೊಪ್ಪ, ದಂದೂರು, ಜಾವಳ್ಳಿ, ಹಂಗರಹಳ್ಳ, ದೇಮಲಾಪುರ ಮತ್ತು ತರಿಕೇರಿಗೆ ಸೇರಿದ ಜಮೀನುಗಳನ್ನು ದತ್ತಿ ಕೊಟ್ಟದ್ದುದು ತಿಳಿದುಬರುತ್ತದೆ.

ಅವುಗಳಲ್ಲದೆ ಸಿದ್ಧಲಿಂಗಮಠ, ಮಹಂತಮಠ, ತರೀಕೆರೆಯ ಕುಂಬಾರ ಗುಡಿಮಠ ಮುಂತಾದ ಮಠಗಳನ್ನು ಕಟ್ಟಿಸಿ ಅವುಗಳಿಗೆ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಈ ಎಲ್ಲಾ ಮಠಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿರುತ್ತಾರೆ. ಈ ಮಠಗಳು ಪಾಳೆಯಗಾರರ ಆಡಳಿತಾವಧಿಯಲ್ಲಿ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಸಾಕಷ್ಟು ಪ್ರಭಾವ ಬೀರಿದ್ದವು. ಪ್ರಮುಖ ಕ್ಷೇತ್ರದಲ್ಲಿ ಮಠಗಳು ತಮ್ಮ ಪ್ರಭಾವವನ್ನು ಬೀರುತ್ತಾ ನಾಯಕರಿಂದ ಅನೇಕ ದಾನದತ್ತಿಗಳನ್ನು ಪಡೆದುಕೊಂಡು ಸಮೃದ್ಧಿಯಿಂದ ಕೂಡಿದ್ದವು.

**ವೀರಗಲ್ಲು ಮತ್ತು ಮಹಾಸತಿಗಲ್ಲುಗಳು**

ವೀರಗಲ್ಲುಗಳು ಕನ್ನಡನಾಡಿನ ಶಾಸನಗಳ ಒಂದು ವೈಶಿಷ್ಟ್ಯ. ವೀರಗಲ್ಲುಗಳನ್ನು ಸ್ಮಾರಕ ಶಾಸನಗಳ ಪಟ್ಟಿಯಲ್ಲಿ ಸೇರಿಸಲಾಗಿದೆ. ಇಂತಹ ವೀರಗಲ್ಲುಗಳು ವಿಶಿಷ್ಟ ರೂಪದಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದು. ಕಲ್ಲಿನ ಮೇಲೆ ಶಿಲ್ಪವು ಪರಾಕ್ರಮದಂತೆ ತೋರುತ್ತದೆ.[೧೫] ಮೋಕ್ಷ ಸಾಧನೆಯ ಹಾದಿಯಲ್ಲಿ ಯುದ್ಧಮಾರ್ಗವು ಒಂದೆಂಬುದನ್ನು ವೀರಗಲ್ಲುಗಳು ತೋರ್ಪಡಿಸುತ್ತವೆ. ವೀರನಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ ಎಂಬ ಭಾವನೆ ಜನರಲ್ಲಿ ಬೇರೂರಿದ್ದರ ಪರಿಣಾಮ ಇಂತಹ ವೀರಗಲ್ಲುಗಳ ರಚನೆಯಾಗಿವೆ. ವೀರಗಲ್ಲುಗಳೆಂದರೆ ಜನರ ಹಿತಕ್ಕಾಗಿ, ಸ್ವಾಮಿನಿಷ್ಠೆಯಿಂದಾಗಿ ಯುದ್ಧ ಮಾಡಿ ಹೋರಾಡಿ ಮರಣವನ್ನಪ್ಪಿದ ಯೋಧರ ನೆನಪಿಗಾಗಿ ಈ ಸ್ಮಾರಕಗಳನ್ನು ರಚಿಸುತ್ತಿದ್ದರು. ಇಂತಹ ಸ್ಮಾರಕ ಶಿಲ್ಪಗಳನ್ನು ವೀರಗಲ್ಲುಗಳು ಎಂದು ಕರೆಯುತ್ತಿದ್ದರು.[೧೬] ಇವು ಯೋಧರ ತ್ಯಾಗ, ಹೋರಾಟ ಮತ್ತು ಶೌರ್ಯ ಮುಂತಾದವುಗಳ ಪ್ರತೀಕವಾಗಿವೆ.

ದಾವಣಗೆರೆ ಜಿಲ್ಲೆಯ ಸಂತೆಬೆನ್ನೂರು ನಾಯಕರ ಕಾಲದಲ್ಲಿ ಸಾಂಸ್ಕೃತಿಕ ಮತ್ತು ರಾಜಕೀಯ ಚರಿತ್ರೆಯಲ್ಲಿ ವೀರಗಲ್ಲುಗಳು ಮತ್ತು ಮಹಾಸತಿಗಲ್ಲುಗಳು ಪ್ರಮುಖ ಪಾತ್ರ ವಹಿಸುತ್ತವೆ. ಇವರ ಕಾಲದಲ್ಲಿನ ಇಂತಹ ಹಲವು ಸ್ಮಾರಕ ಶಿಲ್ಪಗಳು ಇವರ ಆಡಳಿತ ಪ್ರದೇಶದ ವ್ಯಾಪ್ತಿಯಲ್ಲಿ ಕಂಡುಬರುತ್ತವೆ. ರಣರಂಗದಲ್ಲಿ ಯೋಧರು ಮಡಿದ ನೆನಪಿಗಾಗಿ ರಾಜರು ಅವರ ಶಿಲ್ಪವನ್ನು ರಚಿಸಿ ನೆಲದಲ್ಲಿ ನೆಡುವ ಪದ್ಧತಿ ಇತ್ತು. ಜೊತೆಗೆ ರಾಜರ, ಯೋಧರ ಪತ್ನಿಯರು ಸಹಗಮನ ಮಾಡಿಕೊಂಡು ದೇಹತ್ಯಾಗ ಮಾಡಿದರೆ ಮಾಸ್ತಿಕಲ್ಲು

ನೆಡುವ ಪದ್ಧತಿ ಇವರಲ್ಲಿ ಇತ್ತು. ಈ ಪದ್ಧತಿಯು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿತ್ತು. ಕದಂಬ, ಚಾಲುಕ್ಯ, ಹೊಯ್ಸಳರು, ವಿಜಯನಗರ ಅರಸರ ಕಾಲದಿಂದಲೂ ಈ ಪದ್ಧತಿ ಇತ್ತು. ಕಾಲ ಕಳೆದಂತೆ ಪಾಳೆಯಗಾರರ ಕಾಲದಲ್ಲಿ ಈ ಪದ್ಧತಿ ಕ್ಷೀಣಿಸಿತು. ಸಂತೆಬೆನ್ನೂರು ನಾಯಕರ ಆಡಳಿತ ಪ್ರದೇಶದಲ್ಲಿ ಹಲವು ವೀರಗಲ್ಲುಗಳು ಮಹಾಸತಿಕಲ್ಲುಗಳು ದೊರೆತಿವೆಯಾದರೂ ಅವು ನಾಯಕರ ಕಾಲದ್ದೇ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ.

ದಾವಣಗೆರೆ ಸಮೀಪ ಲೋಕಿಕೆರೆಯಲ್ಲಿ ಒಂದು ವೀರಗಲ್ಲನ್ನು ಕಾಣಬಹುದು. ಇದನ್ನು ಅಲ್ಲಿನ ಸ್ಥಳೀಯರು ಕೆಂಗಣ್ಣನಾಯಕನ ಶಿಲ್ಪ ಎಂದು ಹೇಳುತ್ತಾರೆ. ಈ ವೀರಗಲ್ಲಿನ ಮೇಲೆ ಕೆಂಗಣ್ಣನಾಯಕ ಕುದುರೆ ಮೇಲೆ ಖಡ್ಗ ಹಿಡಿದು ಯುದ್ಧ ಮಾಡುವ ಚಿತ್ರವಿದೆ. ಮೇಲ್ಭಾಗದಲ್ಲಿ ಶಿವಲಿಂಗ, ಬಸವಣ್ಣ ಮತ್ತು ತಪಸ್ಸು ಮಾಡುವ ಚಿತ್ರವನ್ನು ಕಾಣಬಹುದು. ಅದೇ ರೀತಿ ಲಕ್ಷ್ಮಿಸಾಗರದಲ್ಲಿ ಒಂದು ವೀರಗಲ್ಲು ಇದೆ. ಇದನ್ನು ಸೀತಾರಾಮಪ್ಪನಾಯಕನದೆಂದು ಅಲ್ಲಿನ ಸ್ಥಳೀಯರು ಮಾಹಿತಿ ಕೊಡುತ್ತಾರೆ. ಹಾಗೆಯೇ ಸಂತೆಬೆನ್ನೂರು ಕೆರೆಯ ಸಮೀಪ ಈ ನಾಯಕರ ಕೆಲವು ಉಬ್ಬುಶಿಲ್ಪಗಳಿದ್ದು ಅವು ಈ ನಾಯಕರಿದ್ದಾಗಿರುವ ಸಂಭವವಿದೆ.

ಬಸವಾಪಟ್ಟಣ ಪ್ರದೇಶದ ದಾಗಿನಕಟ್ಟೆಯಲ್ಲಿ ಈ ನಾಯಕರ ಕಾಲದ ಮಾಸ್ತಿಗಲ್ಲುಗಳನ್ನು ನೋಡಬಹುದು. ಈ ಮಹಾಸತಿಗಲ್ಲು ೩ ೧/೨ ಅಡಿ ಎತ್ತರ ೨ ಅಡಿ ಅಗಲವನ್ನು ಹೊಂದಿದ್ದು ಕಪ್ಪುಶಿಲೆಯ ಆಯಾತಕಾರದಲ್ಲಿದೆ. ಇಲ್ಲಿ ಎರಡು ಮಹಾಸತಿಗಲ್ಲುಗಳಿದ್ದು ಇವರೆಡರ ನಡುವೆ ಒಂದು ವೀರಗಲ್ಲು ಇದೆ. ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು ಮೇಲೆ ಎತ್ತಿರುವ ಕೈ, ಕೈಗಳಲ್ಲಿ ಬಳೆ, ಕೊರಳಲ್ಲಿ ವಿವಿಧ ರೀತಿಯ ಹಾರಗಳಿದ್ದು, ವಿಶೇಷ ರೀತಿಯಲ್ಲಿ ಧರಿಸಿದ ಸೀರೆ ಇದೆ. ಕಿವಿಯಲ್ಲಿ ಕುಂಡಲಗಳು, ಅಲಂಕೃತವಾಗಿರುವ ಕೇಶರಾಶಿಯು ಅದರ ಭುಜದ ಮೇಲಿದೆ. ತಲೆಯಲ್ಲಿ ಅರಳಿದ ಪುಷ್ಪ ಧರಿಸಿದ್ದಾಳೆ. ಬಲಗಾಲಿನ ಬಳಿ ಈಕೆಯ ಸೇವಕಿಯೊಬ್ಬಳು ಅಂಜಲಿ ಮುದ್ರೆಯಲ್ಲಿ ನಿಂತಿರುವುದು ಕಂಡುಬರುತ್ತದೆ. ತನ್ನ ಒಡತಿಯ ಜೊತೆಗೆ ಈಕೆಯೂ ಸಹ ಪ್ರಾಣಾರ್ಪಣೆ ಮಾಡಿಕೊಂಡಿರುವ ರೀತಿಯಲ್ಲಿ ಇಲ್ಲಿ ಕಂಡುಬರುತ್ತದೆ.

ತ್ಯಾವಣಿಗೆ ಗ್ರಾಮದ ಆಂಜನೇಯ ದೇವಾಲಯದ ಹಿಂಭಾಗದಲ್ಲಿ ಒಂದು ವೀರಗಲ್ಲಿದೆ. ಇದು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಈ ವೀರಗಲ್ಲು ಮೂರು ಪಟ್ಟಿಕೆಗಳನ್ನು ಒಳಗೊಂಡಿದ್ದು ಸುಮಾರು ೫ ಅಡಿ ಉದ್ದ ಹಾಗೂ ೩ ಅಡಿ ಅಗಲವಿದೆ. ಕೆಳಗಿನ ಪಟ್ಟಿಕೆಯಲ್ಲಿ ಒಬ್ಬ ವೀರ ಅಥವಾ ಸೈನಿಕ ಮತ್ತೊಬ್ಬ ಸೈನಿಕನೊಂದಿಗೆ ಯುದ್ಧ ಮಾಡುವ ಚಿತ್ರವಿದೆ. ನಂತರದ ಪಟ್ಟಿಕೆಯಲ್ಲಿ ವೀರನು ಕೈಮುಗಿದು ನಿಂತಿರುವ ಚಿತ್ರವನ್ನು ಕಾಣಬಹುದು. ಅದರ ಪಕ್ಕದಲ್ಲಿ ಎರಡು ಚಿತ್ರಗಳು ಕೈ ಮುಗಿದು ನಿಂತಿರುವಂತೆ ಕಂಡುಬರುತ್ತಿದ್ದು ಇವರಿಗೆ ಅಪ್ಸರೆಯರು ಚಾಮರವನ್ನು ಬೀಸುತ್ತಿರುವ ಅಂಶ ಕಂಡುಬರುತ್ತದೆ.

ಹಿರೇಕೋಗಲೂರು ಈಶ್ವರ ದೇವಾಲಯದ ಪ್ರಾಂಗಣದಲ್ಲಿ ಒಂದು ವೀರಗಲ್ಲು ಕಂಡುಬರುತ್ತಿದ್ದು ಇದು ಕಪ್ಪುಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಈ ವೀರಗಲ್ಲು ೪ ಅಡಿ ಎತ್ತರ ಹಾಗೂ ೩ ಅಡಿ ಅಗಲವಿದೆ. ಇಲ್ಲಿ ವೀರಗಲ್ಲನ್ನು ಸಹ ದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿದಂತೆ ಪಾಣಿಪೀಠದಲ್ಲಿ ನಿಲ್ಲಿಸಲಾಗಿದೆ. ಈ ವೀರಗಲ್ಲಿನಲ್ಲಿ ಹಲವಾರು ಸೈನಿಕರು ಅಥವಾ ಯೋಧರು ಕುದುರೆಗಳ ಮೇಲೆ ಯುದ್ಧ ಮಾಡುತ್ತಿರುವ ದೃಶ್ಯ ಕಂಡುಬರುತ್ತದೆ. ಇದೇ ಗ್ರಾಮದ ಕೆರೆಯ ಪಕ್ಕದಲ್ಲಿ ೪ ಅಡಿ ಎತ್ತರ ೨ ೧/೨ ಅಡಿ ಅಗಲ ಇರುವ ಮಹಾಸತಿಕಲ್ಲಿದೆ. ಇದು ಬಲಗೈಯನ್ನು ಮೇಲಕ್ಕೆ ಎತ್ತಿ ಅಂಗೈಯನ್ನು ಮುಂದೆ ಮಾಡಿದೆ. ಸರಳವಾದ ಆಭರಣಗಳನ್ನು ಮತ್ತು ಕೈಗಳಿಗೆ ಬಳೆಗಳನ್ನು ಧರಿಸಿದ್ದು, ಸುಂದರವಾದ ಉಡುಗೆ ತೊಡುಗೆಗಳನ್ನು ಹಾಕಿಕೊಂಡು ನಿಂತಿರುವ ದೃಶ್ಯವನ್ನು ಕಾಣಬಹುದು. ಈ ಮಹಾಸತಿಕಲ್ಲು ತನ್ನ ಗಂಡನ ಮರಣದಿಂದಾಗಿ ಅವನ ಜೊತೆಯಲ್ಲಿಯೇ ಸ್ವ ಇಚ್ಛೆಯಿಂದ ಮರಣ ಹೊಂದಿರುವ ಚಿತ್ರಣವನ್ನು ತೋರಿಸುತ್ತದೆ.

ಸಂತೆಬೆನ್ನೂರು ಗ್ರಾಮದಲ್ಲಿರುವ ಹಾಳಾಗಿರುವ ಕೋಟೆ ಪ್ರದೇಶದಲ್ಲಿ ಮಸ್ತುವ್ವನ ಗುಡಿಯಿದೆ. ಇದು ನಾಗತಿಯ ಗುಡಿ ಎಂದು ಸ್ಥಳೀಯರು ತಿಳಿಸುತ್ತಾರೆ. ಜೊತೆಗೆ ಸಂತೆಬೆನ್ನೂರು ಸಮೀಪದ ಉಪನಾಯಕನಹಳ್ಳಿಯಲ್ಲಿ ೭ರಿಂದ ೯ ನಾಯಕರ ಕಾಲದ ಮಾಸ್ತಿಕಲ್ಲುಗಳಿದ್ದು ಇವೂ ಕೂಡ ನಾಯಕರ ಕಾಲದ್ದಾಗಿವೆ ಎಂದು ಹೇಳಬಹುದು.

ಹೀಗೆ ಇವರ ಕಾಲದಲ್ಲಿ ವೀರಗಲ್ಲುಗಳು, ಮಹಾಸತಿಕಲ್ಲುಗಳು, ಶಾಸನಶಿಲ್ಪಗಳು, ಸ್ಮಾರಕ ಶಿಲ್ಪಗಳು ಕಂಡುಬರುತ್ತಿದ್ದು, ಅವು ವಿವಿಧ ರೀತಿಯ ಚಿತ್ರಣವನ್ನು ಒದಗಿಸುತ್ತವೆ. ಇವುಗಳ ಮೂಲಕ ಈ ನಾಯಕರ ರಾಜಕೀಯ, ಸಾಮಾಜಿಕ, ಸೈನಿಕ ವ್ಯವಸ್ಥೆ ಮುಂತಾದ ಅಂಶಗಳನ್ನು ತಿಳಿದುಕೊಳ್ಳಬಹುದು. ಈ ಸ್ಮಾರಕಗಳು ಇವರ ಕಾಲದ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಒಂದು ಕೊಡುಗೆ ಎಂದೂ ಹೇಳಬಹುದು.

**ದೇವಾಲಯಗಳು**

**ಕಲ್ಲೇಶ್ವರ ದೇವಾಲಯ, ಕಲ್ಲೇದೇವರಪುರ**

ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಈ ದೇವಾಲಯವನ್ನು ಕಾಲಾಂತರದಲ್ಲಿ ವಿಜಯನಗರ ಅರಸರು ಹಾಗೂ ಪಾಳೆಯಗಾರರು ಜೀರ್ಣೋದ್ಧಾರ ಮಾಡಿಸಿದ್ದಾರೆ. ಈ ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ಈ ದೇವಾಲಯ ಗ್ರಾಮದ ಮಧ್ಯದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾಗಿದೆ. ಕಲ್ಲೇಶ್ವರ ದೇವಾಲಯವು ಗರ್ಭಗುಡಿ, ಅಂತರಾಳ, ನವರಂಗ, ಸುಕನಾಸಿ ಮುಖಮಂಟಪಗಳನ್ನು ಒಳಗೊಂಡಿದೆ. ಗರ್ಭಗುಡಿಯಲ್ಲಿ ಚಿಕ್ಕದಾದ ಕಲ್ಲೇಶ್ವರ ಲಿಂಗವಿದೆ. ಈ ಲಿಂಗವನ್ನು ಇತ್ತೀಚೆಗೆ

ಬೆಳ್ಳಿಯ ಮುಖವಾಡದಿಂದ ಆಲಂಕರಿಸಲಾಗಿದೆ. ದೇವರ ತಲೆಯ ಮೇಲೆ ಐದು ಹೆಡೆಯ ನಾಗರ, ಕುಸುರಿ ಕೆಲಸದ ಸುಂದರ ಛತ್ರಿ ಇರುವುದನ್ನು ಕಾಣಬಹುದು. ಅಂತರಾಳವು ಆಯತಾಕಾರವಾಗಿದ್ದು, ಇಲ್ಲಿನ ಬಾಗಿಲುಗಳು ಸರಳವಾಗಿವೆ. ನವರಂಗದ ವಿವಿಧ ಭಾಗಗಳಲ್ಲಿ ವಿಷ್ಣು, ನಂದಿ, ಗಣಪತಿ, ವೀರಭದ್ರ ಮೊದಲಾದ ಮೂರ್ತಿಗಳಿವೆ. ಮಧ್ಯದಲ್ಲಿ ನಾಲ್ಕು ಬೃಹತ್ ಕಂಬಗಳು ಚೌಕ ವೃತ್ತಾಕಾರವಾಗಿವೆ. ಸುಖನಾಸಿಯಲ್ಲಿ ಗಣೇಶ, ನಾಗರಕಲ್ಲು, ಚಿಕ್ಕ ಚಿಕ್ಕ ದೇವರ ವಿಗ್ರಹಗಳು ಕಂಡುಬರುತ್ತವೆ. ಮುಖಮಂಟಪದಲ್ಲಿ ನಾಲ್ಕು ಗ್ರಾನೈಟ್ ಶಿಲೆಯ ಕಂಬಗಳಿವೆ. ಇದರಲ್ಲಿ ಗೌರಮ್ಮ, ವೀರಭದ್ರನ ಸಣ್ಣ ಸಣ್ಣ ಗುಡಿಗಳಿರುವುದು ಕಂಡುಬರುತ್ತವೆ. ಗುಡಿಗಳನ್ನು ನಂತರದ ಸಾಮಂತರು, ಪಾಳೆಯಗಾರರು ನಿರ್ಮಿಸಿದ್ದಾರೆ ಎಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ.

ದೇವಾಲಯದ ಹಿಂಭಾಗದಲ್ಲಿ ದೇವರ ದೊಡ್ಡದಾದ ಮಜ್ಜನ ಮಂಟಪವಿದೆ. ಈ ಮಂಟಪದ ಬಳಿ ಗಣೇಶ ವಿಗ್ರಹಗಳು ಹಾಗೂ ಎರಡು ಜೊತೆ ಪಾದಗಳು ಮತ್ತು ಅನೇಕ ಸುಂದರ ಕೆತ್ತನೆಗಳು ಕಂಡುಬರುತ್ತವೆ. ಈ ದೇವಾಲಯದ ಆವರಣದಲ್ಲಿ ಶಿಲಾಶಾಸನಗಳಿದ್ದು, ಕೆಲವು ಸುರಕ್ಷಿತವಾಗಿವೆ. ಈ ಪುರಾತನ ದೇವಾಲಯದ ಗೋಪುರವನ್ನು ಸಂಪೂರ್ಣವಾಗಿ ಆಧುನಿಕ ಸಾಮಾಗ್ರಿಗಳಿಂದ ಜೀರ್ಣೋದ್ಧಾರ ಮಾಡಿದ್ದಾರೆ. ಬ್ರಹ್ಮ, ವಿಷ್ಣು, ಶಿವ ಮೂರು ಲಿಂಗಗಳನ್ನು ಕಾಣಬಹುದು. ಈ ಮೂರು ಲಿಂಗಗಳು ಇರುವುದರಿಂದ ತ್ರಿಕೂಟ ಲಿಂಗ ದೇವಾಲಯವೆಂದು ಕರೆಯಲ್ಪಟ್ಟಿದೆ.

ಈ ದೇವಾಲಯದ ಮೇಲೆ ನಾಲ್ಕು ಮೂಲೆಯಲ್ಲಿ ಬಸವನ ಮೂರ್ತಿಗಳಿವೆ. ಈ ಬಸವನ ಮೂರ್ತಿಗಳು ಎರಡು ದೇಹ ಒಂದು ಮುಖವನ್ನು ಹೊಂದಿವೆ. ದೇವಾಲಯದ ಪ್ರಾಂಗಣದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ದೇವಸ್ಥಾನವಿದೆ. ಇದು ಚೋಳರ ಕಾಲದ್ದು ಎಂದು ಸ್ಥಳೀಯರು ತಿಳಿಸುತ್ತಾರೆ. ಹೊಯ್ಸಳರ ಕಾಲದ ಒಂದು ಬೃಹತ್ ಶಿಲಾಶಾಸನವಿದೆ. ಮೂರು ವೀರಗಲ್ಲುಗಳು ಈ ದೇವಾಲಯದ ಪ್ರಾಂಗಣದಲ್ಲಿ ಸುರಕ್ಷಿತವಾಗಿವೆ. ದೇವಾಲಯಕ್ಕೆ ಹೊಂದಿಕೊಂಡಂತೆ ಗೌರಮ್ಮನ ದೇವಸ್ಥಾನವಿದ್ದು, ಇದರ ದ್ವಾರದಲ್ಲಿ ಶೈವ ದ್ವಾರಪಾಲಕರಿರುವರು. ಹಾಗೂ ಅವರ ಎಡ ಬಲದಲ್ಲಿ ಚಾಮರ ಹಿಡಿದ ಅಂಜಲಿ ಮುದ್ರೆ ಇರುವ ಸ್ತ್ರೀಯರ ಶಿಲ್ಪಗಳನ್ನು ಕೆತ್ತಲಾಗಿದೆ. ಲಲಾಟಬಿಂಬದಲ್ಲಿ ಪೂರ್ಣಕುಂಭದ ಅಲಂಕಾರವಿದೆ. ಈ ದೇವಾಲಯದ ಮುಂಭಾಗದಲ್ಲಿ ನಂದಿ ಹಾಗೂ ಉಯ್ಯಾಲೆ ಕಂಬಗಳಿವೆ. ಪ್ರತಿ ವರ್ಷ ಮಾರ್ಚ್ ತಿಂಗಳಲ್ಲಿ ಕಲ್ಲೇದೇವರಪುರ ಕಲ್ಲೇಶ್ವರ ಜಾತ್ರೆ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತದೆ.

**ರಂಗನಾಥಸ್ವಾಮಿ ದೇವಾಲಯ, ಕೋಣಚಗಲ್**

ಈ ದೇವಾಲಯವು ಬೆಟ್ಟದ ಮೇಲಿದ್ದು, ಪೂರ್ವಾಭಿಮುಖವಾಗಿ ನಿರ್ಮಾಣವಾಗಿದೆ. ಸಂಪೂರ್ಣವಾಗಿ ಗ್ರಾನೈಟ್ ಶಿಲೆಯನ್ನು ಬಳಸಿ ವಿಜಯನಗರ ಅರಸರು ನಿರ್ಮಿಸಿದ್ದಾರೆ.

ಕಾಲಾಂತರದಲ್ಲಿ ಚಿತ್ರದುರ್ಗದ ಪಾಳೆಯಗಾರರು ಸಾಕಷ್ಟು ಜೀರ್ಣೋದ್ಧಾರ ಮಾಡಿದ ಅಂಶಗಳು ಕಂಡುಬರುತ್ತವೆ. ಈ ದೇವಾಲಯವು ಮುಖಮಂಟಪ, ನವರಂಗ, ಅಂತರಾಳ, ಗರ್ಭಗುಡಿಯನ್ನು ಹೊಂದಿದ್ದು ಗರ್ಭಗುಡಿಯಲ್ಲಿ ರಂಗನಾಥ ಸ್ವಾಮಿಯ ವಿಗ್ರಹವಿದೆ.

ಈ ದೇವಾಲಯವು ೪ನೇ ಮದಕರಿನಾಯಕನ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಅಲ್ಲಿನ ಅರ್ಚಕ ನಾಗರಾಜ ಅವರು ತಿಳಿಸುತ್ತಾರೆ. ಅಂತರಾಳವು ಸರಳವಾಗಿದ್ದು ದ್ವಾರದಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ನವರಂಗದಲ್ಲಿ ನಾಲ್ಕು ಬೃಹತ್ ಕಂಬಗಳಿದ್ದು ಅವು ಅನೇಕ ಉಬ್ಬುಶಿಲ್ಪಗಳಿಂದ ಅಲಂಕೃತವಾಗಿವೆ. ಆಂಜನೇಯ, ಯಾಳಿ, ಸ್ತ್ರೀ ಶಿಲ್ಪಗಳು, ಗರುಡ, ಮತ್ಸ್ಯ, ವಿಷ್ಣು, ಯತಿ, ಲಿಂಗ, ನಂದಿ, ಶಂಖ, ಲಕ್ಷ್ಮೀನರಸಿಂಹ ಮೊದಲಾದ ಅನೇಕ ಶಿಲ್ಪಗಳು ಕಂಡುಬರುತ್ತವೆ. ಈ ನವರಂಗಕ್ಕೆ ಪ್ರವೇಶಿಸಲು ಉತ್ತರ ಮತ್ತು ಪೂರ್ವದಲ್ಲಿ ಪ್ರವೇಶ ದ್ವಾರಗಳಿವೆ. ಈ ದ್ವಾರವು ಸರಳವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವನ್ನು ಕೆತ್ತಲಾಗಿದೆ. ಮುಖಮಂಟಪವು ಎಂಟು ಬೃಹತ್ ಗಾತ್ರದ ಕಂಬಗಳಿಂದ ಕೂಡಿದೆ. ಈ ಕಂಬಗಳ ಮೇಲೆ ಹಣ್ಣು ತಿನ್ನುತ್ತಿರುವ ಕೋತಿ, ಯಾಳಿ, ಬಿಲ್ಲು ಹಿಡಿದ ಸ್ತ್ರೀ, ಲಿಂಗಕ್ಕೆ ಮೂರು ತಲೆಯ ಹಸು ಹಾಲುಣಿಸುತ್ತಿರುವುದು, ಆಂಜನೇಯ, ಹಾವನ್ನು ಹಿಡಿದಿರುವ ಪುರುಷ ಮುಂತಾದ ಅನೇಕ ಚಿತ್ರಗಳು ಕಂಡುಬರುತ್ತವೆ. ಈ ಮಂಟಪದಲ್ಲಿ ಜೋಡಿ ಮೀನುಗಳು, ಆನೆಗಳು, ಮಿಥುನ ಶಿಲ್ಪಗಳು ಮುಂತಾದ ಉಬ್ಬು ಶಿಲ್ಪಗಳನ್ನು ಕಾಣಬಹುದು. ಈ ದೇವಾಲಯದ ಹೊರಭಾಗದ ಅಧಿಷ್ಠಾನವು ಯಾವುದೇ ಅಲಂಕಾರವಿಲ್ಲದೆ ಸರಳವಾಗಿದೆ. ಭಿತ್ತಿಯಲ್ಲಿ ಯಾವುದೇ ಶಿಲ್ಪಗಳಿರುವುದಿಲ್ಲ. ಶಿಖರವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಮುಖಮಂಟಪದ ಎದುರಿನಲ್ಲಿ ಗರುಡನ ಗುಡಿ ಇದ್ದು, ಅದರಲ್ಲಿ ಗರುಡನ ಮೂರ್ತಿ ಇದೆ ಹಾಗೂ ಇಲ್ಲಿಯೇ ದೀಪಸ್ತಂಭವಿದೆ.

ಬೆಟ್ಟದ ತಪ್ಪಲಿನಲ್ಲಿ ಅನೇಕ ಸುಂದರವಾದ ಮಂಟಪಗಳು, ಹೊಂಡಗಳು ಕಂಡುಬರುತ್ತಿದ್ದು ಇವು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿರುತ್ತವೆ. ಹಾಗೆಯೇ ಇಲ್ಲಿ ಭೂತಪ್ಪನ ಗುಡಿ, ಕಂಪಳ ಮಾರಜ್ಜಿ ಗುಡಿ, ಓಕಳಿಗುಂಡಿ, ಸಣ್ಣಹೊಂಡ ಮುಂತಾದ ಸ್ಮಾರಕಗಳು ಕಂಡುಬರುತ್ತದೆ. ಬೆಟ್ಟದ ತಪ್ಪಲಿನಲ್ಲಿ ಸಣ್ಣಹೊಂಡಕ್ಕೆ ಹತ್ತಿರದಲ್ಲೇ ಒಂದು ದೊಡ್ಡ ಹೊಂಡವಿದೆ. ಈ ಹೊಂಡದಲ್ಲಿ ತಳಮಟ್ಟದಿಂದ ೩೨ ಮೆಟ್ಟಿಲುಗಳಿವೆ. ಹೊಂಡದ ಕಲ್ಲುಗಳ ಮೇಲೆ ಅನೇಕ ಚಿತ್ರಗಳನ್ನು ಕೆತ್ತಲಾಗಿದೆ. ಮೇಲ್ಭಾಗದ ಮೂಲೆಯಲ್ಲಿ ನಂದಿ ಹಾಗೂ ನಾಲ್ಕು ಕೈಗಳ ಗಣೇಶನ ವಿಗ್ರಹವಿದೆ. ಎದುರಿಗೆ ೯ ದಳಗಳ ಪದ್ಮ, ಅಕ್ಕಪಕ್ಕದಲ್ಲಿ ಎರಡು ಸುಂದರ ಮೂರ್ತಿಗಳಿವೆ. ಹಾಗೆಯೇ ವಿಷ್ಣು ಅವತಾರ, ಶ್ರೀಕೃಷ್ಣ, ಸ್ತ್ರೀಯರು, ಗಂಡಭೇರುಂಡ, ಆಂಜನೇಯ ಧ್ಯಾನಮೂರ್ತಿ, ಕಾಳಿಂಗ ಮರ್ದನ ಮುಂತಾದ ಮೂರ್ತಿಗಳು ಕಂಡುಬರುತ್ತವೆ. ಅಲ್ಲೆಲ್ಲ ಜೋಡು ಮೀನುಗಳು, ಮಜ್ಜಿಗೆ ಕಡೆಯುತ್ತಿರುವ ಹೆಣ್ಣುಮಗಳು, ಹುಲಿದೇಹ, ಮನುಷ್ಯನ ಚಿತ್ರಗಳು ಕಂಡುಬರುತ್ತದೆ. ಈ ಹೊಂಡವನ್ನು ದಳವಾಯಿ ಮುದ್ದಣ ಕಟ್ಟಿಸಿದ್ದರಿಂದ ಇದನ್ನು ಇಲ್ಲಿನ ಸ್ಥಳೀಯರು ದಳವಾಯಿ ಹೊಂಡವೆಂದು ಕರೆಯುತ್ತಾರೆ.

ಪ್ರತಿ ವರ್ಷ ಯುಗಾದಿ ಹಬ್ಬದ ಸಂದರ್ಭದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಜಾತ್ರೆಯ ಅಂಗವಾಗಿ ಜಂಬೂಸವಾರಿ ಉತ್ಸವ, ಕೋಲುಮೇಳ, ಕತ್ತಿಪವಾಡ, ಹೋಮ, ಹವನ, ಕಳಸ ಸ್ಥಾಪನೆ, ಪಲ್ಲಕ್ಕಿ ಉತ್ಸವ, ಭಜನೆ, ಕೀರ್ತನೆ, ಬ್ರಹ್ಮರಥೋತ್ಸವ ಮುಂತಾದ ಅನೇಕ ಧಾರ್ಮಿಕ ಕಾರ್ಯಗಳು ನಡೆಯುತ್ತವೆ. ಕೊಣಚಗಲ್ ರಂಗನಾಥಸ್ವಾಮಿ ಬೆಟ್ಟದ ತಪ್ಪಲಿನಲ್ಲಿ ಕೊರಟಗೆರೆ ಎಂಬ ಗ್ರಾಮವಿದೆ. ಸಮೀಪದಲ್ಲೇ ಸಂತೆಮುದ್ದಾಪುರ, ಲಂಬಾಣಿ ಹುಟ್ಟಿಗಳು ಕಂಡುಬರುತ್ತವೆ. ಕೊರಟಗೆರೆಯಲ್ಲಿ ಹನುಮಂತದೇವರ ಬಸವಣ್ಣ ಹಾಗೂ ಉಡಿಸಲಮ್ಮನ ಚಿಕ್ಕ ಗುಡಿಗಳು ಕಂಡುಬರುತ್ತವೆ. ಕೊಣಚಗಲ್ ರಂಗನಾಥ ಸ್ವಾಮಿಗೆ ಸ್ಥಳೀಯ ಲಂಬಾಣಿ ಸಮುದಾಯದ ಜನರು ಇಂದಿಗೂ ನಡೆದುಕೊಳ್ಳುತ್ತಾರೆ.

**ಶಿವ ದೇವಾಲಯ, ಕೊಡದಗುಡ್ಡ(ಕೆಳಗೆ)**

ಈ ದೇವಾಲಯುವು ಪಾಳೆಯುಗಾರರ ಕಾಲದಲ್ಲಿ ನಿರ್ಮಾಣಗೊಂಡಿದ್ದು ಪೂರ್ವಾಭಿಮುಖವಾಗಿದೆ. ಚಿಕ್ಕದಾದ ಗರ್ಭಗೃಹವನ್ನು ಹೊಂದಿದ್ದು ಅದರ ಮೇಲೆ ಶಿಖರ ಹೊಂದಿದೆ. ಈ ಶಿಖರವು ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿದೆ. ಗರ್ಭಗೃಹದ ಪೀಠದ ಮೇಲೆ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ದ್ವಾರಬಾಗಿಲಲ್ಲಿ ದ್ವಾರಪಾಲಕರ ಶಿಲ್ಪವನ್ನು ನೋಡಬಹುದು. ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ನಿರ್ಮಿಸಲಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಕಂಬಗಳಲ್ಲಿ ನಾನಾ ರೀತಿಯ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಭಿತ್ತಿಯಲ್ಲಿ ೧೨ ಸಣ್ಣ ಸಣ್ಣ ಕಂಬಗಳಿದ್ದು ೯ ಮುಖಮಂಟಪದಲ್ಲಿ ೨ ಕಂಬಗಳಿವೆ. ಈ ಕಂಬಗಳ ಮೇಲೆ ವಿವಿಧ ರೀತಿಯ ಉಬ್ಬುಶಿಲ್ಪಗಳನ್ನು ಕಾಣಬಹುದು. ಈ ಕಂಬಗಳ ಮೇಲೆ ನಂದಿ, ನಾಗ, ಕೋತಿಯ ಶಿಲ್ಪಗಳು ಯತಿ, ಗರುಡ ಹಾವನ್ನು ಹಿಡಿಯುತ್ತಿರುವ ಶಿಲ್ಪ ಮುಂತಾದವುಗಳನ್ನು ಕಾಣಬಹುದು.

**ರಾಮೇಶ್ವರ ದೇವಾಲಯ, ಬಿಳಿಚೋಡು**

ಈ ದೇವಾಲಯವನ್ನು ಚಿತ್ರದುರ್ಗದ ಪಾಳೆಯಗಾರ ಬಿಚ್ಚುಗತ್ತಿ ಭರಮಣ್ಣನಾಯಕನ ಕಾಲದಲ್ಲಿ ನಿರ್ಮಿಸಲಾಗಿದೆ. ರಾಮೇಶ್ವರ ದೇವರಿಗೆ ಬೆಲಗೂರಿನ ರಾಮಪ್ಪನಾಯಕರು ದಾನಕೊಟ್ಟ ವಿಚಾರವಿದೆ. ಈ ದೇವಾಲಯವು ತ್ರಿಕೂಟಾಚಲವಾಗಿದ್ದು ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪದಿಂದ ಕೂಡಿದೆ. ಸಭಾಮಂಟಪವು ೧೬ ಕಂಬಗಳಿಂದ ಕೂಡಿದೆ. ಈ ದೇವಾಲಯದ ದ್ವಾರವು ದಕ್ಷಿಣಾಭಿಮುಖವಾಗಿದೆ. ದ್ವಾರಬಾಗಿಲು ವಿವಿಧ ರೀತಿಯ ಅಲಂಕಾರದಿಂದ ಕೂಡಿದೆ. ದ್ವಾರಬಂಧದಲ್ಲಿ ವಿವಿಧ ರೀತಿಯ ಭಂಗಿಯ ಶಿಲ್ಪಗಳನ್ನು ಕಾಣಬಹುದು. ಮುಖಮಂಟಪದ ಕಂಬದಲ್ಲಿ ಕುರಿದೆರೆ ಬಿಟ್ಟಿರುವ ಬಗ್ಗೆ ಶಾಸನವಿದೆ. ಈ ದೇವಾಲಯದ ಹೊರಗಡೆ ಅನೇಕ ವೀರಗಲ್ಲುಗಳನ್ನು ಕಾಣಬಹುದು.

**ಚೆನ್ನಕೇಶವ ದೇವಾಲಯ, ಬಿಳಿಚೋಡು**

ಈ ದೇವಾಲಯವು ಊರಿನ ಪಶ್ಚಿಮದಿಕ್ಕಿನಲ್ಲಿದೆ. ಗರ್ಭಗುಡಿಯಲ್ಲಿ ಸಮಭಂಗಿಯಲ್ಲಿ ನಿಂತಿರುವ ಸುಮಾರು ೫ ಅಡಿ ಎತ್ತರ ೨ ಅಡಿ ಅಗಲವಿರುವ ಚೆನ್ನಕೇಶವನ ಮೂರ್ತಿ ಇದೆ. ಗರ್ಭಗುಡಿಯ ಮೇಲೆ ವೃತ್ತಾಕರಾದ ಶಿಖರವು ಕಳಶದಿಂದ ಕೂಡಿದೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಈ ಕಂಬಗಳು ತಳದಲ್ಲಿ ಹಾಗೂ ಮೇಲ್ಭಾಗದಲ್ಲಿ ೫೬ ಚೌಕಾಕಾರದ ಬೋದಿಗೆಯನ್ನು ಹೊಂದಿದೆ. ನವರಂಗದ ಎಡಗಡೆ ನಾಗದೇವತೆಗಳ ಶಿಲ್ಪಗಳು ಬಲಭಾಗದಲ್ಲಿ ಗದ್ದುಗೆಯ ಮೇಲೆ ಕೊಳಲು ನುಡಿಸುತ್ತಿರುವ ವೇಣುಗೋಪಾಲನ ಶಿಲ್ಪವಿದೆ.

**ಆಂಜನೇಯ ದೇವಾಲಯ, ಬಿಳಿಚೋಡು**

ಈ ದೇವಾಲಯವು ೧೫೧೬ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಗರ್ಭಗುಡಿ ಮತ್ತು ಸಭಾಮಂಟಪವನ್ನು ಹೊಂದಿದ್ದು ಗರ್ಭಗುಡಿಯಲ್ಲಿ ಜಗಲಿಯ ಮೇಲೆ ಆಂಜನೇಯ ಶಿಲ್ಪವಿದೆ. ಗರ್ಭಗುಡಿಯ ಮೇಲೆ ವೃತ್ತಾಕಾರದ ಶಿಖರ ಮತ್ತು ಕಳಸವನ್ನು ಹೊಂದಿದೆ. ಗರ್ಭಗುಡಿಯ ಕಲ್ಲಿನ ಬಾಗಿಲನ ಇಕ್ಕೆಲಗಳಲ್ಲಿ ದ್ವಾರಪಾಲಕರ ವಿಗ್ರಹಗಳಿವೆ. ಇದರ ಸಭಾಮಂಟಪದ ಮೇಲ್ಭಾಗವು ಬೋದಿಗೆಗಳನ್ನು ಒಳಗೊಂಡಿದೆ. ಸಭಾಮಂಟಪದ ಕಂಬಗಳಲ್ಲಿ ಆಂಜನೇಯ ಮತ್ತು ಇತರೆ ಶಿಲ್ಪಗಳನ್ನು ಸುಂದರವಾಗಿ ಕೆತ್ತಲಾಗಿದೆ.

**ಮೈಲಾರ ಲಿಂಗೇಶ್ವರ ದೇವಾಲಯ, ಬಿಳಿಚೋಡು**

ಈ ದೇವಾಲಯವು ಊರಿನ ಮಧ್ಯ ಭಾಗದಲ್ಲಿದ್ದು ಪಾಳೆಯಗಾರರ ಕಾಲದಲ್ಲಿ ನಿರ್ಮಾಣ ಗೊಂಡಿದೆ. ಗರ್ಭಗುಡಿ ಮತ್ತು ಸಭಾಮಂಟಪ ಅಂತರಾಳದಿಂದ ಕೂಡಿದ್ದು, ಗರ್ಭಗುಡಿಯಲ್ಲಿ ಮೈಲಾರ ಲಿಂಗೇಶ್ವರನ ಶಿಲ್ಪವಿದೆ. ಈ ಮೂರ್ತಿಯ ಎಡಗಡೆ ಗಂಗಮಾಳಮ್ಮನ ವಿಗ್ರಹವನ್ನು ಕಾಣಬಹುದು. ಅಂತರಾಳದಲ್ಲಿ ಗುಡ್ಡದೇಶ್ವರನ ಶಿಲ್ಪವನ್ನು ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ. ಸಭಾಮಂಟಪವು ೮ ಕಂಬಗಳಿಂದ ನಿರ್ಮಾಣಗೊಂಡಿದ್ದು, ಅರ್ಧಮಂಟಪ ೨ ಕಂಬಗಳೊಂದಿಗೆ ಮೇಲ್ಚಾವಣಿ ಹೊಂದಿದೆ. ಈ ದೇವಾಲಯದ ವಾಸ್ತುರಚನೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಇದು ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿರಬಹುದು.

**ಆಂಜನೇಯ ದೇವಾಲಯ, ಅಸಗೋಡು**

ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿದ್ದ ಈ ದೇವಾಲಯ ದಕ್ಷಿಣಾಭಿಮುಖವಾಗಿದೆ. ಗರ್ಭಗೃಹ, ಸಭಾಮಂಟಪ ಎಂಬ ಎರಡು ಭಾಗಗಳನ್ನು ಒಳಗೊಂಡಿದ್ದು ಗರ್ಭಗುಡಿಯಲ್ಲಿ ಸುಮಾರು ೯ ಅಡಿ ಎತ್ತರವಿರುವ ಆಂಜನೇಯನ ಮೂರ್ತಿಯಿದೆ.

ಸಭಾಮಂಟಪವು ೧೬ ಕಂಬಗಳನ್ನು ಒಳಗೊಂಡಿದೆ. ದೇವಾಲಯದ ಹೆಬ್ಬಾಗಿಲಿನ ಎದುರಿನಲ್ಲಿ ಚಿಕ್ಕ ಜಗಲಿಯ ಮೇಲೆ ಎತ್ತರದ ಸುಂದರ ದೀಪಸ್ತಂಭವಿದೆ. ಈ ದೇವಾಲಯವನ್ನು ಕಣಶಿಲೆಯ ಕಲ್ಲುಗಳಿಂದ ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ದೇವಾಲಯದ ಶಿಖರವು

ಚೌಕಾಕಾರವಾಗಿ ಮೇಲೇರುತ್ತಾ ಕಳಸದೊಂದಿಗೆ ಪರ್ಯವಸಾನಗೊಂಡಿದೆ. ಶಿಖರದ ಸುತ್ತಲೂ ರಾಮಾಯಣದ ಅನೇಕ ಮೂರ್ತಿಗಳನ್ನು ನಿರ್ಮಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ದಕ್ಷಿಣದ ಕಡೆ ಎತ್ತರದ ಕಲ್ಲಿನ ಹೆಬ್ಬಾಗಿಲನ್ನು ಒಳಗೊಂಡಿದ್ದು, ಈ ಹೆಬ್ಬಾಗಿಲಿನ ಕೆಳ ಇಕ್ಕೆಲಗಳಲ್ಲಿ ಆನೆಸೊಂಡಿಲಿನ ಸುಂದರ ಶಿಲ್ಪಗಳನ್ನು ಕಾಣಬಹುದು. ಆಂಜನೇಯ ದೇವಾಲಯದ ಪಕ್ಕದಲ್ಲಿ ದಕ್ಷಿಣಾಭಿಮುಖವಾಗಿ ಇರುವ ಕಲ್ಲೇಶ್ವರನ ದೇವಾಲಯವಿದೆ. ಕಲ್ಲೇಶ್ವರನ ಮುಂದೆ ನಂದಿ ವಿಗ್ರಹವಿದೆ. ಈ ದೇವಾಲಯವನ್ನು ಇತ್ತೀಚೆಗೆ ಆಧುನಿಕ ಸರಕು ಸಾಮಗ್ರಿಗಳನ್ನು ಬಳಸಿಕೊಂಡು ಜೀರ್ಣೋದ್ಧಾರ ಮಾಡಲಾಗಿದೆ.

**ಕಣಕುಪ್ಪೆ ಕೋಟೆ, ಕಣಕುಪ್ಪೆ**

ಕಣಕುಪ್ಪೆ ಪ್ರದೇಶವು ಮೊದಲು ಚಿತ್ರದುರ್ಗ ಪಾಳೆಯಗಾರರ ಆಡಳಿತ ವ್ಯಾಪ್ತಿಯಲ್ಲಿತ್ತು. ಕ್ರಿ.ಶ. ೧೬೭೫ರಲ್ಲಿ ಚಿತ್ರದುರ್ಗ ಪಾಳೆಯಪಟ್ಟಿನಲ್ಲಿ ಅಧಿಕಾರಕ್ಕಾಗಿ ಗೊಂದಲ ಉಂಟಾಗಿದ್ದರಿಂದ ಜರಿಮಲೆ ನಾಯಕರು ಕಣಕುಪ್ಪೆ ಬೆಟ್ಟದಲ್ಲಿನ ಜನರಿಗೆ ಕಿರುಕುಳ ಕೊಡುತ್ತಿದ್ದರು. ಆ ಸಂದರ್ಭದಲ್ಲಿ ಚಿತ್ರದುರ್ಗ ಪಾಳೆಯಪಟ್ಟಿಗೆ ಚಿಕ್ಕಣ್ಣನಾಯಕ ಪಟ್ಟವನ್ನು ಅಲಂಕರಿಸಿದ್ದನು. ಹಿರೇಕೊಮಾರಪ್ಪ ನಾಯಕನು, ಚಿಕ್ಕಣ್ಣ ನಾಯಕನನ್ನು ಭೇಟಿ ಮಾಡಲು ಚಿತ್ರದುರ್ಗಕ್ಕೆ ತೆರಳಿದನು.[೧೭] ವಿಷಯವನ್ನು ತಿಳಿದ ನಾಯಕನು ಸುಮಾರು ೪೦೦ ಸೈನಿಕರನ್ನು ತೆಗೆದುಕೊಂಡು ಬಂದು ಬೆಟ್ಟದಲ್ಲಿ ಕಿರುಕುಳ ಕೊಡುತ್ತಿದ್ದ ಬೇಡ ಕಳ್ಳಕಾಕರನ್ನು ಅಲ್ಲಿಂದ ಓಡಿಸಿದನು. ಈ ಸಂದರ್ಭದಲ್ಲಿ ಬೆಟ್ಟದ ಪರಿಸರವನ್ನು ಗಮನಿಸಿದ ಕೊಮಾರಪ್ಪ ನಾಯಕನು ಇಲ್ಲಿ ಬಲಿಷ್ಠವಾದ ಕೋಟೆಯನ್ನು ನಿರ್ಮಿಸಲು ಪ್ರಾರಂಭಿಸಿದನು. ಇದಕ್ಕಿಂತ ಮುಂದೆ ಉಚ್ಚಂಗಿದುರ್ಗ, ಹರಪನಹಳ್ಳಿ ಪಾಳೆಯಗಾರರನ್ನು ಹತ್ತಿಕ್ಕಲು ಈ ಭಾಗದಲ್ಲಿ ಕೋಟೆ ನಿರ್ಮಿಸುವ ಅನಿವಾರ್ಯತೆ ಇತ್ತು. ಈ ಎಲ್ಲಾ ಹಿನ್ನೆಲೆಗಳ ನಡುವೆ ಕೋಟೆ ನಿರ್ಮಿಸಲು ಒಪ್ಪಿಗೆ ನೀಡಿ ಅದಕ್ಕೆ ಬೇಕಾದ ಸಂಪತ್ತು, ಸಾಮಗ್ರಿ, ಸಹಕಾರ ಹಾಗೂ ಮಾರ್ಗದರ್ಶನವನ್ನು ನೀಡಿದ. ೧೭೫೪ರಲ್ಲಿ ಕೋಟೆ ನಿರ್ಮಿಸಲು ಆರಂಭ ಮಾಡಿ ೧೭೭೯ರಲ್ಲಿ ಪೂರ್ಣಗೊಳಿಸಿದ.

ಮುಂದೆ ಹಿರೇಕೊಮಾರಪ್ಪ ನಾಯಕ, ಕಾಟನಾಯಕ, ಚಿಕ್ಕಭರಮಪ್ಪ ನಾಯಕ, ಕಿರಿಜಂಪಣ್ಣ ನಾಯಕರು ಈ ಕೋಟೆಯಲ್ಲಿದ್ದುಕೊಂಡು ಸುಮಾರು ವರ್ಷಗಳ ಕಾಲ ಅಧಿಕಾರ ನಡೆಸಿದರು. ಅವರ ಕಾಲದಲ್ಲಿ ಕೋಟೆಯಲ್ಲಿ ಹಲವಾರು ಸ್ಮಾರಕಗಳನ್ನು ನಿರ್ಮಿಸಿ ಅಭಿವೃದ್ಧಿಕಾರ್ಯಗಳನ್ನು ಕೈಗೊಂಡರು.

ಈ ಕೋಟೆಯನ್ನು ಸ್ಥಳೀಯ ವೈರಿಗಳ ದಾಳಿಯಿಂದ ರಕ್ಷಿಸಲು ಚಿತ್ರದುರ್ಗ ಕೋಟೆಯ ಮಾದರಿಯಲ್ಲಿ ನಿರ್ಮಿಸಲಾಗಿದೆ. ಸುಮಾರು ೨೫ ಎಕರೆ ಪ್ರದೇಶದಲ್ಲಿ ಮೂರು ಗುಡ್ಡಗಳನ್ನು ಬಳಸಿಕೊಂಡು ಗಿರಿದುರ್ಗವನ್ನು ನಿರ್ಮಿಸಲಾಗಿದೆ. ಮೇಲುದುರ್ಗ, ಮನ್ನಲಗಟ್ಟಿ, ಕೊತ್ತಲಗಟ್ಟಿ ಎಂಬ ಮೂರು ಗುಡ್ಡಗಳನ್ನು ಬಳಸಿಕೊಂಡು ವಿವಿಧ ವಿನ್ಯಾಸ ಮಾದರಿಯಲ್ಲಿ ಈ ಕೋಟೆಯನ್ನು ನಿರ್ಮಿಸಲಾಗಿದೆ. ಇಲ್ಲಿ ಬುರುಜು, ಬತೇರಿ, ದ್ವಾರಬಾಗಿಲು, ಹೊಂಡಗಳು, ಬಾವಿಗಳು,

ದೇವಾಲಯಗಳು ಮುಂತಾದ ಹಲವು ಸ್ಮಾರಕಗಳು ಈ ಕೋಟೆಯಲ್ಲಿ ಕಾಣಬಹುದು. ಕೊತ್ತಲಗಟ್ಟ ಹಾಗೂ ಮೇಲುದುರ್ಗದ ಕೋಟೆಯ ಪ್ರವೇಶವು ಆಡಳಿತಾತ್ಮಕ ಹಾಗೂ ಸೈನಿಕರ ವಸತಿಯ ದೃಷ್ಟಿಯನ್ನಿಟ್ಟುಕೊಂಡು ನಿರ್ಮಿಸಲಾಗಿದೆ. ಈ ಕೋಟೆಯ ಗೋಡೆಯನ್ನು ಹಾಗೂ ಸ್ಮಾರಕಗಳನ್ನು ನಿರ್ಮಿಸಲು ಗುಡ್ಡದಲ್ಲಿ ದೊರಕಿರುವ ಕಲ್ಲುಗಳನ್ನೇ ಉಪಯೋಗಿಸಿ ನಿರ್ಮಿಸಿದ್ದಾರೆ. ಕೋಟೆಗೋಡೆ ೨೦ರಿಂದ ೨೫ ಅಡಿ ಎತ್ತರವಿದ್ದು, ಆಯಕಟ್ಟಿನ ಸ್ಥಳಗಳಲ್ಲಿ ದ್ವಾರಬಾಗಿಲುಗಳು, ಬುರುಜುಗಳು ಕಂಡುಬರುತ್ತವೆ. ಶತ್ರುಗಳ ಕಾಟವನ್ನು ತಪ್ಪಿಸಲು ರಕ್ಷಣೆಗೆ ಹೆಚ್ಚು ಒತ್ತುಕೊಟ್ಟು ಈ ಕೋಟೆಯ ದ್ವಾರಬಾಗಿಲುಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಗವಿಮಠದ ಮೂಲಕ ಬೆಟ್ಟವನ್ನು ಹತ್ತುವಾಗ ಕೋಟೆಯ ಪ್ರಮುಖ ದ್ವಾರಬಾಗಿಲು ಕಂಡುಬರುತ್ತದೆ. ಇದು ಪೂರ್ವದಿಕ್ಕಿನಲ್ಲಿರುವ ಜಗಲೂರು ಬಾಗಿಲಿನ ದಿಕ್ಕಿನವರೆಗೂ ವಿಸ್ತರಿಸಲ್ಪಡುತ್ತದೆ. ರಸ್ತೆಯ ಬದಿಗಳಲ್ಲಿ ಎತ್ತರದ ಗೋಡೆಗಳಿವೆ. ರಸ್ತೆಯಲ್ಲಿ ಹಾಸುಗಲ್ಲನ್ನು ಹಾಕಲಾಗಿದೆ.

ಮನ್ನಲಗಟ್ಟ ಗುಡ್ಡಕ್ಕೆ ಹೊಂದಿಕೊಂಡಂತೆ ಪಶ್ಚಿಮಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸುಮಾರು ೫೧೦ ಮೀಟರ್ ಉದ್ದ ಕೋಟೆಗೋಡೆಯನ್ನು ನಿರ್ಮಿಸಲಾಗಿದೆ. ಗುಡ್ಡದ ತುದಿಯಲ್ಲಿ ಚೌಕಾಕಾರದ ಬುರುಜನ್ನು ೨೦x೨೦ ಅಳತೆಯಲ್ಲಿ ನಿರ್ಮಿಸಲಾಗಿದೆ. ಬುರುಜಿನ ಒಳಭಾಗಕ್ಕೆ ಹೋಗಲು ವ್ಯವಸ್ಥೆ ಮಾಡಲಾಗಿದ್ದು, ಒಳಭಾಗದಿಂದ ಶತ್ರುಗಳನ್ನು ಅವಲೋಕಿಸಲು ಚಿಕ್ಕ ಚಿಕ್ಕ ರಂಧ್ರಗಳ ವ್ಯವಸ್ಥೆಯನ್ನು ಮಾಡಲಾಗಿದೆ. ಕೋಟೆಗೋಡೆಯು ಸುಮಾರು ೨೦ ಅಡಿ ಎತ್ತರ ಹಾಗೂ ೬ ಅಡಿ ಅಗಲವಿದ್ದು ಗೋಡೆಗೆ ಅಲ್ಲಲ್ಲಿ ಕಾವಲುಗೋಪುರಗಳನ್ನು ನಿರ್ಮಿಸಲಾಗಿದೆ.

ಪೂರ್ವಭಾಗದಲ್ಲಿ ದಕ್ಷಿಣಕ್ಕೆ ೭ ಅಡಿ ಎತ್ತರದ ದ್ವಾರಬಾಗಿಲಿದ್ದು ಇದನ್ನು ಸ್ಥಳೀಯರು ಉಚ್ಚಂಗಿದ್ವಾರದ ಬಾಗಿಲು ಎಂದು ಕರೆಯುತ್ತಾರೆ. ಈ ದ್ವಾರಬಾಗಿಲಿನ ಮುಂದೆ ೪ ಅಡಿ ಅಗಲ ೪ ಅಡಿ ಎತ್ತರದ ಕಟಾಂಜನವಿದೆ. ದ್ವಾರದ ಮೇಲೆ ಪದ್ಮ ಅಲಂಕರಣ ಮತ್ತು ಭುವನೇಶ್ವರಿಯ ಚಿತ್ರವಿದೆ. ದಕ್ಷಿಣದಿಕ್ಕಿಗೆ ಆಂಜನೇಯನ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಈ ದ್ವಾರದಿಂದ ಕಲ್ಲುಬಾಗಿಲಿಗೆ ಹೋಗಲು ಅನುಕೂಲ ಮಾಡಲಾಗಿದೆ. ಮೇಲುದುರ್ಗ ಹಾಗೂ ಗುಡ್ಡಕ್ಕೆ ಅಡ್ಡಲಾಗಿ ೨೦ ಅಡಿ ಎತ್ತರದ ಕಲ್ಲಿನ ಗೋಡೆಯನ್ನು ನಿರ್ಮಿಸಲಾಗಿದೆ. ಈ ಗೋಡೆಯ ಹಿಂಭಾಗದಲ್ಲಿನ ಪ್ರದೇಶದಲ್ಲಿ ಅರಮನೆ ಆವರಣ ಇದೆ. ಇಲ್ಲಿ ಅರಮನೆಗೆ ಸಂಬಂಧಿಸಿದ ಹಲವಾರು ಅವಶೇಷಗಳು ಕಂಡುಬರುತ್ತದೆ. ಈ ಗೋಡೆಗೆ ದಕ್ಷಿಣೋತ್ತರವಾಗಿ ಕಲ್ಲುಬಾಗಿಲನ್ನು ನಿರ್ಮಿಸಲಾಗಿದ್ದು ಅದಕ್ಕೆ ಹೊಂದಿಕೊಂಡಂತೆ ದಿಡ್ಡಿಬಾಗಿಲು ಇದೆ. ಹತ್ತಿರದಲ್ಲಿಯೇ ಹಾಲುಹೊಂಡ ಪುಷ್ಕರಿಣಿ ಇದೆ. ಈ ಹೊಂಡದ ಸುತ್ತಲೂ ಕಲ್ಲಿನ ಪಾವಟಿಗೆಗಳನ್ನು ನಿರ್ಮಿಸಿದ್ದಾರೆ. ಹೊಂಡದ ಸಮೀಪದಲ್ಲಿ ಈಶ್ವರ, ಭೈರವ ದೇವಾಲಯಗಳಿವೆ. ಈ ದೇವಾಲಯಗಳನ್ನು ಕಾಟನಾಯಕ ನಿರ್ಮಿಸಿದ್ದಾನೆಂದು ಕೈಫಿಯತ್ತಿನಲ್ಲಿ ಪ್ರಸ್ತಾಪ ಮಾಡಲಾಗಿದೆ.[೧೮] ಕೊತ್ತಲಗುಡ್ಡದ ಮೇಲೆ ಒಂದು ಆಂಜನೇಯ ಶಿಲ್ಪ ಹಾಗೂ ಎರಡು ನೈಸರ್ಗಿಕ ನೀರಿನ

ಹೊಂಡಗಳಿದ್ದು ಬೇರೆ ಯಾವ ಸ್ಮಾರಕಗಳು ಅಲ್ಲಿ ಕಂಡುಬರುವುದಿಲ್ಲ. ಕೋಟೆ ಪ್ರದೇಶದಲ್ಲಿ ಮಾರಮ್ಮ, ಆಂಜನೇಯ, ಭೈರವೇಶ್ವರ ದೇವಾಲಯಗಳಿದ್ದು, ಅವುಗಳ ಸಮೀಪದಲ್ಲಿಯೇ ಜಗಲೂರಜ್ಜನ ಬಾಗಿಲಿದೆ. ಗುಡ್ಡದ ಪಶ್ಚಿಮಭಾಗದಲ್ಲಿ ವೃತ್ತಾಕಾರದ ಬತೇರಿ ಇದೆ. ಈ ಬತೇರಿ ಹತ್ತಿರ ಭರಮಕ್ಕನ ಹೊಂಡ ಹಾಗೂ ಆಂಜನೇಯನ ದೇವಾಲಯವಿದೆ. ಹಿಂದೆ ಈ ಪ್ರದೇಶದಲ್ಲಿ ಕೋಟೆಗೆ ಪ್ರವೇಶ ಮಾಡಲು ಇಲ್ಲಿ ಬಾಗಿಲು ಇತ್ತೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಅದು ಈಗ ಕಂಡುಬರುವುದಿಲ್ಲ. ಅಲ್ಲದೆ ಕರೆಜಂಪಣ್ಣ ನಾಯಕನ ಅಧಿಕಾರಾವಧಿಯಲ್ಲಿ ನಿರ್ಮಾಣಗೊಂಡಿರುವ ಕೆರೆ ಮತ್ತು ಮದಕರೆಪ್ಪನ ಬಾವಿಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.

ಕೋಟೆಯೊಳಗೆ ಕುಡಿಯುವ ನೀರಿಗೆ ವ್ಯವಸ್ಥಿತವಾಗಿ ಹೊಂಡವನ್ನು ನಿರ್ಮಿಸಲಾಗಿದೆ. ಮನ್ನಲಗಟ್ಟ ಗುಡ್ಡದ ಮೇಲೆ ಸುಮಾರು ೩೦ ಮೀಟರ್‌ನಷ್ಟು ವಿಶಾಲವಾದ ನೈಸರ್ಗಿಕ ಹೊಂಡವಿದೆ. ಕಡಿದಾದ ಬಂಡೆಯ ಮೂಲೆಯಲ್ಲಿ ಆರು ಅಡಿ ಎತ್ತರದ ಗೋಡೆಯನ್ನು ನಿರ್ಮಿಸುವ ಮೂಲಕ ಹೊಂಡವನ್ನು ನಿರ್ಮಿಸಲಾಗಿದೆ. ಬೆಟ್ಟದ ಮೇಲಿಂದ ಬಂದ ನೀರು ವ್ಯರ್ಥವಾಗದಂತೆ ಹೊಂಡ ನಿರ್ಮಿಸಿ ಗಾರೆಯಿಂದ ಗೋಡೆಯನ್ನು ಭದ್ರಪಡಿಸಲಾಗಿದೆ. ಸಂಗ್ರಹಿಸಿದ ನೀರನ್ನು ಚಿಕ್ಕ ಕಾಲುವೆ ಮೂಲಕ ಅರಮನೆ ಆವರಣ ಮತ್ತು ವಸತಿಪ್ರದೇಶಕ್ಕೆ ಸಾಗಿಸುವ ವ್ಯವಸ್ಥೆ ಮಾಡಲಾಗಿದೆ. ಈ ಕಾಲುವೆಯನ್ನು ಬಂಡೆಯ ಮೇಲೆ ಎರಡೂ ಬದಿಗೆ ಕಲ್ಲುಗಳನ್ನಿಟ್ಟು ಗಾರೆಯಿಂದ ಭದ್ರಗೊಳಿಸಲಾಗಿದೆ. ಇಳಿಜಾರು ಪ್ರದೇಶವಾಗಿರುವುದರಿಂದ ಸುಲಲಿತವಾಗಿ ದಿನವಿಡಿ ನೀರನ್ನು ಸಾಗಿಸಬಹುದಾಗಿತ್ತು. ಹೊಂಡದ ಮುಂಭಾಗದಲ್ಲಿ ತೊಟ್ಟಿಯನ್ನು ನಿರ್ಮಿಸಿ ಅದರಲ್ಲಿ ಕಲ್ಲು ಮತ್ತು ಉಸುಕನ್ನು ಹಾಕಿ ನೀರು ಬಸಿದುಹೋಗುವಂತೆ ಮಾಡಲಾಗಿತ್ತು. ಎರಡು ಕಾಲುವೆಗಳನ್ನು ಮಾಡಿ ಸಮಪ್ರಮಾಣದಲ್ಲಿ ನೀರು ಹರಿಯುವಂತೆ ವ್ಯವಸ್ಥೆ ಮಾಡಲಾಗಿತ್ತು. ಅರಮನೆ ಪ್ರದೇಶದ ಗೋಡೆಯನ್ನು ಬಂಡೆಯ ಸನಿಹದಲ್ಲಿ ನಿರ್ಮಿಸಿ ನೀರು ನೇರವಾಗಿ ಅರಮನೆಯ ಒಳಗೆ ಹೋಗುವಂತೆ ಮಾಡುವ ಮೂಲಕ ಮತ್ತೊಮ್ಮೆ ಶ್ರಮವನ್ನು ಕಡಿಮೆ ಮಾಡಿಕೊಂಡಿರುವುದು ಕಂಡುಬರುತ್ತದೆ.

ಕರ್ನಾಟಕದ ಕೈಫಿಯತ್ತಿನಲ್ಲಿ ಉಲ್ಲೇಖಿಸಿರುವಂತೆ ಈ ಕೋಟೆಯಲ್ಲಿ ೧೮ ಬಾಗಿಲುಗಳು ಕಂಡುಬರುತ್ತವೆ. ಪ್ರಮುಖವಾಗಿ ಅವುಗಳೆಂದರೆ ಮೇಲುದುರ್ಗದ ಬಾಗಿಲು, ಕುಂಟಜ್ಜಿ ಬಾಗಿಲು, ಹಾಲುಹೊಂಡದ ಬಾಗಿಲು, ಕಲ್ಲುಬಾಗಿಲು, ಏಕನಾಥಿ ಬಾಗಿಲು, ದೊಡ್ಡಬಾಗಿಲು, ನವಿಲೂರು ಬಾಗಿಲು, ವೀರಭದ್ರನ ಬಾಗಿಲು, ಶಿವಶರಣೆ ದಾನಸಾಲಮ್ಮನ ಬಾಗಿಲು, ಹನುಮನ ಬಾಗಿಲು, ಮನ್ನಲಗಟ್ಟನ ಬಾಗಿಲು, ಜಗಲೂರಜ್ಜನ ಬಾಗಿಲು, ಭೈರವನ ಬಾಗಿಲು ಬಸವನ ಬಾಗಿಲು, ಚೌಡಿ ಬಾಗಿಲು, ಕೊದಂಡರಾಮನ ಬಾಗಿಲು, ಕೋಟೆ ಮಾರಮ್ಮನ ಬಾಗಿಲು, ಅಹೋಬಲ ನರಸಿಂಹನ ಬಾಗಿಲುಗಳು ಇದ್ದವು. ಆದರೆ ಇವುಗಳಲ್ಲಿ ಪ್ರಸ್ತುತ ಕೆಲವು ಬಾಗಿಲುಗಳು ಕಂಡುಬರುವುದಿಲ್ಲ.

ಹೀಗೆ ಕಣಕುಪ್ಪೆ ಪಾಳೆಯಗಾರರು ಚಿತ್ರದುರ್ಗ ಪಾಳೆಯಗಾರರ ಸಹಕಾರ, ಮಾರ್ಗದರ್ಶನದಿಂದ ಕಣಕುಪ್ಪೆಯಲ್ಲಿ ಒಂದು ಬೃಹತ್ತಾದ ಕೋಟೆಯನ್ನು ನಿರ್ಮಿಸಿ ಶತ್ರುಗಳ ದಾಳಿಯಿಂದ ರಕ್ಷಿಸುವ ಕಾರ್ಯ ಕೈಗೊಂಡರು. ಒಂದು ಸಾಮ್ರಾಜ್ಯದ ರಕ್ಷಣೆಯಲ್ಲಿ ಕೋಟೆಯ ಪಾತ್ರ ಪ್ರಮುಖವಾದುದು. ಹಿಂದೆ ಯುದ್ಧಗಳು ನಡೆದಾಗ ಹೊರಗಿನ ಆಕ್ರಮಣ ತಡೆಯಲು ಕೋಟೆ ಕಟ್ಟಿಸಿಕೊಳ್ಳುವುದು ಅತ್ಯಾವಶ್ಯಕವಾಗಿತ್ತು. ಯಾವುದೇ ರಾಜ್ಯದ ರಾಜಧಾನಿಯು ದೇಹದಲ್ಲಿನ ಹೃದಯವಿದ್ದಂತೆ. ರಾಜಧಾನಿಯನ್ನು ವಶಪಡಿಸಿಕೊಂಡರೆ ಸಾಮಾನ್ಯವಾಗಿ ಒಂದು ರಾಜ್ಯವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದ್ದಿತು. ಆದುದರಿಂದ ಕೋಟೆಯ ನಿರ್ಮಾಣವು ರಕ್ಷಣೆಯ ದೃಷ್ಟಿಯಿಂದ ಅತ್ಯವಶ್ಯಕವಾಗಿತ್ತು. ಈ ರೀತಿಯ ಕೋಟೆಗಳು ಕಣಕುಪ್ಪೆ ಪ್ರದೇಶದಲ್ಲಿ ಕಂಡುಬರುತ್ತವೆ.

**ರಂಗಯ್ಯನದುರ್ಗದ ಕೋಟೆ**

ಈ ಕೋಟೆ ಜಗಲೂರಿನಿಂದ ಪಶ್ಚಿಮಕ್ಕೆ ೨೫ ಕಿ.ಮೀ. ದೂರದಲ್ಲಿರುವ ಸಿದ್ಧಯ್ಯನ ಕೋಟೆ ಗ್ರಾಮದ ಹತ್ತಿರ ಕಂಡುಬರುತ್ತದೆ. ಈ ರಂಗಯ್ಯನದುರ್ಗದ ಕೋಟೆಯ ವಾಸ್ತುರಚನೆ ಶೈಲಿ, ಅವಶೇಷಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇದನ್ನು ಕಣಕುಪ್ಪೆ ಕೋಟೆಯ ಸಂದರ್ಭದಲ್ಲಿ ಕಟ್ಟಿರಬಹುದು ಎಂದು ಊಹಿಸಬಹುದು. ಇಲ್ಲಿನ ಸ್ಥಳೀಯ ಜನರು ಹಾಗೂ ಐತಿಹ್ಯದ ಪ್ರಕಾರ ಈ ಪ್ರದೇಶದಲ್ಲಿ ರಂಗಪ್ಪನಾಯಕ ಇಲ್ಲಿ ಆಳ್ವಿಕೆ ಮಾಡುತ್ತಿದ್ದನೆಂದು ತಿಳಿದುಬರುತ್ತದೆ. ಆದುದರಿಂದ ಈ ಗುಡ್ಡಕ್ಕೆ ರಂಗಯ್ಯನದುರ್ಗ ಎಂದು ಕರೆಯುತ್ತಾರೆ. ಪ್ರಸ್ತುತ ಈ ಕೋಟೆಯು ೨೦-೨೫ ಎಕರೆ ವಿಸ್ತಾರವಾದ ಪ್ರದೇಶದಲ್ಲಿ ಮೂರು ಗುಡ್ಡಗಳಿಗೆ ಹೊಂದಿಕೊಂಡಂತೆ ಈ ಕೋಟೆಯನ್ನು ನಿರ್ಮಿಸಲಾಗಿದೆ. ಈ ಕೋಟೆಯೊಳಗೆ ಜನವಸತಿಯ ಕುರುಹುಗಳು ಕಂಡುಬಂದಿದ್ದು ಮನೆಗಳ ಪಾಯಗಳು, ಮಡಕೆ, ಕುಡಿಕೆಗಳು, ಆಂಜನೇಯ ಗುಡಿ, ಚೌಡಮ್ಮನ ಗುಡಿ ಹಾಗೂ ಒಂದು ನೈಸರ್ಗಿಕ ಮತ್ತು ಒಂದು ನಿರ್ಮಿತ ಹೊಂಡಗಳು ಕಂಡುಬರುತ್ತವೆ. ಆಯಕಟ್ಟಿನ ಪ್ರದೇಶಗಳಲ್ಲಿ ಬುರುಜುಗಳು ಸಹ ಕಂಡುಬರುತ್ತವೆ. ಕೋಟೆ ಗೋಡೆಯನ್ನು ರಕ್ಷಣಾತ್ಮಕವಾಗಿ ನಿರ್ಮಿಸಿದ್ದು, ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಕೋಟೆಯ ಸುತ್ತಲೂ ಐದು ಬುರುಜುಗಳಿವೆ.

**ವೀರಗಲ್ಲುಗಳು**

**ಕಲ್ಲೇಶ್ವರ ದೇವಾಲಯದಲ್ಲಿರುವ ವೀರಗಲ್ಲು: ಮುಸ್ಟೂರು**

ಈ ವೀರಗಲ್ಲು ಮೂರು ಭಾಗಗಳನ್ನು ಹೊಂದಿದ್ದು, ಮೊದಲನೇ ಹಂತದಲ್ಲಿ ವೀರನು ರಣರಂಗದಲ್ಲಿ ಹೋರಾಡುವ ದೃಶ್ಯವಿದೆ. ವೀರನು ಬಲಗೈಯಲ್ಲಿ ಕತ್ತಿ ಹಾಗೂ ಎಡಗೈಯಲ್ಲಿ ಗುರಾಣಿ ಹಿಡಿದುಕೊಂಡು ಯುದ್ಧ ಮಾಡುವ ಸನ್ನಿವೇಶವನ್ನೊಳಗೊಂಡಿದೆ. ಎರಡನೇ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವ ದೃಶ್ಯವಿದೆ. ಅಪ್ಸರೆಯರು ಕೈಯಲ್ಲಿ ಚಾಮರ ಹಿಡಿದು ಗಾಳಿ ಬೀಸುತ್ತಿರುವ ದೃಶ್ಯವಿದೆ. ಮೂರನೇ ಹಂತ ಸಂಪೂರ್ಣ ಭಗ್ನಗೊಂಡಿದೆ. ಗ್ರಾನೈಟ್ ಶಿಲೆಯಲ್ಲಿ ಈ ವೀರಗಲ್ಲನ್ನು ಕೆತ್ತಿಸಲಾಗಿದೆ.

ಅದೇ ದೇವಾಲಯದಲ್ಲಿ ಇನ್ನೊಂದು ವೀರಗಲ್ಲಿದೆ. ಇದು ಕೂಡ ಮೂರು ಹಂತಗಳನ್ನು ಹೊಂದಿದ್ದು ಮೊದಲನೇ ಹಂತದಲ್ಲಿ ವೀರನು ಶತ್ರುಗಳೊಂದಿಗೆ ಹೋರಾಡುವ ದೃಶ್ಯವಿದೆ. ಬಲಗೈಯಲ್ಲಿ ಕತ್ತಿಯಿಂದ ಗಜದ ಮೇಲಿರುವ ಶತ್ರುವನ್ನು ಇರಿಯುವ ದೃಶ್ಯವಿದೆ. ಈ ವೀರಗಲ್ಲಿನ ಎರಡು ಮತ್ತು ಮೂರನೇ ಹಂತಗಳು ಸಂಪೂರ್ಣ ನಶಿಸಿ ಹೋಗಿರುವುದರಿಂದ ಅಸ್ಪಷ್ಟವಾಗಿದೆ.

ಇನ್ನೊಂದು ಪ್ರಮುಖ ವೀರಗಲ್ಲು ದೇವಾಲಯದಲ್ಲಿದೆ. ಇದು ಏಕಹಂತದಲ್ಲಿದ್ದು ಇದರಲ್ಲಿ ವೀರನು ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ಬಿಲ್ಲು ಹಿಡಿದುಕೊಂಡು ನಿಂತಿರುವ ದೃಶ್ಯವಿದೆ. ಬಹುಶಃ ಈ ವೀರಗಲ್ಲು ಕೂಡ ತ್ರುಟಿತವಾಗಿರಹುದು ಎಂಬ ಭಾವನೆ ಮೂಡುತ್ತದೆ.

ಮುಸ್ಕೂರು ಗ್ರಾಮದಲ್ಲಿರುವ ಇನ್ನೊಂದು ವೀರಗಲ್ಲು ಕಲ್ಲೇಶ್ವರ ದೇವಾಲಯದಲ್ಲಿದೆ. ಇದು ಮೂರು ಹಂತಗಳನ್ನು ಹೊಂದಿದೆ. ಮೊದಲನೆಯ ಹಂತದಲ್ಲಿ ವೀರನು ಅವನ ಹೆಂಡತಿ ನಿಂತಿರುವ ಚಿತ್ರವಿದೆ. ಎರಡನೇ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವಿದೆ. ಮೂರನೇ ಹಂತ ಸಂಪೂರ್ಣ ಭಗ್ನಗೊಂಡಿದೆ.

ಹೀಗೆ ಸುಮಾರು ವೀರಗಲ್ಲುಗಳು ಮುಸ್ಕೂರು ಕಲ್ಲೇಶ್ವರ ದೇವಾಲಯದಲ್ಲಿದ್ದು ಈ ಎಲ್ಲಾ ವೀರಗಲ್ಲುಗಳು ೧೬-೧೭ನೇ ಶತಮಾನದ್ದಾಗಿವೆ. ಈ ವೀರಗಲ್ಲುಗಳನ್ನು ಗ್ರಾನೈಟ್ ಕಣಶಿಲೆಯಿಂದ ಕೆತ್ತಿಸಿದ್ದಾರೆ.

ಬಿಳಿಚೋಡು ಈಶ್ವರ ದೇವಾಲಯದ ಮುಂದಿರುವ ವೀರಗಲ್ಲು ಮೂರು ಪಟ್ಟಿಕೆಗಳನ್ನು ಹೊಂದಿದೆ. ಮೊದಲ ಪಟ್ಟಿಕೆಯಲ್ಲಿ ವೀರನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಗುರಾಣಿ ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಶತ್ರುಪಡೆಯವರು ಸಹ ಕೊಡಲಿ, ಕತ್ತಿ, ಗುರಾಣಿಗಳನ್ನು ಹಿಡಿದುಕೊಂಡಿರುವ ದೃಶ್ಯವಿದೆ. ವೈರಿ ಪಡೆಯ ಒಬ್ಬ ಸೈನಿಕ ಕೆಳಗೆ ಸತ್ತುಬಿದ್ದಿರುವ ಚಿತ್ರವಿದೆ. ಎರಡನೇ ಪಟ್ಟಿಕೆಯಲ್ಲಿ ವೀರನನ್ನು ಆರು ಜನ ಅಪ್ಸರೆಯರು ಭುಜದ ಮೇಲೆ ಕೈ ಹಾಕಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವಿದೆ. ಮೂರನೇ ಪಟ್ಟಿಕೆಯಲ್ಲಿ ಇಬ್ಬರು ಅಪ್ಸರೆಯರು ಚಾಮರಗಳನ್ನು ಹಿಡಿದಿದ್ದಾರೆ. ಮೂರನೇ ದೃಶ್ಯದಲ್ಲಿ ವೀರನು ಬಲಬದಿಯಲ್ಲಿ ಶಿವಲಿಂಗಕ್ಕೆ ಕೈ ಮುಗಿದು ಕುಳಿತಿರುವನು. ಯತಿಯು ಶಿವಲಿಂಗಕ್ಕೆ ಪೂಜೆ ಮಾಡುತ್ತಿರುವ ದೃಶ್ಯವಿದೆ. ಶಿವಲಿಂಗದ ಮುಂದೆ ಹಸು ಮತ್ತು ಕರುಗಳು ಕುಳಿತಿವೆ. ಯತಿ ಉದ್ದನೆಯ ಜಡೆ, ಕಿರೀಟ, ಧೋತಿಯಂತಹ ವಸ್ತ್ರ ಧರಿಸಿರುವನು. ವೀರನು ತಲೆಗೆ ತುರುಬು ಕಟ್ಟಿದ್ದಾನೆ. ಕಟಿವಸ್ತ್ರಧಾರಿಯಾಗಿ ಎಡ ಮತ್ತು ಬಲತೋಳುಗಳಿಗೆ ಕಡಗ ಹಾಕಿರುವನು.

ದೇವಾಲಯದ ಮುಂದೆ ಇನ್ನೊಂದು ವೀರಗಲ್ಲಿದ್ದು, ಇದರಲ್ಲಿ ಎರಡು ಹಂತಗಳನ್ನು ಕಾಣಬಹುದು. ಮೊದಲ ಹಂತದಲ್ಲಿ ವೀರನು ಬಿಲ್ಲನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ.

ವೀರನು ತನ್ನ ಕಾಲುಗಳಿಂದ ವೈರಿಪಡೆಯ ಒಬ್ಬರನ್ನು ತುಳಿದಿರುವನು. ವೀರನ ಹಿಂದೆ ಮೂರು ಜನ ಸಹಚರ ಪಡೆಯವರಿದ್ದಾರೆ. ವೀರನ ಎದುರು ವೈರಿ ಕುದುರೆಯ ಮೇಲೆ ಏರಿ ದಾಳಿ ಮಾಡುತ್ತಿರುವನು. ಒಬ್ಬ ವೈರಿಪಡೆಯವನು ಬಿಲ್ಲನ್ನು ಹಿಡಿದು ವೀರನಿಗೆ ಗುರಿ ಹಿಡಿದಿರುವ ದೃಶ್ಯವಿದೆ. ಮೇಲೆ ಇನ್ನೊಬ್ಬ ವೈರಿ ಪಡೆಯವನು ಖಡ್ಗವನ್ನು ಹಿಡಿದು ಬರುತ್ತಿರುವ ದೃಶ್ಯ ಇಲ್ಲಿ ಕಂಡುಬರುತ್ತದೆ. ವೀರನು ಕಟಿವಸ್ತ್ರಧಾರಿಯಾಗಿದ್ದಾನೆ. ತಲೆಯ ಹಿಂದೆ ತುರುಬಿದೆ. ಈ ವೀರಗಲ್ಲು ತ್ರುಟಿತವಾಗಿರುವುದರಿಂದ ಆಭರಣಗಳು ಸರಿಯಾಗಿ ಗೋಚರಿಸುವುದಿಲ್ಲ. ಎರಡನೇ ಹಂತದಲ್ಲಿ ಅಪ್ಸರೆಯರು ವೀರನನ್ನು ವಿಮಾನದಲ್ಲಿ ಕೂರಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವಿದೆ. ಈ ಅಪ್ಸರೆಯರು ಚಾಮರಗಳನ್ನು ಹಿಡಿದಿದ್ದಾರೆ. ಈ ವೀರಗಲ್ಲನ್ನು ಸೂಕ್ಷ್ಮವಾಗಿ ಗಮನಿಸಿದರೆ ಬಿಲ್ಲಿನ ಕಾಳಗದಲ್ಲಿ ಹೋರಾಡಿ ಮಡಿದ ವೀರನ ನೆನಪಿಗಾಗಿ ಈ ಶಿಲ್ಪವನ್ನು ಹಾಕಿಸಲಾಗಿದೆ.

ಕಣಕುಪ್ಪೆ ಕೋಟೆಯಲ್ಲಿ ಕ್ರಿ.ಶ. ೧೬-೧೭ನೇ ಶತಮಾನದ ವೀರಗಲ್ಲು ಇದೆ. ಈ ವೀರಗಲ್ಲಿನಲ್ಲಿ ನಿಂತಿರುವ ವೀರನು ತನ್ನ ಬಲಗೈಯಲ್ಲಿ ಖಡ್ಗ ಹಿಡಿದು ಮೇಲಕ್ಕೆ ಎತ್ತಿದ್ದಾನೆ. ಎಡಗೈಯಲ್ಲಿ ಚಾಕು ಹಿಡಿದು ಕೆಳಗೆ ಇಳಿಬಿಟ್ಟಿದ್ದಾನೆ. ಒಬ್ಬ ವೈರಿ ಕೆಳಗೆ ಬಿದ್ದಿದ್ದಾನೆ. ತಲೆಯಲ್ಲಿ ಗುಂಗುರುಕೂದಲಿದ್ದು ಕಟಿವಸ್ತ್ರಧಾರಿಯಾಗಿದ್ದಾನೆ. ಕೈಗಳಿಗೆ ತೋಳಬಂದಿ ಸೊಂಟಕ್ಕೆ ಪಟ್ಟಿ ಹಾಕಿಕೊಂಡಿದ್ದಾನೆ. ಕಂಠಾಭರಣ, ಕಿವಿಯೋಲೆ ಮುಂತಾದ ವಿವಿಧ ರೀತಿಯ ಆಭರಣಗಳನ್ನು ಧರಿಸಿದ್ದಾನೆ. ಇಲ್ಲಿ ವೀರನನ್ನು ನಾಯಕನಂತೆ ತೋರಿಸಲಾಗಿದೆ. ಈ ಕೋಟೆಯಲ್ಲಿ ಇನ್ನೊಂದು ವೀರಗಲ್ಲಿದ್ದು, ಇದರಲ್ಲಿ ಒಂದೇ ಪಟ್ಟಿಕೆಯಿದೆ. ವೀರನು ಕುದುರೆಯ ಮೇಲೆ ಏರಿ ಹೊರಟಂತೆ ಚಿತ್ರಿಸಲಾಗಿದೆ. ವೀರನು ಎಡಗೈಯಲ್ಲಿ ಕುದುರೆಯ ಲಗಾಮನ್ನು, ಬಲಗೈಯಲ್ಲಿ ಕಡ್ಗ ಹಿಡಿದು ಮೇಲಕ್ಕೆ ಎತ್ತಿರುವನು. ಸೊಂಟದಲ್ಲಿ ಕತ್ತಿ ಇದ್ದು ಕುದುರೆಯ ಮುಂಭಾಗದಲ್ಲಿ ಇಬ್ಬರು ಸ್ತ್ರೀಯರನ್ನು ಕಿರಿದಾಗಿ ತೋರಿಸಲಾಗಿದೆ. ಈ ವೀರಗಲ್ಲಿನಲ್ಲಿ ಶಿಲ್ಪಕ್ಕೆ ಹೆಚ್ಚಿನ ಆದ್ಯತೆ ನೀಡಿಲ್ಲದಿರುವುದು ಸ್ಪಷ್ಟವಾಗುತ್ತದೆ. ಕುದುರೆಯ ಕತ್ತು ಉದ್ದವಾಗಿರುವಂತೆ, ವೀರನ ಸೊಂಟ ತೆಳುವಾಗಿರುವಂತೆ ಚಿತ್ರಿಸಲಾಗಿದೆ. ಶಿಲ್ಪದ ನಿರೂಪಣೆಯ ದೃಷ್ಟಿಯನ್ನು ನೋಡಿದರೆ ಇದು ಕ್ರಿ.ಶ. ೧೬ನೇ ಶತಮಾನದ್ದಾಗಿದೆ ಎಂದು ತಿಳಿದುಬರುತ್ತದೆ.

**ಮಹಾಸತಿಕಲ್ಲುಗಳು**

ಕಣಕುಪ್ಪೆ ಕೋಟೆಯಲ್ಲಿ ಪಾಳೆಯಗಾರರಿಗೆ ಸಂಬಂಧಿಸಿದ ಒಂದು ಮಹಾಸತಿಕಲ್ಲಿದೆ. ಇದು ಈ ಮಹಾಸತಿಕಲ್ಲು ಒಂದು ಪಟ್ಟಿಕೆಯಲ್ಲಿದ್ದು, ಇದರಲ್ಲಿ ಇಬ್ಬರು ವೀರರು ಹಾಗೂ ಒಬ್ಬ ಸತಿಯನ್ನು ತೋರಿಸಲಾಗಿದೆ. ಸತಿಯು ನಡುವೆ ಕೈ ಮುಗಿದು ನಿಂತಿರುವ ದೃಶ್ಯವಿದೆ. ಈ ಸತಿಯ ತಲೆಯಲ್ಲಿ ಬಲಕ್ಕೆ ತುರುಬು ಇದೆ. ನೆರಿಗೆಯುಳ್ಳ ಸೀರೆ ಉಟ್ಟುಕೊಂಡಿದ್ದಾಳೆ. ಕಿವಿಯೋಲೆ, ಕಂಠಹಾರ, ತೋಳಬಂದಿ ಆಭರಣಗಳನ್ನು ತೊಟ್ಟಿದ್ದಾಳೆ. ಸತಿಯ ಬಲಭಾಗಕ್ಕೆ ವೀರ ತನ್ನ ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಎಡಗೈಯನ್ನು ಕೆಳಗೆ ಇಳಿಬಿಟ್ಟು ನಿಂತಿರುವನು.

ಜಿಳಚೋಡಿನಲ್ಲಿ ಇನ್ನೊಂದು ಮಹಾಸತಿಕಲ್ಲಿದ್ದು, ಇದು ಒಂದೇ ಭಾಗವನ್ನು ಹೊಂದಿದೆ. ಈ ಪಟ್ಟಿಕೆಯಲ್ಲಿ ಸತಿಯು ಬಲಗೈಯಲ್ಲಿ ಖಡ್ಗ ಹಿಡಿದಿರುವಳು, ಎಡಗೈಯನ್ನು ಕೆಳಗೆ ಇಳಿ ಬಿಟ್ಟಿರುವಳು. ಸತಿಯ ಕೆಳಗೆ ಬಲಬದಿಯಲ್ಲಿ ಚಾಮರ ತೋರಿಸಲಾಗಿದೆ. ಇಲ್ಲಿ ಸತಿಯ ವಸ್ತ್ರಾಭರಣ ಗಮನ ಸೆಳೆಯುತ್ತದೆ. ಶಿಲ್ಪದ ಸುತ್ತಲೂ ಹೂ ಬಳ್ಳಿಗಳ ಅಲಂಕಾರ ಮಾಡಲಾಗಿದೆ. ಶಿಲ್ಪದ ಮೇಲ್ಭಾಗದಲ್ಲಿ ಕೀರ್ತಿಮುಖ ತೋರಿಸಲಾಗಿದೆ. ಶಿಲ್ಪದ ಮೇಲೆ ಸೂರ್ಯ ಚಂದ್ರರ ದೃಶ್ಯಗಳಿವೆ.

ಅಸಗೋಡು ಕಡ್ಲೆಬಸಪ್ಪ ದೇವಾಲಯದ ಮುಂದೆ ಮಹಾಸತಿಕಲ್ಲಿದ್ದು, ಈ ಶಿಲ್ಪದಲ್ಲಿ ಮೂರು ದೃಶ್ಯಗಳಿವೆ. ಮೊದಲ ದೃಶ್ಯದಲ್ಲಿ ಇಬ್ಬರು ವೀರರು ವೈರಿ ಪಡೆಯ ವಿರುದ್ಧ ಮಲ್ಲಯುದ್ಧ ಮಾಡುತ್ತಿದ್ದಾರೆ. ಇಬ್ಬರು ವೈರಿಗಳು ಕೆಳಗಡೆ ಸತ್ತು ಬಿದ್ದಿದ್ದಾರೆ. ಒಬ್ಬ ವೀರ ಶತ್ರುವನ್ನು ಕಾಲಕೆಳಗೆ ತುಳಿದಿದ್ದಾನೆ. ವೀರನು ತಲೆಯ ಹಿಂದೆ ತುರುಬು, ಸೊಂಟದಲ್ಲಿ ಚಾಕುಗಳನ್ನು ಹೊಂದಿಬ್ಬಾರೆ. ವೈರಿ ಪಡೆಯಲ್ಲಿ ಒಬ್ಬನಿಗೆ ಉದ್ದನೆಯ ಕೂದಲನ್ನು ತೋರಿಸಲಾಗಿದೆ. ಆತ ಯಾವುದೋ ಬುಡಕಟ್ಟು ಸಮುದಾಯದವನಿರಬೇಕು. ಎರಡನೇ ದೃಶ್ಯದಲ್ಲಿ ಮಡಿದ ವೀರ ಹಾಗೂ ಸತಿಯನ್ನು ವಿಮಾನದಲ್ಲಿ ಕೂರಿಸಿಕೊಂಡು ಇಬ್ಬರು ಅಪ್ಸರೆಯರು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವಿದೆ. ವೀರ ಮಡಿದ ಸುದ್ದಿ ಕೇಳಿ ಪತ್ನಿಯು ಮಡಿದಿದ್ದಾಳೆ. ಹಾಗಾಗಿ ಈ ದೃಶ್ಯದಲ್ಲಿ ದಂಪತಿಗಳನ್ನು ತೋರಿಸಲಾಗಿದೆ. ವಿಮಾನವು ಅಲಂಕರಣೀಯವಾಗಿದೆ. ಸ್ವರ್ಗದ ದೃಶ್ಯದಲ್ಲಿ ಯತಿಯು ಎಡಗೈಯಲ್ಲಿ ಗಂಟೆ, ಬಲಗೈಯಲ್ಲಿ ಆರತಿ ತಟ್ಟೆ ಹಿಡಿದು ಶಿವಲಿಂಗಕ್ಕೆ ಪೂಜಿಸುತ್ತಿರುವ ದೃಶ್ಯವಿದೆ. ಯತಿಯು ತಲೆಗೆ ರುಮಾಲನ್ನು ಸುತ್ತಿಕೊಂಡಿದ್ದಾನೆ. ಶಿವಲಿಂಗದ ಎದುರು ಸತಿ-ಪತಿಯರು ಪ್ರತ್ಯೇಕ ಪೀಠದ ಮೇಲೆ ಕೈ ಮುಗಿದು ಕುಳಿತಿರುವರು. ಶಿವಲಿಂಗದ ರುದ್ರಭಾಗದಲ್ಲಿ ರುದ್ರಾಕ್ಷಿ ಮಾಲೆ ಹಾಕಲಾಗಿದೆ. ಈ ಮಹಾಸತಿಕಲ್ಲನ್ನು ಯಾವುದೋ ಯುದ್ಧದಲ್ಲಿ ವೀರ ಮಡಿದಿದ್ದಕ್ಕಾಗಿ ಸತಿಯು ಸಹಗಮನ ಮಾಡಿರುವ ಅಂಶ ತಿಳಿದುಬರುತ್ತದೆ. ಅದರ ನೆನಪಿಗಾಗಿ ಇದನ್ನು ಹಾಕಿಸಲಾಗಿದೆ.

ಇದೇ ಗ್ರಾಮದ ದ್ವಾರಬಾಗಿಲಿನಲ್ಲಿ ಇನ್ನೊಂದು ಮಹಾಸತಿ ಕಲ್ಲಿದ್ದು, ಇದು ಕ್ರಿ.ಶ. ೧೬-೧೭ನೇ ಶತಮಾನದ್ದಾಗಿದೆ ಎಂದು ಹೇಳಬಹುದು. ಈ ಮಹಾಸತಿ ಕಲ್ಲಿನಲ್ಲಿ ಪ್ರಮುಖವಾಗಿ ಮೂರು ದೃಶ್ಯಗಳಿವೆ. ಮೊದಲ ದೃಶ್ಯದಲ್ಲಿ ಹಂಸ ಹಾಗೂ ಸತಿಯನ್ನು ಚಿತ್ರಿಸಲಾಗಿದೆ. ಮಹಾಸತಿ ಕಲ್ಲಿನಲ್ಲಿ ಹಂಸವನ್ನು ತೋರಿಸಿರುವುದು ಅಪರೂಪವಾಗಿದೆ. ಈ ರೀತಿಯ ದೃಶ್ಯಗಳು ಮಹಾಸತಿ ಕಲ್ಲಿನಲ್ಲಿ ಬಹಳ ಕಡಿಮೆ ಇವೆ. ಇದಕ್ಕೆ ಅಭಿಮುಖವಾಗಿರುವಂತೆ ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯನ್ನು ಕೆಳಗೆ ಇಳಿ ಬಿಟ್ಟಿದ್ದಾಳೆ. ಈ ಸತಿಯ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ಹಾಡುವ ಭಂಗಿಯಲ್ಲಿದ್ದಂತೆ ಕಾಣುತ್ತದೆ. ಎರಡನೇ ದೃಶ್ಯದಲ್ಲಿ ವೀರನು ಕುದುರೆಯ ಮೇಲೆ ಕುಳಿತಿರುವ ದೃಶ್ಯವಿದೆ. ಈ ವೀರ ತನ್ನ ಎಡಗೈಯಲ್ಲಿ ಕುದುರೆಯ ಲಗಾಮನ್ನು, ಬಲಗೈಯಲ್ಲಿ ಈಟಿಯನ್ನು ಹಿಡಿದಿರುವನು. ಈ ಶಿಲ್ಪದಲ್ಲಿ ಕುದುರೆಯ

ವೇಷಭೂಷಣ, ವೀರನ ವೇಷಭೂಷಣ, ಅಲಂಕಾರವನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ವೀರನು ಪ್ರಮುಖ ವ್ಯಕ್ತಿಯಾಗಿರುವಂತೆ ಕಾಣುತ್ತಾನೆ. ಮೇಲಿನ ದೃಶ್ಯವು ಎರಡು ಭಾಗಗಳಲ್ಲಿರುವಂತಿದೆ. ಕೆಳಗಿನ ಭಾಗದಲ್ಲಿ ಸತಿಪತಿಯರಿಬ್ಬರು ಕೈಮುಗಿದು ನಿಂತಿರುವರು. ವೀರನ ಎಡಬದಿಯಲ್ಲಿ ಯತಿಯು ನಿಂತಿದ್ದು ಶಿವಲಿಂಗಕ್ಕೆ ಎಡಗೈಯಲ್ಲಿ ತಟ್ಟೆ ಬಲಗೈಯಲ್ಲಿ ಗಂಟೆ ಹಿಡಿದು ಪೂಜಿಸುತ್ತಿದ್ದಾನೆ. ಮೇಲಿನ ಭಾಗದಲ್ಲಿ ಶಿವಲಿಂಗ ಹಾಗೂ ಬದಿಯಲ್ಲಿ ಕುಳಿತ ನಂದಿಯಿದೆ. ಶಿವಲಿಂಗದ ಮೇಲ್ಭಾಗದಲ್ಲಿ ಹೂವಿನ ಹಾರದ ಅಲಂಕರಣೆ ಇದೆ. ಶಿಲ್ಪದ ಮೇಲ್ತುದಿಯಲ್ಲಿ ಸೂರ್ಯ, ಚಂದ್ರ ಇರುವರು. ಒಟ್ಟಾರೆ ಶಿಲ್ಪದಲ್ಲಿ ಸತಿಯೊಂದಿಗೆ ಹಂಸ ತೋರಿಸಿರುವುದು ವಿಶೇಷ. ಈ ರೀತಿಯ ಶಿಲ್ಪಗಳನ್ನು ಸಾಮಾನ್ಯವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಕಾಣಬಹುದು.

**ಪಾಳೆಯಗಾರರ ದೇವಾಲಯಗಳ ಲಕ್ಷಣಗಳು**

* ಪಾಳೆಯಗಾರರ ಕಾಲದ ದೇವಾಲಯಗಳನ್ನು ಕಣಶಿಲೆಯ ಕಲ್ಲುಗಳಿಂದ ನಿರ್ಮಿಸಲಾಗಿದೆ.
* ಬಹುತೇಕ ದೇವಾಲಯಗಳು ಗರ್ಭಗೃಹ ಹಾಗೂ ತೆರೆದ ಮಂಟಪಗಳೆಂಬ ಎರಡು ಭಾಗಗಳನ್ನು ಹೊಂದಿವೆ. ಇನ್ನೂ ಕೆಲವು ದೇವಾಲಯಗಳಲ್ಲಿ ಅಂತರಾಳ ಎಂಬ ಮೂರನೇ ಭಾಗ ಕಂಡುಬರುತ್ತದೆ.
* ದೇವಾಲಯದ ಸುತ್ತ ರಕ್ಷಣಾಗೋಡೆ ನಿರ್ಮಿಸಲಾಗಿದೆ.
* ದ್ರಾವಿಡ ಶೈಲಿ ಕಂಡುಬರುತ್ತದೆ.
* ಕೆಲವು ದೇವಾಲಯದ ಪ್ರಾಕಾರ ಮಂಟಪಗಳು ಕಂಡುಬಂದಿದ್ದು ಇವುಗಳನ್ನು ಇಟ್ಟಿಗೆಯಿಂದ ನಿರ್ಮಿಸಲಾಗಿದೆ.
* ಪಾಳೆಯಗಾರರ ಆಡಳಿತ ವ್ಯಾಪ್ತಿಯಲ್ಲಿ ಬರುವ ಬಹುತೇಕ ಗ್ರಾಮಗಳಲ್ಲಿ ಆಂಜನೇಯ ದೇವಾಲಯಗಳು ಕಂಡುಬರುತ್ತವೆ.
* ಕೆಲವು ದೇವಾಲಯದ ಹೊರಭಾಗದಲ್ಲಿ ನಾಗಶಿಲ್ಪ, ಸಪ್ತಮಾತೃಕೆಯರು ಮುಂತಾದ ಹಲವು ಉಬ್ಬುಶಿಲ್ಪಗಳು ಕಂಡುಬರುತ್ತವೆ.
* ದೇವಾಲಯದ ಸಭಾಮಂಟಪಗಳು ನಾಲ್ಕು, ಎಂಟು ಅಥವಾ ಹದಿನಾರು ಸಾದಾ ಕಂಬಗಳನ್ನು ಹೊಂದಿವೆ.
* ಪಾಳೆಯಗಾರರ ದೇವಾಲಯಗಳ ಶಿಖರಗಳು ಸಂಪೂರ್ಣ ಜೀರ್ಣೋದ್ಧಾರ ಗೊಂಡಿರುವುದನ್ನು ಕಾಣಬಹುದು.
* ಪಾಳೆಯಗಾರರ ಪ್ರಮುಖ ದೇವಾಲಯಗಳಲ್ಲಿ ಪೂಜೆ, ಅಭಿಷೇಕ, ಮುಂತಾದ ಧಾರ್ಮಿಕ ಕಾರ್ಯಗಳು ಇಂದಿಗೂ ನಡೆಯುತ್ತಿವೆ.
* ಕೆಲವು ದೇವಾಲಯಗಳ ಮುಂಭಾಗಗಳಲ್ಲಿ ಪುಷ್ಕರಣಿ ಕಂಡುಬರುತ್ತದೆ.

ಹೀಗೆ ಪಾಳೆಯಗಾರರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿ ಪ್ರಾದೇಶಿಕ ದೇವಾಲಯ ನಿರ್ಮಾಣ ಶೈಲಿಯನ್ನು ಆರಂಭಿಸಿದರು ಎಂದು ಹೇಳಬಹುದು.

ದಾವಣಗೆರೆ ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡುಬರುವ ಪ್ರಮುಖ ಪಾಳೆಯಗಾರರೊಂದಿಗೆ ಇತರೆ ಕಿರು ಪಾಳೆಯಪಟ್ಟುಗಳಾದ, ಜಗಲೂರು, ಕಣಕುಪ್ಪೆ, ಬಿಳಿಚೋಡು, ಅಣಜಿ ಪಾಳೆಯಗಾರರು ತಮ್ಮ ಆಡಳಿತ ಪ್ರದೇಶದಲ್ಲಿ ಆಳ್ವಿಕೆ ನಡೆಸುವುದರೊಂದಿಗೆ ಕಲೆ ವಾಸ್ತು ಶಿಲ್ಪಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ. ಈ ಕಿರು ಪಾಳೆಯಪಟ್ಟುಗಳು ನಿರ್ಮಿಸಿದ ದೇವಾಲಯಗಳು, ಅರಮನೆ, ಕೋಟೆ, ಕೆರೆ, ಬಾವಿ ಮುಂತಾದ ಅನೇಕ ಸ್ಮಾರಕಗಳನ್ನು ಕ್ಷೇತ್ರಕಾರ್ಯ ಕೈಗೊಂಡು ಪರಿಶೀಲಿಸಿದಾಗ ಈ ಕಾಲದ ನಿರ್ಮಾಣಗಳು ಗತವೈಭವದ ಪ್ರತೀಕವಾಗಿ ನಿಂತಿವೆ ಎಂಬುದು ತಿಳಿಯುತ್ತದೆ. ಇವರ ರಚನೆಗಳು ದಾವಣಗೆರೆ ಜಿಲ್ಲೆಯ ಕಲಾಶ್ರೀಮಂತಿಕೆಗೆ ಸಾಕ್ಷಿಯಾಗಿದೆ.

ಒಟ್ಟಾರೆ ದಾವಣಗೆರೆ ಜಿಲ್ಲೆಯಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳ ರಚನಾಕಾರ್ಯ ಆರಂಭಗೊಂಡಿದ್ದು, ಅವು ಕಾಲದಿಂದ ಕಾಲಕ್ಕೆ ರಚನಾತ್ಮಕವಾಗಿ ನಿರ್ದಿಷ್ಟಗೊಳ್ಳುತ್ತ, ತಮ್ಮದೇ ಆದ ಶೈಲಿ, ಪ್ರಭೇದಗಳನ್ನು ಬಿಂಬಿಸುತ್ತಾ ಕಲೆ, ವಾಸ್ತುಶಿಲ್ಪಕ್ಕೆ ವೈಶಿಷ್ಟ್ಯಪೂರ್ಣ ಕೊಡುಗೆಯನ್ನು ನೀಡಿವೆ. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ವಿಜಯನಗರ ಕಾಲದವರೆಗೆ ಮಾತ್ರ ಹೆಚ್ಚು ಅಧ್ಯಯನಗಳು, ಸಂಶೋಧನೆಗಳು ನಡೆದಿದ್ದು ಮುಂದಿನ ಅರಸರ, ನಾಯಕರ ಪಾಳೆಯಗಾರರ, ಸಾಮಂತರ ಕಾಲದಲ್ಲಿ ಇಂತಹ ಚಟುವಟಿಕೆಗಳು ಸ್ವಲ್ಪಮಟ್ಟಿಗೆ ಆದುದರಿಂದ ಅವುಗಳ ಸಮಗ್ರ ಅಧ್ಯಯನದ ನಡೆಯಬೇಕಾಗಿದೆ. ಈ ಪಾಳೆಯಗಾರರು ವಾಸ್ತುಕಾರರ ಮತ್ತು ಶಿಲ್ಪಿಗಳ ಸಹಾಯದಿಂದ ದೇವಸ್ಥಾನಗಳನ್ನು, ಮಠಗಳನ್ನು, ಕೋಟೆಗಳನ್ನು, ಅಗ್ರಹಾರಗಳನ್ನು ನಿರ್ಮಿಸಿರುವುದರಿಂದ ಅವುಗಳಿಂದ ಆ ಕಾಲದ ಜನಜೀವನ, ನಂಬಿಕೆಗಳು ಸಮಾಜದ ಪದ್ಧತಿಗಳನ್ನು ತಿಳಿಯಬಹುದು. ಜೊತೆಗೆ ಪಾಳೆಯಗಾರರ ಕಾಲದ ಇತಿಹಾಸವು ಬೆಳಕಿಗೆ ಬರುತ್ತದೆ. ಹೀಗೆ ವಾಸ್ತುಶಿಲ್ಪ ಬೆಳೆಯಲು ದೇವಾಲಯಗಳು, ಕೋಟೆಗಳು ಪ್ರಮುಖ ಕಾರಣವಾಗಿವೆ.

**ಕೊನೆಟಿಪ್ಪಣಿಗಳು**

೧. ಕೊಟ್ರೇಶ್ ಎಂ., ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಕ.ವಿ.ವಿ.ಹಂಪಿ, ಪು.ಸಂ. ೧೩
೨. ಕೊಟ್ರೇಶ್ ಎಂ., ೨೦೧೦, ಹರಪನಹಳ್ಳಿ ತಾಲ್ಲೂಕಿನ ರಕ್ಷಣಾ ಸ್ಮಾರಕಗಳು ಪು.ಸಂ. ೬
೩. ಉಮೇಶ ಎನ್. ಹೀರೇಮಠ, ಮೂರ್ತಿಶಿಲ್ಪಕಲೆ(ಅಪ್ರಕಟಿತ ಪ್ರಬಂಧ, ಪು.ಸಂ. ೫೩)
೪. ರಾಜಾರಾಮ ಹೆಗಡೆ, ೧೯೯೨, ಭಾರತೀಯ ಮೂರ್ತಿಶಿಲ್ಪ ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯ ಐತಿಹಾಸಿಕ ವಿಶ್ಲೇಷಣೆ, ಅರಿವು ಬರಹ ಸಂ-೩, ಭಾಗ-೧, ಪು. ೩೫-೩೬
೫. ಶಕುಂತಲ ಎನ್., ಚಿತ್ರದುರ್ಗ ಪಾಳೆಯಗಾರರ ಕಾಲದ ಕಲೆ ಮತ್ತು ವಾಸ್ತುಶಿಲ್ಪ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ಪು.ಸಂ. ೧೯೦
೬. ಅದೇ, ಪು.ಸಂ. ೧೯೧
೭. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ಸಂತೆಬೆನ್ನೂರು ನಾಯಕರು ಪು.ಸಂ. ೧೩೪
೯. ಅದೇ ಪು.ಸಂ. ೧೩೫
೧೦. ಅದೇ ಪು.ಸಂ. ೧೩೫
೧೧. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ತರೀಕೆರೆ ನಾಯಕರು, ಪು.ಸಂ. ೧೬
೧೨. ಅದೇ, ಪು.ಸಂ. ೧೭
೧೩. ಅದೇ, ಪು.ಸಂ. ೧೭-೧೮
೧೪. ಅದೇ, ಪು.ಸ.೦ ೧೬
೧೫. ತಿಪ್ಪೇರುದ್ರಸ್ವಾಮಿ ಎಚ್. ಶಿಲ್ಪಕಲಾ ಪ್ರಪಂಚ, ಪು.ಸಂ. ೨೪೧
೧೬. ಅದೇ, ಪು.ಸಂ. ೨೪೬
೧೭. ಗಿರಿಜಾ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ ಪು.ಸಂ. ೭೨೪
೧೮. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು ಪು.ಸಂ. ೨೯

(ಹೆಚ್ಚಿನ ವಿವರ : ಚನ್ನಬಸಪ್ಪ ಎಸ್ ಪಾಟೀಲ್ ಅವರ ಕರ್ನಾಟಕದ ಕೋಟೆಗಳು ಹಾಗೂ ಡಾ.ಎಸ್.ಕೆ.ಜೋಶಿಯವರ ಕರ್ನಾಟಕದ ರಕ್ಷಣಾ ಕೋಟೆಗಳ ಬಗ್ಗೆ ಅಧ್ಯಯನ ಮಾಡಿರುವುದನ್ನು ಗಮನಿಸಬಹುದು.)

## ಅಧ್ಯಾಯ ಆರು

# ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಳೆಯಗಾರರು ಮತ್ತು ಪಾಳೆಯಗಾರರ ಮನೆತನದ ಇಂದಿನ ಸ್ಥಿತಿಗತಿ

ವಿಜಯನಗರೋತ್ತರ ಕಾಲದಲ್ಲಿ ಆಸ್ತಿತ್ವಕ್ಕೆ ಬಂದ ಪಾಳೆಯಗಾರರು ಕ್ರಿ.ಶ. ೧೫೦೦ರಿಂದ ೧೮೦೦ರವರೆಗೆ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ಇವರ ಆಡಳಿತ ಕ್ರಮ ನಾಡಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ಶಕೆಯನ್ನು ಆರಂಭಿಸಿತು. ಆದುದರಿಂದ ಈ ಕಾಲಘಟ್ಟವನ್ನು ಪಾಳೆಯಗಾರರ ಕಾಲ ಎಂದು ಕರೆಯಲಾಗುತ್ತದೆ. ಆರಂಭದಲ್ಲಿ ಪಾಳೆಯಗಾರರು ನೆರೆಯ ರಾಜರುಗಳನ್ನು ಹತ್ತಿಕ್ಕುವ ಪ್ರಯತ್ನ ನಡೆಸುತ್ತಿದ್ದರು. ಆದರೆ ಅಂದಿನ ಸಮಕಾಲೀನ ರಾಜಕೀಯ ಪರಿಸ್ಥಿತಿ ಸಂಪೂರ್ಣವಾಗಿ ಪಾಳೆಯಗಾರರಿಗೆ ಸಹಾಯಕವಾಗಿರಲಿಲ್ಲ. ಈ ಅವಧಿಯಲ್ಲಿಯೇ ಮೈಸೂರು ಸಂಸ್ಥಾನದಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರನ್ನು ಹೆಸರಿಗೆ ಮಾತ್ರ ರಾಜರನ್ನಾಗಿಸಿ ಅಧಿಕಾರವನ್ನು ತಮ್ಮ ಕೈಗೆ ತೆಗೆದುಕೊಂಡು ತಾವೇ ನವಾಬರೆಂದು ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಘೋಷಿಸಿಕೊಂಡರು. ಇವರು ಬಹು ಮಹತ್ವಾಕಾಂಕ್ಷಿಯುಳ್ಳವರಾಗಿದ್ದರು. ಈ ಹಿಂದೆ ಇದ್ದಂತಹ ಮೊಗಲ್ ಮತ್ತು ಬಿಜಾಪುರ ಸುಲ್ತಾನರ ತತ್ವವನ್ನೇ ಅಳವಡಿಸಿಕೊಂಡು, ಕರ್ನಾಟಕದ ಬೇರೆ ಬೇರೆ(ರಾಯದುರ್ಗ, ಚಿತ್ರದುರ್ಗ, ಹರಪನಹಳ್ಳಿ, ಬಳ್ಳಾರಿ) ಪಾಳೆಯಗಾರರ ಮೇಲೆ ದಾಳಿ ಮಾಡಿದರು. ಅವುಗಳನ್ನು ಒಂದೊಂದಾಗಿ ವಶಪಡಿಸಿಕೊಂಡು ತಮ್ಮ ಸಂಸ್ಥಾನದಲ್ಲಿ ಸೇರ್ಪಡೆಗೊಳಿಸುತ್ತಾ ಹೋದರು. ಇದೇ ಸಮಯದಲ್ಲಿ ಭಾರತದಲ್ಲಿ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದ್ದ ವಸಾಹತುಶಾಹಿ ಪಡೆಗಳು ಹೈದರಾಬಾದ್ ನಿಜಾಮ ಹಾಗೂ ಮರಾಠರ ಸಹಾಯ ಪಡೆದುಕೊಂಡು ಹೈದರಾಲಿ ಮತ್ತು ಟಿಪ್ಪುಸುಲ್ತಾನರನ್ನು ಸೋಲಿಸಿದರು. ಆದುದರಿಂದ ಹೈದರಾಲಿ ಮತ್ತು ಟಿಪ್ಪುಸುಲ್ತಾನ ವಶಪಡಿಸಿಕೊಂಡ ಪಾಳೆಯಪಟ್ಟುಗಳು, ಸಂಸ್ಥಾನಗಳು ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿ ವಸಾಹತುಶಾಹಿಗೆ ಒಳಪಟ್ಟವು. ಕಂಪನಿ ಸರ್ಕಾರ ಆಧೀನದಿಂದ, ದಾಸ್ಯತನದಿಂದ ಹೊರಬರುವ ಸಂದರ್ಭದಲ್ಲಿ ಹಲವಾರು ಸಣ್ಣಪುಟ್ಟ ದಂಗೆಗಳಾದವು. ಬ್ರಿಟಿಷರ ಶಸ್ತ್ರಾಸ್ತ್ರ ನಿಷೇಧ ಕಾಯ್ದೆ ವಿರೋಧಿಸಿ ಹಲಗಲಿ ಬೇಡರ ದಂಗೆ ಇಡಿ ದಕ್ಷಿಣ ಭಾರತದಲ್ಲಿ ಬ್ರಿಟಿಷರಿಗೆ ಕಲಿಸಿದ ಮೊದಲ

ಪಾತ ಎಂದು ಹೇಳಬಹುದು. ಹಾಗೆಯೇ ಸುರಪುರದ ರಾಜ ವೆಂಕಟಪ್ಪನಾಯಕನು ಅತೀ ಚಿಕ್ಕ ವಯಸ್ಸಿನಲ್ಲಿ ಕಂಪನಿ ಸರ್ಕಾರದ ಕೆಂಗಣ್ಣಿಗೆ ಗುರಿಯಾಗಿ ಹುತಾತ್ಮರಾದರು. ಹೀಗೆ ಕರ್ನಾಟಕದಲ್ಲಿ ಕಂಪನಿ ಸರ್ಕಾರ ವಿರುದ್ಧ ವೆಂಕಟಾದ್ರಿ ನಾಯಕ, ಉಮೇಜಿರಾವ್‌ನಾಯಕ, ಕಾರುಗನಹಳ್ಳಿ ಮಾರಾನಾಯಕ, ರಾಜವೀರ ಮದಕರಿನಾಯಕ, ತರೀಕೆರೆ ಸರ್ಜಾರಂಗಪ್ಪನಾಯಕ, ಸರ್ಜಾಹನುಮಪ್ಪನಾಯಕ ಮುಂತಾದವರು ಕನ್ನಡ ನಾಡು ನುಡಿ ದೇಶ ಪ್ರೇಮಕ್ಕಾಗಿ ವಸಾಹತುಶಾಹಿ ವಿರುದ್ಧ ಹೋರಾಟ ಮಾಡಿರುವುದು ಅವಿಸ್ಮರಣಿಯ.

ಆರಂಭದಲ್ಲಿ ಪಾಳೆಯಗಾರರು ಕರ್ನಾಟಕದಲ್ಲಿ ಹೈದರಾಲಿ ಮತ್ತು ಟಿಪ್ಪುಸುಲ್ತಾನರನ್ನು ವಿರೋಧಿಸಿದಂತೆ, ಕಂಪನಿ ಸರ್ಕಾರವನ್ನು ಕೂಡ ವಿರೋಧಿಸಿದರು. ಬಳ್ಳಾರಿ, ಮಂಜರಾಬಾದ್, ತರೀಕೆರೆ, ಹಲಗಲಿ ಬೇಡರು, ಸುರಪುರ ನಾಯಕರು ಇವರ ವಿರುದ್ಧ ಪ್ರತಿಭಟನೆ ಮಾಡಿದರು. ಇದಕ್ಕೆ ಪೂರಕವಾಗಿ ಇನ್ನೂ ಕೆಲವು ಆದಿವಾಸಿ ದಂಗೆಗಳು, ರೈತರದಂಗೆಗಳು, ನಗರ ದಂಗೆಗಳು ನಡೆದದ್ದು ಕಂಡುಬರುತ್ತವೆ.

**೬.೧. ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಳೆಯಗಾರರು**

ಕ್ರಿ.ಶ. ೧೬ನೆಯ ಶತಮಾನದಿಂದ ಕ್ರಿ.ಶ. ೧೮ನೆಯ ಶತಮಾನದವರೆಗೆ ಪಾಳೆಯಗಾರರು ಕರ್ನಾಟಕದಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ಅದರಂತೆ ದಾವಣಗೆರೆ ಜಿಲ್ಲೆಯಲ್ಲಿ ಹರಪನಹಳ್ಳಿ ಪಾಳೆಯಗಾರರು, ಸಂತೆಬೆನ್ನೂರು, ಬಸವಾಪಟ್ಟಣ, ಬಿಳಿಚೋಡು, ಜಗಲೂರು, ಅಣಜಿ ಮುಂತಾದ ಪಾಳೆಯಗಾರರು ಸುಮಾರು ೩ ಶತಮಾನಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ಈ ಸಂದರ್ಭದಲ್ಲಿ ಕರ್ನಾಟಕದ ನಾಡು ನುಡಿ, ಸಂಸ್ಕೃತಿಗೆ ವಿಶಿಷ್ಟವಾದ ಕೊಡುಗೆಯನ್ನು ನೀಡಿರುವುದು ಕಂಡುಬರುತ್ತದೆ. ಈ ಪಾಳೆಯಗಾರರು ಮುಂದೆ ಹೈದರಾಲಿ, ಟಿಪ್ಪು ಹಾಗೂ ವಸಾಹತುಶಾಹಿ ವಿರುದ್ಧ ತಮ್ಮ ಪ್ರಭುತ್ವ ಹಾಗೂ ಸಂಸ್ಥಾನವನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಹೋರಾಟ ಮಾಡಿರುವುದು ಕಂಡುಬರುತ್ತದೆ. ಹಾಗೇ ಕೆಲವು ಪಾಳೆಯಗಾರರು ಕಂಪನಿ ಸರ್ಕಾರದ ಸಹಕಾರದಿಂದ ಅಧಿಕಾರ ನಡೆಸಿದ ಅಂಶಗಳು ಕೂಡ ಕಂಡುಬರುತ್ತದೆ.

ಕ್ರಿ.ಶ. ೧೮೦೦ರಿಂದ ೧೯೦೦ರ ಅವಧಿಯಲ್ಲಿ ಕರ್ನಾಟಕವನ್ನು ಸರ್ಕಾರ ಹಲವು ಭಾಗಗಳಾಗಿ ವಿಭಜಿಸಿದರು. ಈ ಸಾಮ್ರಾಜ್ಯಶಾಹಿ ಮತ್ತು ವಸಾಹತುಷಾಹಿ ಸರ್ಕಾರದ ವಿರುದ್ಧ ಸ್ಥಳೀಯ ನಾಯಕರು ಹೋರಾಟ ನಡೆಸಿದರು. ಟಿಪ್ಪುವಿನ ಮರಣದ ನಂತರ ಪಾಳೆಯಗಾರರು ಪುನಃ ತಮ್ಮ ಅಧಿಕಾರವನ್ನು ಪಡೆಯಲು ವಸಾಹತುಶಾಹಿ ವಿರುದ್ಧ ದಂಗೆಗಳನ್ನು ಮಾಡಿದರು. ಹಾಗೆಯೇ ಕೆಲವು ದೇಶೀಯ ಸಂಸ್ಥಾನಿಕರಲ್ಲದೆ ಬೇಡನಾಯಕರು ವಸಾಹತುಶಾಹಿ ಪರವಾಗಿ ಇದ್ದರು[೧] ಎಂಬ ಅಂಶ ತಿಳಿದುಬರುತ್ತದೆ. ಇದರಂತೆ ದಾವಣಗೆರೆ ಜಿಲ್ಲೆಯಲ್ಲಿ ಹರಪನಹಳ್ಳಿ ಪಾಳೆಯಗಾರರು ವಸಾಹತುಶಾಹಿ ವಿರುದ್ಧ ಹೋರಾಟ ಮಾಡಿರುವರು.

ಮೊದಲು ಹರಪಹನಳ್ಳಿ ಪಾಳೆಯಗಾರರು ಹೈದರ್, ಟಿಪ್ಪು ಪರ ಮತ್ತು ವಿರುದ್ಧವಾಗಿ ಹೋರಾಡಿದರು. ಅನಂತರ ಸೋಮಶೇಖರನಾಯಕ ತಮ್ಮ ಸಂಬಂಧಿಕರೊಂದಿಗೆ ಮತ್ತು ಕಂಪನಿ ಸರ್ಕಾರದೊಂದಿಗೆ ತಮ್ಮ ಪಾಳೆಯಪಟ್ಟನ್ನು ಉಳಿಸಿಕೊಳ್ಳಲು ಹಾಗೂ ತಮ್ಮ ಆಸ್ತಿತ್ವಕ್ಕಾಗಿ ಹೋರಾಟ ಮಾಡಿರುವುದು ತಿಳಿದುಬರುತ್ತದೆ. ಕ್ಯಾತನಹಳ್ಳಿ ರಾಮಣ್ಣನವರು ಸಂಪಾದಿಸಿರುವ 'ಫ್ಲೀಟರು ಸಂಗ್ರಹಿಸಿದ ಲಾವಣಿಗಳು' ಕೃತಿಯಲ್ಲಿ ಮಂಡ್ರೋಲ(ಸರ್ ಥಾಮಸ್ ಮನ್ರೊ) ಅವರ ಕುರಿತು ಪದ ಲಾವಣಿ ರೂಪದಲ್ಲಿದೆ.

ಪುಂಡ ಪಾಳೆಗಾರರು ಕೂಡೀ
ತಂಮೊಳಗ ತಾವು ಮಾತಾಡಿ
ಕಳಕೊಂಡರು ನೆಂಬಿದ ಗೋಡೀ
ಬಿಟ್ಟುಕೊಟ್ಟು ಹೊದರವರೋಡಿ[೨]

ಎಂಬ ವಿವರಗಳು ವಸಾಹತುಶಾಹಿ ವಿರುದ್ಧ ಪಾಳೆಯಗಾರರ ಸ್ಥಳೀಯರ ಪ್ರತಿಭಟನೆಗಳನ್ನು ಈ ಮೇಲಿನ ಲಾವಣಿಯಿಂದ ತಿಳಿಯಬಹುದಾಗಿದೆ.

ಹರಪನಹಳ್ಳಿ ಪಾಳೆಯಪಟ್ಟನ್ನು ಹೈದರಾಲಿ ಮತ್ತು ಟಿಪ್ಪು ವಶಪಡಿಸಿಕೊಂಡಿದ್ದರು. ಅಂತಹ ಸಂದರ್ಭದಲ್ಲಿ ಕಂಪನಿ ಟಿಪ್ಪುವನ್ನು ೧೭೯೯ರಲ್ಲಿ ೪ನೆಯ ಆಂಗ್ಲೋ ಮೈಸೂರು ಯುದ್ಧದಲ್ಲಿ ಸೋಲಿಸಿತು. ಹರಪನಹಳ್ಳಿ ಪಾಳೆಯಪಟ್ಟನ್ನು ತಮ್ಮ ತೆಕ್ಕೆಗೆ ಹಾಕಿಕೊಂಡರು. ಈ ಪಾಳೆಯಪಟ್ಟಿನೊಂದಿಗೆ ಬಳ್ಳಾರಿ ಜಿಲ್ಲೆಯ ಗುಡೇಕೋಟೆ, ಜರಿಮಲೆ, ಬಳ್ಳಾರಿ ಪಾಳೆಯಪಟ್ಟನ್ನು ಕಂಪನಿ ಸರ್ಕಾರ ವಶಪಡಿಸಿಕೊಂಡಿತು. ಕ್ರಿ.ಶ. ೧೮೦೦ರಲ್ಲಿ ಕಂಪನಿ ಸರ್ಕಾರ ಸರ್ ಥಾಮಸ್ ಮನ್ರೊ ಎಂಬ ಅಧಿಕಾರಿಯನ್ನು ನೇಮಿಸಿತು ಥಾಮಸ್ ಮನ್ರೊ ಜೊತೆಗೆ ಜನರಲ್ ಡುಗಾಲ್ಸ್ ಕಾಂಪ್‌ಬೆಲ್ ಸೇನಾ ಮುಖ್ಯಸ್ಥನಾಗಿ ನೇಮಕಗೊಂಡನು. ಕಲೆಕ್ಟರ್ ಅಧೀನದಲ್ಲಿ ಉಪವಿಭಾಗಾಧಿಕಾರಿಗಳನ್ನು ನೇಮಿಸಿ ಹರಪನಹಳ್ಳಿ ಒಂದು ಉಪವಿಭಾಗವಾಗಿ ಸೇರಿತು. ಜೇಮ್ಸ್ ಕ್ರೊಚೇನ್ ವಿಭಾಗೀಯ ಕಲೆಕ್ಟರ್‌ನಾಗಿ ಇಲ್ಲಿಯ ಆಡಳಿತ ನೋಡಿಕೊಳ್ಳುತ್ತಿದ್ದನು. ಸರ್ ಥಾಮಸ್ ಮನ್ರೊ ಈ ಪ್ರದೇಶದ ಮುಖ್ಯಸ್ಥನಾಗಿ ಕಂದಾಯ, ಶಾಂತಿ, ಸಾರ್ವಜನಿಕ ಅಭಿವೃದ್ಧಿ, ನ್ಯಾಯವ್ಯವಸ್ಥೆ ಶಿಕ್ಷಣ ಮುಂತಾದವುಗಳನ್ನು ಯೂರೋಪಿಯನ್ ಮಾದರಿಗೆ ಒಳಪಡಿಸಿದನು.[೩] ವಸಾಹತು ಕಾರಣದಿಂದ ಈ ಪ್ರದೇಶದಲ್ಲಿ ದೊಂಡಿಯವಾಘ, ಬೇಲೂರಿನ ಕೃಷ್ಣಪ್ಪನಾಯಕ, ಕೊಪ್ಪಳದ ವೀರಪ್ಪ,[೪] ಹರಪನಹಳ್ಳಿ ಪಾಳೆಯಗಾರರು, ಮುಂಡರಗಿ ಭೀಮರಾವ್, ಪಿಂಡಾರಿಗಳು, ಬಳ್ಳಾರಿ ಜಿಲ್ಲೆಯ ಇತರೆ ಪಾಳೆಯಗಾರರು[೫] ದಂಗೆ ಎದ್ದರು. ಈ ಎಲ್ಲಾ ದಂಗೆಗಳನ್ನು ಥಾಮಸ್ ಮನ್ರೊ ಹತ್ತಿಕ್ಕಿ ಶಾಂತಿ ಸುವ್ಯವಸ್ಥೆ ತಂದು ಮಿಲಿಟರಿಗೆ ಸೇರಿಸಿಕೊಂಡನು. ಇತರೆ ನಾಗರಿಕರಿಗೆ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಲು ಆದೇಶ ಹೊರಡಿಸಲಾಯಿತು. ಇವರಿಂದ ಕಂಪನಿ ಸರ್ಕಾರ ಸೇವೆಯ ಜೊತೆಗೆ ಹೆಚ್ಚು ಹೆಚ್ಚು ಕಂದಾಯ ದೊರೆಯುತ್ತಿತ್ತು.

ಮುಂದೆ ಈ ವ್ಯವಸ್ಥೆ ಸ್ವಾಭಿಮಾನಕ್ಕೆ ಧಕ್ಕೆ ತಂದಿತು. ಈ ಭಾಗದಲ್ಲಿ ವಸಾಹತುಷಾಹಿ ಪ್ರಭಾವ ಎಷ್ಟಿತ್ತೆಂದರೆ ಸ್ವಾತಂತ್ರ್ಯ ಸಿಗುವವರೆಗೂ ದೇಶೀಯ ಆಡಳಿತ ತಲೆ ಎತ್ತದಂತಾಯಿತು.

ಚಿಕ್ಕರೂರು ಗೋವಿಂದಾಚಾರ್ಯರು ತಮ್ಮ ಅಪ್ರಕಟಿತ ಹಸ್ತಪ್ರತಿಯಲ್ಲಿ ಕ್ಷಯ ಸಂವತ್ಸರ ಪುಷ್ಯ ಶುದ್ಧ ೧೧ರಲ್ಲು ಕಂಪನಿ ಸರ್ಕಾರದ ಅಪ್ಪಣೆ ಪ್ರಕಾರ ಸರ್ದಾರ್ ರವುಡಲ್ ಸಾಹೇಬರು ಬಂದು ಪಾಳೆಯಗಾರರ ಕುರೆದಗುಡ್ಡ ಕಿಲ್ಲೆ ಕೆಡವಿಸಿ ಇಲ್ಲಿಯ ಬತೇರಿಗಳಿಗೆ ಮದ್ದಿನ ಪಟೇರಿಗೆ ಹುರಿ ಹಾಕಿಸಿ ಯಾವುತ್ತೂ ತೋಪು, ಸಾಮಾನು, ಸಂಪತ್ತುಗಳನ್ನು ಬಳ್ಳಾರಿಗೆ ತೆಗೆದುಕೊಂಡು ಹೋದರು[೬] ಎಂದು ತಿಳಿಸುತ್ತಾರೆ. ಈ ಮೇಲಿನ ಅಂಶವನ್ನು ಸೂಕ್ಷ್ಮವಾಗಿ ಗಮನಿಸಿದರೆ ಕಂಪನಿ ಸರ್ಕಾರ ತಮ್ಮ ವಸಾಹತುಶಾಹಿ ಅಧಿಕಾರವನ್ನು ಬಲಪ್ರಯೋಗಿಸಿ ಸ್ಥಾಪಿಸಿದರು ಎಂದು ತಿಳಿದುಬರುತ್ತದೆ. ೧೮೭೧ರಲ್ಲಿ ಪಾಳೆಯಗಾರರ ರಾಜಧಾನಿ ನಾರಾಯಣದೇವರಕೆರೆಯ ಪಾಳೆಯಗಾರರ ದರ್ಬಾರು ಹಾಲ್‌ನಲ್ಲಿ ಸರ್ಕಾರಿ ನ್ಯಾಯಾಲಯ ಸ್ಥಾಪಿಸಿದರು[೭] ಎಂಬುದರ ಕುರಿತಾಗಿ ಮಾಹಿತಿ ದೊರೆಯುತ್ತದೆ.

ಥಾಮಸ್ ಮನ್ರೋ ಹರಪನಹಳ್ಳಿ ಪಾಳೆಯಗಾರರ ಮೇಲೆ ದಾಳಿ ಮಾಡಿ ಅವರನ್ನು ಮಟ್ಟ ಹಾಕಿ ಪಾಳೆಯಗಾರತ್ವವನ್ನು ತೆಗೆದುಹಾಕಿ ಅವರಿಗೆ ಮಾಶಾಸನ ಕೊಟ್ಟನು. ಪ್ರಮುಖ ಪಾಳೆಯಗಾರರಿಗೆ ಕಂದಾಯ ವಸೂಲಿ ಮಾಡುವ ಕರ್ತವ್ಯವನ್ನು ನೀಡಿದನು. ಕೆಳವರ್ಗದ ಪಾಳೆಯಗಾರರ ವಂಶಸ್ಥರಿಗೆ ತಳವಾರಿಕೆ ಹುದ್ದೆಯನ್ನು ನೀಡಿದನು. ಇದರಿಂದ ಅಸಮಾಧಾನಗೊಂಡ ಹರಪನಹಳ್ಳಿ ಪಾಳೆಯಗಾರರು ಮತ್ತು ಇತರೆ ಪಾಳೆಯಗಾರರು ಸೇರಿ ಕಂಪನಿಸರ್ಕಾರ ವಿರುದ್ಧ ದಂಗೆ ನಡೆಸಿದರು.[೮] ಹರಪನಹಳ್ಳಿ ಪಾಳೆಯಗಾರ ೨ನೇ ಸೋಮಶೇಖರನಾಯಕ ಮತ್ತು ದಿವಾನ ಹಂಪರಸಪ್ಪನನ್ನು ಬ್ರಿಟಿಷ್ ಅಧಿಕಾರಿ ಜನರಲ್ ಹ್ಯಾರಿಸ್ ಮತ್ತು ಮೈಸೂರು ಸಂಸ್ಥಾನದ ದಿವಾನ ಪೂರ್ಣಯ್ಯ ಹರಿಹರಕ್ಕೆ ಕರೆಸಿಕೊಂಡರು. ಇವರು ೨ನೇ ಸೋಮಶೇಖರನಾಯಕನ ಅಧಿಕಾರವನ್ನು ಕೊನೆಗೊಳಿಸಿ ಬ್ರಿಟಿಷರಿಂದ ರೂ. ೬೦೦೦೦ಗಳ ಜಹಗೀರು ಪಡೆದು ನಿವೃತ್ತನಾಗಬೇಕೆಂದು ಆದೇಶಿಸಿದರು. ೨ನೇ ಸೋಮಶೇಖರ ನಾಯಕ ಇದನ್ನು ಒಪ್ಪದೆ ತಿರಸ್ಕರಿಸಿದನು.[೯] ಆಗ ಈತನನ್ನು ಹಾಗೂ ಈತನ ನಾಲ್ಕು ಜನ ಪತ್ನಿಯರನ್ನು ಬಂಧಿಸಿ ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ಇಟ್ಟರು. ನಂತರ ಸುಮಾರು ವರ್ಷಗಳ ಕಾಲ ೨ನೇ ಸೋಮಶೇಖರನಾಯಕ ಬಂಧನದಲ್ಲಿಯೇ ಇದ್ದು ೧೮೨೫ರಲ್ಲಿ ಶ್ರೀರಂಗಪಟ್ಟಣದ ಸೆರೆಮನೆಯಲ್ಲೇ ಮರಣ ಹೊಂದಿದನು. ಕಂಪನಿ ಸರ್ಕಾರ ಅವನ ನಾಲ್ಕು ಜನ ಪತ್ನಿಯರನ್ನು ಬಿಡುಗಡೆಗೊಳಿಸಿತು. ೨ನೇ ಸೋಮಶೇಖರ ನಾಯಕ ಮರಣ ಹೊಂದಿ ನಂತರ ಬ್ರಿಟಿಷರು ಈ ಪಾಳೆಯಪಟ್ಟನ್ನು ಬಳ್ಳಾರಿ ಜಿಲ್ಲೆಗೆ ಸೇರಿಸಿಕೊಂಡು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡರು. ಕ್ರಿ.ಶ. ೧೮೦೦ರಿಂದ ೧೯೪೭ರವರೆಗೆ ಈ ಪಾಳೆಯಪಟ್ಟು ಬ್ರಿಟಿಷ್ ವಸಾಹತುಶಾಹಿಗೆ ಒಳಪಟ್ಟು ಪಾಳೆಯಗಾರರ ಆಡಳಿತ ವ್ಯವಸ್ಥೆಯಿಂದ ಆಧುನಿಕ ಯೂರೋಪಿಯನ್ ಆಂಗ್ಲ ಮಾದರಿಗೆ

ವರ್ಗಾವಣೆಗೊಂಡಿತು. ಈ ಪ್ರದೇಶದ ರಾಜಕೀಯ ಆಡಳಿತ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಧಾರ್ಮಿಕ, ನ್ಯಾಯಾಂಗ ಮುಂತಾದ ಅನೇಕ ಕ್ಷೇತ್ರಗಳ ಮೇಲೆ ವಸಾಹತುಷಾಹಿಯ ಪ್ರಭಾವವನ್ನು ಗುರುತಿಸಬಹುದು.

ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ ಪ್ರದೇಶವು ಜಿಲ್ಲೆಯಾಗಿ ರಚನೆಗೊಂಡ ನಂತರ ಈ ಜಿಲ್ಲೆಯಲ್ಲಿ ಕಂಪನಿ ಸರ್ಕಾರದ ಆಡಳಿತ ಪ್ರಾರಂಭವಾಯಿತು. ಸರ್ ಥಾಮಸ್ ಮನ್ರೊ ಈ ಜಿಲ್ಲೆಯ ಪ್ರಥಮ ಜಿಲ್ಲಾ ಕಲೆಕ್ಟರ್ ಆಗಿ ತನ್ನ ಆಡಳಿತ ಪ್ರಾರಂಭಿಸಿದನು.[೧೦] ಈ ಸಂದರ್ಭದಲ್ಲಿ ಪಾಳೆಯಗಾರ ಮನೆತನದವರು ಹಲವಾರು ದಂಗೆ, ಅಶಾಂತಿ, ಅಸಮಾಧಾನಗಳನ್ನು ವ್ಯಕ್ತಪಡಿಸಿದರು. ಅವುಗಳನ್ನೆಲ್ಲ ಹತ್ತಿಕ್ಕಿ ಅಧಿಕಾರವನ್ನು ನಡೆಸಿದನು. ಈ ಪಾಳೆಯಪಟ್ಟಿನಲ್ಲಿ ಕೃಷಿ, ಕಂದಾಯ, ನೀರಾವರಿ ಮುಂತಾದ ಸುಧಾರಣೆಗಳನ್ನು ಜಾರಿಗೊಳಿಸಿದನು. ಭೂ ಸರ್ವೇಕ್ಷಣೆ, ಆಂಗ್ಲ ಮಾದರಿಯ ಶಿಕ್ಷಣವನ್ನು ಪರಿಚಯಿಸಿದನು. ರಸ್ತೆ ಕೆರೆ-ಕಾಲುವೆಗಳ ನಿರ್ಮಾಣ, ರೈಲುಮಾರ್ಗ ನಿರ್ಮಾಣ, ನ್ಯಾಯಾಲಯಗಳ ಸ್ಥಾಪನೆ ಮುಂತಾದ ಸಾರ್ವಜನಿಕ ಕಾರ್ಯಕ್ರಮಗಳನ್ನು ಜಾರಿಗೆ ತಂದನು. ವಸಾಹತೀಕರಣದ ಪ್ರಭಾವದಿಂದ ಈ ಪ್ರದೇಶದಲ್ಲಿ ಕೈಗಾರಿಕೆ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಭಾರಿ ಪ್ರಮಾಣದಲ್ಲಿ ಬದಲಾವಣೆ ಉಂಟಾಯಿತು. ಕಬ್ಬಿಣ, ಎಣ್ಣೆ, ಹತ್ತಿ ಬಟ್ಟೆ ಕೈಗಾರಿಕೆಗಳು ಪಾಳೆಯಪಟ್ಟಿನಲ್ಲಿ ಒಳಗೊಂಡಿದ್ದ ಪ್ರದೇಶಗಳಾದ ಹೊಸಪೇಟೆ, ನಾರಾಯಣದೇವರಕೆರೆ, ಹಗರಿಬೊಮ್ಮನಹಳ್ಳಿ, ಹರಪನಹಳ್ಳಿ, ದಾವಣಗೆರೆ, ಕೊಟ್ಟೂರು ಮುಂತಾದ ಕಡೆ ಅಭಿವೃದ್ಧಿಗೊಂಡವು. ಈ ಪ್ರದೇಶದಲ್ಲಿ ಸಾರ್ವಜನಿಕ ಆಡಳಿತವು ಅನುಕೂಲಕ್ಕಾಗಿ ಗವರ್ನರ್ ಜನರಲ್, ಕಲೆಕ್ಟರ್, ಸಬ್‌ಕಲೆಕ್ಟರ್, ಡೆಪ್ಯೂಟಿ ಕಲೆಕ್ಟರ್, ತಹಶೀಲ್ದಾರ್, ಪಟೇಲ, ಕರಣಂ, ರೆವಿನ್ಯೂ, ಫಿವನ್ಸ್ ಮುಂತಾದ ಅಧಿಕಾರಿ ಶ್ರೇಣಿಗಳಲ್ಲಿ ಹಂಚಿಕೆಯಾಯಿತು. ಈ ಭಾಗದಲ್ಲಿ ಥಾಮಸ್ ಮನ್ರೊ ಪರಿಚಯಿಸಿದ ರೈತವಾರಿ ಪದ್ಧತಿಯನ್ನು ಜಾರಿಗೊಳಿಸುವುದರ ಮೂಲಕ ಕಂದಾಯ ಸುಧಾರಣೆ ಮಾಡಿದನು. ಈ ಪ್ರದೇಶವು ಊಳಿಗಮಾನ್ಯ ವ್ಯವಸ್ಥೆಗೆ ಪರಿವರ್ತನೆಗೊಂಡಿತು. ಇವರ ಆಡಳಿತ ಪರಿಣಾಮದಿಂದಾಗಿ ಈ ಪ್ರದೇಶದಲ್ಲಿ ಸಾಮಾಜಿಕ ಅನಿಷ್ಟ ಪದ್ಧತಿ, ಸತಿಸಹಗಮನ ಪದ್ಧತಿ, ಬಾಲ್ಯವಿವಾಹ ನಿಷೇಧ, ಸಹಭೋಜನಾ ಪ್ರೋತ್ಸಾಹ, ವಿಧವಾವಿವಾಹ ಅಂತರ್‌ಜಾತಿ ವಿವಾಹ ಮುಂತಾದ ಅನೇಕ ಸಾಮಾಜಿಕ ಸುಧಾರಣೆಗಳು ಜಾರಿಗೊಂಡವು. ಇವುಗಳಿಂದ ಈ ಭಾಗದ ಸಾಮಾಜಿಕ ವ್ಯವಸ್ಥೆ ಬದಲಾಯಿತು. ಇವರ ಪ್ರಭಾವದಿಂದ ಮತಾಂತರ ಬೆಳೆದುಬಂದಿತು. ಇದರಿಂದ ಇಲ್ಲಿ ಕ್ರಿಶ್ಚಿಯನ್ ಧರ್ಮ ನೆಲೆಗೊಂಡಿರುವುದು ಕಾಣಬಹುದು. ಕಾಲ ಕಳೆದಂತೆ ಇವರ ದುರಾಡಳಿತ ಆರಂಭಗೊಂಡಿತು. ಈ ದುರಾಡಳಿತ ಹೆಚ್ಚಾದಂತೆ ಬಳ್ಳಾರಿ, ಕೊಪ್ಪಳ, ಮುಂಡರಗಿ ಮುಂತಾದ ಪ್ರದೇಶಗಳಲ್ಲಿ ಪ್ರತಿಭಟನೆಗಳು, ಹೋರಾಟಗಳು ವಸಾಹತುಶಾಹಿ ವಿರುದ್ಧ ಆರಂಭಗೊಂಡಿತು. ಈ ಹೋರಾಟಗಳಲ್ಲಿ ಪಾಳೆಯಗಾರರು, ಅಧಿಕಾರಿಗಳು, ನಾಗರಿಕರು ಸೇರಿಕೊಂಡು ವಸಾಹತುಶಾಹಿಯ ವಿರುದ್ಧ ವಿವಿಧ ರೀತಿಯಲ್ಲಿ ಪ್ರತಿಭಟನೆ ಮಾಡಿದರು.

೨೦ನೆಯ ಶತಮಾನದ ಆರಂಭದಲ್ಲಿ ಬ್ರಿಟಿಷರ ವಿರುದ್ಧ ಭಾರತದಲ್ಲಿ ರಾಷ್ಟ್ರೀಯತೆಯು ಜಾಗೃತಗೊಂಡು ಸ್ವಾತಂತ್ರ್ಯ ಚಳುವಳಿ ಬಲಗೊಂಡಿತು. ಸ್ವಾತಂತ್ರ್ಯ ಹೋರಾಟದ ಅನೇಕ ಘಟನೆಗಳು ಈ ಭಾಗದಲ್ಲಿ ನಡೆದವು. ತಹಶೀಲ್ದಾರ್ ಅಧಿಕಾರಿಯಾದ ಮುಂಡರಗಿ ಭೀಮರಾಯ ರಾಷ್ಟ್ರನಾಯಕ ಎಸ್.ನಿಜಲಿಂಗಪ್ಪ, ಹರಪನಹಳ್ಳಿಯ ಇಜಾರಿ ವಸುಪಾಲಪ್ಪ, ಬಳ್ಳಾರಿ ಸಿದ್ಧಮ್ಮ, ಇನ್ನೂ ಅನೇಕ ನಾಯಕರ ಜೊತೆಗೆ ಸಾವಿರಾರು ನಾಗರಿಕರು ಈ ವಸಾಹತುಶಾಹಿ ವಿರುದ್ಧ ಹೋರಾಟ ಮಾಡಿ ಬ್ರಿಟಿಷರಿಗೆ ಬಿಸಿ ಮುಟ್ಟಿಸಿದರು. ಅನೇಕ ವರ್ಷಗಳ ಕಾಲ ಈ ಹೋರಾಟ ನಡೆದುಕೊಂಡು ಬಂದಿತು. ಗಾಂಧೀಜಿ, ನೆಹರುರಂತಹ ರಾಷ್ಟ್ರನಾಯಕರ ಪ್ರಭಾವದಿಂದ ಎಲ್ಲಾ ಸಮುದಾಯದವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದರು. ೧೯೪೭ ಆಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯಗೊಂಡಿತು. ಆದರೂ ಈ ಪ್ರದೇಶಕ್ಕೆ ಸ್ವಾತಂತ್ರ್ಯ ದೊರಕಲಿಲ್ಲ. ಬಳ್ಳಾರಿ ಜಿಲ್ಲೆಯ ಪ್ರದೇಶಗಳು ಹೈದರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದವು. ಸರ್ದಾರ್ ವಲ್ಲಭಬಾಯಿ ಪಟೇಲ್ ಅವರ ಕ್ರಮದಿಂದ ಈ ಪ್ರದೇಶ ನಿಜಾಮನಿಂದ ವಿಮೋಚನೆಗೊಂಡು ಸ್ವಾತಂತ್ರ್ಯವಾಯಿತು. ಹರಪನಹಳ್ಳಿ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಯಿತು. ೧೯೯೭ರಲ್ಲಿ ರಾಜ್ಯ ಪುನರ್ ವಿಂಗಡಣೆ ಸಂದರ್ಭದಲ್ಲಿ ದಾವಣಗೆರೆ, ಜಿಲ್ಲಾ ಕೇಂದ್ರವಾಗಿ ರೂಪುಗೊಂಡಿತು. ಈ ಹೊಸ ಜಿಲ್ಲೆಗೆ ಹರಿಹರ, ಹೊನ್ನಾಳಿ, ಚನ್ನಗಿರಿ, ಜಗಲೂರು, ದಾವಣಗೆರೆ ಜೊತೆಗೆ ಹರಪನಹಳ್ಳಿ ತಾಲ್ಲೂಕನ್ನು ಸೇರಿಸಿಕೊಂಡು ಹೊಸ ಜಿಲ್ಲೆಯಾಗಿ ಕರ್ನಾಟಕದ ಜಿಲ್ಲೆಗಳಿಗೆ ಸೇರ್ಪಡೆಗೊಂಡಿತು. ಇವರ ಕಾಲದ ಕಟ್ಟಡಗಳು ಇಂದಿಗೂ ಹರಪನಹಳ್ಳಿ, ಹ್ಯಾರಡ, ಗಡಿಗುಡಾಳು, ಹೊಸಪೇಟೆ, ಬಳ್ಳಾರಿ ಮುಂತಾದ ಕಡೆ ಸುವ್ಯವಸ್ಥಿತವಾಗಿ ಇರುವುದನ್ನು ನಾವು ಕಾಣಬಹುದು. ಹರಪನಹಳ್ಳಿ ಹಳೇ ತಾಲೂಕು ಪಂಚಾಯಿತಿ ಕಛೇರಿ, ಕಾಲೇಜು ಕಟ್ಟಡ ರಸ್ತೆ ಮುಂತಾದ ಅನೇಕ ಸ್ಮಾರಕಗಳು ಕಂಡುಬರುತ್ತವೆ.

**ವಸಾಹತುಶಾಹಿ ಕಾಲದಲ್ಲಿ ತರೀಕೆರೆ(ಮೂಲ ಸಂತೆಬೆನ್ನೂರು) ಪಾಳೆಯಗಾರರು**

ತಾಳಿಕೋಟೆ ಕದನದಲ್ಲಿ ಬಸವಾಪಟ್ಟಣದ ಕಾಮಗೇತಿ ಹನುಮಂತಪ್ಪ ನಾಯಕರು ವಿಜಯನಗರದ ಪರ ದಂಡನಾಯಕನಾಗಿ ತೋರಿಸಿದ ಪರಾಕ್ರಮಕ್ಕಾಗಿ ತರೀಕೆರೆ ಪಾಳೆಯಗಾರರಿಗೆ ಸಂತೆಬೆನ್ನೂರನ್ನು ಉಂಬಳಿಯನ್ನಾಗಿ ನೀಡಿದರು. ಅಂದಿನಿಂದ ತರೀಕೆರೆಯವರು ಆಳ್ವಿಕೆಯನ್ನು ಪ್ರಾರಂಭಿಸಿದರು. ಇವರು ಸಂತೆಬೆನ್ನೂರಿನಿಂದ ಆಳ್ವಿಕೆ ನಡೆಸುತ್ತಿರುವಾಗ ಕ್ರಿ.ಶ. ೧೬೩೭ರಲ್ಲಿ ಬಿಜಾಪುರದ ಸೇನಾಪತಿ ರಣದುಲ್ಲಾಖಾನನು ಬಸವಾಪಟ್ಟಣ ಮತ್ತು ಸಂತೆಬೆನ್ನೂರುಗಳನ್ನು ವಶಪಡಿಸಿಕೊಂಡಾಗ ಅಲ್ಲಿನ ಪಾಳೆಯಗಾರರು ತರೀಕೆರೆಗೆ ಬಂದು ಕಾಳಿದುರ್ಗ ಕೋಟೆಯಿಂದ ಆಳ್ವಿಕೆ ಪ್ರಾರಂಭಿಸಿದರು. ಈ ಪ್ರದೇಶದಿಂದ ಸಂತೆಬೆನ್ನೂರು ಮತ್ತು ಬಸವಾಪಟ್ಟಣದಿಂದ ಆಗಮಿಸಿದ ನಾಯಕರು ಹಲವಾರು ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಕೊನೆಯಲ್ಲಿ ಕಂಪನಿ ಸರ್ಕಾರ ಇವರ ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ

ಸರ್ಜಾರಂಗಪ್ಪನಾಯಕ ಮತ್ತು ಸರ್ಜಾಹನುಮಪ್ಪನಾಯಕ ಇವರ ವಿರುದ್ಧ ಹೋರಾಟ ಮಾಡಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಅಗತ್ಯವಿತ್ತು.

ಸರ್ಜಾಕೃಷ್ಣಪ್ಪನಾಯಕನ ಮರಣದ ನಂತರ ಸರ್ಜಾರಂಗಪ್ಪನಾಯಕನು ಅಧಿಕಾರಕ್ಕೆ ಬಂದನು. ಈತನಿಗೆ ದೇಶಾಭಿಮಾನ ಆಳವಾಗಿತ್ತು. ವಸಾಹತುಶಾಹಿ ವಿರುದ್ಧ ಹೋರಾಟ ಮಾಡಲು ತಯಾರು ಮಾಡಿಕೊಂಡಿದ್ದನು. ಮೈಸೂರು ರಾಜ್ಯದಲ್ಲಿ ಇವರ ವಿರುದ್ಧ ಬೇರೆ ಬೇರೆ ಕಡೆ ಹೋರಾಟಗಳು ಬಂಡಾಯಗಳು ಪ್ರಾರಂಭವಾಗಿದ್ದವು. ಆದುದರಿಂದ ಧೋಂಡಿಯಾ ವಾಘ್ ಬೇಲೂರಿನ ಕೃಷ್ಣಪ್ಪನಾಯಕ ಮತ್ತು ತರೀಕೆರೆಯ ರಂಗಪ್ಪನಾಯಕರು ಸೇರಿಕೊಂಡು ವಸಾಹತುಶಾಹಿ ವಿರುದ್ಧ ಬಂಡಾಯ ಹೂಡಿದರು.

ವಸಾಹತುಶಾಹಿ ವಿರುದ್ಧದ ಬಂಡಾಯದ ಸಮಯದಲ್ಲಿ ತರೀಕೆರೆ ರಂಗಪ್ಪನಾಯಕನನ್ನು ಕಂಪನಿ ಸರ್ಕಾರ ಸೇರಿ ಹಿಡಿದು ಜೈಲಿನಲ್ಲಿ ಹಾಕಿತು. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಸೆರೆಯಲ್ಲಿದ್ದುದಲ್ಲದೆ, ಅಲ್ಲಿಂದ ತಪ್ಪಿಸಿಕೊಂಡು ಮತ್ತೆ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದನು. ಈ ಸಮಯದಲ್ಲಿ ಬಿದನೂರಿನ ಬೂದಿಬಸಪ್ಪನಾಯಕನು ಇವನಿಗೆ ನೆರವು ನೀಡಿದನು. ಜೊತೆಗೆ ಮೈಸೂರಿನ ೧೫೦೦ ಜನ ಬೇಡ ಕಂದಾಚಾರದ ಸಿಪಾಯಿಗಳು ಸರ್ಜಾರಂಗಪ್ಪನಾಯಕನ ಜೊತೆ ಸೇರಿಕೊಂಡರು. ಹೀಗೆ ತನ್ನದೇ ಆದ ಸೇನೆಯನ್ನು ಕಟ್ಟಿಕೊಂಡು ಸರ್ಕಾರದ ವಿರುದ್ಧ ಕಾರ್ಯಾಚರಣೆಗೆ ತೊಡಗಿದನು.[೧೧] ಇವರ ದಂಗೆಯಿಂದಾಗಿ ಕಂಪನಿ ಸರ್ಕಾರ ಆಡಳಿತ ನಡೆಸುವುದು ಕಷ್ಟಕರವಾಗಿತ್ತು. ಆದುದರಿಂದ ಇವರು ಬಂಡಾಯವನ್ನು ಹತ್ತಿಕ್ಕುವುದರ ಜೊತೆಗೆ ಜಾಗರ ತರ್ಪುಗೋಣಕಲ್ಲು ಲಡಾಯಿಯಲ್ಲಿ ಸರ್ಜಾರಂಗಪ್ಪನಾಯಕ ಮರಣಕ್ಕೀಡಾದರು.

ಇವನು ದೇಶೀಯ ಸರ್ಕಾರದ ವಿರುದ್ಧ ನಡೆಸಿದ ಕಾರ್ಯಚರಣೆ ಬಹಳ ತೀವ್ರವಾಗಿತ್ತು. ಇದಕ್ಕೆ ರಂಗಪ್ಪ ನಾಯಕನ ಅಡಾವುಡಿ ಎಂದು ಕರೆಯುತ್ತಾರೆ.[೧೨] ಕಂಪನಿ ಸರ್ಕಾರವನ್ನು ಈ ಪ್ರದೇಶದಿಂದ ಓಡಿಸಬೇಕು ಎಂಬ ದೇಶಾಭಿಮಾನ ಇವರಲ್ಲಿ ಹೆಚ್ಚೆಚ್ಚು ಇತ್ತು. ಆದರೆ ಇವನಿಗೆ ಸರಿಯಾದ ವ್ಯವಸ್ಥೆ, ಸಹಕಾರ, ಅಧಿಕಾರ ವ್ಯವಸ್ಥೆ ಇರಲಿಲ್ಲ. ಈ ಎಲ್ಲಾ ಕಾರಣದಿಂದ ಅವನ ದಂಗೆಗಳು ಸಂಪೂರ್ಣವಾಗಿ ನಿಷ್ಫಲವಾಗಿದ್ದವು. ಸರ್ಜಾರಂಗಪ್ಪನಾಯಕ ನಿಧನವಾದ ನಂತರ ಈತನ ಮಗ ಸರ್ಜಾಹನುಮಪ್ಪನಾಯಕ ಇವರ ತಂದೆಯ ಕಾಲದ ಹೋರಾಟವನ್ನು ಮುಂದುವರಿಸಿದನು.

ಸರ್ಜಾಹನುಮಪ್ಪನಾಯಕನು ಬಾಬಾಬುಡನ್‌ಗಿರಿಯಲ್ಲಿದ್ದ ಕಾಮನದುರ್ಗ ಕೋಟೆಯಿಂದ ವಸಾಹತುಶಾಹಿ ವಿರುದ್ಧ ತನ್ನ ಕಾರ್ಯಚಟುವಟಿಕೆಯನ್ನು ಪ್ರಾರಂಭಿಸಿದ. ತನ್ನ ಜೊತೆಗೆ ತನ್ನ ಬಂಧು ಬಳಗದವರು, ಹಿತೈಷಿಗಳು, ಸ್ನೇಹಿತರೆಲ್ಲರನ್ನು ಕೂಡಿಸಿಕೊಂಡು ಹೋರಾಟ ಮಾಡಿದನು.

ಹಾಗೆಯೇ ತನ್ನ ಶಿಸ್ತು ಮತ್ತು ಸುವ್ಯವಸ್ಥೆ ಪಡೆಯಲ್ಲಿ ನಿಡಗಲ್ಲು ಭಸ್ಮಾಂಗಿಗಳ ಸೌಟಕು ಪಾಳೆಯಗಾರರು ಸೇರಿಕೊಂಡಿದ್ದರು.[೧೩] ಮೈಸೂರಿನ ಅಧಿಕಾರಿಗಳ ಕಂದಾಯ ವಸೂಲಿಯಿಂದ ಜನ ರೋಸಿಹೋಗಿದ್ದರು. ಇದನ್ನು ತಿಳಿದ ಬಂಡಾಯಗಾರರು ಸರ್ಕಾರ ವಸೂಲಿ ಮಾಡಿಕೊಂಡು ಹೋಗುತ್ತಿದ್ದ ಹಣವನ್ನು ದೋಚುತ್ತಿದ್ದರು. ಆ ಹಣವನ್ನು ಜನಸಾಮಾನ್ಯರಿಗೆ ಹಂಚಿ ಉಳಿದ ಹಣವನ್ನು ಶಸ್ತ್ರಾಸ್ತ್ರಗಳನ್ನು ಕೊಂಡುಕೊಳ್ಳಲು ಬಳಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಜನರು ಸ್ವಯಂ ಸ್ಫೂರ್ತಿಯಿಂದ ಆಂಗ್ಲರ ವಿರುದ್ಧ ಹೋರಾಡಲು ಸರ್ಜಾಹನುಮಪ್ಪನಾಯಕನ ಸೈನಿಕ ಪಡೆಯಲ್ಲಿ ಸೇರಿಕೊಳ್ಳುತ್ತಿದ್ದರು. ಮೈಸೂರಿನ ದಿವಾನರು ಕಾಮನದುರ್ಗಕ್ಕೆ ಮುತ್ತಿಗೆ ಹಾಕಿದಾಗ ಬಂಡಾಯಗಾರರು ಹೋರಾಟ ನಡೆಸಿ ಅವರನ್ನು ಪರಾಭವಗೊಳಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ಕಂಪನಿ ಸರ್ಕಾರ ನೆರವಿನಿಂದ ಅಧಿಕಾರಕ್ಕೆ ಬಂದು ಕಾಮನದುರ್ಗದಲ್ಲಿ ಆದ ಸೋಲನ್ನು ತೀರಿಸಿಕೊಳ್ಳಲು ಸಂಚು ರೂಪಿಸಿದರು. ಇದರ ನೇತೃತ್ವವನ್ನು ಅಮೀನ ಗೋವಿಂದರಾಯ ವಹಿಸಿದ್ದನು.[೧೪] ಸರ್ಜಾಹನುಮಪ್ಪನಾಯಕನಿಗೆ ರಂಗಮ್ಮ ಎಂಬ ಒಬ್ಬ ಪ್ರೇಯಸಿಯಲ್ಲಿ ಬಹಳ ಪ್ರೇಮವಿತ್ತು. ಇವಳು ಹೂವಿನಹಳ್ಳಿಯವಳು. ಆಕೆಯ ಪರಿಚಯ ಗೋವಿಂದರಾಯನಿಗೂ ಇತ್ತು. ಹೆಚ್ಚು ಸಮಯ ಅವಳ ಬಳಿಯಲ್ಲಿಯೇ ಕಳೆಯುತ್ತಿದ್ದನು. ಈ ಸಂದರ್ಭದಲ್ಲಿ ಆಂಗ್ಲ ಅಧಿಕಾರಿಗಳು ಯುದ್ಧವನ್ನು ಕೈಗೊಂಡು ಸೇನಾಧಿಕಾರಿ ಸಾರ್ಜೆಂಟ್ ರಾಕ್‌ಪೋರ್ಸ್ ಮತ್ತು ಮತ್ತೊಬ್ಬ ಸೇನಾಧಿಪತಿ ಕರ್ನಲ್ ಕಾರ್ವೆಯನ್ನು ಈ ಕೆಲಸಕ್ಕೆ ನಿಯೋಜಿಸಿದರು. ಸೇನಾಧಿಪತಿ ಸಾರ್ಜಂಟ್ ಮೇಕನೀರ್, ಸಾರ್ಜೆಂಟ್ ಸ್ಮಿತ್ ಮುಂತಾದ ಸೇನಾ ಅಧಿಕಾರಿಗಳು ಸೇರಿಕೊಂಡಿದ್ದರು. ಸರ್ಜಾಹನುಮಪ್ಪನಾಯಕನ ಪಡೆಯಲ್ಲಿ ಸುಮಾರು ೧೫೦೦ ಬೇಡ ಪಡೆ ಹಾಗೂ ೧೦೦ ಕಂದಾಚಾರದವರು ಸೇರಿಕೊಂಡರು. ಕಾಮನದುರ್ಗದಲ್ಲಿ ನಾಯಕ ಇಲ್ಲದೆ ಇರುವ ಸಮಯದಲ್ಲಿ ದುರ್ಗಕ್ಕೆ ಮುತ್ತಿಗೆ ಹಾಕಿ ವಶಪಡಿಸಿಕೊಂಡರು. ರಂಗಮ್ಮಳಿಗೆ ಆಮಿಷವನ್ನು ಒಡ್ಡಿ ಸಹಾಯ ಮಾಡಲು ಒಪ್ಪುವಂತೆ ಮಾಡಿದರು. ಊಟದಲ್ಲಿ ವಿಷ ಹಾಕಿ ಮೂರ್ಛೆ ಹೋಗುವಂತೆ ಮಾಡುತ್ತಾಳೆ. ನಾಯಕನ ಬಳಿಯಿದ್ದ ಆಯುಧಗಳನ್ನು ತೆಗೆದುಕೊಂಡು ಹೋಗಿ ಮೈಸೂರಿನ ಸೈನಿಕರಿಗೆ ವಿಷಯ ತಿಳಿಸುತ್ತಾಳೆ. ಈ ವಿಷಯವನ್ನು ತಿಳಿದ ವಸಾಹತುಶಾಹಿ ಸೈನಿಕರು ನಾಯಕನ ಮೇಲೆ ದಾಳಿ ಮಾಡುತ್ತಾರೆ. ಇಂತಹ ಅಸಹಾಯಕ ಸಮಯದಲ್ಲೂ ನಾಯಕ ವೀರಾವೇಶದಿಂದ ಹೋರಾಡಿ ಕೊನೆಗೆ ಸೆರೆಯಾಗುತ್ತಾನೆ. ಬಂಧಿತನಾದ ನಾಯಕನನ್ನು ಮೈಸೂರಿಗೆ ಕರೆದುಕೊಂಡು ಹೋಗಿ, ಅಲ್ಲಿ ಬಂಧನದಲ್ಲಿರಿಸುತ್ತಾರೆ. ಕೆಲವು ದಿನಗಳ ಕಾಲ ನಾಯಕನು ಚೇತರಿಸಿಕೊಂಡ ನಂತರ ವಿಚಾರಣೆ ಮಾಡಿ ಆಂಗ್ಲ ಅಧಿಕಾರಿಗಳು ಗಲ್ಲಿಗೇರಿಸಲು ತೀರ್ಪು ನೀಡುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಜನಪದದಲ್ಲಿ ಹೀಗೆ ಉಲ್ಲೇಖವಾಗಿದೆ.

ಇಂತೆಂಬ ಹಳ್ಳಿಗೆ॥

ಕಳ್ಳನು ಬಂದನೆ-ಗಲ್ಲುಗಾರ್ಡು ಕೊಡಬೇಕು

ಪಾರಂಗಿ ದೊರೆಯೆ-ವಾಲೆನಾದರೆ ಬರೆದಾನೊ

ಗಲ್ಲುಗಾರ್ಡನು ಇಲ್ಲವಯ್ಯ

ಕೊಟ್ಟೆನಾದರೆ ಮಾಡತೀನಿ

ವಾಲೆನಾದರೆ ಬರೆದಾನೊ

ಪಾರಂಗಿ ದೊರೆಯ

ವಾಲೆನಾದರೆ ಬರೆದಾನೊ

ಹೀಗೆ ಸರ್ಜಾಹನುಮಪ್ಪನಾಯಕನ ಸಾವು ಕಂಪನಿ ಸರ್ಕಾರದ ಅಧಿಕಾರಿಗಳಿಂದ ನಡೆದಿದೆ ಎಂದು ಈ ಕಥನಕಾವ್ಯದಲ್ಲಿದೆ. ಬೆಂಗಳೂರಿನ ಗುಟ್ಟಹಳ್ಳಿ ವನಪ್ರದೇಶದಲ್ಲಿ ಇವನಿಗೆ ನೇಣು ಹಾಕುತ್ತಾರೆ. ಬಲಿಷ್ಠನಾದ ನಾಯಕನ ಭಾರದಿಂದ ಹಗ್ಗ ಕಿತ್ತುಕೊಳ್ಳುತ್ತದೆ. ನಾಯಕ ತನ್ನ ನಡುಕಟ್ಟನ್ನು ಬಿಚ್ಚಿಕೊಂಡು ತಾನೆ ಆದರಿಂದ ಕತ್ತು ಬಗಿದುಕೊಂಡು ಪ್ರಾಣ ಬಿಡುತ್ತಾನೆ. ಆತನ ಸಹಚರರು ತಮ್ಮ ಖಡ್ಗ, ಗುರಾಣಿ, ಕತ್ತಿಗಳಿಗೆ ತಾವೇ ತಮ್ಮ ತಮ್ಮ ರುಂಡಗಳನ್ನು ಕಡಿದುಕೊಂಡು ಬಲಿಯಾಗುತ್ತಾರೆ. ಹೀಗೆ ವಸಾಹುತಶಾಹಿ ವಿರುದ್ಧ ಹೋರಾಡಿ ಅವರ ಕೈಯಲ್ಲಿ ನನ್ನ ಪ್ರಾಣ ಹೋಗಬಾರದು ಎಂಬ ಅಭಿಲಾಷೆಯಿಂದ ನಗುನಗುತ್ತಾ ಪ್ರಾಣ ಬಿಡುತ್ತಾನೆ. ಬ್ರಿಟಿಷರ ವಿರುದ್ಧ ಹಾಗೂ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ ನಾಯಕ, ಕರ್ನಾಟಕದ ಚರಿತ್ರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿರುತ್ತಾರೆ.[೧೫] ಹೀಗೆ ತನ್ನ ಶೌರ್ಯ ಸಾಹಸಗಳಿಂದ ಹೋರಾಡಿದ ನಾಯಕನು ಜನಪದ ಗೀತೆಯಲ್ಲಿ ಲಾವಣಿಗಳ ರೂಪದಲ್ಲಿ ಇಂದಿಗೂ ಜನಮನದಲ್ಲಿ ಉಳಿದುಕೊಂಡು ಬಂದಿರುವುದು ಗೋಚರಿಸುತ್ತದೆ.

ಈ ನಾಯಕನನ್ನು ಕುರಿತು ಕೆಲವು ಜನಪದ ಗೀತೆಯಲ್ಲಿ ಈ ಕೆಳಗಿನಂತೆ ಚಿತ್ರಿಸಲಾಗಿದೆ.

ಸರ್ಜಾಪ್ಪನಾಯಕನು ಗರ್ಜನೆಯ ಮಾಡುತ್ತ

ಅರ್ಜುನನ ತೆರದಿ ಹೋರಾಡಿ। ಆಂಗ್ಲರ

ಮರ್ದನಮಾಡಿ ನಿಂತಾನ॥

ಸರಕಾರದಾಗಿರುವ ಸಂಪತ್ತು ದೋಚ್ಯಾನ

ಏರಜನಕೆ ಹಂಚಿ ನಿಂತಾನ। ಅವನನ್ನು

ಫಿರಂಗಿಯವರು ಹಿಡಿದಾರ

ರಂಗಪ್ಪನ ಮಗನಾದ ಸರ್ಜಪ್ಪನಾಯಕನ

ಬೆಂಗಳೂರಿಗೊಯ್ದು ಇಟ್ಟಾರ । ಆಂಗ್ಲರು

ಕಂಗಿಟ್ಟು ಗಲ್ಲ ಹಾಕ್ಯಾರು[೧೬] ಹೀಗೆ ಬ್ರಿಟಿಷರ ಕುತಂತ್ರದಿಂದ ಸಾವನ್ನಪ್ಪಿದ ತರೀಕೆರೆ ಸರ್ಜಪ್ಪನಾಯಕನ ಸಾವಿನ ಬಗ್ಗೆ ಬೇರೆ ಬೇರೆ ಕಥೆಗಳು ನಮಗೆ ಗೋಚರಿಸುತ್ತವೆ.

ಸರ್ಜಪ್ಪನಾಯಕ ಒಬ್ಬ ಸ್ವಾತಂತ್ರ್ಯ ಪ್ರೇಮಿ. ತನ್ನ ಪಾಳೆಯಪಟ್ಟಿನ ರಕ್ಷಣೆಗಾಗಿ ವಿರೋಧಿಗಳೊಂದಿಗೆ ವೈರತ್ವ ಕಟ್ಟಿಕೊಂಡನು. ಬ್ರಿಟಿಷರನ್ನು ತನ್ನ ತಾಯ್ನಾಡಿನಿಂದ ಹೊರಹಾಕಲು ಈ ನಾಯಕ ಸಾಕಷ್ಟು ಪ್ರಯತ್ನ ಮಾಡಿದನು. ಆದುದರಿಂದಲೇ ಇವನ ಅವಸಾನ ಪ್ರಾರಂಭವಾಗುತ್ತದೆ. ಇವರ ವಂಶದವರಾದ ಸರ್ಜಾರಂಗಪ್ಪನಾಯಕರು ಹನುಮಪ್ಪನಾಯಕರು, ಇಮ್ಮಡಿ ಹನುಮಪ್ಪನಾಯಕರು ಮತ್ತು ಸರ್ಜಾಹನುಮಪ್ಪ ನಾಯಕರು ಮೈಸೂರು ಒಡೆಯರ ಹಾಗೂ ಬ್ರಿಟಿಷರ ವಿರುದ್ಧ ತನ್ನ ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ್ದಾರೆ.

ಕೊನೆಯ ಅರಸನಾದ ಸರ್ಜಾಹನುಮಪ್ಪನಾಯಕನು ಬ್ರಿಟಿಷರ ವಿರುದ್ಧ ಹೋರಾಟ ಮಾಡುವಾಗಲೇ ಮರಣ ಹೊಂದಿದ. ಈ ಘಟನೆ ಕುರಿತು ಚರಿತ್ರೆ, ಸಾಹಿತ್ಯ, ಕಥೆ, ಲಾವಣಿಗಳಲ್ಲಿ ವರ್ಣಿಸಲಾಗಿದೆ. ಈ ನಾಯಕನ ಬಗೆಗೆ ದ್ವಂದ್ವ, ತೀವ್ರವಾದ ವರ್ಣನೆಗಳಿಂದ ಕೂಡಿದ್ದು ದುರಂತ, ಹಿಂಸೆ, ಕಪಟತನ, ಮೋಸ, ಕುತಂತ್ರ, ಸಂಚು ಮೊದಲಾದ ಕೃತ್ಯಗಳನ್ನು ವಿರೋಧಿಗಳು ಮಾಡುತ್ತಾರೆ.[೧೭] ರಾಜನನ್ನು ಮೋಸದಿಂದ ಕೊಲ್ಲುವ ಪ್ರಯತ್ನಗಳು ಜನಪದರಲ್ಲಿ ಕರುಣ ರಸವನ್ನು ಉಕ್ಕಿಸಿದಂತೆ ಅವರ ಹಾಡು ಲಾವಣಿ ಮತ್ತು ಕಥನಗಳಲ್ಲಿ ವ್ಯಕ್ತವಾಗಿದೆ.

ಸರ್ಜಪ್ಪನಾಯಕ ತನ್ನೊಂದಿಗೆ ಬ್ರಿಟಿಷರನ್ನು ವಿರೋಧಿಸಿದ ಪಾಳೆಯಗಾರರ ಒಕ್ಕೂಟವನ್ನು ಕಟ್ಟಿಕೊಂಡು ಹೋರಾಡಿದ್ದರೆ ಜಯ ಸಿಗುತಿತ್ತು. ಆದರೆ ಸ್ಥಳೀಯ ನಾಯಕರ ಅನೈಕ್ಯತೆ, ದಾಯಾದಿ ಮತ್ಸರ, ಬ್ರಿಟಿಷರ ಒಡೆದು ಆಳುವ ನೀತಿಗಳಿಂದ ಸ್ಥಳೀಯರ ಮತ್ತು ಪರಕೀಯರ ನಡುವೆ ಸಾಕಷ್ಟು ಸಂಘರ್ಷಗಳಿದ್ದುದ್ದು ಸ್ಪಷ್ಟವಾಗುತ್ತದೆ. ಹಾಗಾಗಿ ಸರ್ಜಪ್ಪನಾಯಕ ಮರೆಯಾದರೂ ಆತನ ಸಾಧನೆ ಅಮರವಾದುದು. ಆತ ಇಂದಿಗೆ ಪ್ರಾತಃಸ್ಮರಣೀಯನಾಗಿದ್ದಾನೆ.[೧೮] ಕರ್ನಾಟಕದಲ್ಲಿ ಬ್ರಿಟಿಷರನ್ನು ಹೊರದೊಡಿಸಲು ಪಣ ತೊಟ್ಟವರೆಂದರೆ ಹೈದರ್, ಟಿಪ್ಪು, ಹಲಗಲಿ ಬೇಡರು, ಸುರಪುರದ ನಾಯಕರು, ವೀರಸಿಂಧೂರ ಲಕ್ಷ್ಮಣ ಜೊತೆಗೆ ದಕ್ಷಿಣ ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದವರು ತರೀಕೆರೆ ಸರ್ಜಾರಂಗಪ್ಪನಾಯಕ ಮತ್ತು ಸರ್ಜಾಹನುಮಪ್ಪನಾಯಕರು, ಇವರು ಹೈದರ್, ಟಿಪ್ಪುರವರನ್ನು ವಿರೋಧಿಸಿದಂತೆ ಬ್ರಿಟಿಷರನ್ನು ವಿರೋಧಿಸಿದ ಕೀರ್ತಿ ತರೀಕೆರೆಯವರಿಗೆ ಸಲ್ಲುತ್ತದೆ. ಕರ್ನಾಟಕದಲ್ಲಿ ತರೀಕೆರೆ ಪಾಳೆಯಗಾರರಂತೆ ಅನೇಕ ಪಾಳೆಯಗಾರರು ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ್ದಾರೆ. ಕಠಿಣ ವಾತಾವರಣದ ನಡುವೆ ಅವರ ಬೇಡಿಕೆಯನ್ನು ಪೂರೈಸುವ ಉದಾರತೆ ಇಲ್ಲದಾಯಿತು. ಬ್ರಿಟಿಷರು ದೇಶೀಯ ಸಂಸ್ಥಾನಿಕರನ್ನು ಹತ್ತಿಕ್ಕಿದ್ದರ ಜೊತೆಗೆ ತರೀಕೆರೆ ಅರಸ ಸರ್ಜಾಹನುಮಪ್ಪನಾಯಕನ ದಂಗೆಗಳನ್ನು ಅಡಗಿಸಿದರು.

ತರೀಕೆರೆ ಪಾಳೆಯಗಾರ ಸರ್ಜಾಹನುಮಪ್ಪನಾಯಕನ ಅವಸಾನದ ನಂತರ ಆತನ ಮೂರನೇ ಪತ್ನಿ ಯಶೋಧಮ್ಮನಾಗತಿ ತರೀಕೆರೆ ಪಾಳೆಯಪಟ್ಟನ್ನು ನೋಡಿಕೊಂಡಳು. ತನ್ನ

ಪತಿಯ ಆಶಯದಂತೆ ತಾನೂ ಕೂಡ ಬ್ರಿಟಿಷರನ್ನು ಮತ್ತು ಅವರ ನೀತಿಗಳನ್ನು ವಿರೋಧಿಸಿದಳು. ತನ್ನ ಪತಿಯ ವಂಶಕ್ಕೆ ಕೀರ್ತಿ ತರುವಂತೆ ನಡೆದುಕೊಂಡ ಈ ನಾಗತಿ ಉದಾರ ದಾನಿಯಾಗಿದ್ದಳು. ಪಾಳೆಯಪಟ್ಟಿನ ಅಧಿಕಾರವನ್ನು ದಕ್ಷತೆಯಿಂದ ನಿರ್ವಹಿಸಿಕೊಂಡು ಬಂದಳು.

ಯಶೋಧಮ್ಮ ನಾಗತಿಗೆ ಗಂಡುಮಕ್ಕಳು ಪ್ರಾಪ್ತಿಯಾಗಿರಲಿಲ್ಲ. ಆದುದರಿಂದ ಹನುಮಪ್ಪನನ್ನು ದತ್ತು ತೆಗೆದುಕೊಂಡು ಸರ್ಜಾ ಎಂಬ ಬಿರುದಿನೊಂದಿಗೆ ಪಟ್ಟಾಭಿಷಿಕ್ತನಾದನು. ಆದರೆ ಈ ಮಗು ಕೆಲವೇ ದಿನಗಳಲ್ಲಿ ಅಕಾಲ ಮರಣಕ್ಕೆ ತುತ್ತಾಯಿತು. ಗಂಡ ಹಾಗೂ ಮಗು ಹಠಾತ್ತನೆ ತೀರಿಕೊಂಡ ಮೇಲೆ ಹಿತಶತ್ರುಗಳು ಸಾಕಷ್ಟು ಕಿರುಕುಳ ನೀಡಿದರು. ಅವೆಲ್ಲವನ್ನು ಸಹನೆಯಿಂದ ತಾಳ್ಮೆಯಿಂದ ನಿರ್ವಹಿಸಿಕೊಂಡು ಧರ್ಮನಿಷ್ಠೆಯ ಜೀವನವನ್ನು ಸಾಗಿಸಿದಳು. ತರೀಕೆರೆ ಪಾಳೆಯಪಟ್ಟಿಗೆ ಸಂಬಂಧಿಸಿದ ಎಲ್ಲಾ ಆಸ್ತಿಯನ್ನು ರಾಜಗುರುಗಳಾದ ಮುರುಘಾರಾಜೇಂದ್ರ ಸ್ವಾಮಿಗಳ ಬೃಹನ್ಮಠಕ್ಕೆ ನೀಡಿದಳು. ಇದನ್ನು ತರೀಕೆರೆ ಪ್ರದೇಶದ ನಾಯಕ ಜನಾಂಗದವರು ಹಾಗೂ ಕರ್ನಾಟಕದ ಬಹುತೇಕ ನಾಯಕ ಜನಾಂಗದವರು ವಿರೋಧಿಸಿದರು.

ಹೀಗೆ ತರೀಕೆರೆ ನಾಯಕರು ತಮ್ಮ ಸದ್ಗುಣಗಳಿಂದ ರಾಜ್ಯಭಾರ ಮಾಡಿ ಉತ್ತಮ ಆಡಳಿತಗಾರರೆಂದು ಎನಿಸಿಕೊಂಡರು. ಇವರ ರಾಜಕೀಯ ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳ ಸಾಧನೆ ಮಹತ್ತರವಾದುದು. ಏನೆಲ್ಲಾ ಪರಿವರ್ತನೆಗಳ ನಡುವೆ ಸ್ವಾತಂತ್ರ್ಯ ಹೋರಾಟದಲ್ಲಿ ಬ್ರಿಟಿಷರ ವಿರುದ್ಧ ಬಂಡೆದ್ದ ಸರ್ಜಪ್ಪನ ಸಾಹಸ ಸ್ಮರಣೀಯವಾಗಿದೆ. ೧೮೫೭ರ ಮೊದಲನೆಯ ಸ್ವಾತಂತ್ರ್ಯ ಸಂಗ್ರಾಮದ ನಂತರ ಪಾಳೆಯಗಾರರ ಜೀವನ ಸಂಕಷ್ಟದ ಸ್ಥಿತಿಯಲ್ಲಿತ್ತು. ಇದನ್ನು ಮನಗಂಡ ಬ್ರಿಟಿಷರು ಪಾಳೆಯಗಾರರ ಮನೆತನದವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಆ ಮನೆತನದವರಿಗೆ ವಿಶ್ರಾಂತಿವೇತನ ಕೊಡಲು ಮುಂದಾದರು. ಮುಂದೆ ಈ ಮನೆತನದ ವಂಶಸ್ಥರು ಬ್ರಿಟಿಷರಿಂದ ವಿಶ್ರಾಂತಿವೇತನ ಅಥವಾ ಪಿಂಚಣಿಯನ್ನು ಪಡೆದುಕೊಂಡು ಜೀವನ ಸಾಗಿಸುತ್ತಾರೆ.

ಬಿಳಿಚೋಡು ಪಾಳೆಯಗಾರರ ವಂಶದವರಾದರ ಭೀಮಪ್ಪನಾಯಕರು, ತಂದೆ ಹನುಮಪ್ಪನಾಯಕ ಮತ್ತು ತಾಯಿ ಹನುಮಕ್ಕನವರ ಮಗನಾಗಿ ೧೯೧೪ರಲ್ಲಿ ಜನಿಸಿದರು. ಇವರು ಎಸ್.ನಿಜಲಿಂಗಪ್ಪ, ವಾಸುದೇವನ್, ಬಳ್ಳಾರಿ ಸಿದ್ದಮ್ಮ, ಹರಿಹರದ ಗುಂಡುರಾವ್ ಇನ್ನೂ ಅನೇಕ ನಾಯಕರ ಜೊತೆಗೆ ಅಂದಿನ ಚಿತ್ರದುರ್ಗ ಜಿಲ್ಲೆಯಲ್ಲಿ ಸಂಚರಿಸಿ ರಾಷ್ಟ್ರೀಯ ಜಾಗೃತಿಯನ್ನು ಮೂಡಿಸಿದರು. ೧೯೨೭ರಲ್ಲಿ ಮಹಾತ್ಮ ಗಾಂಧೀಜಿಯವರು ದಾವಣಗೆರೆ ಹರಿಹರಕ್ಕೆ ಭೇಟಿ ಕೊಟ್ಟಾಗ ಇವರು ಹಿಂಬಾಲಕರಾಗಿ ಸಂಚರಿಸಿ ಗಾಂಧಿಜಿಯವರ ತತ್ವ ಸಿದ್ಧಾಂತಗಳನ್ನು ಪಾಲಿಸಿದರು. ೧೯೩೭ರ ಕಾನೂನುಭಂಗ ಚಳವಳಿಯಲ್ಲಿ ಭಾಗವಹಿಸಿ ದಾವಣಗೆರೆ, ಹರಿಹರ, ಜಗಳೂರು ಮತ್ತು ತುರವನೂರು ಪ್ರದೇಶದಲ್ಲಿ ರಾಷ್ಟ್ರೀಯ ಜಾಗೃತಿಯನ್ನು ಮೂಡಿಸಿದರು.

೧೯೩೯ರಲ್ಲಿ ನಡೆದ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಪ್ರಮುಖ ಪಾತ್ರ ವಹಿಸಿದರು. ಇವರೊಂದಿಗೆ ಬಳ್ಳಾರಿ ಸಿದ್ದಮ್ಮ, ನಾಗರತ್ನ ಹೀರೆಮಠ, ಎಸ್.ನಿಜಲಿಂಗಪ್ಪ, ವಾಸುದೇವರಾವ್, ಚಿದಾನಂದಪ್ಪ, ಎನ್.ಎಂ.ಚಂದ್ರಶೇಖರಯ್ಯ, ಕೆ.ಎಸ್.ಪಟೇಲ್ ಮುಂತಾದವರು ಈ ಚಳವಳಿಯಲ್ಲಿ ಭಾಗವಹಿಸಿದರು. ದಾವಣಗೆರೆ ಜಿಲ್ಲೆಯ ಕೆಲವು ಗ್ರಾಮಗಳಾದ ಕೊಡಗನೂರು, ಹರಿಹರ ಮಾಯಕೊಂಡ, ಬಾಡ, ಒಂಟಿಹಾಳ್ ತೊಗಲೇರಿ, ಗೂಪನಾಳು, ಬಾತಿ, ಹುಚ್ಚವ್ವನಹಳ್ಳಿ, ಹನುಮನಹಳ್ಳಿ, ಉಚ್ಚಂಗಿದುರ್ಗ, ಅರಸೀಕೆರೆ, ಅಣಜಿ, ಕಣಕುಪ್ಪೆ ಬಿಳಿಚೋಡು, ಕಂಚಿಕೆರೆ, ಬೆಂಡಿಗೆರೆ ಮುಂತಾದ ಗ್ರಾಮಗಳಲ್ಲಿ ಈಚಲುಮರಗಳನ್ನು ಕಡಿಯುವುದು ಮತ್ತು ಅಲ್ಲಿ ಕಂಡುಬರುವ ಬೆಲೆ ಬಾಳುವಂತಹ ಮರಗಳನ್ನು ಕಡಿದು ಮಾರಾಟ ಮಾಡುವುದು ಹಾಗೂ ಬೆಂಕಿ ಹಚ್ಚಿ ಸುಡಲಾಗುತ್ತಿತ್ತು. ನಂತರ ಮುಂದೆ ಹರಿಹರ ಹೊನ್ನಾಳಿ ತಾಲ್ಲೂಕಿನಲ್ಲಿ ಕಂಡುಬರುವಂತಹ ಬೆಟ್ಟ ಗುಡ್ಡಗಳಲ್ಲಿಯೂ ಸಹ ಈಚಲುಮರಗಳನ್ನು ಬೆಂಕಿ ಹಾಕಿ ಸುಡುವ ಮೂಲಕ ಯಾವುದೇ ಬೆಲೆ ಬಾಳುವ ವಸ್ತುಗಳು ಮತ್ತು ಮದ್ಯಪಾನ ತಯಾರಿಸಬಲ್ಲಂತಹ ಮರಗಳನ್ನು ನಾಶಪಡಿಸಿದರು. ಸಾರಾಯಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಿ, ಮದ್ಯಪಾನವನ್ನು ಸಂಪೂರ್ಣವಾಗಿ ವಿರೋಧಿಸಿ ನಾಯಕರನ್ನು ಬಂಧಿಸಲಾಯಿತು.[೧೯] ಈ ಚಳುವಳಿಯಲ್ಲಿ ಅನೇಕ ವಿದ್ಯಾರ್ಥಿಗಳು ಯುವಕರು ಭಾಗವಹಿಸಿ ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿದರು. ಈ ಚಳವಳಿಯ ನಂತರವೇ ದಾವಣಗೆರೆ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ ಹೆಚ್ಚಾಗತೊಡಗಿತು.

ನಂತರ ೧೯೪೨ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭೀಮಪ್ಪನಾಯಕ ಭಾಗವಹಿಸಿ ದಾವಣಗೆರೆ ಜಿಲ್ಲೆಯಲ್ಲಿ ಹಿಂಸಾತ್ಮಕ ಹೋರಾಟ ಮಾಡುತ್ತಾ ಬಸ್ ನಿಲ್ದಾಣಗಳಿಗೆ ಬೆಂಕಿ ಹಚ್ಚುವುದು, ಟೆಲಿಗ್ರಾಮ್ ತಂತಿಗಳನ್ನು ಕತ್ತರಿಸುವುದು, ಸರ್ಕಾರಿ ಅಧಿಕಾರಿಗಳು ಸಂಗ್ರಹಿಸಿದ ಕಂದಾಯದ ಹಣವನ್ನು ಲೂಟಿ ಮಾಡುವುದು, ಅಂಚೆ ಸೇವೆಗೆ ಅಡ್ಡಿ ಮಾಡುವುದು, ಸರ್ಕಾರಿ ಕಛೇರಿಗಳ ಮೇಲೆ ಧ್ವಜಾರೋಹಣ ಮಾಡುವುದು, ಸರ್ಕಾರಿ ಕಛೇರಿಗಳಿಗೆ ಬೆಂಕಿ ಹಚ್ಚುವುದು ಮುಂತಾದ ವಿಧ್ವಂಸಕ ಕೃತ್ಯಗಳನ್ನು ನಡೆಸಿದನು. ಈ ಚಳವಳಿಯನ್ನು ಹತ್ತಿಕ್ಕಲು ಬ್ರಿಟಿಷರು ಹೋರಾಟಗಾರರನ್ನು ಬಂಧಿಸಿದರು. ಭೀಮಪ್ಪನಾಯಕರನನ್ನು ಬಂಧಿಸಿ ಚಿತ್ರದುರ್ಗದ ವಿಶೇಷ ಕಾರಾಗೃಹದಲ್ಲಿ ಹಾಕಿದರು. ಈ ಚಳವಳಿಯಲ್ಲಿ ಭಾಗವಹಿಸಿದ ಶ್ರೀಯುತ ಎಸ್.ನಿಜಲಿಂಗಪ್ಪರವರ ಜೊತೆ ಮೈಸೂರಿಗೆ ಹೋಗಿ ಅರಮನೆ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಜವಾಬ್ದಾರಿ ಸರ್ಕಾರ ರಚನೆಯಾಗುವವರೆಗೂ ಚಳವಳಿ ನಡೆಸಿದರು. ಹೀಗೆ ಭೀಮಪ್ಪನಾಯಕ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಸ್ವಾತಂತ್ರ್ಯ ಚಳವಳಿಗೆ ತನ್ನದೇ ಆದ ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ.

ಒಟ್ಟಾರೆ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರು ವಸಾಹತು ಕಾಲಘಟ್ಟದಲ್ಲಿ ಹಲವು ಬದಲಾವಣೆಯೊಂದಿಗೆ ಹೈದರಾಲಿ, ಟಿಪ್ಪು, ಮೈಸೂರಿನ ಒಡೆಯರು ಮತ್ತು ಬ್ರಿಟಿಷರೊಂದಿಗೆ

ನಿರಂತರವಾಗಿ ಸಂಘರ್ಷಣೆಗೆ ಒಳಗಾಗಿ ಸಂಕಷ್ಟದ ಸ್ಥಿತಿಗತಿಯಲ್ಲಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಈ ಎಲ್ಲನ ಅನುಕೂಲತೆಗಳ ನಡುವೆಯೂ ತರೀಕೆರೆ ನಾಯಕರ ಕಾಲದಲ್ಲಿ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪ್ರಗತಿಯನ್ನು ಸಾಧಿಸಿರುವುದು ಕಂಡುಬರುತ್ತದೆ. ಈ ಮೇಲಿನ ಅಂಶಗಳಿಂದ ವಸಾಹತುಶಾಹಿ ಕಾಲಘಟ್ಟದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಪಟ್ಟಿನ ಮೇಲೆ ವಸಾಹತುಶಾಹಿ ಪ್ರಭುತ್ವ ಸಾಕಷ್ಟು ಪರಿಣಾಮ ಬೀರಿರುವುದು ಕಂಡುಬರುತ್ತವೆ.

ಈ ಪ್ರದೇಶದಲ್ಲಿ ಸಾರ್ವಜನಿಕ ಆಡಳಿತ ಗವರ್ನರ್ ಜನರಲ್, ಕಲೆಕ್ಟರ್, ಸಬ್ ಕಲೆಕ್ಟರ್, ಡೆಪ್ಯೂಟಿ ಕಲೆಕ್ಟರ್, ತಹಶೀಲ್ದಾರ್, ಪಟೇಲ, ಕರಣಂ, ರೆವಿನ್ಯೂ, ಫಿವನ್ಸ್ ಮುಂತಾದ ಅನೇಕ ಅಧಿಕಾರ ಶ್ರೇಣಿಗಳಲ್ಲಿ ಹಂಚಿಕೆಯಾಯಿತು. ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಹಲವಾರು ಸಾಮಾಜಿಕ ಅನಿಷ್ಟ ಪದ್ಧತಿಗಳಿಗೆ ಮಂಗಳ ಹಾಡಿದರು. ಜೊತೆಗೆ ವಸಾಹತುಶಾಹಿಯ ಮುಖ್ಯ ಉದ್ದೇಶವಾದ ವಾಣಿಜ್ಯ, ವ್ಯವಹಾರ, ಆರ್ಥಿಕ ವ್ಯವಸ್ಥೆಯ ಪ್ರಭಾವದಿಂದ ಈ ಪ್ರದೇಶದಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ, ಸಾರಿಗೆ-ಸಂಪರ್ಕ ಮುಂತಾದವು ಅವರಿಗೆ ಪೂರಕವಾಗುವಂತೆ ರೂಪಿಸಲ್ಪಟ್ಟವು. ಹಾಗೆಯೇ ರಸ್ತೆಗಳು, ರೈಲು ಸಂಪರ್ಕ, ಕೈಗಾರಿಕಾ ಕೇಂದ್ರಗಳು ಪ್ರಮುಖ ಉದ್ದಿಮೆಗಳು, ಅಂಚೆ-ತಂತಿ ಕಛೇರಿಗಳು ಸ್ಥಾಪಿಸಲ್ಪಟ್ಟವು.

ವಸಾಹತುಶಾಹಿಯ ಆಡಳಿತದ ಪರಿಣಾಮಗಳನ್ನು ಈ ಪ್ರದೇಶದಲ್ಲಿ ಹಾಡು, ಲಾವಣಿ, ಜನಪದ ಸಾಹಿತ್ಯದಲ್ಲಿ ಕಾಣಬಹುದು. ಸಾರ್ವಜನಿಕ ಶಾಂತಿ, ಸುವ್ಯವಸ್ಥೆ ರಕ್ಷಣೆಗಾಗಿ ಆಧುನಿಕ ಪದ್ಧತಿಯನ್ನು ಅನುಸರಿಸಿದರು. ತಳವಾರರನ್ನು ಗ್ರಾಮಾಧಿಕಾರಿಗಳ ವ್ಯಾಪ್ತಿಗೆ ತಂದರು. ಪೊಲೀಸ್ ಕಾಯ್ದೆಗಳು ಜಾರಿಗೆ ಬಂದವು ಶೈಕ್ಷಣಿಕವಾಗಿ ಸಾರ್ವತ್ರಿಕ ವ್ಯವಸ್ಥೆ ಜಾರಿಗೆ ತಂದರು. ಪಾರಂಪರಿಕ ಶಿಕ್ಷಣದ ಜೊತೆಗೆ ಇಂಗ್ಲಿಷ್ ಮಾದರಿಯ ಶಿಕ್ಷಣವನ್ನು ಪರಿಚಯಿಸಲಾಯಿತು. ಸಾರ್ವಜನಿಕರಿಗೆ ಅನುಕೂಲವಾಗುವಂತೆ ಅನೇಕ ಕೆಲಸ ಕಾರ್ಯಗಳನ್ನು ಕೈಗೊಂಡರು. ರಸ್ತೆ, ಕೆರೆ ಕಾಲುವೆ ನಿರ್ಮಾಣ ಐತಿಹಾಸಿಕ ಸ್ಮಾರಕಗಳ ರಕ್ಷಣೆ ಮುಂತಾದವು ವಸಾಹತುಶಾಹಿಯ ಪರಿಣಾಮವಾಗಿದೆ.

**೬.೨. ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಮನೆತನದ ಇಂದಿನ ಸ್ಥಿತಿಗತಿ**

ಪಾಳೆಯಗಾರರು ನಾಡ ಸೇವೆಗೆ ಕಂಕಣಬದ್ದರಾಗಿ, ರಾಜಮಹಾರಾಜರುಗಳಾಗಿ ಪ್ರಭುತ್ವ ಪಡೆದು ನಾಡರಕ್ಷಣೆಯಲ್ಲಿ ನಿರಂತರವಾಗಿ ಹಿಂದೂ ಧರ್ಮ, ಸಂಸ್ಕೃತಿಯನ್ನು ಉಳಿಸಿ ಪೋಷಿಸಿ ರಕ್ಷಿಸಿದ ರೋಮಾಂಚನಕಾರಿ ಇತಿಹಾಸವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಮನೆತನದ ಪ್ರಸ್ತುತ ಸ್ಥಿತಿಯನ್ನು ಗಮನಿಸಿದರೆ ಇವರು ವಿವಿಧ ವಲಯಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿರುವುದು ಕಂಡುಬರುತ್ತದೆ. ಬ್ರಿಟಿಷರು ಹಲವಾರು ಕಾಯ್ದೆ ಕಾನೂನುಗಳನ್ನು ಜಾರಿಗೆ ತರುವುದರ ಮೂಲಕ ಪಾಳೆಯಗಾರರ ಅಧಿಕಾರವನ್ನು ಕಟ್ಟಿಹಾಕಿದರು. ಶಸ್ತ್ರಾಸ್ತ್ರ ನಿಷೇಧ ಕಾಯ್ದೆ, ಅರಣ್ಯಕಾಯ್ದೆ, ದತ್ತು ಮಕ್ಕಳಿಗೆ ಹಕ್ಕಿಲ್ಲ ಕಾಯ್ದೆ,

ಇನ್ನೂ ಮುಂತಾದ ಕಾರ್ಯ್ರಗಳನ್ನು ಜಾರಿಗೆ ತಂದರು. ಇವುಗಳಿಂದ ಇವರು ಜನಜೀವನ ನಡೆಸಲು ಸಾಕಷ್ಟು ತೊಂದರೆಗಳಾದವು. ಪ್ರಭುತ್ವ ಹಾಗೂ ಸಂವಿಧಾನವನ್ನು ರಚಿಸಿಕೊಳ್ಳುವುದರ ಮೂಲಕ ಆಧುನಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಸಮುದಾಯಗಳಿಗೆ ಸಮಾನತೆಯನ್ನು ಕಲ್ಪಿಸಲು ಮೀಸಲಾತಿಯ ಸೌಲಭ್ಯ ದೊರಕಿತು.

ದಕ್ಷಿಣ ಭಾರತದಲ್ಲಿ ಬ್ರಿಟಿಷರಿಗೆ ಪ್ರಬಲ ಪ್ರತಿರೋಧ ಒಡ್ಡಿದವರು ಪಾಳೆಯಗಾರರ ಮನೆತನದವರು. ಆದರೆ ಬ್ರಿಟಿಷರ ಒಡೆದು ಆಳುವ ನೀತಿಯಿಂದಾಗಿ ತಮ್ಮ ತಮ್ಮಲ್ಲಿಯೇ ಕಾದಾಡುತ್ತಿದ್ದ ಪಾಳೆಯಗಾರರನ್ನು ವ್ಯವಸ್ಥಿತವಾಗಿ ಪ್ರತ್ಯೇಕಿಸಲಾಯಿತು. ಇವರು ಬ್ರಿಟಿಷರ ಬಲದೆದುರು ತತ್ತರಿಸಿದರು. ಈ ಪಾಳೆಯಗಾರರು ತಮ್ಮ ತಮ್ಮೊಳಗಿನ ಸ್ಪರ್ಧೆಯಿಂದ ಐಕ್ಯತೆ ಸಾಧಿಸಲಿಲ್ಲ. ಸುಮಾರು ೩೦೦ ವರ್ಷಗಳ ಕಾಲ ಆಡಳಿತ ನಡೆಸಿದ ಪಾಳೆಯಗಾರರ ಸ್ಥಿತಿ ಇಂದು ಚಿಂತಾಜನಕವಾಗಿದೆ. ಇವರು ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕವಾಗಿ ಹಿಂದುಳಿದಿದ್ದಾರೆ. ವಿಜಯನಗರೋತ್ತರ ಕಾಲದಲ್ಲಿ ಬೇಡ ಪಾಳೆಯಪಟ್ಟುಗಳು ಆರಂಭದಲ್ಲಿ ಆರ್ಥಿಕವಾಗಿ ಬಲಿಷ್ಠವಾಗಿದ್ದರು. ಆದರೆ ಕಾಲಾಂತರದಲ್ಲಿ ದುರ್ಬಲವಾದವು. ಅಧಿಕಾರವನ್ನು ಕಳೆದುಕೊಂಡ ನಂತರ ಅವರ ಬದುಕು ತೀರಾ ಸಂಕಷ್ಟಕ್ಕೆ ಗುರಿಯಾದುದನ್ನು ಕಾಣಬಹುದು.

ವಿಜಯನಗರ ಸಾಮ್ರಾಜ್ಯದ ಸಂದರ್ಭದಲ್ಲಿ ಸೈನಿಕರಾಗಿ, ಅಧಿಕಾರಿಗಳಾಗಿ ಅಮರನಾಯಕರಾಗಿ ಗುರುತಿಸಿಕೊಂಡಿದ್ದ ನಾಯಕರು ಕಾಲಾಂತರದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಆಡಳಿತಾತ್ಮಕವಾಗಿ, ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಗಳಿಸಿಕೊಂಡರು. ಮೊದಲು ಹಿಂದೂ ಸಮಾಜದಲ್ಲಿ ಅತ್ಯಂತ ಕೆಳವರ್ಗದದಲ್ಲಿ ಗುರುತಿಸಿಕೊಂಡ ಈ ನಾಯಕರು ನಂತರ ಪಾಳೆಯಗಾರರು, ದೊರೆಗಳೆನಿಸಿಕೊಂಡು ಸಮಾಜದಲ್ಲಿ ಉನ್ನತವರ್ಗದವರೊಡನೆ ವ್ಯವಹರಿಸುವ ಜೀವಿಸುವ ಅವಕಾಶಗಳು ಲಭಿಸಿದವು. ಈ ದೊರೆಗಳು ಅಧಿಕಾರಿಗಳು, ಪಾಳೆಯಗಾರರು ತಮ್ಮಲ್ಲಿ ಇದ್ದ ಮೊದಲಿನ ಜೀವನದ ರೀತಿ ನೀತಿಗಳನ್ನು ಕೈಬಿಟ್ಟು ಮೇಲ್ವರ್ಗದ ಜೀವನವಿಧಾನಗಳನ್ನು ಅನುಸರಿಸಲಾರಂಭಿಸಿದವು. ಒಂದು ಜನಾಂಗಕ್ಕೆ ನಾಯಕರಾದ ಇವರು ಕ್ರಮೇಣ ಒಂದು ಹಳ್ಳಿಗೆ, ಅನಂತರ ಇಡೀ ಪ್ರದೇಶಕ್ಕೆ ನಾಯಕರಾಗಿ ಗುರುತಿಸಿಕೊಂಡರು. ತಮ್ಮದೇ ಆದ ಪಾಳೆಯಪಟ್ಟನ್ನು ಸ್ಥಾಪಿಸಿಕೊಂಡು ಪಾಳೆಯಗಾರರೆನಿಸಿ ಕೊಂಡರು. ಅರಸುವರ್ಗದ ಸಹವಾಸ ಜೊತೆಗೆ ಆ ವರ್ಗದವರ ಬದುಕಿನ ರೀತಿ ನೀತಿಗಳನ್ನು ಆಚಾರ-ವಿಚಾರಗಳನ್ನು ಅನುಸರಿಸಿದರು.

ಪಾಳೆಯಗಾರರು ಹೈದರಾಲಿ, ಟಿಪ್ಪು, ತದನಂತರ ಈಸ್ಟ್ ಇಂಡಿಯಾ ಕಂಪನಿ ವಿರುದ್ಧ ಹೋರಾಡಿ ಕೊನೆಗೆ ತಮ್ಮ ಅಧಿಕಾರವನ್ನು ಕಳೆದುಕೊಂಡರು. ನಂತರ ಈ ಪಾಳೆಯಗಾರರ ಮನೆತನದವರು ತಮ್ಮ ಪಾಳೆಯಪಟ್ಟನ್ನು ರಕ್ಷಿಸಿಕೊಳ್ಳಲು ಹಾಗೂ ಬ್ರಿಟಿಷರನ್ನು ಹೊರದೂಡಲು

ಬ್ರಿಟಿಷರೊಂದಿಗೆ ಅನೇಕ ಸಂದರ್ಭಗಳಲ್ಲಿ ಹೋರಾಡಿ ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿದ್ದಾರೆ. ಭಾರತ ಸ್ವಾತಂತ್ರ್ಯ ಪಡೆದ ನಂತರ ತಮ್ಮ ಪಾಳೆಯಪಟ್ಟನ್ನು ಭಾರತದ ಪ್ರಾಂತ್ಯದಲ್ಲಿ ವಿಲೀನಗೊಳಿಸಿಕೊಂಡು ಸರಕಾರದಿಂದ ಅಲ್ಪಸ್ವಲ್ಪ ಗೌರವಧನ ಪಡೆದುಕೊಂಡು ತಮ್ಮ ಪಾಳೆಯಪಟ್ಟನ್ನು ಬಿಟ್ಟುಕೊಟ್ಟರು. ಈ ಅರಸುಮನೆತನದವರು ತಮ್ಮ ಅಧಿಕಾರವನ್ನು ಕಳೆದುಕೊಂಡ ನಂತರ ಬೇರೆ ಉದ್ಯೋಗದ ಕಡೆ ಯೋಚಿಸಲಿಲ್ಲ. ಅರಸು ಮನೆತನದವರು ಉದ್ಯೋಗ ಮಾಡುವುದು ಅಪಮಾನ. ರಾಜವಂಶಸ್ಥರಿಗೆ ಅದು ಸಲ್ಲುವುದಿಲ್ಲ. ತಮ್ಮ ಕೆಲಸ ಏನಿದ್ದರೂ ಆಳುವುದು. ಅಧಿಕಾರ ನಡೆಸುವುದು ಎಂದು ಮನಗಂಡಿದ್ದರು. ಇವರ ವಂಶಸ್ಥರಿಗೆ ನೀಡಿದ್ದ ವಿಶ್ರಾಂತಿವೇತನ ನಿಂತಾಗಲೂ ಅದೇ ಹಿಂದಿನ ರಾಜವೈಭವದ ಜೀವನವನ್ನು ಅನುಸರಿಸುತ್ತಿದ್ದರು. ರಾಜಗೌರವಗಳನ್ನು ಜನರಿಂದ ನಿರೀಕ್ಷಿಸುತ್ತಿದ್ದರು. ಕ್ರಮೇಣ ತಮ್ಮ ಆರ್ಥಿಕ ಸ್ಥಿತಿಗತಿ ದುರ್ಬಲಗೊಂಡರೂ ಬೇರೆ ವೃತ್ತಿಗಳನ್ನು ಮಾಡುವ ಮನಸ್ಸು ಮಾಡಲಿಲ್ಲ. ತಮ್ಮಲ್ಲಿದ್ದ ಆಸ್ತಿಗಳನ್ನು ಕೇಂದ್ರ ಸರಕಾರ ಭೂಸುಧಾರಣಾ ಕಾಯ್ದೆ ಜಾರಿಗೆ ತರುವುದರ ಮೂಲಕ ವಶಪಡಿಸಿಕೊಂಡಿತು. ಇಂತಹ ಸಂದರ್ಭದಲ್ಲಿ ಈ ಪಾಳೆಯಗಾರರ ಮನೆತನದವರು ತಮ್ಮಲ್ಲಿದ್ದ ಅಲ್ಪಸ್ವಲ್ಪ ಆಸ್ತಿಯನ್ನೆಲ್ಲ ಮಾರಿಕೊಳ್ಳುತ್ತ ಬಂದರು. ಇಂದು ಅವರು ಭೂರಹಿತರಾಗಿ ಸಂಕಷ್ಟದ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಈ ಪಾಳೆಯಗಾರರು ಜೀವನ ನಿರ್ವಹಣೆ ತುಂಬಾ ಕಷ್ಟವಾದಾಗ ಅನಿವಾರ್ಯವಾಗಿ ಸಿಕ್ಕ ಸಿಕ್ಕ ಕೆಲಸಗಳನ್ನು ಹುಡುಕಿಕೊಂಡು ಜೀವನ ಮಾಡಬೇಕಾಯಿತು.

ಪಾಳೆಯಗಾರರ ವಂಶಸ್ಥರು ತರೀಕೆರೆ, ಬಿಳಿಚೋಡು, ಚಿತ್ರದುರ್ಗ ಜಿಲ್ಲೆಯ ಕಾಟಪ್ಪನಹಟ್ಟಿ, ಅರೆಹಳ್ಳಹಟ್ಟಿ, ಗುಡೆಕೋಟೆಗಳಲ್ಲಿ ಕಂಡುಬರುತ್ತಾರೆ. ಪ್ರಸ್ತುತ ಇವರ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲ. ತಮ್ಮ ಕುಟುಂಬ ನಿರ್ವಹಣೆಗೆ ತಮಗೆ ದೊರಕಿದ ಉದ್ಯೋಗಗಳನ್ನು ಮಾಡಿಕೊಂಡು ಬರುತ್ತಿದ್ದಾರೆ. ಜೀವನ ನಿರ್ವಹಣೆ ಕಷ್ಟದಲ್ಲಿದ್ದಾಗ ತಮ್ಮ ಆಸ್ತಿಗಳನ್ನು ಮಾರಿಕೊಂಡಿದ್ದರಿಂದ ಪ್ರಸ್ತುತ ಈ ಪಾಳೆಯಗಾರರ ಮನೆತನದವರು ಆಸ್ತಿಹೀನರಾಗಿದ್ದಾರೆ. ಕೆಲವು ಮನೆತನದವರು ತಮ್ಮ ಮನೆತನದ ಆಸ್ತಿಯನ್ನು ಉಳಿಸಿಕೊಂಡು ಜೀವನ ನಿರ್ವಹಿಸಿದರೆ ಇನ್ನು ಕೆಲವು ಮನೆತನದವರು ಸರಕಾರಿ ಉದ್ಯೋಗಗಳನ್ನು ಮಾಡುತ್ತ ಜೀವನ ನಿರ್ವಹಿಸುತ್ತಿದ್ದಾರೆ. ಇನ್ನು ಕೆಲವು ಮನೆತನದವರು ರಾಜಕೀಯದಲ್ಲಿ ಗುರುತಿಸಿಕೊಂಡಿದ್ದಾರೆ. ಗ್ರಾಮಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾಪಂಚಾಯತಿ, ವಿಧಾನಸಭೆ, ವಿಧಾನಪರಿಷತ್ತು, ಲೋಕಸಭೆ ರಾಜ್ಯಸಭೆಗಳ ಚುನಾವಣೆಯಲ್ಲಿ ಭಾಗವಹಿಸಿ ತಮ್ಮ ಛಾಯೆಯನ್ನು ಮೂಡಿಸಿದ್ದಾರೆ. ಬಳ್ಳಾರಿ ಜಿಲ್ಲೆಯ ಗುಡೇಕೋಟೆ ಮತ್ತು ಜರಿಮಲೆ ಪಾಳೆಯಗಾರರ ವಂಶಸ್ಥರು ಅದೇ ಭಾಗದಲ್ಲಿ ನೆಲೆಸಿದ್ದಾರೆ. ಪ್ರಸ್ತುತ ಈ ಪಾಳೆಯಗಾರರ ವಂಶಸ್ಥರ ಆರ್ಥಿಕ ಸ್ಥಿತಿಯು ತುಂಬಾ ಶೋಚನೀಯವಾಗಿದೆ. ಸ್ವಲ್ಪ ಮಟ್ಟಿಗೆ ಗುಡೇಕೋಟೆ ಪಾಳೆಯಗಾರರ ಸ್ಥಿತಿ ಉತ್ತಮವಾಗಿರುವುದು ಕಂಡುಬರುತ್ತದೆ. ಇವರು ತಮ್ಮ ಮನೆತನದ

ಆಸ್ತಿಯನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಬಂದಿರುವುದು ಗೋಚರಿಸುತ್ತದೆ. ಈ ವಂಶಸ್ಥರು ವ್ಯವಸಾಯದ ಜೊತೆಗೆ ರಾಜಕೀಯದಲ್ಲಿ ಗುರುತಿಸಿಕೊಂಡಿರುವುದನ್ನು ಕಾಣಬಹುದು. ಚಿತ್ರದುರ್ಗ, ಹರಪನಹಳ್ಳಿ, ಗುಡೇಕೋಟೆ, ಸುರಪುರ ಮುಂತಾದ ಕರ್ನಾಟಕದಲ್ಲಿರುವ ಪಾಳೆಯಗಾರರು ಮತ್ತು ಇವರ ಸಂಬಂಧಿಗಳು ಈಗಿರುವ ಇಮ್ಮಡಿ ಸಿದ್ದಪ್ಪನಾಯಕನ ತಾಯಿ ರಾಣಿಧರ್ಮಾವತಮ್ಮ ಪಾಳೆಯಗಾರ ವಂಶದವಳಾಗಿದ್ದು ಈಕೆಯನ್ನು ಜರಿಮಲೆ ಪಾಳೆಯಗಾರರ ವಂಶಸ್ಥರಾದ ವೆಂಕಟಪ್ಪನಾಯಕನಿಗೆ ಮದುವೆ ಮಾಡಿಕೊಡಲಾಗಿತ್ತು. ರಾಜವೈಭವವನ್ನು ಹತ್ತಿರದಿಂದ ನೋಡಿದ ರಾಣಿಧರ್ಮಾವತಮ್ಮ ಕಳೆದ ಹತ್ತು ವರ್ಷಗಳ ಹಿಂದೆ ನಿಧನರಾದರು.

ರಾಜಾವೆಂಕಟಪ್ಪನಾಯಕನಿಗೆ ಸರ್ಕಾರದಿಂದ ಮಾಶಾಸನ ಬರುತ್ತಿತ್ತು. ಆದರೆ ಅವರ ಪುತ್ರರಾದ ಇಮ್ಮಡಿ ಸಿದ್ದಪ್ಪನಾಯಕ, ಚಂದ್ರಶೇಖರ ರಾಜರಿಗೆ ಮಾಶಾಸನ ನಿಲ್ಲಿಸಲಾಗಿದೆ. ಇರುವ ಹತ್ತು ಎಕರೆ ಜಮೀನಿನಲ್ಲಿ ಮಳೆ ಬಂದರೆ ಬೆಳೆ, ಸತತ ಬರದಿಂದ ಬೆಳೆಯೂ ಇಲ್ಲದೆ ಈಗ ಐದಾರು ವರ್ಷಗಳಿಂದ ಬದುಕು ಸಾಗಿಸಲು ಪರದಾಡುತ್ತಿದ್ದಾರೆ. ಹೊರಗಡೆ ಕೂಲಿ ಹೋಗಲು, ರಾಜವಂಶಸ್ಥರೆಂಬ ಬಿಗುಮಾನ ಇದೆ. ಈ ವಂಶಸ್ಥರಿಂದ ಮಕ್ಕಳಿಗೆ ಒಳ್ಳೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ. ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನಿ ಸದ್ಧರ್ಮ ಪೀಠದಲ್ಲಿ ಪ್ರತಿವರ್ಷ ನಡೆಯುವ ಉಜ್ಜಯನಿ ಶಿಖರಕ್ಕೆ ತೈಲ ಎರೆಯುವ ಸಂಪ್ರದಾಯಕ್ಕೆ ಜರಿಮಲೆ ರಾಜವಂಶಸ್ಥರು ತೈಲ ಕಳುಹಿಸುತ್ತಾರೆ. ಪೂರ್ವಜರ ಸಂಪ್ರದಾಯವನ್ನು ಮುಂದುವರಿಸಿಕೊಂಡು ಇವರು ಬಂದಿದ್ದಾರೆ. ಮನೆಯಲ್ಲಿ ಹೆಣ್ಣುಮಕ್ಕಳು ಘೋಶಾ(ಮುಖಕ್ಕೆ ಬಟ್ಟೆ) ಹಾಕಿಕೊಂಡೇ ಇರಬೇಕು. ಬೇರೆಯವರ ಜಮೀನುಗಳಲ್ಲಿ ಕೆಲಸ ಮಾಡುವಂತಿಲ್ಲ. ಊರಿನವರು ಈಗಲೂ ಇವರನ್ನು ಜರಿಮಲೆ ದೊರೆಗಳೆಂದು ಸಂಬೋಧಿಸುತ್ತಾರೆ. ರಾಜಾಚಂದ್ರಶೇಖರ ಇಮ್ಮಡಿ ಸಿದ್ದಪ್ಪನಾಯಕರ ಕುಟುಂಬಗಳ ನಿರ್ವಹಣೆ ಶೋಚನೀಯವಾಗಿದೆ. ರಾಜಮನೆತನದವರು ಬದುಕಿನ ನೆಲೆಗಾಗಿ ಪರದಾಡುತ್ತಿರುವುದು ವಿಪರ್ಯಾಸವಾಗಿದೆ.

ಸುಮಾರು ೧೩೩ ಹಳ್ಳಿಗಳ ಮೇಲೆ ಆಳ್ವಿಕೆ ನಡೆಸಿದ ಈ ವಂಶಸ್ಥರು ಈಗ ಗುಡಿಸಲು ಹಾಗೂ ಆಶ್ರಯ ಮನೆಗಳಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ. ಸರಕಾರದಿಂದ ಸಿಗುತ್ತಿದ್ದ ವಿಶ್ರಾಂತಿವೇತನವೂ ನಿಂತುಹೋಗಿದೆ. ಒಟ್ಟಿನಲ್ಲಿ ಈ ವಂಶಸ್ಥರು ಪ್ರಸ್ತುತ ಸಾಮಾನ್ಯ ಜನರಂತೆ ಕಷ್ಟಕಾರ್ಪಣ್ಯಗಳ ಜೊತೆ ಬದುಕುತ್ತಿರುವುದನ್ನು ಕಾಣಬಹುದಾಗಿದೆ.

ಮತ್ತೊಂದು ಪಾಳೆಯಗಾರರ ವಂಶಸ್ಥರು ಪ್ರಸ್ತುತ ಅರಸಿನ ತೋಟದಲ್ಲಿ ನೆಲೆಸಿದ್ದಾರೆ. ಇನ್ನು ಕೆಲವರು ದಾವಣಗೆರೆ, ಮೈಸೂರು ಬೆಂಗಳೂರುಗಳಲ್ಲಿ ವಾಸ ಮಾಡುತ್ತಿದ್ದಾರೆ. ಈ ಮನೆತನದವರು ಉತ್ತಮ ಶಿಕ್ಷಣವನ್ನು ಪಡೆದುಕೊಂಡು ಸರಕಾರದ ಉನ್ನತವರ್ಗದ ಉದ್ಯೋಗಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಉದ್ಯೋಗಸ್ಥರಾದ ಇವರ ಆರ್ಥಿಕ ಸ್ಥಿತಿಗತಿ ಸುಧಾರಿಸಿಕೊಂಡಿದೆ. ಈಗ ಇವರು ಬೇರೆ ಬೇರೆ ಕಡೆ ವಾಸ ಮಾಡುತ್ತಿದ್ದಾರೆ. ಅರಸಿನ ತೋಟದಲ್ಲಿರುವ ಕುಟುಂಬಗಳು ಸಂಪೂರ್ಣವಾಗಿ ಕೃಷಿಯನ್ನು ಅವಲಂಬಿಸಿದೆ. ೧೫ ಎಕರೆ

ಭೂಮಿಯಲ್ಲಿ ಈ ಕುಟುಂಬಗಳ ಜೀವನ ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ನಾಯಕನಹಟ್ಟಿ ಪಾಳೆಯಗಾರರ ವಂಶಸ್ಥರು ನಾಯಕನಹಟ್ಟಿ ಹಾಗೂ ಇವರ ಸಮೀಪದಲ್ಲಿರುವ ದೊರೆಗಳ ಹಟ್ಟಿಯಲ್ಲಿ ನೆಲೆಸಿದ್ದಾರೆ. ಈ ಮನೆತನದವರು ವಿಶ್ರಾಂತಿವೇತನ ಬೇಡವೆಂದು ಸರಕಾರಕ್ಕೆ ಬರೆದುಕೊಟ್ಟಿರುವುದಾಗಿ ತಿಳಿಸುತ್ತಾರೆ. ಈ ವಂಶಸ್ಥರ ಒಟ್ಟು ಆಸ್ತಿ ಈಗ ೩೬ ಎಕರೆಗಳು ಮಾತ್ರ ಇದೆ. ಈ ಆಸ್ತಿಯಲ್ಲಿ ಇತ್ತೀಚೆಗೆ ಖರೀದಿ ಮಾಡಿದ್ದು ಸ್ವಲ್ಪ ಭೂಮಿಯೂ ಸೇರಿದೆ. ಇವರನ್ನು ಹಿರೇಮನೆಯವರೆಂದು ಕರೆಯಲಾಗುತ್ತದೆ.

ಒಟ್ಟಾರೆ ವಿಜಯನಗರೋತ್ತರ ಕಾಲದಲ್ಲಿ ಬೇಡಪಾಳೆಯಗಾರರು ಆರಂಭದಲ್ಲಿ ಆರ್ಥಿಕವಾಗಿ ಬಲಿಷ್ಠವಾಗಿದ್ದರು, ಆದರೆ ಕಾಲಾಂತರದಲ್ಲಿ ಇವರ ಆರ್ಥಿಕ ಸ್ಥಿತಿಗತಿ ತುಂಬಾ ದುರ್ಬಲಗೊಂಡಿತು. ಅಧಿಕಾರವನ್ನು ಕಳೆದುಕೊಂಡ ನಂತರ ಇವರ ಬದುಕು ತೀರಾ ಸಂಕಷ್ಟಕ್ಕೆ ಗುರಿಯಾದುದನ್ನು ಕಾಣಬಹುದು. ಅಧಿಕಾರವನ್ನು ಕಳೆದುಕೊಂಡ ಈ ವಂಶಸ್ಥರು ಬೇರೆ ಯಾವ ಉದ್ಯೋಗವನ್ನು ಮಾಡುವ ಮನಸ್ಸು ಮಾಡಲಿಲ್ಲ. ಇವರು ತಾವು ದೊರೆಗಳ ವಂಶಸ್ಥರು, ನೂರಾರು ವರ್ಷ ಈ ಪ್ರದೇಶವನ್ನು ಆಳಿದವರು. ಇಂತಹ ಮನೆತನದಲ್ಲಿ ಹುಟ್ಟಿದವರಾದ ತಾವು ಉದ್ಯೋಗ ಮಾಡುವುದೆಂದರೆ ತಮ್ಮ ಮನೆತನಕ್ಕೆ ಕಳಂಕ ಎಂಬ ಭಾವನೆಯುಳ್ಳವರಾಗಿದ್ದಾರೆ. ತಮ್ಮದೇನಿದ್ದರೂ ಆಳುವುದು, ಆಳುವವರ ಮುಂದೆ ಹೋಗಿ ಬದುಕುವುದಲ್ಲ ಎಂಬ ಮನಸ್ಸು ಈ ಪಾಳೆಯಗಾರರಲ್ಲಿತ್ತು. ಇಂದಿಗೂ ಕೆಲವು ಮನೆತನಗಳಲ್ಲಿ ಈ ದೊರೆತನ ಬಿಟ್ಟು ಹೋಗಿಲ್ಲ. ತಾವು ದೊರೆಗಳ ಮನೆತನದವರು ಎಂಬ ಹಿರಿಮೆಯ ಗುಣದಿಂದಲೇ ಬೇಡ ಜನಾಂಗದ ಅರಸರು ವಂಶಸ್ಥರೂ ಆರ್ಥಿಕವಾಗಿ ದುರ್ಬಲರಾಗಿರುವುದು ಕಾಣಬಹುದು. ಇತ್ತೀಚೆಗೆ ಜಾಗೃತಗೊಂಡ ಕೆಲವು ಪಾಳೆಯಗಾರರ ಮನೆತನಗಳು ತಮ್ಮ ಮಕ್ಕಳನ್ನು ಒಳ್ಳೆಯ ಶಿಕ್ಷಣ ಕೊಡಿಸುವುದರ ಜೊತೆಗೆ ಉದ್ಯೋಗಕ್ಕೆ ಕಳುಹಿಸುವ ಪ್ರಯತ್ನ ಕೂಡ ಮಾಡುತ್ತಿದ್ದಾರೆ.

ಭಾರತ ಸ್ವಾತಂತ್ರ್ಯ ಪಡೆದುಕೊಂಡ ನಂತರ ಈ ಪಾಳೆಯಗಾರರ ರಾಜಕೀಯ ಪ್ರಭಾವ ಕಡಿಮೆಯಾಯಿತು. ಪ್ರಜಾಪ್ರಭುತ್ವದ ನಡುವೆ ಅರಸುಪ್ರಭುತ್ವ ಬಳಲಿಹೋಯಿತು. ಈ ಸಂಸ್ಥಾನಿಕರು ಅಧಿಕಾರ ವಂಚಿತರಾದರು. ತಮ್ಮ ಆಸ್ತಿ ಅಂತಸ್ತು ಕಡಿಮೆಯಾಗುತ್ತಾ ಬಂದರೂ, ಇವರ ರಾಜಪ್ರಭುತ್ವದ ಕೆಲವು ಆಚರಣೆಗಳನ್ನು ಬಿಡಲಿಲ್ಲ. ಆರ್ಥಿಕವಾಗಿ ರಾಜಕೀಯವಾಗಿ ಇವರ ಪ್ರಭಾವ ತೀರಾ ಕೆಳಮಟ್ಟಕ್ಕೆ ತಳ್ಳಲ್ಪಟ್ಟಾಗ ಅನಿವಾರ್ಯವಾಗಿ ರಾಜಕೀಯದಲ್ಲಿ ಭಾಗವಹಿಸಿದರು. ಈ ಸಂದರ್ಭದಲ್ಲಿ ಕೂಡ ನೇರವಾಗಿ ಜನರ ನಡುವೆ ಬೆರೆಯದೆ ಅರಮನೆಯ ಮೂಲಕ ಜನರನ್ನು ಸಂಪರ್ಕಿಸಲು ಪ್ರಯತ್ನಿಸಿದರು. ಪಾಳೆಯಗಾರರು ಹಿಂದಿನ ದೊರೆತನದ ಗೌರವದ ಜೊತೆಗೆ ಆಧುನಿಕ ರಾಜಕಾರಣಗಳಿಗೆ ಸಿಗುವ ಸ್ಥಾನಮಾನಗಳನ್ನು ಪಡೆದುಕೊಂಡರು. ರಾಜಕೀಯದಲ್ಲಿ ಪರಿಶಿಷ್ಟ ಪಂಗಡ ವರ್ಗದವರಿಗೆ ಕೆಲವು ಸ್ಥಾನಗಳನ್ನು ಮೀಸಲಿಟ್ಟಿರುವುದರಿಂದ ಈ ವರ್ಗದವರು ರಾಜಕೀಯದಲ್ಲಿ ಬೆಳೆಯಲು ಅನುಕೂಲವಾಯಿತು.

ಸ್ವಾತಂತ್ರ್ಯ ನಂತರ ರಾಜಕೀಯದಲ್ಲಿ ಅಲ್ಲಲ್ಲಿ ಕೆಲವು ನಾಯಕರು ಏಳುಬೀಳುಗಳನ್ನು ಕಂಡರೂ ರಾಜಕೀಯವಾಗಿ ಸ್ವಲ್ಪ ಸುಧಾರಿಸಿಕೊಂಡರು. ಈ ಜನಾಂಗವನ್ನು ಒಗ್ಗೂಡಿಸುವ ಹಾಗೂ ಸುಧಾರಿಸುವ ಕೆಲಸ ಮಾಡಿದರು. ಬಿಳಿಚೋಡು ಪಾಳೆಯಗಾರರ ಮನೆತನದ ಎ. ಭೀಮಪ್ಪನಾಯಕರು ಚಿತ್ರದುರ್ಗದ ಸರ್ವಾಂಗೀಣ ಅಭಿವೃದ್ಧಿಗಾಗಿ ಪ್ರಯತ್ನ ಪಟ್ಟರು. ಇವರು ೧೯೫೨ರಲ್ಲಿ ಮೊಳಕಾಲ್ಮೂರು ವಿಧಾನಸಭೆ ಕ್ಷೇತ್ರದಿಂದ, ೧೯೫೭ರಲ್ಲಿ ಚಳ್ಳಕೆರೆ ಮತ್ತು ಜಗಳೂರು ಕ್ಷೇತ್ರದಿಂದ ವಿಧಾನಸಭೆಯನ್ನು ಪ್ರವೇಶಿಸಿದರು. ಇವರು ಸಹಕಾರ ಕ್ಷೇತ್ರಕ್ಕೆ ಹೆಚ್ಚಿನ ಕೊಡುಗೆ ನೀಡಿದ್ದಾರೆ.

ಕರ್ನಾಟಕದಲ್ಲಿ ಪಾಳೆಯಗಾರರ ಮನೆತನದವರಲ್ಲಿ ಎ. ಭೀಮಪ್ಪನಾಯಕರು ಅಲ್ಲದೆ ರಾಜಕೀಯ ಕ್ಷೇತ್ರದಲ್ಲಿ ಛಾಪು ಮೂಡಿಸುವುದರಲ್ಲಿ ಪಟೇಲ ಪಾಪಾನಾಯಕ, ಎಲ್.ಆರ್.ನಾಯಕ, ರಾಜಾ ಪಿಡ್ಡನಾಯಕ, ರಾಜಾ ಕುಮಾರನಾಯಕ, ರಾಜಾ ವೆಂಕಟಪ್ಪನಾಯಕ, ರಾಜಾ ಮದನ ಗೋಪಾಲನಾಯಕ, ರಾಜಾ ವೆಂಕಟಪ್ಪನಾಯಕ, ಅಮರಪ್ಪನಾಯಕ, ರಾಜಾ ಅಂಬಣ್ಣನಾಯಕ, ಗಂಗಾಧರ ನಾಯಕ, ವೆಂಕಟೇಶನಾಯಕ ಇನ್ನೂ ಮುಂತಾದವರು ಶಾಸಕರಾಗಿ, ಸಚಿವರಾಗಿ, ಗುರುತಿಸಿಕೊಂಡಿರುವುದು ಕಂಡುಬರುತ್ತಾರೆ. ಇವರ ಅಧಿಕಾರಾವಧಿಯಲ್ಲಿ ಸಮಾಜವನ್ನು ಮತ್ತು ಜನಾಂಗವನ್ನು ಅಭಿವೃದ್ಧಿಪಡಿಸಲು ಸಾಕಷ್ಟು ಪ್ರಯತ್ನ ನಡೆದಿರುವುದು ತಿಳಿಯುತ್ತದೆ.

ವರ್ತಮಾನದಲ್ಲಿ ಯಾವುದೇ ಸಮಾಜ ಆಧುನಿಕತೆಯ ಪ್ರಭಾವದಿಂದ ದೂರ ಉಳಿದಿಲ್ಲ. ಭಾರತದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರದಲ್ಲಿ ತೀವ್ರತರವಾದ ಬದಲಾವಣೆ ಕಂಡಿವೆ. ಸಾಂಪ್ರದಾಯಿಕ ಸಮಾಜದಲ್ಲಿ ಬದುಕು ಸ್ಥಿತ್ಯಂತರ ಕಂಡಿದೆ. ಹೊಸದನ್ನು ಬಯಸುವ ಸಮಾಜ ದಿನ ಕಳೆದಂತೆ ತನ್ನ ಮೂಲ ಆಚಾರ ವಿಚಾರಗಳಲ್ಲಿನ ಬದಲಾವಣೆಗೆ ಅವಕಾಶ ನೀಡಿತು. ಭಾರತೀಯ ಚರಿತ್ರೆಯಲ್ಲಿ ೧೯ನೆಯ ಶತಮಾನವನ್ನು ಪುನರುಜ್ಜೀವನ ಕಾಲಘಟ್ಟ ಎಂದು ಪರಿಗಣಿಸಲಾಗಿದೆ. ೧೮೦೦ರಿಂದ ೧೯೦೦ರವರೆಗೆ ನಡೆದ ಪಾಶ್ಚ್ಯಾತ್ಯ ದೇಶೀಯ ಚಿಂತನೆಗಳ ತಾಕಲಾಟಗಳು, ತಾಂತ್ರಿಕ ನಿಲುವುಗಳು ಸಮಾಜದಲ್ಲಿ ವೈಚಾರಿಕ ಸುಧಾರಣೆಗಳು, ಧರ್ಮ ಹಾಗೂ ತಾಂತ್ರಿಕತೆಯಲ್ಲಿನ ಪಲ್ಲಟಗಳು ಈ ಅವಧಿಯಲ್ಲಿ ಸಂಕೀರ್ಣವನ್ನಾಗಿಸಿವೆ.[೨೦] ಸಮಾಜ ಸುಧಾರಕರು ಅನೇಕ ಅನಿಷ್ಟ ಪದ್ಧತಿಗಳನ್ನು ಕಡಿವಾಣ ಹಾಕಲಾರಂಭಿಸಿದರು. ಇವರ ಸೇವೆಯ ಫಲವಾಗಿ ದೇಶಾದ್ಯಂತ ಸಾಮಾಜಿಕ ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಅನೇಕ ಸುಧಾರಣೆಗಳು ಕಂಡುಬಂದಿವೆ.

ಪಾಳೆಯಗಾರರ ದೊರೆಗಳು ಮತ್ತು ಅಧಿಕಾರಶಾಹಿಗಳು ಸಮಾಜದಲ್ಲಿ ಉತ್ತಮ ಸ್ಥಾನಮಾನಗಳನ್ನು ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಹೊಂದಿರುವರು. ಆದರೆ ಆರ್ಥಿಕವಾಗಿ ದುರ್ಬಲವಾಗುತ್ತಾ ಬಂದ ಬೇಡ ಅರಸುಮನೆತನಗಳು ಈಗ ಸಾಮಾನ್ಯರಂತೆ ಜೀವನ ನಿರ್ವಹಿಸುತ್ತಿದ್ದಾರೆ. ಇವರ ಆರ್ಥಿಕ ದುಃಸ್ಥಿತಿ ಅವರ ಸ್ಥಾನಮಾನಗಳಿಗೆ ಧಕ್ಕೆ ತಂದಿದೆ. ಆರ್ಥಿಕವಾಗಿ, ರಾಜಕೀಯವಾಗಿ ಇಳಿಮುಖವಾದ ಅವರ ಸಾಮಾಜಿಕ ಬದುಕು ಹಿಂದಿನಂತೆ

ಯಾವ ವೈಶಿಷ್ಟತೆಯನ್ನು ಕಾಪಾಡಿಕೊಂಡಿಲ್ಲ. ಯಾವ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿಲ್ಲ. ಈ ಅರಸುಮನೆತನದವರು ಸಾಮಾನ್ಯರಂತೆ ಎಲ್ಲರೊಳಗೆ ಒಂದಾಗಿ ಬದುಕುವುದು ಅನಿವಾರ್ಯವಾಗಿದೆ. ಉಡುಗೆ-ತೊಡುಗೆ, ಆಹಾರ, ಪಾನೀಯ, ವಸತಿ, ಹಬ್ಬ-ಹರಿದಿನಗಳು ಎಲ್ಲಾ ಅಂಶಗಳು ಸಾಮಾನ್ಯ ಬೇಡರ ಮಟ್ಟಕ್ಕೆ ಬಂದಿವೆ. ಆದರೂ ಕೆಲ ಪಾಳೆಯಗಾರರ ಮನೆತನದವರು ಹಿಂದಿನ ಸಂಪ್ರದಾಯಗಳಾದ ಬೇಟೆ, ಘೋಷಾ, ಧಾನ-ಧರ್ಮ, ತೈಲ ನೀಡುವುದು, ಬನ್ನಿ ಮುಡಿಯುವುದು ಮುಂತಾದವುಗಳನ್ನು ಅನುಸರಿಸುತ್ತಿದ್ದಾರೆ. ಆದರೆ ಅದರಲ್ಲಿ ಹಿಂದಿನ ವೈಭವವಾಗಲಿ, ವಿಶೇಷವಾಗಲಿ ಕಂಡುಬರುವುದಿಲ್ಲ. ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಪರಿವರ್ತನೆಯಾಗಿವೆ. ಆದುದರಿಂದ ಈ ಪಾಳೆಯಗಾರರ ಸಂಪ್ರದಾಯಗಳು ಮರೆಮಾಚಿರುವುದು ಗೋಚರಿಸುತ್ತವೆ. ಸಾಂಪ್ರದಾಯಿಕ ವಿವಾಹಪದ್ಧತಿಗಳು ಸಂಪೂರ್ಣವಾಗಿ ತನ್ನ ಮಹತತ್ವವನ್ನು ಕಳೆದುಕೊಂಡಿವೆ. ಪಾಳೆಯಗಾರರ ಆಡಳಿತದ ಸಂದರ್ಭದಲ್ಲಿ ನಾಗತಿಯರು ಆಡಳಿತಕ್ಕೆ ಸಂಬಂಧಿಸಿದಂತೆ ಹಲವಾರು ಕಾರ್ಯಕ್ರಮಗಳಲ್ಲಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಇವರ ಕಾಲದಲ್ಲಿ ಸ್ತ್ರೀಯರಿಗೆ ಉತ್ತಮ ಸ್ಥಾನಮಾನಗಳನ್ನು ನೀಡಿದ್ದರು. ಆದರೆ ಕಾಲ ಕಳೆದಂತೆ ೧೯೭೭ರಿಂದೀಚೆಗೆ ಈ ಸ್ಥಾನಮಾನಗಳು ಕಡಿಮೆಯಾದಂತೆ ಕಂಡುಬರುತ್ತವೆ. ಇತ್ತೀಚೆಗೆ ಬೇಡಜನಾಂಗದ ಮಹಿಳೆಯರ ಸ್ಥಾನಮಾನಗಳು ಉತ್ತಮವಾಗಿದೆ. ಪ್ರಸ್ತುತ ಬೇಡ ಜನಾಂಗದ ಅಥವಾ ಪಾಳೆಯಗಾರರ ಮನೆತನದ ಮಹಿಳೆ ರಾಜಕೀಯ, ಉದ್ಯೋಗ, ಶೈಕ್ಷಣಿಕ ಇನ್ನೂ ಮುಂತಾದ ಅನೇಕ ಕ್ಷೇತ್ರಗಳಲ್ಲಿ ತಮ್ಮ ಸ್ಥಾನಮಾನವನ್ನು ಹೆಚ್ಚಿಸಿಕೊಂಡಿವೆ. ಈ ಜನಾಂಗದ ಮಹಿಳೆಯರು ಪುರುಷನಿಗೆ ಸಮನಾಗಿ ಶ್ರಮ ವಹಿಸಿ ದುಡಿಯುತ್ತಿರುವುದು ಕಂಡುಬರುತ್ತದೆ.

ಬೇಟೆಪದ್ಧತಿಯು ಪಾಳೆಯಗಾರರಲ್ಲಿ ಅತ್ಯಂತ ಮಹತ್ವವನ್ನು ಪಡೆದುಕೊಂಡಿತ್ತು. ಆಗಿನ ಕಾಲದಲ್ಲಿ ಈ ಬೇಟೆಯು ಸಾಂಸ್ಕೃತಿಕ ಹಾಗೂ ಧಾರ್ಮಿಕ ಮಹತ್ವವನ್ನು ಪಡೆದುಕೊಂಡಿತ್ತು. ಪಾಳೆಯಗಾರರು ತಮ್ಮ ಆಡಳಿತಾವಧಿಯಲ್ಲಿ ಬೇಟೆಗೆ ವಿಶೇಷ ಸ್ಥಾನಮಾನವನ್ನು ನೀಡಿದ್ದರು. ಈ ಬೇಟೆಪದ್ಧತಿಯು ತನ್ನ ಸಾಂಸ್ಕೃತಿಕ ಹಾಗೂ ಧಾರ್ಮಿಕ ಮಹತ್ವವನ್ನು ಕಳೆದುಕೊಂಡಿದೆ. ಯುಗಾದಿ ಹಾಗೂ ದಸರಾ ಹಬ್ಬಗಳಲ್ಲಿ ಮಾತ್ರ ಬೇಡರು ಈಗ ಕೇವಲ ಸಾಂಪ್ರದಾಯಿಕವಾಗಿ ಬೇಟೆಗೆ ಹೋಗಿಬರುತ್ತಾರೆ. ಹಿಂದಿನ ಕಾಲದ ಭರ್ಜಿ, ಬಾಕು, ಗಂಡುಕೊಡಲಿ, ತಲೆಕೋಲು ಮುಂತಾದವು ಇದ್ದರೂ ಅವು ಪ್ರಸ್ತುತ ಮೂಲೆಗುಂಪಾಗಿ ತುಕ್ಕುಹಿಡಿದಿವೆ. ಕೆಲವು ಬೇಡರು ಅವುಗಳ ಮೌಲ್ಯ ಅರಿಯದೇ ದೈನಂದಿನ ಬದುಕಿಗಾಗಿ ಗುಜರಿಯವರಿಗೆ ಮಾರಿಕೊಂಡಿರುವ ಸಾಕಷ್ಟು ಉದಾಹರಣೆಗಳು ಕಂಡುಬರುತ್ತದೆ.

ಮೂಲತಃ ಬೇಟೆಗಾರರಾಗಿದ್ದ ಬೇಡರು ನಂತರ ಪಶುಪಾಲನೆ, ಕೃಷಿ, ಉದ್ಯೋಗ ಕ್ಷೇತ್ರದಲ್ಲಿ ಗುರುತಿಸಿಕೊಂಡರು. ಅನಂತರ ರಾಜಪ್ರಭುತ್ವದ ಬೆಳವಣಿಗೆಯಿಂದಾಗಿ ಈ ಜನಾಂಗದವರು ಸೈನಿಕ ವೃತ್ತಿಯನ್ನು ಅವಲಂಬಿಸಿದರು. ಆ ವೃತ್ತಿ ವಂಶಪಾರಂಪರ್ಯವಾಗಿ ಬೆಳೆದುಬಂದಿತು.

ಬಲಿಷ್ಠರಾದ ಕೆಲವು ಸೈನಿಕರು ಪಾಳೆಯಗಾರಿಕೆಯನ್ನು ಹೊಂದಿದ್ದರು. ಅನಂತರ ಅವರು ದೊರೆಗಳೆನಿಸಿಕೊಂಡು ಪಾಳೆಯಪಟ್ಟನ್ನು ಆಳಿದರು.[೨೧] ಕಾಲಕ್ರಮೇಣ ಈ ಪಾಳೆಯಗಾರರು ಹೈದರಾಲಿ, ಟಿಪ್ಪು, ಬ್ರಿಟಿಷರ ಕಾಲದಲ್ಲಿ ಅಧಿಕಾರವನ್ನು ಕಳೆದುಕೊಂಡ ನಂತರ ಬೇರೆ ಬೇರೆ ಕ್ಷೇತ್ರಗಳ ಕಡೆ ಗಮನ ಹರಿಸಿದರು. ಬ್ರಿಟಿಷರು ಈ ಪಾಳೆಯಗಾರರನ್ನು ಸಂಪೂರ್ಣ ಹತೋಟಿಯಲ್ಲಿಟ್ಟುಕೊಂಡಿದ್ದರಿಂದ ಪಾಳೆಯಗಾರರ ವಂಶಸ್ಥರ ಆರ್ಥಿಕ ಸ್ಥಿತಿ ತೀರಾ ಸಂಕಷ್ಟಕ್ಕೆ ಗುರಿಯಾಯಿತು. ಬ್ರಿಟಿಷರು ಪಾಳೆಯಗಾರರ ವಂಶಸ್ಥರಿಗೆ ನೀಡುತ್ತಿದ್ದ ಗೌರವಧನವನ್ನು ಕಾಲಕ್ರಮೇಣ ನಿಲ್ಲಿಸಿದ್ದರಿಂದ ಅವರು ತಮ್ಮ ಕುಟುಂಬ ನಿರ್ವಹಣೆಗಾಗಿ ತಮ್ಮ ಆಸ್ತಿಗಳನ್ನು ಮಾರುತ್ತಾ ಇದ್ದ ಆಸ್ತಿ ಖಾಲಿಯಾದಂತೆ ಯಾವುದಾದರೂ ಒಂದು ಉದ್ಯೋಗವನ್ನು ಪಡೆದುಕೊಳ್ಳಲು ಹಾತೊರೆಯುವುದು ಅನಿವಾರ್ಯವಾಯಿತು.[೨೨]

ಒಟ್ಟಾರೆ ಬೇಟೆಗಾರರಾಗಿ, ಸೈನಿಕರಾಗಿ, ಅನಂತರ ಪಾಳೆಯಗಾರರಾಗಿ ಗುರುತಿಸಿಕೊಂಡ ಇವರು ಅನೇಕ ದೇವಾಲಯಗಳನ್ನು, ಕೋಟೆಗಳನ್ನು ಕೆರೆ–ಕಾಲುವೆ, ಬುರುಜು–ಬತೇರಿಗಳನ್ನು ಕಟ್ಟಿಸುವುದರ ಜೊತೆಗೆ ದೇವಾಲಯಗಳಿಗೆ ದಾನ–ದತ್ತಿ ನೀಡಿರುವುದು ಕಂಡುಬರುತ್ತದೆ. ಇವರ ವಾಸ್ತುರಚನೆಯು ಇವರ ಬದುಕು ಹಾಗೂ ಸಾಧನೆಗಳ ವಿಭಿನ್ನ ಸಾಂಸ್ಕೃತಿಕ ಮುಖಗಳನ್ನು ಪರಿಚಯಿಸುತ್ತದೆ.

ಕರ್ನಾಟಕದಲ್ಲಿ ಬೇಡ ಅರಸರ ಮನೆತನಗಳಲ್ಲಿ ಪ್ರಸ್ತುತ ದಿನಮಾನಗಳಲ್ಲಿ ಅನೇಕ ಪರಿವರ್ತನೆಗಳಾಗಿವೆ. ಈ ಅರಸುಮನೆತನದವರು ಅನೇಕ ಸೌಲಭ್ಯಗಳನ್ನು ಪಡೆಯುವುದರೊಂದಿಗೆ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾಮಟ್ಟದ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ಕೇಂದ್ರ ಹಾಗೂ ರಾಜ್ಯ ಸರ್ಕಾರದ ರಾಜಕಾರಣದಲ್ಲಿ ಸಂಸದರಾಗಿ, ಮಂತ್ರಿಗಳಾಗಿ, ಶಾಸಕರಾಗಿ ಇವರ ಪಾತ್ರ ಮಹತ್ತರ ಬೆಳವಣಿಗೆ ಕಂಡಿದೆ. ಆಧುನಿಕತೆ ವೈಜ್ಞಾನಿಕತೆ, ಸಂಸ್ಕೃತೀಕರಣ, ಜಾಗತೀಕರಣಗಳ ಪ್ರಭಾವದಿಂದ ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಬೇಡರು ಬದಲಾಗುತ್ತಿದ್ದಾರೆ. ಸಂಪ್ರದಾಯ, ಆಚಾರ–ವಿಚಾರ, ಉಡುಗೆ–ತೊಡುಗೆ ಮುಂತಾದವುಗಳಲ್ಲಿ ಸಾಕಷ್ಟು ಬದಲಾವಣೆ ಆಗಿರುವುದನ್ನು ಗುರುತಿಸಬಹುದಾಗಿದೆ.

**ಕೊನೆಟಿಪ್ಪಣಿಗಳು**

೧. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ಬ್ರಿಟಿಷರ ವಿರುದ್ಧ ನಾಯಕರ ಹೋರಾಟಗಳು, ಪು.ಸಂ. ೧೦

೨. ಕ್ಯಾತನಹಳ್ಳಿ ರಾಮಣ್ಣ, ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ಪು.ಸಂ. ೧೦೪

೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಕ.ವಿ.ವಿ. ಹಂಪಿ, ಪು.ಸಂ. ೧೯

೪. ಚಿನ್ನಸ್ವಾಮಿ ಸೋಸಲೆ, ೨೦೧೦, ವಸಾಹತುಕಾಲಘಟ್ಟದ ಮೈಸೂರು ಸಂಸ್ಥಾನ, ಕವಿಹಂ. ಪು. ೧೨

೫. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ಪೂರ್ವೋಕ್ತ ಪು.ಸಂ. ೩೬

೬. ಚಿಕ್ಕೆರೂರು ಗೋವಿಂದಾಚಾರ್ಯ ಅಪ್ರಕಟಿತ ಹಸ್ತಪ್ರತಿ, ಪು.ಸ.೦ ೧೪೯

೭. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಪು.ಸಂ. ೨೨

೮. ಅದೇ, ಪು.ಸಂ. ೧೩

೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಕ.ವಿ.ಹಂ. ಪು.ಸಂ. ೭೯

೧೦. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ. ಕ.ವಿ.ಹಂ. ಪು.ಸಂ. ೧೯

೧೧. ಅಬ್ದುಲ್ ಸತ್ತಾರ್, ೧೯೯೭, ತರೀಕೆರೆ ಪಾಳೆಯಗಾರರು, ಶ್ರೀಲೋಕಪಾವನಿ ಪ್ರಕಾಶನ, ಪಾಂಡವಪುರ, ಪು.ಸಂ. ೩೯

೧೨. ಅದೇ, ಪು.ಸಂ. ೩೯

೧೩. ಅದೇ ಪು.ಸಂ. ೪೦

೧೪. ವಿರೂಪಾಕ್ಷಿ ಪೂಜಾರಹಳ್ಳಿ, ತರೀಕೆರೆ ಸರ್ಜಪ್ಪನಾಯಕನ ಕಥಾನಕಾವ್ಯ ಪು.ಸಂ.

೧೫. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ಪೂರ್ವೋಕ್ತ, ಪು.ಸಂ. ೧೬

೧೬. ಕ್ಷೇತ್ರಕಾರ್ಯ ಮಾಹಿತಿದಾರರು: ಅಂಚೆನಾಗಭೂಷಣ, ಚಂದ್ರಪ್ಪ ತರೀಕೆರೆ

೧೭. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪು.ಸಂ. ೧೭

೧೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ಪೂರ್ವೋಕ್ತ, ಪು. ಸಂ. ೧೭

೧೯. ಕೃಷ್ಣಮೂರ್ತಿ ಸಿ.ಎನ್., ೨೦೧೭, ದಾವಣಗೆರೆ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ, ಪು.ಸಂ. ೧೯೫

೨೦. ಷೇಕ್ ಅಲಿ ಬಿ., (ಸಂ) ೧೯೯೭, ಕರ್ನಾಟಕ ಚರಿತ್ರೆ ಸಂಪುಟ–೬, ಪು.ಸಂ. ೧೫೮

೨೧. ದುರುಗಪ್ಪ ಎಂ.ಕೆ., ವಿಜಯನಗರೋತ್ತರಕಾಲೀನ ಬೇಡ ಜನಾಂಗ, ೨೦೧೦, ಪು.ಸಂ. ೨೦೫

೨೨. ಅದೇ, ಪು.ಸಂ. ೨೦೫

# ಅಧ್ಯಾಯ ಏಳು

# ಸಮಾರೋಪ

ಚರಿತ್ರೆ ಅಧ್ಯಯನದ ಸಂಶೋಧನಾ ವಿಧಾನಗಳು ಇಂದು ತೀರಾ ಭಿನ್ನವಾಗಿವೆ. ಅವುಗಳನ್ನು ಪ್ರಾದೇಶಿಕ ಮತ್ತು ಮೌಖಿಕ ಚರಿತ್ರೆ ಎಂದು ಅಧ್ಯಯನಿಸಲಾಗುತ್ತಿದೆ. ಇದರಿಂದಾಗಿ ಚರಿತ್ರೆಗೆ ಪ್ರಸ್ತುತ ಸಂದರ್ಭದಲ್ಲಿ ಹೆಚ್ಚು ಪ್ರಾಮುಖ್ಯತೆ ದೊರೆಯುತ್ತಿದೆ. ಚರಿತ್ರೆಯಲ್ಲಿ ಮಹಾಸಾಮ್ರಾಜ್ಯಗಳ, ರಾಜ್ಯಗಳ ಬಗ್ಗೆ ಹೆಚ್ಚು ಮಾಹಿತಿ ಇದೆ. ಆದರೆ ಸಣ್ಣಪುಟ್ಟ ಅರಸರ ಮಾಂಡಲಿಕರ, ನಾಯಕರ ಅಥವಾ ಪಾಳೆಯಗಾರರ ಬಗ್ಗೆ ಮಾಹಿತಿ ದೊರೆಯುವುದು ತುಂಬ ವಿರಳ. ಒಂದು ಬೃಹತ್ ಸಾಮ್ರಾಜ್ಯದ ನೈಜವಾದ ಚರಿತ್ರೆ ತಿಳಿದುಕೊಳ್ಳಬೇಕಾದರೆ ಆ ಸಾಮ್ರಾಜ್ಯಗಳಿಗೆ ಆಧಾರ ಸ್ತಂಭಗಳಾಗಿದ್ದ ಚಿಕ್ಕ ಚಿಕ್ಕ ರಾಜಕೀಯ ಘಟಕಗಳ ಬಗೆಗೆ ವಸ್ತುನಿಷ್ಠವಾದ ಅಧ್ಯಯನಗಳಾಗಬೇಕು.

ಕರ್ನಾಟಕದ ಚರಿತ್ರೆಯಲ್ಲಿ ಕ್ರಿ.ಶ. ೧೪ ಮತ್ತು ೧೫ನೇ ಶತಮಾನ ರಾಜ್ಯಾಡಳಿತದಲ್ಲಿ ಅತಂತ್ರ ಸ್ಥಿತಿ ನಿರ್ಮಾಣವಾಗಿತ್ತು. ಮಹಾಸಾಮ್ರಾಜ್ಯಗಳ ಆಡಳಿತ ವೈಫಲ್ಯದಿಂದ ಸಣ್ಣಪುಟ್ಟ ಅರಸುಮನೆತನಗಳು ಆಳ್ವಿಕೆ ನಡೆಸಲು ಮುಂದಾದವು. ವಾರಂಗಲ್ಲಿನ ಕಾಕತೀಯರು ಮತ್ತು ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಸಣ್ಣಪುಟ್ಟ ಅರಸುಮನೆತನಗಳಿಗೆ ಆಡಳಿತದ ಜವಾಬ್ದಾರಿಯನ್ನು ಕೊಟ್ಟಿದ್ದರು. ಸಾಮ್ರಾಜ್ಯ ರಕ್ಷಣೆಯಲ್ಲಿ ಇಂಥವರ ಪಾತ್ರ ಬಹುಮುಖ್ಯ. ಇವರನ್ನು ಕ್ರಮೇಣ ಪಾಳೆಯಗಾರರೆಂದು ಕರೆದರು. ಇವರಿಗೆ ಆಂತರಿಕ ಸ್ವಾತಂತ್ರ್ಯವನ್ನು ನೀಡಿದವರು ವಿಜಯನಗರದ ಸಾಮ್ರಾಜ್ಯದ ಅರಸರು. ಅಲ್ಲಿ ಪ್ರಬಲರಾದ ಪಾಳೆಯಗಾರರಿಗೆ ಭಾರತದಲ್ಲಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲಾವಧಿಯು ರಾಜಕೀಯ ಸಾಂಸ್ಕೃತಿಕ ಸಂಕ್ರಮಣ ಕಾಲವೆಂದು ಗುರುತಿಸಬಹುದು. ವಿಜಯನಗರೋತ್ತರ ಕಾಲದಲ್ಲಿ ವಿಶಾಲ ಸಾಮ್ರಾಜ್ಯಗಳ ಅಸ್ತಿತ್ವ ಕಳೆಗುಂದುತ್ತಾ, ಜನಪದರಿಗೆ ಹತ್ತಿರವಿರುವ ಸ್ಥಳೀಯ ಅರಸರೆಂದೇ ಕರೆಯಲ್ಪಡುವ ಪಾಳೆಯಗಾರರು ಪ್ರಭಾವಿ ರಾಜಕೀಯ ಶಕ್ತಿಗಳಾಗಿ ಮೂಡಿಬಂದರು. ಅನೇಕ ಪಾಳೆಯಗಾರರು ಹಾಗೂ ಸಾಮಂತರು ವಿಜಯನಗರೋತ್ತರ ಕಾಲದಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ.

ಈ ಪಾಳೆಯಗಾರರಲ್ಲಿ ಸ್ಥಳೀಯ ಮಟ್ಟದಲ್ಲಿ ಎರಡು ರೀತಿಯ ನಾಯಕತ್ವ ಬೆಳೆಯಿತು. ಒಂದನೆಯದಾಗಿ ಆರಣ್ಯಪ್ರದೇಶದ ಜೀವನ ಮಾರ್ಪಡಿಸಿಕೊಂಡು ಶಾಶ್ವತವಾಗಿ ಕೃಷಿಗೆ

ತೊಡಗಿಸಿಕೊಂಡವರು ಅಥವಾ ಅಸ್ತಿತ್ವದಲ್ಲಿದ್ದ ಕೃಷಿಕರನ್ನು ತಮ್ಮ ಅಧೀನಕ್ಕೆ ವಶಪಡಿಸಿಕೊಂಡು ನಾಯಕರಾಗಿ ಬೆಳೆದರೆ, ಎರಡನೆಯದಾಗಿ ಕಿರಾತ ಪಡೆಗಳನ್ನು ಹೊಂದಿದ್ದು ಸೈನಿಕರ ಶ್ರೇಣಿ ಪಡೆದುಕೊಂಡಿದ್ದರು. ಅವರು ಸ್ಥಳೀಯ ಭೂಮಿಯ ಮೇಲೆ ಪ್ರಭುತ್ವ ಹೊಂದಿದ್ದರು. ಜೊತೆಗೆ ಸೈನಿಕ ಸೇವೆ ಮಾಡುವಂತಹ ಸಾಮರ್ಥ್ಯ ಇವರಿಗಿತ್ತು. ಆದುದರಿಂದ ವಿಜಯನಗರ ಅರಸರಿಂದ ಕರಾಜಕೀಯ ಅಧಿಕಾರ ಪಡೆದುಕೊಂಡು ಪಾಳೆಯಗಾರರಾದರು. ಈ ವ್ಯವಸ್ಥೆಯಿಂದ ವಿಜಯನಗರದ ಸಾಮ್ರಾಜ್ಯದ ಅವಧಿಯಲ್ಲಿ ಅಧಿಕಾರವು ಮೂಲ ಪಾಳೆಯಗಾರರಿಗೆ, ಸಾಮಂತರಿಗೆ, ನಾಯಕರಿಗೆ, ವರ್ಗಾವಣೆಯಾಯಿತು. ಈ ರೀತಿಯ ಅಧಿಕಾರವನ್ನು ಪಡೆದ ಪಾಳೆಯಗಾರರು ಹಲವಾರು ಅಭಿವೃದ್ಧಿ ಕಾರ್ಯಗಳು ಮಾಡುವುದರ ಮೂಲಕ ಪ್ರಾದೇಶಿಕ ಮಟ್ಟದಲ್ಲಿ ಜನಮನ್ನಣೆ ಗಳಿಸಿಕೊಂಡರು.

ವಿಜಯನಗರ ಸಾಮ್ರಾಜ್ಯವು ಸೈನಿಕ ವ್ಯವಸ್ಥೆಯನ್ನು ಅವಲಂಬಿಸಿದ್ದ ರಾಜ್ಯವಾಗಿದ್ದು ಸೈನಿಕರನ್ನು ಒದಗಿಸುವ ಸಮುದಾಯಗಳಿಗೆ ಹೆಚ್ಚಿನ ಮಾನ್ಯತೆ ನೀಡಿದ್ದರು. ಈ ರೀತಿಯ ಸೈನಿಕರನ್ನು ಬೇಡರು ಒದಗಿಸುತ್ತಿದ್ದರು. ಇದರಿಂದ ಬೇಡರು ಅಧಿಕಾರಕ್ಕೆ ಏರಲು ಸಾಧ್ಯವಾಯಿತು, ವಿಜಯನರ ಸಾಮ್ರಾಜ್ಯ ದುರ್ಬಲಗೊಂಡಾಗ ಸ್ವಾತಂತ್ರ್ಯವಾಗಿ ಆಡಳಿತ ನಡೆಸಲು ಆರಂಭಿಸಿದರು. ವಿಜಯನಗರದವರು ಪ್ರಾದೇಶಿಕ ನಾಯಕತ್ವಕ್ಕೆ ನೀಡಿದ ರಾಜಮನ್ನಣೆ ಮತ್ತು ಪಾಳೆಯಗಾರರು ಪ್ರಾದೇಶಿಕ ಸಾಂಸ್ಕೃತಿಕ ಶಕ್ತಿಗಳಿಗೆ ಆಶ್ರಯ ನೀಡಿದ ಅಂಶಗಳೆಂದು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಪಾಳೆಯಗಾರರ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಇತಿಹಾಸವನ್ನು ಕೇಂದ್ರವನ್ನಾಗಿಟ್ಟುಕೊಂಡು ಅವರ ಚರಿತ್ರೆಯನ್ನು ರಚಿಸುವ ಪ್ರಯತ್ನ ಮಾಡಲಾಗಿದೆ.

ಪಾಳೆಯಗಾರರ ಪ್ರಾಂತ್ಯಗಳು ಸಾಮ್ರಾಜ್ಯಗಳಷ್ಟು ವಿಸ್ತಾರವಾದ ಚರಿತ್ರೆ ಇಲ್ಲದಿದ್ದರೂ ತಮ್ಮದೇ ಆದ ವ್ಯಾಪ್ತಿಯಲ್ಲಿ ತನ್ನತನವನ್ನು ಮೂಡಿಸಿದ್ದಾರೆ. ಇಂತಹ ಪಾಳೆಯಗಾರರಲ್ಲಿ ಹರಪನಹಳ್ಳಿ, ಸಂತೆಬೆನ್ನೂರು, ಬಸವಾಪಟ್ಟಣ, ಕಣಕುಪ್ಪೆ, ಬಿಳಿಚೋಡು ಉಚ್ಚಂಗಿದುರ್ಗ, ಪ್ರಮುಖರಾಗಿದ್ದಾರೆ. ಇವುಗಳ ಜೊತೆ ಕಿರುಪಾಳೆಯಪಟ್ಟುಗಳು ಹಾಗೂ ಸಣ್ಣಪುಟ್ಟ ಸಾಮಂತ ರಾಜಮನೆತನಗಳು ಕಂಡುಬರುತ್ತವೆ. ಇವರು ವಿಜಯನಗರ ಅರಸರಿಗೆ ಋಣಿಯಾಗಿ, ಅವರ ರಕ್ಷಣೆಗಾಗಿ ಏಳಿಗೆಗಾಗಿ ಈ ಪಾಳೆಯಗಾರರು ಶ್ರಮಿಸಿದ್ದಾರೆ. ವಿಜಯನಗರ ಸಾಮ್ರಾಜ್ಯ ಪತನದ ನಂತರ ಆ ಸಾಮ್ರಾಜ್ಯದ ಹಿರಿಮೆ ಗರಿಮೆಗಳನ್ನು ಕಾಪಾಡಿಕೊಂಡು ಅವರ ಸಂಸ್ಕೃತಿಯನ್ನು ರಕ್ಷಿಸಿದ ಕೀರ್ತಿ ಈ ಪಾಳೆಯಗಾರರಿಗೆ ಸಲ್ಲುತ್ತದೆ.

ದಾವಣಗೆರೆ ಜಿಲ್ಲೆಯಲ್ಲಿ ೧೫ನೇ ಶತಮಾನದ ಆರಂಭದಲ್ಲಿ ಪಾಳೆಯಗಾರರು ತಲೆ ಎತ್ತಿದ ಮೇಲೆ ವಿಜಯನಗರ ಸಾಮ್ರಾಜ್ಯದ ಪರೋಕ್ಷ ಆಡಳಿತ ಪ್ರಾರಂಭವಾಗಿತೆನ್ನಬಹುದು. ವಿಸ್ತಾರವಾದ ಪ್ರಾಂತ್ಯಗಳಲ್ಲಿ ಬಿಗಿಯಾದ ಆಡಳಿತ ನಡೆಸಲು ಪ್ರಮುಖವಾದ ಜನರನ್ನು ನೇಮಿಸುತ್ತಿದ್ದರು. ಈ ಅಧಿಕಾರಿಗಳಿಗೆ ನಾಯಕರು ಪಾಳೆಯಗಾರರು ಎಂದು ಸರ್ವಸಾಧಾರಣವಾಗಿ ಅನೇಕ ಸ್ಥಳಗಳಲ್ಲಿ ಹೆಸರಿಸಲಾಗಿತ್ತು. ಈ ಪಾಳೆಯಗಾರರು ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಆಳುತ್ತಾ

ದೊರೆಗಳಿಗೆ ಕಪ್ಪಕಾಣಿಕೆ ಕಂದಾಯವನ್ನು ನೀಡುತ್ತಾ ವಿಜಯನಗರದ ಅರಸರಿಗೆ ಸಹಾಯ ಮಾಡುತ್ತಾ ಇದ್ದರು. ಈ ಕಾರಣದಿಂದ ನಾಯಕರಿಗೆ ಪಾಳೆಯಗಾರರು ಎಂದು ಹೆಸರು ಬಂದಿತು. ಪಾಳೆಯಗಾರರೆಂದರೆ ದಂಡಿನೊಡನೆ ಪಾಳೆಯ ಹಾಕಿಕೊಂಡು ಕದನಕ್ಕೆ ಸಿದ್ಧವಾಗಿರತಕ್ಕವರೆಂದು ಅರ್ಥ. ಈ ಪಾಳೆಯಗಾರರಲ್ಲಿ ಬೇಡ ಜನಾಂಗದವರು ಪ್ರಮುಖರಾಗಿದ್ದಾರೆ. ಈ ಪಾಳೆಯಗಾರರು ತಮ್ಮನ್ನು ಪಾಳೆಯಗಾರರು ಎಂದು ಕರೆದುಕೊಳ್ಳದೆ 'ರಾಜಾ' ಎಂದೇ ಕರೆದುಕೊಂಡಿದ್ದಾರೆ. ಪಾಳೆಯಗಾರರ ಪದದ ಬಳಕೆ ವಿಜಯನಗರೋತ್ತರ ಕಾಲದಲ್ಲಿ ಕಡಿಮೆಯಾಗಿರಬಹುದು. ಕಾಲಕ್ರಮೇಣ ಇವರು ದೊರೆಗಳು, ಅರಸರು, ನಾಯಕರು ಎಂದೆಲ್ಲಾ ಕರೆದುಕೊಳ್ಳತೊಡಗಿದರು. ಜೊತೆಗೆ ಕ್ಷತ್ರಿಯರಂತೆ ರಾಜ್ಯಗಳನ್ನು ಆಳ್ವಿಕೆ ಮಾಡಿ ಅವರ ಸ್ಥಾನಮಾನಗಳನ್ನು ಅನುಭವಿಸಿದರು. ಇವರಿಗೆ ರಾಜಮರ್ಯಾದೆ ಅಧಿಕಾರ ದೊರೆತ ಮೇಲೆ ಸಮಾಜದಲ್ಲಿ ಮುಂದುವರಿದ ವರ್ಗವಾಗಿ ಗುರುತಿಸಲ್ಪಟ್ಟರು. ಸಹಜವಾಗಿಯೇ ಅಂದಿನ ಸಮಾಜದ ರಾಜಕೀಯ ಪ್ರತಿನಿಧಿಗಳಾದವರು ಅಧಿಕಾರಸ್ಥ ಬೇಡ ಸೈನಿಕರು, ಗುರಿಕಾರರು, ತಳವಾರರು, ದೇಸಾಯಿಗಳು, ಪೊಲೀಸ್, ಪಾಟೀಲರು, ಗೌಡರು ಮುಂತಾದವರು ಇವರ ನಂತರದ ಸ್ಥಾನದಲ್ಲಿ ಗುರುತಿಸಲ್ಪಟ್ಟರು. ಧಾರ್ಮಿಕ ಕೆಲಸ ಕಾರ್ಯಗಳನ್ನು ಮಾಡುತಿದ್ದ ದಾಸಪ್ಪಗಳು, ಜೋಗಯ್ಯಗಳು, ಪೂಜಾರಿಗಳು ಹಾಗೂ ರೈತರು, ಕೂಲಿಗಳು ಕುಲಕಸುಬುದಾರರು ಆ ನಂತರದ ಸ್ಥಾನದಲ್ಲಿ ಕಂಡುಬಂದರು. ಹೀಗೆ ಬೇಡ ಜನಾಂಗದಲ್ಲಿ ವರ್ಗಗಳ ಕಲ್ಪನೆಯನ್ನು ಕಾಣಬಹುದಿತ್ತು.

ಪ್ರಾಚೀನ ಕಾಲದಿಂದಲೂ ದಾವಣಗೆರೆ ಜಿಲ್ಲೆ ಕರ್ನಾಟಕದ ಇತಿಹಾಸದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿ ಮೌರ್ಯರು, ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ, ನೊಳಂಬ, ಸೇವುಣ, ಉಚ್ಚಂಗಿ ಪಾಂಡ್ಯ, ವಿಜಯನಗರದ ಅರಸರು, ಪಾಳೆಯಗಾರರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿದೆ. ಈ ರಾಜವಂಶಸ್ಥರು ದಾವಣಗೆರೆ ಜಿಲ್ಲೆಯಲ್ಲಿ ಅನೇಕ ದೇವಾಲಯಗಳು, ಅರಮನೆಗಳು, ಕೋಟೆ ಕೊತ್ತಲಗಳು, ಕೆರೆ ಕಟ್ಟೆಗಳು, ಮಠಗಳನ್ನು ನಿರ್ಮಿಸಿದ್ದಾರೆ. ಇವುಗಳು ಇಲ್ಲಿಯ ಐತಿಹಾಸಿಕ ರಚನೆಗೆ ಪ್ರಮುಖ ಆಕರಗಳನ್ನು ಒದಗಿಸುತ್ತವೆ. ಈ ಆಕರಗಳಿಂದ ಆಯಾ ಕಾಲದ ಮನೆತನಗಳ ರಾಜಕೀಯ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ದಾನ-ಧರ್ಮ, ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರಗಳ ಬಗ್ಗೆ ತಿಳಿದುಕೊಳ್ಳಬಹುದಾಗಿದೆ. ಇದರೊಂದಿಗೆ ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಚರಿತ್ರೆಯನ್ನು ತಿಳಿದುಕೊಳ್ಳಲು ಅವರು ನಿರ್ಮಿಸಿದ ಸ್ಮಾರಕಗಳು, ಕರ್ನಾಟಕ ಚರಿತ್ರೆಗೆ ನೀಡಿದ ಕೊಡುಗೆಗಳ ಮೂಲಕ ತಿಳಿಯಬಹುದಾಗಿದೆ. ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಪಾಳೆಯಗಾರರ ಅನೇಕ ಮಜಲುಗಳನ್ನು, ಅವರ ಕೊಡುಗೆಗಳನ್ನು ಪ್ರಸ್ತುತ ಪಾಳೆಯಗಾರ ಮನೆತನದ ಸ್ಥಿತಿಗತಿಗಳನ್ನು ವಿವರವಾಗಿ ಇಲ್ಲಿ ಬೆಳಕಿಗೆ ತರಲಾಗಿದೆ, ಈ ಅಧ್ಯಯನಗಳಿಂದ ಫಲಿತಗಳನ್ನು ಈ ಕೆಳಕಂಡಂತೆ ಕಂಡುಕೊಳ್ಳಲಾಗಿದೆ.

**ಫಲಿತಗಳು**

ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ, ವ್ಯಾಪ್ತಿ ಮುಂತಾದ ಅಂಶಗಳನ್ನು ಈ ಅಧ್ಯಯನದಲ್ಲಿ ನಿರ್ಧರಿಸಲಾಗಿದ್ದು, ಈ ಮೂಲಕ ಪ್ರಸ್ತುತ ಅಧ್ಯಯನದ ಒಟ್ಟು ಆಶಯವನ್ನು ಸೂಚಿಸಲಾಗಿದೆ. ಕರ್ನಾಟಕದ ಮಧ್ಯ ಭಾಗದಲ್ಲಿರುವ ದಾವಣಗೆರೆ ಜಿಲ್ಲೆಯಲ್ಲಿ ಸಂತೆಬೆನ್ನೂರು ನಾಯಕರು, ಬಸವಾಪಟ್ಟಣ, ಹರಪನಹಳ್ಳಿ, ಬಿಳಿಚೋಡು, ಕಣಕುಪ್ಪೆ, ಅಣಜಿ ಮುಂತಾದ ಅನೇಕ ಪಾಳೆಯಪಟ್ಟುಗಳು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಈ ಪಾಳೆಯಗಾರರ ಕುರಿತಾಗಿ ಈವರೆಗೆ ಸಣ್ಣಪುಟ್ಟ ಅಧ್ಯಯನಗಳು, ಬಿಡಿ ಲೇಖನಗಳು, ವಿಚಾರ ಸಂಕಿರಣಗಳಲ್ಲಿ ಪ್ರಬಂಧಗಳು ಮಂಡನೆಯಾಗಿದ್ದು ಅವುಗಳನ್ನು ಪ್ರಸ್ತುತ ಅಧ್ಯಯನ ಮಾಡಿ ಹೊಸ ಹೊಸ ಸಂಗತಿಗಳನ್ನು ಶೋಧಿಸಿ ಇಲ್ಲಿ ವಿಶ್ಲೇಷಿಸಲಾಗಿದೆ. ಈ ಮೂಲಕ ಪಾಳೆಯಗಾರರ ಪ್ರಮುಖ ಅಂಶಗಳಾದ, ರಾಜಕೀಯ ಸ್ಥಿತಿಗತಿ, ಆಡಳಿತ ವ್ಯವಸ್ಥೆ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಕಲೆ ಮತ್ತು ವಾಸ್ತುಶಿಲ್ಪ ಸಾಹಿತ್ಯ ಶಿಕ್ಷಣ, ಮತ್ತು ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಳೆಯಗಾರರು ಹಾಗೂ ಪಾಳೆಯಗಾರರ ಮನೆತನದವರ ಪ್ರಸ್ತುತ ಸದ್ಯ ಸ್ಥಿತಿಗತಿಗಳ ಬಗ್ಗೆ ಮರೆಯಾದ ಅಧ್ಯಾಯವನ್ನು ಕಟ್ಟಿಕೊಡಲಾಗಿದೆ. ಪ್ರಸ್ತುತ ಅಧ್ಯಯನದ ಮೂಲಕ ದಾವಣಗೆರೆ ಜಿಲ್ಲೆಯಲ್ಲಿನ ಪಾಳೆಯಗಾರರ ಕೊಡುಗೆಗಳನ್ನು ಗುರುತಿಸಿ ಅವುಗಳ ಮಹತ್ವವನ್ನು ಬಿಂಬಿಸಿ ಈ ಪಾಳೆಯಗಾರರ ಇತಿಹಾಸವನ್ನು ಮತ್ತಷ್ಟು ತಿಳಿಗೊಳಿಸುವ ಉದ್ದೇಶವನ್ನು ಹೊಂದಲಾಗಿತ್ತು. ಬಹುಮಟ್ಟಿಗೆ ಈ ಉದ್ದೇಶವನ್ನು ಈಡೇರಿಸುವ ಪ್ರಯತ್ನವನ್ನು ಮಾಡಲಾಗಿದೆ.

ಭೌಗೋಳಿಕವಾಗಿ ದಾವಣಗೆರೆ ಜಿಲ್ಲೆಯ ವೈಶಿಷ್ಟ್ಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಭೌಗೋಳಿಕ ಪರಿಸರವು ಅಲ್ಲಿನ ಚರಿತ್ರೆಯನ್ನು ರೂಪಿಸುವಲ್ಲಿ ವಹಿಸಿರುವ ಪಾತ್ರವನ್ನು ದಾವಣಗೆರೆ ಜಿಲ್ಲೆಗೆ ಸಂಬಂಧಿಸಿದಂತೆ ಭೌತಿಕವಾಗಿ ವಿವರಿಸಲಾಗಿದೆ. ಪ್ರಾಗೈತಿಹಾಸದ ಮಾನವನು ಈ ಪ್ರದೇಶದಲ್ಲಿ ತನ್ನ ಜೀವನವನ್ನು ನಡೆಸುತ್ತಿದ್ದರೆಂಬ ಸಂಗತಿ ಇಲ್ಲಿ ದೊರಕಿರುವ ಅವಶೇಷಗಳಿಂದ ತಿಳಿದುಕೊಳ್ಳಬಹುದು. ಹಳೆಯ ಶಿಲಾಯುಗ, ಮಧ್ಯಶಿಲಾಯುಗ, ನವಶಿಲಾಯುಗಗಳ ಇತಿಹಾಸವಿರುವ ಈ ಜಿಲ್ಲೆಯಲ್ಲಿ ಒಂದು ನಿರ್ದಿಷ್ಟ ಪ್ರದೇಶದ ಚಾರಿತ್ರಿಕ ಸಂಗತಿಯನ್ನು ಕಟ್ಟಿಕೊಡುವುದು ಅಗತ್ಯವೆಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರಾದ ಹರಪನಹಳ್ಳಿ, ಸಂತೆಬೆನ್ನೂರು, ಬಸವಾಪಟ್ಟಣ, ಉಚ್ಚಂಗಿದುರ್ಗ, ಬಿಳಿಚೋಡು, ಕಣಕುಪ್ಪೆ ಪಾಳೆಯಗಾರರು ಮೂರು ಹಂತಗಳಲ್ಲಿ ರಾಜ್ಯನಿರ್ಮಾಣ ಮಾಡಿಕೊಂಡಿರುವುದು ಕಂಡುಬರುತ್ತದೆ. ಮೊದಲನೆದಾಗಿ ತಮ್ಮ ಆಡಳಿತ ಪ್ರದೇಶದಲ್ಲಿ ಸಣ್ಣ ಸಣ್ಣ ಸೈನಿಕಪಡೆಗಳನ್ನು ಕಟ್ಟಿಕೊಂಡು ಬೆಳವಣಿಗೆ ಹೊಂದಿದರು. ಎರಡನೆಯದಾಗಿ ವಿಜಯನಗರ ಸಾಮ್ರಾಜ್ಯದ ಅರಸರಿಂದ ಅಮರನಾಯಕರಾಗಿ ಮನ್ನಣೆ ಪಡೆಯುವುದರೊಂದಿಗೆ ಶಾಶ್ವತವಾದ ಅಧಿಕಾರವನ್ನು ಸ್ಥಾಪಿಸಿದರು. ಮೂರನೆಯದಾಗಿ ವಿಜಯನಗರ ಸಾಮ್ರಾಜ್ಯ ದುರ್ಬಲಗೊಂಡಾಗ ಸ್ವತಂತ್ರ ಪಾಳೆಯರರಾಗಿ ಬೆಳವಣಿಗೆ ಹೊಂದಿರುವುದು ಕಂಡುಬರುತ್ತದೆ. ಹೀಗೆ ಈ ಪಾಳೆಯಗಾರರು ಸ್ವತಂತ್ರ ಪಾಳೆಯಪಟ್ಟುಗಳನ್ನು ನಿರ್ಮಿಸಿರುವುದು ಗಮನಾರ್ಹ.

ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರು ಬೇಡ ನಾಯಕರೇ ಆಗಿದ್ದರು ಎಂದು ತಿಳಿದುಬಂದಿದೆ. ಕಾಲಕ್ರಮೇಣ ಈ ಬೇಡ ನಾಯಕರು, ದೊರೆಗಳು, ಅರಸರು, ನಾಯಕರು ಎಂದೆಲ್ಲಾ ಕರೆದುಕೊಳ್ಳತೊಡಗಿದರು. ಇದು ಕರ್ನಾಟಕದ ಚರಿತ್ರೆಯಲ್ಲಿ ಮಹಾಪರಿವರ್ತನೆಯನ್ನುಂಟು ಮಾಡಿದ ಕಾಲಘಟ್ಟವಾಗಿದೆ.

ಈ ಪಾಳೆಯಗಾರರು ಬೆಟ್ಟಗುಡ್ಡಗಳಲ್ಲಿ ಹಾಗೂ ಬಯಲುಪ್ರದೇಶಗಳಲ್ಲಿ ಭದ್ರವಾದ ಕೋಟೆಗಳನ್ನು ಕಟ್ಟಿ ರಾಜಧಾನಿ ಹಾಗೂ ಆಡಳಿತ ಕೇಂದ್ರಗಳನ್ನಾಗಿ ಮಾಡಿಕೊಂಡಿದ್ದರು. ಆದುದರಿಂದ ಇವು ಪ್ರಕೃತಿದತ್ತವಾಗಿ ರಕ್ಷಣಾಗೋಡೆಗಳಂತೆ ಇದ್ದು ಶತ್ರುಗಳು ಭೇದಿಸಲು ಅಷ್ಟು ಸುಲಭವಾಗುತ್ತಿರಲಿಲ್ಲ ಎಂದು ತಿಳಿದುಬಂದಿದೆ. ಬಸವಾಪಟ್ಟಣ, ಹರಪನಹಳ್ಳಿ, ಉಚ್ಚಂಗಿದುರ್ಗ, ಕಣಕುಪ್ಪೆ ಮುಂತಾದ ಪಾಳೆಯಗಾರರ ಕೋಟೆಗಳು ಬೆಟ್ಟಗಳಲ್ಲಿ ನಿರ್ಮಾಣಗೊಂಡಿದ್ದವು.

ಈ ಪಾಳೆಯಗಾರರು ತಮ್ಮ ಆಡಳಿತ ಪ್ರದೇಶಗಳಲ್ಲಿ ತಮ್ಮದೇ ಆದ ಮಾದರಿಯಲ್ಲಿ ಆಡಳಿತ ಘಟಕಗಳನ್ನು ರಚಿಸಿಕೊಂಡಿದ್ದರು. ಅವರು ರಾಜ್ಯ, ನಾಡು, ಸೀಮೆ, ವೇಂಠೆ ಗ್ರಾಮಗಳನ್ನಾಗಿ ವಿಭಜಿಸಿಕೊಂಡು ಆಡಳಿತ ನಡೆಸಿದ್ದರು ಎಂಬ ಸಂಗತಿ ಪ್ರಾಮುಖ್ಯತೆ ಪಡೆದಿದೆ.

ದಾವಣಗೆರೆ ಜಿಲ್ಲೆಯಲ್ಲಿ ಪಾಳೆಯಗಾರರು ನಿರ್ಮಿಸಿದ ಅನೇಕ ಸ್ಮಾರಕ ದೇವಾಲಯ, ಕೋಟೆ ಕೊತ್ತಲ, ಕೆರೆ–ಕಾಲುವೆ, ಅರಮನೆ, ಶಾಸನಗಳು, ಶಿಲ್ಪ, ಪುಷ್ಕರಿಣಿಗಳಿವೆ. ಇವುಗಳಲ್ಲದೆ ಮೌಖಿಕ ಚರಿತ್ರೆಯ ಆಕರಗಳಾದ ಐತಿಹ್ಯ, ಪುರಾಣ, ದಂತಕತೆ, ಜಾನಪದ ಕತೆ, ಲಾವಣಿಗಳನ್ನು ಅಧ್ಯಯನದಲ್ಲಿ ಬಳಸಿಕೊಂಡು ಮರೆಯಾದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲಾಗಿದೆ.

ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಪಟ್ಟುಗಳ ಆಡಳಿತ ವ್ಯಾಪ್ತಿಯನ್ನು ಗುರುತಿಸಿಕೊಂಡು ವ್ಯವಸ್ಥಿತವಾಗಿ ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ಈ ಸಂದರ್ಭದಲ್ಲಿ ದೇವಾಲಯಗಳು, ಮಠಗಳು, ಕೋಟೆಗಳು, ಕೆರೆಗಳು, ಹೊಂಡಗಳು, ಶಾಸನಗಳು ದೊರಕಿದವು. ಇವುಗಳನ್ನು ಸೂಕ್ಷ್ಮವಾಗಿ ಅಧ್ಯಯನ ಕೈಗೊಂಡು ಅವುಗಳ ಸಹಾಯದಿಂದ ಸಮಗ್ರ ಅಧ್ಯಯನ ನಡೆಸಲಾಯಿತು. ಇವುಗಳಿಂದ ಪಾಳೆಯಗಾರರ ಕಾಲದ ಸ್ಮಾರಕಗಳ ವಾಸ್ತುರಚನೆಯ ಲಕ್ಷಣಗಳು ತಿಳಿದುಬಂದಿದೆ. ವಾಸ್ತುರಚನೆಯು ತಮ್ಮದೇ ಆದ ಮಹತ್ವವನ್ನು ಪಡೆದುಕೊಂಡಿದ್ದು, ವಿಜಯನಗರ ಶೈಲಿಯನ್ನು ಅಳವಡಿಸಿಕೊಳ್ಳುವುದರ ಜೊತೆಗೆ ತಮ್ಮದೇ ಆದ ಲಕ್ಷಣಗಳನ್ನು ಹೊಂದಿದ ದೇವಾಲಯಗಳನ್ನು ಇವರು ನಿರ್ಮಿಸಿದರು. ಇವರ ವಾಸ್ತುರಚನೆಯ ಮೇಲೆ ವಿಜಯನಗರ ಸಾಮ್ರಾಜ್ಯದ ಪ್ರಭಾವ ಸಾಕಷ್ಟಿದೆ. ಏಕೆಂದರೆ ವಿಜಯನಗರ ಪತನಾನಂತರ ಅಲ್ಲಿ ಆಶ್ರಯ ಪಡೆದಿದ್ದ ಶಿಲ್ಪಿಗಳೆಲ್ಲಾ ಚದುರಿಹೋಗಿ ಸಣ್ಣಪುಟ್ಟ ಪಾಳೆಯಗಾರರ ಸಂಸ್ಥಾನಿಕರ ಆಶ್ರಯ ಪಡೆದುಕೊಂಡರು. ಇವರ ಸ್ಮಾರಕಗಳಲ್ಲಿ ವೈಭವವಿಲ್ಲ. ಕಾರಣ, ಈ ಪಾಳೆಯಗಾರರಲ್ಲಿ ಆರ್ಥಿಕ ಸಂಪನ್ಮೂಲಗಳ ಕೊರತೆ ಹಾಗೂ ಗ್ರಾನೈಟ್ ಶಿಲೆಗಳನ್ನು ಬಳಸಿದ್ದರಿಂದ ಸೂಕ್ಷ್ಮ

ಕೆತ್ತನೆಗಳು ಸಾಧ್ಯವಾಗುತ್ತಿರಲಿಲ್ಲ. ಇವರ ಸ್ಮಾರಕಗಳು ಚಿಕ್ಕದಾಗಿದ್ದರೂ ರಕ್ಷಣೆಯ ದೃಷ್ಟಿಯಿಂದ ಆ ಕಾಲದ ಪರಿಸ್ಥಿತಿಗೆ ಹೊಂದಿಕೊಂಡಿದ್ದವು. ಜೊತೆಗೆ ಈ ಪಾಳೆಯಗಾರರು ಅನೇಕ ದೇವಾಯಗಳಿಗೆ ಮಠಗಳಿಗೆ ದಾನದತ್ತಿ ನೀಡಿದರಲ್ಲದೆ, ಎಲ್ಲಾ ಧರ್ಮದವರಿಗೆ ಸಮಾನ ಸ್ಥಾನಮಾನ ನೀಡಿದ್ದರು. ಇವರು ನಿರ್ಮಿಸಿದ ದೇವಾಲಯಗಳು ಗಾತ್ರದಲ್ಲಿ, ಕಲಾತ್ಮಕತೆಯಲ್ಲಿ, ವೈಭವ ಕಡಿಮೆ ಇದ್ದರೂ ಈ ರಚನೆಗಳು ವಿಭಿನ್ನ ಸಾಂಸ್ಕೃತಿಕ ಮುಖಗಳನ್ನು ಪರಿಚಯಿಸುತ್ತವೆ.

ಈ ಪಾಳೆಯಗಾರರು ತಮಗೆ ಸಹಾಯಕರಾಗಿ ಪುರೋಹಿತ, ಗೌಡರು, ದಿವಾನರು, ದಳವಾಯಿಗಳನ್ನು ನೇಮಕ ಮಾಡಿಕೊಂಡಿದ್ದರು. ಇವರಿಗೆ ರಾಜ್ಯಾಡಳಿತದಲ್ಲಿ ಪ್ರಮುಖ ಸ್ಥಾನಮಾನವನ್ನು ನೀಡಿದ್ದರು.

ದಾವಣಗೆರೆ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ಪಾಳೆಯಗಾರರ ನಡುವಿನ ರಾಜಕೀಯ ಹಾಗೂ ವೈವಾಹಿಕ ಸಂಬಂಧವನ್ನು ಅವರ ಆಳ್ವಿಕೆಯೊಂದಿಗೆ ಗುರುತಿಸಲಾಗಿದೆ. ಇವರು ತಮ್ಮದೇ ಜಾತಿಯವರೊಂದಿಗೆ ವೈವಾಹಿಕ ಸಂಬಂಧಗಳನ್ನು ಮಾಡಿಕೊಂಡಿದ್ದರು. ಹರಪನಹಳ್ಳಿ ಪಾಳೆಯಗಾರರು ಚಿತ್ರದುರ್ಗದ ಪಾಳೆಯಗಾರರೊಂದಿಗೆ ಮೊದಲು ವೈವಾಹಿಕ ಸಂಬಂಧವಿತ್ತು. ತದನಂತರ ಅವರಲ್ಲಿ ದ್ವೇಷ, ಅಸೂಯೆ ಬೆಳೆಯಿತು. ಹಾಗೆಯೇ ಕೆಳದಿಯ ನಾಯಕರೊಂದಿಗೆ, ಜರಿಮಲೆ ಪಾಳೆಯಗಾರರೊಂದಿಗೆ, ಗುಡೆಕೋಟೆ ಪಾಳೆಯಗಾರರೊಂದಿಗಿನ ಸಂಬಂಧವನ್ನು ವೃದ್ಧಿಸಿಕೊಂಡು ಆಳ್ವಿಕೆ ಮಾಡಿದ ಉದಾಹಣೆಗಳಿವೆ.

ಸ್ಥಳೀಯ ಪಾಳೆಯಗಾರರು ನೆರೆಹೊರೆಯ ರಾಜಕೀಯ ಶಕ್ತಿಗಳಿಂದ ಜರ್ಜರಿತವಾಗಿದ್ದರೂ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸಿಕೊಂಡು ಬಂದ ಸಂದರ್ಭವನ್ನು ಈ ಮಹಾಪ್ರಬಂಧದಲ್ಲಿ ಗಮನಿಸಲಾಗಿದೆ. ಹಾಗೆ ಈ ಪ್ರದೇಶದಲ್ಲಿ ಕೆಲವು ಕಿರು ಪಾಳೆಯಪಟ್ಟುಗಳು, ಸಾಮಂತ ಅಧಿಕಾರಿಗಳು ಕಂಡುಬಂದಿದ್ದು, ಅವುಗಳ ಆಡಳಿತ, ರಾಜಕೀಯ, ಸಾಮಾಜಿಕ ಸ್ಥಿತಿಗತಿ ಹಾಗೂ ಕೊಡುಗೆಗಳು ವಿಶಿಷ್ಟವಾಗಿದ್ದು ಆ ಕಾಲದ ಸಂಕೇತವಾಗಿರುವುದು ಸ್ಪಷ್ಟ.

ಈ ಪಾಳೆಯಗಾರರು ಎಲ್ಲಾ ವರ್ಗದ ಬೆಂಬಲ, ಸಹಕಾರ, ಸಹಾಯ, ಸೇವೆ ಪಡೆದುಕೊಳ್ಳುವ ಉದ್ದೇಶಗಳಿಂದ ದಾನದತ್ತಿಗಳನ್ನು ನೀಡಿದ್ದರು. ಆಡಳಿತ ನಡೆಸಲು ಅಗತ್ಯವಾಗಿದ್ದ ಶಕ್ತಿಗಳಿಗೆ ದಾನದತ್ತಿ ನೀಡುವುದರ ಮೂಲಕ ಪ್ರಾದೇಶಿಕ ಸಂಸ್ಕೃತಿಯ ಬೆಳವಣಿಗೆಯನ್ನು ಪ್ರೋತ್ಸಾಹಿಸುತ್ತಿದ್ದರು. ಶೈವ, ವೈಷ್ಣವ, ವೀರಶೈವ, ಕಾಳಾಮುಖ ಮತಗಳಿಗೆ ರಾಜಾಶ್ರಯ ನೀಡುವುದರ ಮೂಲಕ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ರಂಗನಾಥ, ಅಹೋಬಲ ನರಸಿಂಹ, ಹನುಮಂತ, ಉಚ್ಚಂಗೆಮ್ಮ, ವೀರಭದ್ರ, ಬಸವೇಶ್ವರ, ತಿಮ್ಮಪ್ಪ ಮುಂತಾದ ಅನೇಕ ದೇವತೆಗಳನ್ನು ಆರಾಧಿಸುತ್ತಿದ್ದರು.

ವಿಜಯನಗರ ಸಾಮ್ರಾಜ್ಯದ ನಂತರದ ಚರಿತ್ರೆಯಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದ ಈ ಜಿಲ್ಲೆಯ ಪಾಳೆಯಗಾರರು ಕಾಲಾಂತರದಲ್ಲಿ ಹೈದರಾಲಿ, ಟಿಪ್ಪುಸುಲ್ತಾನ್, ಬ್ರಿಟಿಷರಂತಹ

ಪ್ರಬಲ ಶಕ್ತಿಗಳಿಗೆ ಎದುರಾಳಿಗಳಾಗಿದ್ದರು. ಈ ಪ್ರಬಲ ಶಕ್ತಿಗಳು ಪಾಳೆಯಗಾರ ಅಧಿಕಾರವನ್ನು ಕಿತ್ತುಕೊಳ್ಳುವುದರ ಜೊತೆಗೆ ತಮ್ಮ ಇಚ್ಛೆಗನುಗುಣವಾಗಿ ಬಳಸಿಕೊಂಡರು ಎಂಬ ಅಂಶ ತಿಳಿದುಬರುತ್ತದೆ. ಈ ಪಾಳೆಯಗಾರರ ಧೈರ್ಯ ಸ್ಥೈರ್ಯ, ಸ್ವಾತಂತ್ರ್ಯಾಭಿಮಾನಗಳನ್ನು ಕಾಯ್ದೆ ಕಾನೂನುಗಳ ಮೂಲಕ ನಾಶಗೊಳಿಸಿದರು. ಅದರೂ ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ಜನರಲ್ಲಿ ದೇಶಾಭಿಮಾನವನ್ನು ಬೆಳೆಸುವಲ್ಲಿ ಯಶಸ್ವಿಯಾದರು. ಉದಾಹರಣೆಗೆ ಬಿಳಿಚೋಡು ವಂಶಸ್ಥರು, ತರೀಕೆರೆ ಸರ್ಜಪ್ಪನಾಯಕರು, ಹಲಗಲಿ ಬೇಡರು, ಸುರಪುರದ ನಾಯಕರು, ಸಿಂಧೂರ ಲಕ್ಷ್ಮಣ ಮುಂತಾದವರು ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ಹುತಾತ್ಮರಾಗಿದ್ದಾರೆ ಇಂಥಾವರ ಸ್ಫೂರ್ತಿಯಿಂದ ಪಾಳೆಯಗಾರರು ಸಹ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣದಲ್ಲಿ ಭಾಗವಹಿಸಿರುವುದು ಶ್ಲಾಘನೀಯವಾಗಿದೆ.

ನಾಗತಿಯರು, ಅಧಿಕಾರಿಗಳು, ಪ್ರಜೆಗಳು ದಾನದತ್ತಿಗಳನ್ನು ಬಿಡುವಂತೆ ಪ್ರೋತ್ಸಾಹಿಸಿದ್ದಾರೆ. ಇವರು ತೋಟಗಳನ್ನು, ಬಾವಿಗಳನ್ನು ಕಟ್ಟಿಸಿ ದಾನದತ್ತಿ ಬಿಟ್ಟಿರುವುದು ಕಂಡುಬರುತ್ತದೆ. ಇವರು ಅಗ್ರಹಾರಗಳನ್ನು ನಿರ್ಮಾಣ ಮಾಡಿದ್ದಾರೆ. ವೀರಶೈವ ಧರ್ಮ ತತ್ವಗಳ ಪ್ರಚಾರಕ್ಕಾಗಿ ಕೆಲವು ಪಾಳೆಯಗಾರರು ಮಠಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಕೆಲವು ಪಾಳೆಯಗಾರರು ವೀರಶೈವ ಗುರುಗಳ ಮೇಲಿನ ಭಕ್ತಿ ಗೌರವಗಳಿಗಾಗಿ ಮಠಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಇವರ ಆಳ್ವಿಕೆಯ ವ್ಯಾಪ್ತಿಯಲ್ಲಿ ಅನೇಕ ವೀರಶೈವ ಮಠಗಳಿರುವುದು ರಾಜಾ ಘೋಷಣೆಯ ಸಂಕೇತವಾಗಿತ್ತು.

ಪಾಳೆಯಗಾರರ ಕಾಲದ ಸಾಮಾಜಿಕ ಪದ್ಧತಿ ಜಾತಿವ್ಯವಸ್ಥೆಯ ಮೇಲೆ ರೂಪುಗೊಂಡಿತ್ತು. ಇವರ ಆಡಳಿತ ವ್ಯಾಪ್ತಿಯಲ್ಲಿನ ಜನರನ್ನು ಶಿಷ್ಟ ಜನಪದ ಮತ್ತು ಬುಡಕಟ್ಟು ಎಂಬ ವರ್ಗಗಳಾಗಿ ವಿಂಗಡಿಸಬಹುದು. ಶಿಷ್ಟವರ್ಗ ಬ್ರಾಹ್ಮಣ ವೀರಶೈವರಿಂದ ರೂಪಿತವಾಗಿದ್ದರೆ. ಜಾನಪದ ವರ್ಗ ಇದರ ಜೊತೆಗೆ ತನ್ನದೇ ಆದ ವಿಶಿಷ್ಟವಾದ ಸಾಮಾಜಿಕ ನಂಬಿಕೆಗಳಿಂದ ಬೆಳೆದುಬಂದಿತ್ತು. ಬುಡಕಟ್ಟು ವರ್ಗದವರು ಈ ಎರಡೂ ವರ್ಗಗಳೊಡನೆ ಸಂಪರ್ಕವನ್ನಿಟ್ಟುಕೊಂಡು ಬದುಕುತ್ತಿದ್ದರು. ಪ್ರಾಚೀನ ಪರಂಪರೆಯ ನೆಲೆಗಟ್ಟಿನ ಮೇಲೆ ಮಧ್ಯಕಾಲೀನ ಲಕ್ಷಣಗಳನ್ನು ಬೆಳೆಸಿಕೊಂಡು ಸಮಾಜ ರೂಪಿತವಾಗಿತ್ತು. ಗ್ರಾಮಗಳಲ್ಲಿ ಅಸ್ತಿತ್ವದಲ್ಲಿದ್ದ ಸಾಮಾಜಿಕ ಪದ್ಧತಿಯ ಆಂತರಿಕ ವ್ಯವಹಾರಕ್ಕೆ ಕೈ ಹಾಕದೇ ಯಥಾಸ್ಥಿತಿಯಲ್ಲಿ ಮುಂದುವರಿಸಿದ್ದರು. ಈ ನೀತಿಯ ಮೂಲಕ ಕೃಷಿ ಹಾಗೂ ಕೃಷಿಯೇತರಗಳ ಮಧ್ಯೆ ಸಮನ್ವಯ ಮೂಡಿಸಿ ಆಡಳಿತ ನಡೆಸಿರುವುದಲ್ಲದೆ ಬೊಕ್ಕಸ ತುಂಬಿಸಿ ರಾಜ್ಯವನ್ನು ಸುಖ ಸಮೃದ್ಧತೆಯಿಂದ ಕಾಪಾಡುವ ಪ್ರಯತ್ನ ನಡೆಯಿತು.

ದಾವಣಗೆರೆ ಜಿಲ್ಲೆಯ ಪಾಳೆಯಗಾರರು ಮೂಲತಃ ಸ್ಥಳೀಯರಾಗಿದ್ದು ತಮ್ಮ ಅಸ್ತಿತ್ವವನ್ನು ಮತ್ತು ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟಗಳನ್ನು ಇಲ್ಲಿ ಗುರುತಿಸಲಾಗಿದೆ. ಜೊತೆಗೆ ಅವರ ಸಾಹಸಗಾಥೆಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ರಾಜತ್ವ ಕೈ ತಪ್ಪಿದಾಗ ಅವರ

ಸ್ಥಾನಮಾನಗಳಲ್ಲಾದ ಬದಲಾವಣೆಯನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. ಆಧುನಿಕ ಸಂದರ್ಭದಲ್ಲಿ ಪಾಳೆಯಗಾರರ ವಾಸ್ತವ ಸಂಗತಿಯನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ವಿಶ್ಲೇಷಿಸಿರುವುದು ಸ್ಪಷ್ಟ.

ವಿಜಯನಗರೋತ್ತರಕಾಲೀನ ರಾಜಕೀಯ ಚರಿತ್ರೆಯಲ್ಲಿ ಅನೇಕ ಬೇಡರು ಪಾಳೆಯಪಟ್ಟನ್ನು ಸ್ಥಾಪಿಸಿಕೊಂಡು ದೊರೆ, ಅರಸ, ಎಂದೆಲ್ಲ ಪ್ರಚಲಿತರಾದರು. ದಾವಣಗೆರೆ ಪ್ರದೇಶದಲ್ಲಿ ಇಂದಿಗೂ ಬೇಡರೆಂದರೆ ಪಾಳೆಯಗಾರರು, ದೊರೆಗಳು ಎಂಬ ಭಾವನೆ ಹೊಂದಿರುವುದುಂಟು. ಹಿಂದಿನಿಂದಲೂ ಈ ವೃತ್ತಿಗಳಲ್ಲಿ ಮುಂದುವರಿದುಕೊಂಡು ಬಂದಿದ್ದರಿಂದ ಅವರ ಅಧಿಕಾರ ಸ್ಥಾನಗಳೇ ಆಯಾ ಹೆಸರಿನಲ್ಲಿ ಉಪಜಾತಿಗಳಾಗಿಯೂ ಪರಿವರ್ತನೆಯಾಗಿವೆ. ಇಂತಹ ಚಾರಿತ್ರಿಕ ಮಹತ್ವವನ್ನು ಹೊಂದಿದ ಬೇಡ ಸಮುದಾಯ ಪ್ರಸ್ತುತ ಸಂದರ್ಭದಲ್ಲಿ ಅನೇಕ ಸ್ಥಿತ್ಯಂತರಗಳಾಗಿದ್ದಾರೆ. ಸೈನಿಕ ಪರಂಪರೆಯಲ್ಲಿ ಬೆಳೆದ ಬೇಡರು ಅನ್ಯವೃತ್ತಿಗಳ ಕಡೆಗೆ ಗಮನ ಹರಿಸಿದ್ದು ಇತ್ತೀಚಿನ ದಿನಗಳಲ್ಲಿ, ಕಾಲದ ಬದಲಾವಣೆಯಿಂದ ಪಾಳೆಯಗಾರರು ಹೇಗೆ ದುಸ್ಥಿತಿಯ ಬದುಕನ್ನು ಅನುಭವಿಸುತ್ತಿದ್ದಾರೆ. ಕೆಳಹಂತದ ಬದುಕಿನ ಕಡೆಗೆ ಹೇಗೆ ತಳ್ಳಲ್ಪಟ್ಟರು ಎಂಬುದರ ಬಗೆಗೆ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಒಟ್ಟಾರೆ ಸುಮಾರು ಮೂರು ಶತಮಾನಗಳ ಕಾಲ ದಾವಣಗೆರೆ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ಪಾಳೆಯಗಾರರು ವಿಜಯನಗರ ಮಾದರಿಯ ಊಳಿಗಮಾನ್ಯ ವ್ಯವಸ್ಥೆಯ ಲಕ್ಷಣಗಳನ್ನು ಪ್ರಧಾನವಾಗಿ ಅನುಸರಿಸಿಕೊಂಡು ಬಂದಿದ್ದಾರೆ. ಅದರಂತೆ ರಾಜಕೀಯ ವ್ಯವಸ್ಥೆಯನ್ನು ಈ ಪ್ರದೇಶದಲ್ಲಿ ಸ್ಥಾಪಿಸಿ ಕರ್ನಾಟಕದ ಸಮನ್ವಯ ಸಂಸ್ಕೃತಿಯನ್ನು ಮತ್ತು ಸಾಮಾಜಿಕ ವೈಶಿಷ್ಟ್ಯತೆಯನ್ನು ಪೋಷಿಸುತ್ತಾ ಕಲೆ, ಸಾಹಿತ್ಯ, ಆರ್ಥಿಕ, ಸಾಮಾಜಿಕ ಮುಂತಾದ ಕ್ಷೇತ್ರಗಳ ಮೂಲಕ ಉತ್ತಮವಾದ ಜನಪದ ಕಾರ್ಯಗಳನ್ನು ಮಾಡಿದ್ದಾರೆ. ಎಲ್ಲಾ ಪ್ರಕಾರದ ಕ್ಷೇತ್ರಗಳಿಗೆ ತಮ್ಮ ಇತಿಮಿತಿಯೊಡನೆ ಕಾಣಿಕೆಗಳನ್ನು ನೀಡಿರುವುದು ಗಮನಾರ್ಹವಾಗಿದೆ.

ಪ್ರಸ್ತುತ ಈ ಅಧ್ಯಯನದ ಮೂಲಕ ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪಾಳೆಯಗಾರರ ಆಡಳಿತ, ರಾಜಕೀಯ, ಸಾಮಾಜಿಕ, ಸೈನಿಕ ಸಾಧನೆಗಳು, ಆರ್ಥಿಕತೆ, ಧಾರ್ಮಿಕತೆ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಆಡಳಿತಾತ್ಮಕ ಅಂಶಗಳ ಬಗೆಗೆ ಚರ್ಚಿಸಲಾಗಿದೆ. ಇದರ ಮೂಲಕ ಕರ್ನಾಟಕ ಐತಿಹಾಸಿಕ ಪರಂಪರೆಯಲ್ಲಿ ಪಾಳೆಯಗಾರರ ಚರಿತ್ರೆಯನ್ನು ವಿಸ್ತರಿಸಲಾಗಿದೆ. ವಿಜಯನಗರ ಪತನಾನಂತರ ಬೆಳಕಿಗೆ ಬಂದ ಪಾಳೆಯಗಾರರು ಚರಿತ್ರೆಯ ರೋಚಕ ಪುಟಗಳಲ್ಲಿ ತಮ್ಮ ಸ್ಥಾನವನ್ನು ಗಟ್ಟಿ ಮಾಡಿಕೊಂಡಿದ್ದಾರೆ. ವಿಜಯನಗರೋತ್ತರ ಕಾಲ ಕ್ರಿ.ಶ. ೧೫೬೫ರಿಂದ ಇಂದಿನ ಪ್ರಸ್ತುತ ಸಮಕಾಲೀನ ಕಾಲದವರೆಗಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಗುರುತಿಸಲು ಚಿಕ್ಕ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಪಾಳೆಯಗಾರರ ಕಾಲದಿಂದ ವಸಾಹತುಶಾಹಿ ಕಾಲದವರೆಗೆ ಸಾಗಿ ಬಂದ ಚರಿತ್ರೆ ಮತ್ತು ೧೯೪೭ರಿಂದ ೧೯೫೬ರ ದೇಶದ ಸ್ವಾತಂತ್ರ್ಯ ಮತ್ತು ನಾಡಿನ ಏಕೀಕರಣ ಮತ್ತು ಪ್ರಾದೇಶಿಕ ನಾಡು, ನುಡಿ, ಭಾಷೆ, ಸಾಹಿತ್ಯ, ಸಂಸ್ಕೃತಿ ಸಾಗಿಬಂದಿರುವ ಚರಿತ್ರೆಯ ಬಗೆಗೆ ಇಲ್ಲಿ ಈ ಸಣ್ಣ ಪ್ರಯತ್ನದಲ್ಲಿ ಗುರುತಿಸಲಾಗಿದೆ.

